# Minor
# CANARESE POETICAL
# ANTHOLOGY

SECOND EDITION

## ಸಣ್ಣ ಕರ್ನಾಟಕ
# ಕಾವ್ಯಮಾಲೆ



MANGALORE
PUBLISHED BY PFLEIDERER & RIEHM
BASEL MISSION BOOK & TRACT DEPOSITORY
1868

# Minor
# CANARESE POETICAL
# Anthology

SECOND EDITION

# ಸಣ್ಣ ಕರ್ನಾಟಕ
# ಕಾವ್ಯಮಾಲೆ






MANGALORE
PRINTED BY PLEBST & STOLZ, BASEL MISSION PRESS
1868

ಕನ್ನಡ

# ಛನ್ದೋವಿದ್ಯೆ.

ಛಂದಸ್ಸಿನ ವಿದ್ಯೆ ಅಂದರೆ ಗಣಗಳ ಮೇಲೆಯೂ
ಪ್ರಾಸದ ಮೇಲೆಯೂ ಇಷ್ಟ ಶ್ಲೋಕಗಳನ್ನು ಕಟ್ಟುವದು.

## I. ಗಣಗಳ ವಿಷಯವು.

ಕನ್ನಡ ಭಾಷೆಯಲ್ಲಿ ಹ್ರಸ್ವ ಮತ್ತು ದೀರ್ಘ ಅಕ್ಷರಗಳು ಅವೆ. ಹ್ರಸ್ವ ಅಕ್ಷರಗಳನ್ನು ಉಚ್ಚರಿಸುವದಕ್ಕೆ ಸ್ವಲ್ಪ ಕಾಲ ಬೇಕು, ದೀರ್ಘ ಅಕ್ಷರಗಳನ್ನು ಉಚ್ಚರಿಸುವದಕ್ಕೆ ಮತ್ತಷ್ಟು ಕಾಲ ಬೇಕು. ಈ ಉಚ್ಚರಣೆಯ ಕಾಲಭೇದವನ್ನು ಕುರಿತು ಛಂದಸ್ಸಿನಲ್ಲಿ ಹೇಳುವದೇನಂದರೆ—ಒಂದು ಹ್ರಸ್ವ ಅಕ್ಷರಕ್ಕೆ ಒಂದೇ ಮಾತ್ರೆ ಅದೆ, ಒಂದು ದೀರ್ಘ ಅಕ್ಷರಕ್ಕೆ ಎರಡು ಮಾತ್ರೆಗಳು ಅವೆ.

ಅನುಸ್ವಾರದ ಅಕ್ಷರ ದೀರ್ಘವಾಗಿದೆ (ಕಂ, ವಂ, ಲಂ ಇತ್ಯಾದಿ); ವಿಸರ್ಗದ್ದು ದೀರ್ಘವಾಗಲಿ ಹ್ರಸ್ವವಾಗಲಿ ಇರುವದು (ತಃ, ಮಃ, ಸಃ ಇತ್ಯಾದಿ).

ಹ್ರಸ್ವ ಅಕ್ಷರವನ್ನು ಅಂದರೆ ಒಂದೇ ಮಾತ್ರೆಯ ಅಕ್ಷರವನ್ನು ಈ ಆವರಣಚಿನ್ಹೆಯೊಳಗೆ (◡) ಕಾಣುವ ಚಿನ್ಹೆಯಿಂದ ಮತ್ತು ದೀರ್ಘ ಅಕ್ಷರವನ್ನು ಈ ಆವರಣ ಚಿನ್ಹೆಯೊಳಗೆ (—) ಕಾಣುವ ಚಿನ್ಹೆಯಿಂದ ತೋರಿಸುವ ಪದ್ಧತಿ ಅದೆ.

ಗಣವು ಅಂದರೆ ಕೆಲವು ಅಕ್ಷರಗಳ ಅಥವಾ ಮಾತ್ರೆಗಳ ಕೂಟವು.

ಕನ್ನಡ ಛಂದಸ್ಸಿನಲ್ಲಿ 3 ವಿಧದ ಗಣಗಳು ಅವೆ, ಯಾವವಂದರೆ—

### 1, 3 ಮಾತ್ರೆಗಳ ಗಣಗಳು

ಉದಾಹರಣೆಗಳು—‘ಕುದುರೆ, ಹಡಗ, ಕಿವಿಯು, ಇರುವ, ಹಾವು, ಕಂಣು, ಬೇಡ, ಬೇಕು, ಹೋಗು’ ಇತ್ಯಾದಿ ಶಬ್ದಗಳು 3 ಮಾತ್ರೆಗಳ ಗಣಗಳಾಗಿವೆ.

## 2, 4 ಮಾತ್ರೆಗಳ ಗಣಗಳು

ಉದಾಹರಣೆಗಳು—'ಕುದುರೆಯು, ಹಡಗವು, ಕಿವಿಗಳು, ಇರುವವು, ಹಾವಿನ, ಕಂಣಿನ, ಬೇಡವೆ, ಬೇಕೋ, ಹೋಗುವ' ಇತ್ಯಾದಿ.

## 3, 5 ಮಾತ್ರೆಗಳ ಗಣಗಳು

ಉದಾಹರಣೆಗಳು—ಆ ಕುದುರೆ, ಹಡಗಗಳು, ಕಿವಿಯಂನು, ಇರುವದಕೆ, ನಡೆ ಹುಡುಗ, ಬೇಗ ಬಾ, ಅದ ನೋಡು ಇತ್ಯಾದಿ.

ಶ್ಲೋಕಗಳನ್ನು ಕಟ್ಟುವದಕ್ಕಾಗಿ ನೇಮಕದ ಗಣಗಳನ್ನು ಸಾಲುಸಾಲಾಗಿ ಇಡುತ್ತಾ ಬರ ಬೇಕು.

ಒಂದೇ ಗಣದಲ್ಲಾಗಲಿ ಗಣಗಳ ಸಾಲಿನಲ್ಲಾಗಲಿ ಒಂದೇ ಮಾತ್ರೆಯ ಅಕರದ ಮುಂದೆ ಒಂದು ಒತ್ತಕ್ಷರ ಬಂದರೆ, ಆ ಹಿಂದಿನ ಒಂದೇ ಮಾತ್ರೆಯ ಅಕ್ಷರವು 2 ಮಾತ್ರೆಯದಾಗುತ್ತದೆ.

ಉದಾಹರಣೆಗಳು—1ನೇ ಶ್ಲೋಕದಲ್ಲಿ 'ಮತಿಯನ್ನ' ಎಂತ ಅದೆ; ಇದರಲ್ಲಿ 'ಯ' ಎಂಬದು 2 ಮಾತ್ರೆಯದು. ಅಲ್ಲಿಯೇ 'ಜಿಹ್ವೆಗೆ' ಎಂತ ಅದೆ; ಇದರಲ್ಲಿ 'ಜಿ' ಎಂಬದು 2 ಮಾತ್ರೆಯದು. ಅಲ್ಲಿಯೇ 'ನಿನ್ನ' ಎಂತ ಅದೆ; ಇದರಲ್ಲಿ 'ನಿ' ಎಂಬದು 2 ಮಾತ್ರೆಯದು. ಅಲ್ಲಿಯೇ 'ಪೊಗಳುವದಿತ್ತು' ಎಂತ ಅದೆ; ಇದರಲ್ಲಿ 'ದಿ' ಎಂಬದು 2 ಮಾತ್ರೆಯದು.—2ನೇ ಶ್ಲೋಕದಲ್ಲಿ 'ಸಮಸ್ತ' ಎಂತ ಅದೆ; ಇದರಲ್ಲಿ 'ಮ' ಎಂಬದು 2 ಮಾತ್ರೆಯದು.—5ನೇ ಶ್ಲೋಕದಲ್ಲಿ 'ರಸದೊಳ್ ಪಾಲೇ' (ರಸದೊಳ್ಪಾಲೇ) ಎಂತ ಅದೆ; ಇದರಲ್ಲಿ 'ದೊ' ಎಂಬದು 2 ಮಾತ್ರೆಯದು.—6ನೇ ಶ್ಲೋಕದಲ್ಲಿ 'ಬದುಕಿದಡೇನು ಶ್ವಾನ' ಎಂತ ಅದೆ; ಇದರಲ್ಲಿ 'ನು' ಎಂಬದು 2 ಮಾತ್ರೆಯದು.—19ನೇ ಶ್ಲೋಕದಲ್ಲಿ 'ಸಂಸಾರದ ಧ್ರುವ' ಎಂತ ಅದೆ; ಇದರಲ್ಲಿ 'ದ' ಎಂಬದು 2 ಮಾತ್ರೆಯದು.—26ನೇ ಶ್ಲೋಕದಲ್ಲಿ 'ಹಿಡಿಯೊಳ್ ತುಂಬ್ಯೊ' (ಹಿಡಿಯೊಳ್ತುಂಬ್ಯೊ) ಎಂತ ಅದೆ; ಇದರಲ್ಲಿ 'ಯೊ' ಎಂಬದು 2 ಮಾತ್ರೆಯದು.—33ನೇದರಲ್ಲಿ 'ಮುತ್ತಿಗೆ' ಎಂತ ಅದೆ; ಇದರಲ್ಲಿ 'ಮು' ಎಂಬದು 2 ಮಾತ್ರೆಯದು.—37ನೇದರಲ್ಲಿ 'ಸುಪ್ರಖ್ಯಾತ' ಎಂತ ಅದೆ; ಇದರಲ್ಲಿ 'ಸು' ಎಂಬದೂ 'ಪ್ರ' ಎಂಬದೂ 2 ಮಾತ್ರೆಯವು.—39ನೇದರಲ್ಲಿ 'ರುತುಪರ್ನಕ್ಷಿತೀ' ಎಂತ ಅದೆ; ಇದರಲ್ಲಿ 'ನ' ಎಂಬದು 2 ಮಾತ್ರೆಯದು.—42ನೇದರಲ್ಲಿ 'ಪುಣ್ಯಶ್ಲೋಕರಿಗೆ' ಎಂತ ಅದೆ; ಇದರಲ್ಲಿ 'ಪು' ಎಂಬದೂ 'ಣ್ಯ' ಎಂಬದೂ 2 ಮಾತ್ರೆಯವು.

'ಗ್ರ, ದ್ರ, ಗ್ರೀ, ಗರ್' ಇತ್ಯಾದಿ ಸಕಲ ರಕಾರ ಒತ್ತಕ್ಷರಗಳ ಹಿಂದಿನ ಒಂದೇ ಮಾತ್ರೆಯ ಅಕ್ಷರವೂ 'ಜ್ಞ' ಎಂಬ ಒತ್ತಕ್ಷರದ ಹಿಂದಿನ ಅಂಥ ಅಕ್ಷರವೂ 2 ಮಾತ್ರೆಯದ್ದಾಗದೆ ಇರ ಬಹುದು.

ಉದಾಹರಣೆಗಳು—5ನೇ ಶ್ಲೋಕದಲ್ಲಿ 'ಸರ್ವ ಗ್ರಹಂಗಳೊಳ್ಗೆ' ಎಂಬದು; 222ನೇದರಲ್ಲಿ 'ಚಂದನ ದ್ರುಮಂಗಳಂ' ಎಂಬದು; 227ನೇದರಲ್ಲಿ 'ನಡೆದುದು ಗ್ರೀಷ್ಮ' ಎಂಬದು; 242ನೇದರಲ್ಲಿ 'ಅಲರಲರ್ಗಳಾ' ಎಂಬದು; 28ನೇದರಲ್ಲಿ 'ಮುಕ್ತಿಗೆ ಜ್ಞಾನ' ಎಂಬದು. ಈ ಉದಾಹರಣೆಗಳನ್ನು ತಿಳು ಕೊಳ್ಳುವದಕ್ಕಾಗಿ ಅಲ್ಲಲ್ಲಿಯ ಗಣಗಳನ್ನು ಶೋಧಿಸ ಬೇಕು.

ಮೇಲೆ ಹೇಳಿದ ಕ್ರಮಕ್ಕೆ ಸಮವಾಗದ ಪ್ರತಿಷೇಧಗಳು (Exceptions) ಕಾಣುವ ಪಕ್ಷದಲ್ಲಿ ಅವಕ್ಕೆ ಅನುಸರಿಸುವದು ಕೀರ್ತಿಯಲ್ಲ.

ಒಂದೊಂದು ಗಣದ ಆರಂಭದಲ್ಲಿ ಯಾವಾಗಲೂ 2 ಮಾತ್ರೆಗಳನ್ನು ಪ್ರತ್ಯೇಕವಾಗಿ ಹಿಡುಕೊಳ್ಳ ಬರುವ ಹಾಗೆ ಆಗ ಬೇಕು, ಅಂದರೆ ಅಲ್ಲಿ ಯಾವಾಗಲೂ 2 ಪ್ರತ್ಯೇಕವಾದ ಹ್ರಸ್ವ ಅಕ್ಷರಗಳಾಗಲಿ, 1 ದೀರ್ಘ ಅಕ್ಷರವಾಗಲಿ ಇರ ಬೇಕು.

ಉದಾಹರಣೆಗಳು—'ಎಲೋ, ಇಗೋ, ಕಡೇ, ಅನೀತಿ, ವಿರೋಧ, ಸಹಾಯ' ಇತ್ಯಾದಿ ಪ್ರಕಾರವಾಗಿ ಒಂದು ಗಣವು ಆರಂಭಿಸಲೂ ಇರಲೂ ಬಾರದು; ಆದರೆ 'ಎಲೋ, ಇಗೋ, ಕಡೆಯ, ಧರೆಯ, ನೀತಿ, ಬುದ್ಧಿ, ವಾಕ್ಯ, ದೇವ, ನೋಡು' ಎಂಬ ಪ್ರಕಾರವು ಒಂದು ಗಣದ ಆರಂಭದಲ್ಲಿಯೂ (ಗಣವು 3 ಮಾತ್ರೆಯದಾಗಿದ್ದರೆ) ಗಣವಾಗಿಯೂ ಇರ ತಕ್ಕದ್ದು.

ಅರ್ಧ ಶ್ಲೋಕವು ತೀರಿದಲ್ಲಿ ಗಣಗಳ ಒಂದು ಸಾಲು ತೀರಿತು.

ಗಣಗಳ ಒಂದು ಒಂದು ಸಾಲಿನ ಆರಂಭದಲ್ಲಿ ಮಾತ್ರ ವ್ಯಂಜನವಿಲ್ಲದ ಸ್ವರವು ಇರ ಬಹುದು ಅಂದರೆ ಅರ್ಧ ಅರ್ಧ ಶ್ಲೋಕದ ಆರಂಭದಲ್ಲಿ ಮಾತ್ರ ಅಂಥ ಸ್ವರವು ಇರ ಬಹುದು; ಉಳಿದ ಸ್ವರಗಳೆಲ್ಲಾ ಸಂಧಿ ಪ್ರಕರಣದ ಮೇಲೆ ವ್ಯಂಜನದವುಗಳಾಗಿರ ಬೇಕು. ಇದಕ್ಕೆ ದಾಸರ ಪದಗಳಲ್ಲಿ ಪ್ರತಿಷೇಧಗಳು ಶಿಕ್ಕುತ್ತವೆ, ಆದರೆ ಅವು ಪ್ರಮಾಣವಾಗಿರ ಕೂಡದು.

ನಾವು ಛಾಪಿಸ ಕೊಟ್ಟ ಈ ಪುಸ್ತಕದಲ್ಲಿ ಗಣಸಾಲುಗಳ ನಡುವೆ ಸಹ, ಪ್ರತಿಷೇಧವಿಲ್ಲದಿದ್ದರೂ, ವ್ಯಂಜನವಿಲ್ಲದ ಸ್ವರಗಳು ದೃಷ್ಟಿಗೆ ಬೀಳುವದುಂಟು; ಆದರೆ ಪದಗಳನ್ನು ಓದುವಾಗ ಆ ಸ್ವರಗಳೆಲ್ಲಾ, ಪ್ರತಿಷೇಧವಿಲ್ಲದ ಪಕ್ಷದಲ್ಲಿ, ಸಂಧಿಯಾಗಿ ಅಡಗಿ ಹೋಗುತ್ತವೆ. ಅರ್ಥವನ್ನು ಲಘು ಮಾಡುವದಕ್ಕಾಗಿ, ಗಣಗಳು ಕೆಡದ ಪಕ್ಷದಲ್ಲಿ, ಮಾತುಗಳನ್ನು ವಿಂಗಡಿಸಲಾಯಿತು; ಹೀಗೆ ಕಾವ್ಯವನ್ನು ಬರೆಯುವದು ಯುಕ್ತವಾಗಿದೆ.

ಶ್ಲೋಕಗಳ ಪಂಕ್ತಿಗಳು ಅಂದರೆ ಚರಣಗಳು ಪದಗಳೆನ್ನಿಸುತ್ತವೆ; ಒಂದು ಶ್ಲೋಕದಲ್ಲಿ 2, 4, 6 ಪದಗಳು ಇರ ಬಹುದು; 4 ಪದಗಳು ಇದ್ದರೆ ಅವು ಪಾದಗಳು (Quarters) ಎಂತಲೂ ಎನ್ನಿಸುತ್ತವೆ.

## 1. ಭಾಮಿನೀ ಷಟ್ಪದಿಯ ಗಣಗಳು.

(1ನೇ ಶ್ಲೋಕ ನೋಡಿರಿ.)

ಈ ಛಂದಸ್ಸಿಗೆ 3 ಮಾತ್ರೆಯ ಗಣಗಳೂ 4 ಮಾತ್ರೆಯ ಗಣಗಳೂ ಬೇಕು. ಮೊದಲು 3 ಮಾತ್ರೆಯ ಗಣ, ಆ ಮೇಲೆ 4 ಮಾತ್ರೆಯದು, ಆ ಮೇಲೆ ತಿರಿಗಿ 3 ಮಾತ್ರೆಯ

ದು, ಆ ಮೇಲೆ ತಿರಿಗಿ 4 ಮಾತ್ರೆಯದು ಎಂಬ ಪ್ರಕಾರವಾಗಿ ಗಣಗಳನ್ನು ಹಾಕುತ್ತಾ ಬರ ಬೇಕು. ಗಣಗಳನ್ನೂ ಗಣಮಾತ್ರೆಗಳನ್ನೂ ತೋರಿಸುವ ಪಟ್ಟಿ ಇಲ್ಲಿ ಛಾಪಿಸಿ ಅದೆ—

ಗಣಗಳ ಮತ್ತು ಗಣಮಾತ್ರೆಗಳ ಮೊದಲಿನ ಸಾಲು ಅಥವಾ ಅರ್ಧ ಶ್ಲೋಕ.

3 | 4 | 3 | 4 | 1ನೇ ಪದ
3 | 4 | 3 | 4 | 2ನೇದು
3 | 4 | 3 | 4 | 3 | 4 | 1 || 3ನೇದು, 1ನೇ ಗಣಸಾಲು

ಈ ಸಾಲಿನಲ್ಲಿ 14 ಗಣಗಳೂ ಸಾಲಿನ ಕಡೇಲಿ ಹೆಚ್ಚಾದ 1 ಮಾತ್ರೆಯೂ ಕಾಣುತ್ತವೆ. ಮತ್ತೊಂದು ಅರ್ಧ ಶ್ಲೋಕ ಅದೇ ಪ್ರಕಾರವಾಗಿರ ಬೇಕು. ಪೂರ್ಣ ಶ್ಲೋಕದಲ್ಲಿ 6 ಪದಗಳಿರುವದರಿಂದ ಷಟ್ಪದಿ ಎಂಬ ಹೆಸರು ಹುಟ್ಟಿತು.

3 ಮಾತ್ರೆಯ ಆ ಗಣಗಳ ಅಕ್ಷರಗಳು 2 ವಿಧವಾಗಿರ ಬಹುದು; 4 ಮಾತ್ರೆಯ ಆ ಗಣಗಳ ಅಕ್ಷರಗಳು 4 ವಿಧವಾಗಿರ ಬಹುದು. ಆಯಾ ವಿಧಗಳನ್ನು ತೋರಿಸುವದಕ್ಕಾಗಿ ಹಿಂದೆ ಗೊತ್ತು ಮಾಡಿದ, ಹ್ರಸ್ವಾಕ್ಷರಗಳನ್ನೂ ದೀರ್ಘಾಕ್ಷರಗಳನ್ನೂ ಕಾಣಿಸುವ ಎರಡು ಚಿನ್ಹೆಗಳನ್ನು (◡) (—) ಪ್ರಯೋಗಿಸುವ.

ಹಾಗಾದರೆ 3 ಮಾತ್ರೆಯ ಗಣಗಳ ಅಕ್ಷರಗಳ 1ನೇ ವಿಧವು ಹ್ಯಾಗಂದರೆ—(◡◡◡); 2ನೇ ವಿಧವು ಹ್ಯಾಗಂದರೆ (—◡).

◡◡◡ ◡◡◡ ◡◡◡
1ನೇ ವಿಧದ ಉದಾಹರಣೆಗಳು—ಅದರ, ಅವನು, ತೆಗದು ಇತ್ಯಾದಿ.

— ◡ — ◡ — ◡
2ನೇ ವಿಧದ ಉದಾಹರಣೆಗಳು—ಹೋಗು, ಬೇಗ, ಬೀಳು ಇತ್ಯಾದಿ.

ಮತ್ತು 4 ಮಾತ್ರೆಯ ಗಣಗಳ ಅಕ್ಷರಗಳ 1ನೇ ವಿಧವು ಹ್ಯಾಗಂದರೆ (◡◡◡◡); 2ನೇ ವಿಧವು ಹ್ಯಾಗಂದರೆ (◡◡—); 3ನೇ ವಿಧವು ಹ್ಯಾಗಂದರೆ (—◡◡); 4ನೇ ವಿಧವು ಹ್ಯಾಗಂದರೆ (— —).

◡◡◡◡ ◡◡◡◡ ◡◡◡◡
1ನೇ ವಿಧದ ಉದಾಹರಣೆಗಳು—ಅವನಿಗೆ, ತಿಳಿಯುವ, ಗಲಿಬಿಲಿ ಇತ್ಯಾದಿ.

◡◡— ◡◡— ◡◡—
2ನೇ ವಿಧದ ಉದಾಹರಣೆಗಳು—ನರನೇ, ತರದಿಂ, ಅವನಂ ಇತ್ಯಾದಿ.

—◡◡ —◡◡ —◡◡
3ನೇ ವಿಧದ ಉದಾಹರಣೆಗಳು—ಆಗಲಿ, ಕೇಳಲೆ, ಭೋಜನ ಇತ್ಯಾದಿ.

— — — — — —
4ನೇ ವಿಧದ ಉದಾಹರಣೆಗಳು—ಇಚ್ಛಾ, ಕೇಳೋ, ಪುಣ್ಯಂ ಇತ್ಯಾದಿ.

ಈ ಗ್ರಂಥದಲ್ಲಿಯ 1ನೇ ಪೂರ್ಣ ಶ್ಲೋಕವನ್ನು ಇಲ್ಲಿ ಹಾಕಿ, ಅದರ 28 ಗಣಗಳನ್ನೂ ಒಂದೊಂದು ಗಣಸಾಲಿನ ಹೆಚ್ಚಾದ ಮಾತ್ರೆಯನ್ನೂ 3 ಮತ್ತು 4 ಮಾತ್ರೆಗಳು ಹೊಂದ ಬಹುದಾದ ಅಕ್ಷರವಿಧಗಳನ್ನೂ ತೋರಿಸುವ—

| | | | | | | |
|---|---|---|---|---|---|---|
| 1 | 2 | 3 | 4 | | | |
| ⏑⏑⏑ | ⏑⏑⏑⏑ | –⏑ | –⏑⏑ | | | |
| ಗಿಳಿಯು | ಮರಿಯುನು | ತಂದು | ಪಂಜರ | | | 1ನೇ ಪದ |
| 5 | 6 | 7 | 8 | | | |
| ⏑⏑⏑ | –⏑⏑ | ⏑⏑⏑ | ⏑⏑⏑⏑ | | | |
| ದೊಳಗೆ | ಪೋಷಿಸಿ | ಕಲಿಸಿ | ಮೃದು ನುಡಿ | | | 2ನೇದು |
| 9 | 10 | 11 | 12 | 13 | 14 | |
| ⏑⏑⏑ | –⏑⏑ | –⏑ | ⏑⏑⏑⏑ | –⏑ | –⏑⏑ | ⏑ |
| ಗಳನು | ಲಾಲಿಸಿ | ಕೇಳ್ವ | ಪರಿಣತ | ರಂತೆ | ನೀನೆನ | ಗೆ॥ 3ನೇದು, [1ನೇ ಗಣಸಾಲು |
| 15 | 16 | 17 | 18 | | | |
| ⏑⏑⏑ | ⏑⏑– | –⏑ | –⏑⏑ | | | |
| ತಿಳುಹು | ಮತಿಯನ್ನ | ಎನ್ನ | ಜಿಹ್ವೆಗೆ | | | 4ನೇದು |
| 19 | 20 | 21 | 22 | | | |
| ⏑⏑⏑ | –⏑⏑ | –⏑ | –– | | | |
| ಮೊಳಗು | ವಂದದಿ | ನಿನ್ನ | ನಾಮಾ | | | 5ನೇದು |
| 23 | 24 | 25 | 26 | 27 | 28 | |
| ⏑⏑⏑ | ⏑⏑⏑⏑ | –⏑ | –⏑⏑ | –⏑ | ⏑⏑⏑⏑ | ⏑ |
| ವಳಿಯ | ಪೊಗಳುವ | ದಿತ್ತು | ರಕ್ಷಿಸು | ನಮ್ಮ | ನನವರ | ತ॥ 6ನೇದು, [2ನೇ ಗಣಸಾಲು |

ವಿವರವು—1, 5, 7, 9, 15, 19, 23=3 ಮಾತ್ರೆಯ ಗಣಗಳ ಅಕ್ಷರಗಳ 1ನೇ ವಿಧ.

3, 11, 13, 17, 21, 25, 27=3 ಮಾತ್ರೆಯ ಗಣಗಳ ಅಕ್ಷರಗಳ 2ನೇ ವಿಧ.

2, 8, 12, 24, 28=4 ಮಾತ್ರೆಯ ಗಣಗಳ ಅಕ್ಷರಗಳ 1ನೇ ವಿಧ.

16=4 ಮಾತ್ರೆಯ ಗಣಗಳ ಅಕ್ಷರಗಳ 2ನೇ ವಿಧ.

4, 6, 10, 14, 18, 20, 26=4 ಮಾತ್ರೆಯ ಗಣಗಳ ಅಕ್ಷರಗಳ 3ನೇ ವಿಧ.

22=4 ಮಾತ್ರೆಯ ಗಣಗಳ ಅಕ್ಷರಗಳ 4ನೇ ವಿಧ.

ಗಣಗಳ ಒಂದೊಂದು ಸಾಲಿನ ಹೆಚ್ಚಾದ ಮಾತ್ರೆಯು ಹೇಳುವದರಲ್ಲಿ ಮಾತ್ರ ದೀರ್ಘವಾಗುತ್ತದೆ.

ಕಡೇ ಪ್ರಮಾಣ—ಭಾಮಿನೀ ಷಟ್ಪದಿಯಲ್ಲಿ ಗಣಗಳೂ ಹೆಚ್ಚಾದ ಮಾತ್ರೆಗಳೂ ಯಾವಾಗಲೂ ಹೇಳಿದಷ್ಟು ಬರ ಬೇಕು; ಆದರೆ ಗಣಗಳ ಮಾತ್ರೆಗಳ ಅಕ್ಷರ ವಿಧವು, ಗೊತ್ತು ಮಾಡಿದ ವಿಧಗಳಿಗೆ ಅನುಸಾರವಾಗಿ, ಒಂದೊಂದು ಶ್ಲೋಕದಲ್ಲಿ ಬೇರೆ ಬೇರೆ ಆಗಿರ ಬಹುದು. (ಈ ಕಡೇ ಪ್ರಮಾಣದ ಅರ್ಥವು ಸಕಲ ವಿಧದ ಸಾಧಾರಣ ಶ್ಲೋಕಗಳ ರಚನೆಯಲ್ಲಿ ಬೇಕು.)

## 2. ವಾರ್ಧಕ ಷಟ್ಪದೀ ಗಣಗಳು.

(140ನೇ ಶ್ಲೋಕ ನೋಡಿರಿ.)

ಈ ಛಂದಸ್ಸಿಗೆ 5 ಮಾತ್ರೆಗಳ ಗಣಗಳೇ ಬೇಕು. 5 ಮಾತ್ರೆಯ ಈ ಗಣಗಳ ಅಕ್ಷರಗಳು ಹೊಂದ ಬಹುದಾದ 6 ವಿಧಗಳು ಹಿಂದೆ ಪ್ರಯೋಗಿಸಿದ ಚಿನ್ಹೆಗಳಲ್ಲಿ ಕಾಣುವದು ಹ್ಯಾಗಂದರೆ—

1ನೇ ವಿಧವು (⏑⏑⏑⏑⏑); 2ನೇ ವಿಧವು (⏑⏑⏑—); 3ನೇ ವಿಧವು (⏑⏑—⏑); 4ನೇ ವಿಧವು (—⏑—); 5ನೇ ವಿಧವು (—⏑⏑⏑); 6ನೇ ವಿಧವು (——⏑).

ಈ ಗ್ರಂಥದಲ್ಲಿಯ 140ನೇ ಪೂರ್ಣ ಶ್ಲೋಕವನ್ನು ಇಲ್ಲಿ ಹಾಕಿ, ಅದರ 28 ಗಣಗಳನ್ನೂ ಒಂದೊಂದು ಗಣಸಾಲಿನ ಹೆಚ್ಚಾದ ಮಾತ್ರೆಯನ್ನೂ 5 ಮಾತ್ರೆಗಳು ಹೊಂದ ಬಹುದಾದ ಅಕ್ಷರವಿಧಗಳನ್ನೂ ತೋರಿಸುವ—

| | | | | | | |
|---|---|---|---|---|---|---|
| 1 | 2 | 3 | 4 | | | |
| — — ⏑ | — — ⏑ | — —⏑ | — ⏑ — | | | |
| ಮಾವಂಗೆ | ಭಾವಂಗೆ | ಮೇಣ್ ಅತ್ತೆ | ಗೈದೆ ಸಂ | | | 1ನೇ ಪದ |
| 5 | 6 | 7 | 8 | | | |
| —⏑⏑⏑ | —⏑⏑⏑ | — ⏑— | — ⏑⏑⏑ | | | |
| ಭಾವಿಸುತ | ಸೇವಿಸುತ | ಕಾಂತನಂ | ಸದ್ ವ್ರತದಿ | | | 2ನೇದು |
| 9 | 10 | 11 | 12 | 13 | 14 | |
| — ⏑⏑⏑ | ⏑ ⏑⏑⏑⏑ | — ⏑— | ⏑⏑⏑ ⏑⏑ | — — ⏑ | — —⏑ ⏑ | |
| ನೋವುತಿಹ | ಯುವತಿಗಿಹ | ಲೋಕದೊಳ್ | ಸುಕೃತ ಫಲ | ಮಾಯತ್ತು! | ಮಂತ್ ಅಲ್ಲ \|ದೆ॥ | [3ನೇದು, 1ನೇ ಗಣಸಾಲು |
| 15 | 16 | 17 | 18 | | | |
| —⏑— | —⏑— | ⏑⏑⏑⏑⏑ | ⏑ ⏑—⏑ | | | |
| ಪಾವಿನಂತ್ | ಆವಿನಂತ್ | ಅಡಿಗಗಿಗೆ | ಮೊರದೆದ್ದು | | | 4ನೇದು |
| 19 | 20 | 21 | 22 | | | |
| —⏑⏑⏑ | —⏑⏑⏑ | ⏑⏑⏑⏑⏑ | — — ⏑ | | | |
| ಡಾವರಿಸಿ | ಸೀವರಿಸಿ | ಮನೆಗೆಲಸ | ಮಂ ಗೈಯ | | | 5ನೇದು |
| 23 | 24 | 25 | 26 | 27 | 28 | |
| — ⏑⏑⏑ | — ⏑⏑⏑ | — ⏑⏑⏑ | ⏑⏑⏑ — | ⏑⏑⏑ — | ⏑ ⏑⏑— ⏑ | |
| ದಾ ವನಿತೆ | ಸಾವ್ ಅನಿತೆ | ಲೇಸ್ ಎನಿಸ | ದಿಹಳೆ ತತ್ | ಪತಿಗೆ ತದ್ | ಗೃಹಜನಕ್ \|ಕೆ॥ | 6ನೇದು, 2ನೇ ಗಣಸಾಲು |

ವಿವರವು—10, 12, 21=1ನೇ ಗಣಾಕ್ಷರವಿಧ.—26, 27, 28=2ನೇದು.—18=3ನೇದು.—4, 7, 11, 15, 16=4ನೇದು.—5, 6, 8, 9, 19, 20, 23, 24, 25=5ನೇದು.—1, 2, 3, 13, 14, 22=6ನೇದು.

ಭಾಮಿನೀ ಷಟ್ಪದಿಗೆ ಹೇಳಿದ ಕಡೇ ಪ್ರಮಾಣವನ್ನು ವಾರ್ಧಕ ಷಟ್ಪದಿಯನ್ನು ಕುರಿತು ಸಹ ಹೇಳ ಬೇಕು.

## 3. ರಾಗ ಮುಖಾರಿ; ಝಂಪೆ ತಾಳ.

(63ನೇ, 95ನೇ, 100ನೇ ಶ್ಲೋಕಗಳನ್ನು ನೋಡಿರಿ.)

ಇದರ ಗಣಗಳು, ವಾರ್ಧಕದಲ್ಲಿ ಇದ್ದ ಹಾಗೆ, 5 ಮಾತ್ರೆಯವುಗಳಾಗಿವೆ; ಮತ್ತು ಇದರ ಗಣಗಳ ಅಕ್ಷರಗಳು ವಾರ್ಧಕದ ಗಣಾಕ್ಷರಗಳ 6 ರೂಪಗಳನ್ನೇ ಹೊಂದು

ತ್ರವೆ. 63ನೇ ಪಲ್ಲವನ್ನೂ ಪೂರ್ಣ ಶ್ಲೋಕವನ್ನೂ ಹಾಕಿ, ಗಣಗಳನ್ನೂ* ತಾಳಗಳನ್ನೂ ಈ ಆವರಣಚಿನ್ಹೆಯೊಳಗೆ (.) ಕಾಣುವ ಚಿನ್ಹೆಯಿಂದ ತಾಳಪೆಟ್ಟುಗಳನ್ನೂ† ತೋರಿಸುವ—

| | | |
|---|---|---|
| | ಪಲ್ಲ | |
| ಆರು ಹಿತ | ವರು ನಿನಗೆ | 1ನೇ ತಾಳ |
| ಮೂರು ಮಂ | ದಿಗಳೊಳಗೆ | 1ನೇ ಪದ (ಪಾದ), 2ನೇ ತಾಳ |
| ನಾರಿಯೋ | ಧಾರಿಣಿಯೋ | 3ನೇ ತಾಳ |
| ಬಲು ಧನದ | ಸಿರಿಯೊ— — | ‖ 2ನೇ ಪದ (ಪಾದ), 1ನೇ ಗಣಸಾಲು, 4ನೇ ತಾಳ |
| | ಶ್ಲೋಕ | |
| ಅನ್ಯರಲಿ | ಜನಿಸಿರ್ದ | 1ನೇ ತಾಳ |
| ಅಂಗನೆಯ | ಕರತಂದು | 1ನೇ ಪದ (ಪಾದ), 2ನೇ ತಾಳ |
| ತನ್ನ ಮನೆ | ಗವಳ ಯಜ | 3ನೇ ತಾಳ |
| ಮಾನಿಯೆನಿ | ಸೆ— — — — | ‖ 2ನೇ ಪದ (ಪಾದ), 1ನೇ ಗಣಸಾಲು, 4ನೇ ತಾಳ |
| ಭಿನ್ನವಿಲ್ | ಲದೆಯರ್ಧ | 5ನೇ ತಾಳ [(ಅಪೂರ್ಣವಾದ್ದು) |
| ದೇಹವೆನಿ | ಸುವ ಸತಿಯು | 3ನೇ ಪದ, 6ನೇ ತಾಳ |
| ಕಣ್ಣಿನಲಿ | ನೋಡಲಂ | 7ನೇ ತಾಳ |
| ಮಳು ಕಾಲ | ವಶದಿ— — | ‖ 4ನೇ ಪದ, 1ನೇ ಗಣಸಾಲು, 8ನೇ ತಾಳ (ಅಪೂರ್ಣ [ವಾದ್ದು) |

95ನೇ ಶ್ಲೋಕದಲ್ಲಿ 2ನೇ ಪದಕ್ಕೆ 2 ಮಾತ್ರೆಗಳು ಹೆಚ್ಚಿರುವದರಿಂದ ಇವುಗಳ ಎರಡನೇದರಲ್ಲಿ ಮತ್ತೊಂದು ಪೆಟ್ಟು ಬೀಳ ಬೇಕು; ಇಲ್ಲಿಯ 'ವಶದಿ' ಎಂಬದರ ಹಾಗೆ.

## 4. ರಾಗ ಆನಂದಭೈರವಿ; ಝಂಪೆ ತಾಳ.

(128ನೇ ಶ್ಲೋಕ ನೋಡಿರಿ.)

ಇದರ ಗಣಗಳು ಸಹ 5 ಮಾತ್ರೆಯವುಗಳು; ಮತ್ತು ಗಣಾಕ್ಷರಗಳು ಸಹ ಗೊತ್ತು ಮಾಡಿದ 6 ರೂಪಗಳನ್ನು ಹೊಂದುತ್ತವೆ. ಆದರೆ ರಾಗ ಮುಖಾರಿಗೂ ರಾಗ ಆನಂದಭೈರವಿಗೂ ವ್ಯತ್ಯಾಸವಿರುವದರಿಂದ ಈ ಕಡೆಯದರ ಪದಗಳು ಸ್ವಲ್ಪ ಬೇರೆ ಆಗುತ್ತವೆ. 128ನೇ ಪಲ್ಲವನ್ನೂ ಶ್ಲೋಕವನ್ನೂ ಹಾಕಿ, ಗಣಗಳನ್ನೂ ತಾಳಗಳನ್ನೂ ತಾಳಪೆಟ್ಟುಗಳನ್ನೂ ತೋರಿಸುವ—

---

* ದಾಸರ ಪದಗಳ ಎಲ್ಲಾ ಗಣಗಳನ್ನು ಹಿಂದೆ ಹೇಳಿದ ಮಾತ್ರಾಕ್ರಮಕ್ಕನುಸಾರವಾಗಿ ಕಟ್ಟಿ ಹಾಕಲಾಯಿತು; ಈ ಪ್ರಕಾರದಿಂದ ಮಾತ್ರ ಹುಡುಗರಿಗೆ ಅಂಥ ಪದಗಳ ರಚನೆಯು ಸ್ವಲ್ಪ ತಿಳಿದೀತು.

† ತಾಳಪೆಟ್ಟುಗಳನ್ನು ಸಹ ಒಂದು ವಿಧವಾಗಿ ತೋರಿಸುವದಕ್ಕೆ ಪ್ರಯತ್ನ ಪಟ್ಟಿವು; ಆದರೂ ಅವನ್ನು ಬಲ್ಲವರಿಂದ ಬಡಿಸಿ ಕೊಂಡರೆ ಹೊರ್ತು ನೆಟ್ಟಗೆ ಕಲಿಯುವದಕ್ಕೆ ಬೇರೆ ಉಪಾಯವಿಲ್ಲ.

ಪಲ್ಲ

| | | |
|---|---|---|
| ಏನ ಮಾ | ಡಲಿ ನನ್ನ | 1ನೇ ತಾಳ |
| ದೇವ —— | ಈ ಟೆಳೆಯು | 1ನೇ ಪದ, 2ನೇ ತಾಳ |
| ಸೋನೆಯಿಲ್ | ಲದಲುರಿದು | ದು ‖ 2ನೇ ಪದ, 1ನೇ ಗಣಸಾಲು, 3ನೇ ತಾಳ (1 ಪೆಟ್ಟು ಹೆಚ್ಚಿನದು) |

ಶ್ಲೋಕ

| | | |
|---|---|---|
| ಮೊಡ ದೆಸೆ | ಯೊಳು ಬಂದು | 1ನೇ ತಾಳ |
| ದು ———— | ವೃಷ್ಟಿಯಾ | 1ನೇ ಪದ, 2ನೇ ತಾಳ |
| ಬಡಗ ದೆಸೆ | ಯೊಳು ಸುರಿದು | ದು ‖ 2ನೇ ಪದ, 1ನೇ ಗಣಸಾಲು, 3ನೇ ತಾಳ (1 ಪೆಟ್ಟು ಹೆಚ್ಚಿನದು) |
| ಎಡೆ ಬಿಡದೆ | ತೆಂಕ ಕಡೆ | 4ನೇ ತಾಳ |
| ಯುಲಿ ಹೊಡೆದ | ಮಳೆಯು ತಾ | 3ನೇ ಪದ, 5ನೇ ತಾಳ |
| ನಡುವೆ ಬಿಡು | ವದು ಯಾತ | ಕೆ ‖ 4ನೇ ಪದ, 2ನೇ ಗಣಸಾಲು, 6ನೇ ತಾಳ (1 ಪೆಟ್ಟು ಹೆಚ್ಚಿನದು) |

## 5. ರಾಗ ಶಂಕರಾಭರಣ; ಆದಿ ತಾಳ.

(68ನೇ, 78ನೇ ಶ್ಲೋಕಗಳನ್ನು ನೋಡಿರಿ.)

ಇದರ ಗಣಗಳು 4 ಮಾತ್ರೆಯವುಗಳು; ಭಾಮಿನೀ ಷಟ್ಪದಿಯಲ್ಲಿ ಪ್ರಯೋಗಿಸಿದ 4 ಮಾತ್ರೆಯ ಗಣಗಳ ಹಾಗೆಯೇ ಇವುಗಳನ್ನು ಕಟ್ಟಬೇಕು. 68ನೇ ಪಲ್ಲವನ್ನೂ ಅರ್ಧ ಶ್ಲೋಕವನ್ನೂ ಹಾಕಿ, ಗಣಗಳನ್ನೂ ತಾಳಗಳನ್ನೂ ತಾಳಪೆಟ್ಟುಗಳನ್ನೂ ತೋರಿಸುವ—

ಪಲ್ಲ

| | | | | |
|---|---|---|---|---|
| ವರದ ಸು | ಹೃದಯಾ | ವರದ ಸು | ಹೃದಯಾ | 1ನೇ ತಾಳ |
| ವರದ ಸು | ಹೃದಯಾ | ಯೆನುಮನ | ವೆ——— | 1ನೇ ಪದ, 2ನೇ ತಾಳ |
| ದುರಿತಶ | ರಧಿಯುಱ್ | ತರಿಸ ಟೆ | ಕಾದರೆ | 3ನೇ ತಾಳ |
| ಪರಮ ಪ | ತಿಯ ನುತಿ | ಸಿರು ಮನ | ವೆ——— | ‖ 2ನೇ ಪದ, 1ನೇ ಗಣಸಾಲು, 4ನೇ ತಾಳ |

ಅರ್ಧ ಶ್ಲೋಕ

| | | | | |
|---|---|---|---|---|
| ಘೋರ ತ | ರದ ಸಂ | ಸಾರವು | ದುಃಖದ | 1ನೇ ತಾಳ |
| ವಾರಿಧಿ | ಯಿುದರೊಳ | ಗೇಸ್ ಉಂ | ಟು——— | 1ನೇ ಪದ, 1ನೇ ಗಣಸಾಲು, 2ನೇ ತಾಳ |
| ತೋರುವ | ಶಿರಿ ಸಂ | ಪತ್ತಿನ | ನೆಲೆಯು ವಿ | 3ನೇ ತಾಳ |
| ಚಾರಿಸ | ಲದು ಕನ | ಸಿನ ಗಂ | ಟು——— | ‖ 2ನೇ ಪದ, 2ನೇ ಗಣಸಾಲು, 4ನೇ ತಾಳ |

ಮತ್ತೊಂದು ಅರ್ಧ ಶ್ಲೋಕದ ಗಣಗಳೂ ಹೆಚ್ಚಾದ ಮಾತ್ರೆಗಳೂ ಹಾಗೆಯೇ ಅವೆ; ಶ್ಲೋಕಗಳನ್ನು ರಚಿಸಲಿಕ್ಕೆ ಹತ್ತಿದರೆ 4 ಮಾತ್ರೆಯ ಗಣಗಳ ಅಕ್ಷರಗಳು ಭಾಮಿನಿಯಲ್ಲಿ ತೋರಿಸಿದ 4 ವಿಧಗಳಿಗೆ ಅನುಸಾರವಾಗಿ ಬರ ಬೇಕು.

## 6. ರಾಗ ಮಾರವಿ; ಏಕ ತಾಳ.

ಇದರ ಗಣಗಳು ರಾಗ ಶಂಕರಾಭರಣದ ಆದಿ ತಾಳದಂಥವುಗಳಾಗಿವೆ; ಆದರೆ ಗಣಸಾಲೂ ತಾಳವೂ ತಾಳಪೆಟ್ಟುಗಳೂ ಬೇರೆ. ಈ ಛಂದಸ್ಸಿಗೆ ನಮ್ಮ ಗ್ರಂಥದಲ್ಲಿ ದೃಷ್ಟಾಂತವಿಲ್ಲ, ಆದ್ದರಿಂದ ರಾವಣದಿಗ್ವಿಜಯದ ಒಂದು ಶ್ಲೋಕದ 2ನೇ ಭಾಗ ಹಾಕಿ, ಗಣಗಳನ್ನೂ ತಾಳಗಳನ್ನೂ ತಾಳಪೆಟ್ಟುಗಳನ್ನೂ ತೋರಿಸುವ—

| | | | |
|---|---|---|---|
| (ಪನ್ನಗ) | ಚಯುಗಳ \| | ಕಟ್ಟಿದ \| | 1ನೇ ತಾಳ |
| | ಶ್ವಯುಗಳ \| | ಸಹಿರಣ್ \| | 1ನೇ ಪದ, 2ನೇ ತಾಳ |
| | ಮಯುಗಳ \| | ಸುರಥಾ \| | 3ನೇ ತಾಳ |
| | ಲಯುಗಳೊ \| | ಳುಲಿದೂ \|\| | 2ನೇ ಪದ, 1ನೇ ಗಣಸಾಲು, 4ನೇ ತಾಳ |
| | | ನಡದ \| | ರಾಗಾ \|\| ಪಲ್ಲ \|\| ಒಂದು ತಾಳ |

ಮತ್ತೊಂದು ಅರ್ಧ ಶ್ಲೋಕವು, ಗಣಾಕ್ಷರಗಳ 4 ವಿಧಗಳಿಗೆ ಅನುಸಾರವಾಗಿ, ಹಾಗೆಯೇ ಕಟ್ಟಿ ಅದೆ. ಈ ಅರ್ಧ ಶ್ಲೋಕದ ಅರ್ಥವೇನಂದರೆ — (ಅವರು ಹಾವಿನ) ಗುಂಪುಗಳ, (ಮತ್ತು) ಕಟ್ಟಿದ ಕುದುರೆಗಳ (ಈ) ಭಂಗಾರಲೇಪವುಳ್ಳ ಒಳ್ಳೇ ರಥಗಳೆಂಬ ಆಲಯುಗಳೊಳಗೆ (=ಆ ವಾಹನಗಳ ಮೇಲೆ ಕೂತು ಕೊಂಡು) ಕೂಗು ಹಾಕಿ, ನಡೆದರು ಆಗ.

## 7. ರಾಗ ರೇಗುಪ್ತಿ; ಮಟ್ಟೆ ತಾಳ.

(73ನೇ ಶ್ಲೋಕ ನೋಡಿರಿ.)

ಇದರ ಗಣಗಳು ಭಾಮಿನೀ ಷಟ್ಪದಿಯ 3 ಮಾತ್ರೆಯ ಗಣಗಳಂಥವುಗಳಾಗಿವೆ. 73ನೇ ಶ್ಲೋಕವನ್ನು ಹಾಕಿ, ಗಣಗಳನ್ನೂ ತಾಳಗಳನ್ನೂ ತಾಳಪೆಟ್ಟುಗಳನ್ನೂ ತೋರಿಸುವ—

| | | | | |
|---|---|---|---|---|
| ಕೋಪ \| | ವನ್ನು \| | ಮಾಡೆ \| | ದೀರು \| | 1ನೇ ಪದ, 1ನೇ ತಾಳ |
| ಪಾಪ \| | ಕೆ ಗುರಿ \| | ಯಾಗ \| | ದೀರು \|\| | 2ನೇ ಪದ, 1ನೇ ಗಣಸಾಲು, 2ನೇ ತಾಳ |
| ಶಾಪ \| | ಹರನ \| | ನುತಿಗ \| | ಳನ್ನು \| | 3ನೇ ಪದ, 3ನೇ ತಾಳ |
| ನೀ ಪ \| | ರಿಸುತ \| | ಲೀರು \| | ಮನವೆ \|\| | 4ನೇ ಪದ, 2ನೇ ಗಣಸಾಲು, 4ನೇ ತಾಳ |

## 8. ರಾಗ ಪೂರ್ವಿ; ರೂಪಕ ತಾಳ.

ಇದರ ಗಣಗಳು ರಾಗ ರೇಗುಪ್ತೀ ಮಟ್ಟೆ ತಾಳದಂಥವುಗಳಾಗಿವೆ. ನಮ್ಮ ಗ್ರಂಥದಲ್ಲಿ ಅದಕ್ಕೆ ದೃಷ್ಟಾಂತವಿಲ್ಲ; ಆದರೆ ಅದರ ಪಲ್ಲವನ್ನೂ ಒಂದು ಶ್ಲೋಕವನ್ನೂ ಹಾಕಿ, ಗಣಗಳನ್ನೂ ತಾಳಗಳನ್ನೂ ತಾಳಪೆಟ್ಟುಗಳನ್ನೂ ತೋರಿಸುವ—

ಪಲ್ಲಿ

| | | | | | |
|---|---|---|---|---|---|
| ಚಿಂತೆ | ಯಾತ | ಕೋ | 1ನೇ ತಾಳ | | |
| | | ಬಯುಲ | 2ನೇ ತಾಳ | | |
| ಭ್ರಾಂತಿ | ಯಾತ | ಕೊ ‖ | | | |
| ಅಂತ | ರಂಗ | ಶುದ್ಧಿ | ಹೊಂದು | 3ನೇ ತಾಳ | |
| ವಂತೆ | ಕಷ್ಟ | ಮಾಡ | ದೆ ‖ | 4ನೇ ತಾಳ | |

ಶ್ಲೋಕ

| | | | | |
|---|---|---|---|---|
| ಒಳ್ಳೆ | ಯುದಯ | ಕಾಲ | ದಲ್ಲಿ | 1ನೇ ಪದ, 1ನೇ ತಾಳ |
| ವೇಳೆ | ಯರಿತು | ಕೂಗು | ವಂಥ ‖ | 2ನೇ ಪದ, 1ನೇ ಗಣಸಾಲು, 2ನೇ ತಾಳ |
| ಕೋಳಿ | ತನ್ನ | ಮರಿಗ | ಳಿಂಗೆ | 3ನೇ ಪದ, 3ನೇ ತಾಳ |
| ಹಾಲ | ಕೊಟ್ಟು | ಸಲಹು | ತಿಹುದೆ ‖ | 4ನೇ ಪದ, 2ನೇ ಗಣಸಾಲು, 4ನೇ ತಾಳ |

## 9. ರಾಗ ಭೈರವಿ; ತ್ರಿವಿಡೆ ತಾಳ.

(146ನೇ ಶ್ಲೋಕ ನೋಡಿರಿ.)

ಇದರ ಗಣಗಳು ಭಾಮಿನೀ ಷಟ್ಪದಿಯವುಗಳ ಹಾಗೆ 3 ಮತ್ತು 4 ಮಾತ್ರೆಯವುಗಳಾಗಿದ್ದು, ಅವುಗಳ ಹಾಗೆಯೇ ಬೀಳುತ್ತವೆ. 146ನೇ ಪಲ್ಲವನ್ನು ಇಲ್ಲಿ ಹಾಕಿ, ಗಣಗಳನ್ನೂ ತಾಳಗಳನ್ನೂ ತಾಳಪೆಟ್ಟುಗಳನ್ನೂ ತೋರಿಸುವ—

| 1ನೇ ತಾಳ | | 2ನೇ ತಾಳ (ಅಪೂರ್ಣವಾದ್ದು) | | |
|---|---|---|---|---|
| ಕೇಳೊ | ಕೇಳೋ | ಮನುಜ | ನೆ——— | |
| ಕೇಳೊ | ಕೇಳೋ ‖ | 3ನೇ ತಾಳ, 1ನೇ ಪದ | | |
| ಕೇಳು | ಲೋಕದ | 4ನೇ ತಾಳ | | |
| ಬಾಳಿ | ನೊಗತನ | 5ನೇ ತಾಳ | | |
| ಕಾಳು | ಮಾಡದೆ | ಬಿಡುವ | ದೆ——— ‖ | 6ನೇ ಮತ್ತು ಅಪೂರ್ಣವಾದ 7ನೇ ತಾಳ, 2ನೇ ಪದ |
| ನಾಳೆ | ಯಮನಾ | 8ನೇ ತಾಳ | | |
| ವಾಳು | ಬೇಗದಿ | 9ನೇ ತಾಳ | | |
| ಕಾಲ | ಹಿಡಿದೆಳ | ದೊಯ್ಯು | ದಿರುವರೆ ‖ | 10ನೇ ಮತ್ತು 11ನೇ ತಾಳ, 3ನೇ ಪದ |

(ಶ್ಲೋಕದಲ್ಲಿ 4 ಪದಗಳವೆ.)

## 10. ದ್ವಿಪದೆ.

(50ನೇ ಶ್ಲೋಕ ನೋಡಿರಿ.)

ಇದರ ಗಣಗಳು ವಾರ್ಧಕ ಷಟ್ಪದಿಯ 5 ಮಾತ್ರೆಯವುಗಳ ಹಾಗೆಯೂ ಭಾಮಿನೀ ಷಟ್ಪದಿಯ 3 ಮಾತ್ರೆಯವುಗಳ ಹಾಗೆಯೂ ಬೀಳುತ್ತವೆ; 3 ಮಾತ್ರೆಯವುಗಳು ಒಂದೊಂದು ಪದದ ಅಂತ್ಯದಲ್ಲಿ ಕಾಣುತ್ತವೆ. 50ನೇ ಶ್ಲೋಕ ಇಲ್ಲಿ ಹಾಕುವ—

ದಳಪನೆಂ | ದನು ಪೌಜ | ನೆಣಿಸಿರೆನ್ | ನುತ್ತಾ || 1ನೇ ಪದ, 1ನೇ ಗಣಸಾಲು
ನಿಲಿಸಿದರು | ವಿಧವಿಧದಿ | ವಿಂಗಡಿಸಿ | ಮತ್ತಾ || 2ನೇ ಪದ, 2ನೇ ಗಣಸಾಲು

(ಕಡೇ ಅಕ್ಷರದ ದೀರ್ಘತ್ವವು ಹೇಳುವದರಿಂದಲೇ ಹುಟ್ಟುತ್ತದೆ.)

## II. ಪ್ರಾಸದ ವಿಷಯವು.

'ಪ್ರಾಸ' ಎಂಬದಕ್ಕೆ 'ಪ್ರ' ಅಂದರೆ ಮುಂದೆ ಮತ್ತು 'ಅಸ' ಅಂದರೆ ಹಾಕುವದು ಎಂಬದು ಮೂಲ. ಪ್ರಾಸ ಅಂದರೆ ಮುಂದೆ ಹಾಕುವಿಕೆ. ಒಂದೊಂದು ಪದದ (=ಚರಣದ) ಮುಂದಗಡೆಯಲ್ಲಿ (=ಅದರದರ ಆರಂಭದಲ್ಲಿ) ಇರುವ ಗಣದ 2ನೇ ಹ್ರಸ್ವವಾದ ವ್ಯಂಜನವನ್ನಾಗಲಿ (№ 1, 2, 3, 6) ಒತ್ತು ವ್ಯಂಜನವನ್ನಾಗಲಿ (№ 4, 5) ಪೂರ್ಣ ಶ್ಲೋಕದಲ್ಲಿ ಒಂದೇ ಮಾಡಿ ಇಡುವದು ಪ್ರಾಸವಾಗಿದೆ.

ಆ ವ್ಯಂಜನದ ಹಿಂದಿನ ಅಕ್ಷರವು ಹ್ರಸ್ವವಾಗಲಿ (№ 1, 3) ದೀರ್ಘವಾಗಲಿ (№ 2, 6) ಇರ ಬಹುದು.

ಪ್ರಾಸಕ್ಕಾಗಿ ಆ 2ನೇ ಹ್ರಸ್ವವಾದ ವ್ಯಂಜನವನ್ನಾಗಲಿ ಒತ್ತುವ್ಯಂಜನವನ್ನಾಗಲಿ ಪೂರ್ಣ ಶ್ಲೋಕದಲ್ಲಿ ಒಂದೇ ಮಾಡಿ ಇಡುವದೆಂತ ಹೇಳಿದೆವು; ಹ್ಯಾಗಂದರೆ ಹ್ರಸ್ವವಾದ ಆ ವ್ಯಂಜನಗಳನ್ನಲ್ಲದೆ ಅವವುಗಳ ಹ್ರಸ್ವವಾದ ಸ್ವರವನ್ನು ಲಕ್ಷಿಸುವದೇ ಇಲ್ಲ; ಅ, ಇ, ಉ, ಎ, ಒ ಎಂಬ ಸ್ವರಗಳಲ್ಲಿ ಯಾವದಾದರೂ ಆ ವ್ಯಂಜನಗಳಲ್ಲಿ ತೋರ ಬಹುದು.

4 ಮತ್ತು 5 ಮಾತ್ರೆಯ ಗಣಗಳ ಶ್ಲೋಕಗಳಲ್ಲಿ ಪ್ರಾಸದ ವ್ಯಂಜನಾಕ್ಷರವು ದೀರ್ಘವಾಗಿರ ಬಹುದು; ಈ ಪಕ್ಷದಲ್ಲಿ ಗಣದ ಮೊದಲಿನ ಅಕ್ಷರವು ಸಹ ದೀರ್ಘವಾಗಿರ ಬೇಕು (66ನೇ ಶ್ಲೋಕದಲ್ಲಿ "ಸಾಕಾರ"; 68ನೇದರಲ್ಲಿ "ಆರೈಸು"; 107ನೇದರಲ್ಲಿ "ಪುಣ್ಯಂ"; 140ನೇದರಲ್ಲಿ "ಮಾವಂಗೆ"; 155ನೇದರಲ್ಲಿ "ಬಾಗಿಲ್ಗಳಾರ್" ಇತ್ಯಾದಿ).

## ಉದಾಹರಣೆಗಳು:

№ 1.

1ನೇ ಶ್ಲೋಕದ ಪ್ರಾಸವ್ಯಂಜನಾಕ್ಷರವು ಳ ಕಾರ (ಲ ಕಾರ)—
(ಗ)-ಳಿ; (ದೊ)-ಳ; (ಗ)-ಳ; (ತಿ)-ಳು; (ಮೊ)-ಳ; (ವ)-ಳಿ. (ಳಿ, ಳ, ಳ, ಳು, ಳ, ಳಿ)

№ 2.

2ನೇ ಶ್ಲೋಕದ ಪ್ರಾಸವ್ಯಂಜನಾಕ್ಷರವು ನ ಕಾರ (ಣ ಕಾರ)—
(ದೀ)-ನ; (ದಾ)-ನಿ; (ಹೀ)-ನ; (ಏ)-ನ; (ಜ್ಞಾ)-ನ; (ವಾ)-ನ. (ನ,ನಿ,ನ,ನ,ನ,ನ)

№ 3.

3ನೇ ಶ್ಲೋಕದ ಪ್ರಾಸವ್ಯಂಜನಾಕ್ಷರವು ಳ ಕಾರ (ಲ ಕಾರ)—
(ಸು)-ಲಿ; (ಕ)-ಳಿ; (ಯ)-ಳಿ; (ಂ)-ಲಿ; (ತಿ)-ಳಿ; (ಘು)-ಳಿ. (ಲಿ, ಳಿ, ಳಿ, ಲಿ, ಳಿ, ಳಿ)

№ 4.

13ನೇ ಶ್ಲೋಕದ ಪ್ರಾಸವ್ಯಂಜನಾಕ್ಷರವು ಪ್ಪಕಾರ (ರ್ಪಕಾರ)—
(ಸ)-ರ್ಪ;(ಕ)-ಪ್ಪೆ;(ಸಿ)-ಪ್ಪ;(ದ)-ರ್ಪ;(ತ)-ಪ್ಪ(ತ)-ಪ್ಪು.(ರ್ಪ,ಪ್ಪೆ,ಪ್ಪ,ರ್ಪ,ಪ್ಪ,ಪ್ಪು)

№ 5.

61ನೇ ಶ್ಲೋಕದ ಪ್ರಾಸವ್ಯಂಜನಾಕ್ಷರವು ದ್ರ ಕಾರ (ದ್ದ ಕಾರ)—
(ನಿ)-ದ್ರೆ; (ಷೆ)-ದ್ರು. (ದ್ರೆ, ದ್ರು)

№ 6.

67ನೇ ಶ್ಲೋಕದ ಪ್ರಾಸವ್ಯಂಜನಾಕ್ಷರವು ಥ ಕಾರ (ತ ಕಾರ)—
(ಅಸ್)-ಥ; (ಸೊಸ್)-ಥ; (ಚೆತ್)-ತ; (ನುತ್)-ತ. (ಥ, ಥ, ತ, ತ)

ದ್ವಿಪದೆಯಲ್ಲಿ (50ನೇ ಮುಂತಾದ ಶ್ಲೋಕಗಳನ್ನು ನೋಡಿರಿ) ಒಂದೊಂದು ಪದದ ಅಂತ್ಯದಲ್ಲಿ ಸಹ ಪ್ರಾಸವು ಇರ ಬೇಕು.

ದಾಸರ ಪದಗಳಲ್ಲಿ ಪದಗಳೊಳಗೆ (ತಾಳಗಳ ಪ್ರಕಾರವಾಗಿ) ಅನೇಕ ಸರ್ತಿ ಶೃಂಗಾರಪ್ರಾಸಗಳು ಕಾಣುತ್ತವೆ (68ನೇ, 78ನೇ, 95ನೇ ಶ್ಲೋಕಗಳನ್ನು ನೋಡಿರಿ); ಹಾಗೆ ಕಾಣಿಸುವದು ಬಹಳ ಛಂದವೆನ್ನಿಸುತ್ತದೆ. ಜೈಮಿನಿ ಇತ್ಯಾದಿ ಯುಕ್ತಿಯುಳ್ಳ ಕವಿಗಳು ಸಹ ಅಂಥ ಶೃಂಗಾರಪ್ರಾಸಗಳನ್ನು ಪದಗಳ ಒಳಗೆ ಹಾಕುತ್ತಾರೆ (187ನೇ, 192ನೇ ಮುಂತಾದ ಶ್ಲೋಕಗಳನ್ನು ಶೋಧಿಸಿರಿ).

ಪ್ರಾಸದಲ್ಲಿ ಅಲ್ಲಲ್ಲಿ ಕಾಣುವ ಪ್ರತಿಷೇಧಗಳಿಗೆ ಅನುಸಾರವಾಗಿ ಮಾಡುವದು ಕೀರ್ತಿಕರವಾದದ್ದಲ್ಲ (ಉದಾಹರಣೆ—63ನೇ ಶ್ಲೋಕದಲ್ಲಿ (ಅ)-ನ್ಯ ಎಂಬದು (ತ)-ನ್ನ ಎಂಬದಕ್ಕೆ ಪ್ರಾಸವಾಗ ಕೂಡದು.

# ಈ ಗ್ರಂಥದ ಕೆಲವು ಚಿನ್ಹೆಗಳ ವಿವರ.

ಕನ್ನಡ ಕಾವ್ಯದಲ್ಲಿ ಎಲ್ಲಾ ಮಾತುಗಳು, ಕೂಡುವ ಪಕ್ಷದಲ್ಲಿ, ಸಂಧಿಯಾಗಿ ಬರೆದವೆ; ಆದ್ದರಿಂದ ಅರ್ಥ ಮಾಡುವದು ಹೆಚ್ಚು ಕಷ್ಟ. ಈ ಕಷ್ಟವನ್ನು, ಆಗುವ ಮಟ್ಟಿಗೆ, ಪರಿಹರಿಸುವದಕ್ಕಾಗಿ ಈ ಗ್ರಂಥದಲ್ಲಿ ಅನೇಕ ಮಾತುಗಳನ್ನು, ಗಣಗಳು ಕೆಡದ ಪಕ್ಷದಲ್ಲಿ, ವಿಂಗಡಿಸಿದೆವು. ಅದು ಕಾರಣವಾಗಿ ಅಲ್ಲಲ್ಲಿ ಮಾತುಗಳ ಅಂತ್ಯ ದಲ್ಲಿ ಅರ್ಧ ಅಕ್ಷರಗಳು ಕಾಣಿಸುತ್ತವೆ. ಆ ಅರ್ಧ ಅಕ್ಷರಗಳಿಗೆ, ಅರ್ಥ ಮಾಡುವಾ ಗ ಬೇಕಾದ ಹಾಗೆ, ಅನಿತ್ಯ ಉ ಕಾರವನ್ನೂ ಇ ಕಾರ (ಇದಕ್ಕೆ ಬದಲಾಗಿ ಈ ಗ್ರಂ ಥದಲ್ಲಿ ಅರ್ಧ ಯ ಕಾರ ಒತ್ತು ಹಾಕಿ ಅದೆ), ಎ ಕಾರ, ಅ ಕಾರಗಳನ್ನೂ ಕೂಡಿಸ ತ ಕ್ಕದ್ದಾಗಿದೆ; ಆದರೆ ಪದಗಳನ್ನು ಓದುವಾಗ ಅದದನ್ನು ಕೂಡಿಸಲಾಗದು.

ಉದಾಹರಣೆಗಳು—1ನೇ ಶ್ಲೋಕದಲ್ಲಿ "ನೀನ್ ಎನಗೆ"="ನೀನು ಎನಗೆ"; ಅಲ್ಲಿಯೇ "ಮತಿಯನ್ನ್ ಎನ್ನ„="ಮತಿಯನ್ನು ಎನ್ನ"; 3ನೇದರಲ್ಲಿ "ವಾಗ್ಯ್ ಇರ್ದಾರ್"="ವಾಗಿ ಇರ್ದಾರ್"; 7ನೇದರಲ್ಲಿ "ದೆಲ್ಲ್ಯ್ ಇಹುದು"="ದೆಲ್ಲಿ ಇಹುದು"; 11ನೇದರಲ್ಲಿ "ದಾತಂಗ್ ಏಕೆ"="ದಾತಂಗೆ ಏಕೆ"; 12ನೇದರಲ್ಲ್ಲಿ "ದವರಿಂಗ್ ಅಧಮ"="ದವರಿಂಗೆ ಅಧಮ"; 15ನೇದರಲ್ಲಿ "ಹುಳುವಿನಂ ತ್ ಇಹನೂ"= "ಹುಳುವಿನಂತೆ ಇಹನೂ"; 4ನೇದರಲ್ಲಿ "ಜ್ಞನಪ್ಪ್ ಅಂತೆ"=ಜ್ಞನಪ್ಪ ಅಂ ತೆ"; 9ನೇದರಲ್ಲಿ "ವಿಲ್ಲ್ ಎಂದಾ"="ವಿಲ್ಲ ಎಂದಾ"; 71ನೇದರಲ್ಲಿ "ಪಾಳಿಗಳೆಲ್ಲ್ ಅಲ್ಲ್ಯ್"= "ಪಾಳಿಗಳೆಲ್ಲ ಅಲ್ಲಿ" ಇತ್ಯಾದಿ.

ಕಾವ್ಯದಲ್ಲಿ ಎಲ್ಲಾ ಮಾತುಗಳ ಸಂಧಿಯನ್ನು, ಗಣಗಳು ಕೆಡದೆ, ಬಿಚ್ಚಲಾಗ ದು. ಬಿಚ್ಚಲಾಗದಂಥ ಪಕ್ಷದಲ್ಲಿ ಮಾತುಗಳನ್ನು ಬೇಗ ವಿಂಗಡಿಸುವದಕ್ಕಾಗಿ ಈ ಆವರಣ ಚಿನ್ಹೆಯೊಳಗೆ (॰) ಇರುವ ಚಿನ್ಹೆ ಪ್ರಯೋಗವಾಯಿತು. ಇದು ಯಾವ ಅಕ್ಷರದ ಮೇಲೆ ಅದೆಯೋ, ಆ ಅಕ್ಷರದಲ್ಲಿ ಎರಡು ಮಾತುಗಳ ಸಂಧಿ ಅದೆ; ಆ ಅಕ್ಷರದ ವ್ಯಂಜನವು ಹಿಂದಿನ ಮಾತಿನದು, ಅದರ ಸ್ವರವು ಮುಂದಿನ ಮಾತಿನದು.

ಅರ್ಥ ಮಾಡುವಾಗ, ಹಿಂದಿನ ಮಾತಿಗೆ ಹೋಗ ಬೇಕಾದ ವ್ಯಂಜನಕ್ಕೆ ಉ, ಇ, ಎ, ಅ ಎಂಬ ಸ್ವರಗಳಲ್ಲಿ ಒಂದನ್ನು ಕೂಡಿಸ ತಕ್ಕದ್ದಾಗಿದೆ.

ಉದಾಹರಣೆಗಳು—1ನೇ ಶ್ಲೋಕದಲ್ಲಿ "ಪಂಜರದೊಳಗೆ"="ಪಂಜರದ ಒಳಗೆ"; ಅ ಲ್ಲಿಯೇ "ಪರಿಣತರಂತೆ"="ಪರಿಣತರ ಅಂತೆ"; ಅಲ್ಲಿಯೇ "ಮೊಳಗುವೆಂದದಿ"="ಮೊಳಗುವ ಅಂದದಿ"; 3ನೇದರಲ್ಲಿ "ಸು-ಲಭವಾಗ್ಯ್"="ಸು-ಲಭವು ಆಗಿ"; ಅಲ್ಲಿಯೇ "ಸಂಸ್ಕೃತದಲಿ ನ್ನ್"="ಸಂಸ್ಕೃತದಲಿ ಇನ್ನು"; 5ನೇದರಲ್ಲಿ "ಶಿಷ್ಯರಿಗೆನ್ನತಂ"="ಶಿಷ್ಯರಿಗೆ ಉನ್ನತಂ" ಇ ತ್ಯಾದಿ.

ಮೇಲೆ ತೋರಿಸಿದ ಆ ಚಿನ್ಹೆಯು (॰) ಸಂಸ್ಕೃತ ಸಮಾಸಗಳನ್ನು ವಿಂಗಡಿಸು ವ ರೀತಿಯನ್ನು ಸಹ ಸೂಚಿಸುತ್ತದೆ.

(-) ಈ ಚಿನ್ಹೆಯು, ಕೂಡಿದ ಪಕ್ಷದಲ್ಲಿ, ಸಮಾಸ-ಶಬ್ದಗಳ ನಡುವೆ ಹಾಕಿ ಅದೆ; ಅದಲ್ಲದೆ ಉದಾಹರಣೆಗಳು ಬರುವಲ್ಲಿ ಅದು ಪ್ರಯೋಗವಾಯಿತು.

ಕೆಲವು ಇಂಥ ಚಿನ್ಹೆಗಳು ಒಂದರ ಮುಂದೆ ಒಂದು ಇದ್ದರೆ, ಏನಾದರೂ ಬಿಟ್ಟು ಬಿಟ್ಟದೆಂತ ತೋರಿಸುತ್ತವೆ.

( , ; . ) ಈ 3 ಚಿನ್ಹೆಗಳು ವಿರಾಮದವುಗಳು. (,) ಇದು ಅಲ್ಪ ವಿರಾಮದ್ದು; (;) ಇದು ಅರ್ಧ ವಿರಾಮದ್ದು; (.) ಇದು ಪೂರ್ಣ ವಿರಾಮದ್ದು. ಈ ವಿರಾಮ-ಚಿನ್ಹೆಗಳನ್ನು ಪದಗಳ ಅರ್ಥಕ್ಕಾಗಿ ಅಗತ್ಯವಾಗಿ ಲಕ್ಷಿಸ ಬೇಕು; ಅವು ಶ್ಲೋಕದಲ್ಲಿ ಹಾಕ ಕೂಡದಿರುವಲ್ಲಿ ಟೀಕೆಯಲ್ಲಿ ಹಾಕಿ ಅವೆ.

( . — ) ಈ ಚಿನ್ಹೆಯು ಅರ್ಥ ಪೂರ್ಣವಾಗಿ ತೀರಿದಲ್ಲಿ ಕಾಣಿಸುತ್ತದೆ.

(?) ಈ ಚಿನ್ಹೆಯು ಪ್ರಶ್ನೆಯದು; (!) ಇದು ಸಂಬೋಧನೆಯದು.

(=) ಇದು ಸಮಾರ್ಥಕ ಚಿನ್ಹೆ. (—) ಈ ಚಿನ್ಹೆಯು ಪದಗಳ (ಚರಣಗಳ) ಅಂತ್ಯದಲ್ಲಿದ್ದು, ಒಂದು ಮಾತಿನ ಒಂದು ಭಾಗವು ಕೆಳಗಿನ ಪದದ ಆರಂಭಕ್ಕೆ ಹೋಯಿತೆಂತ ತೋರಿಸುತ್ತದೆ.

## ನಿಘಂಟಿನ ವಿಷಯ.

ಇದರಲ್ಲಿ ಶಾಲೇ ಹುಡುಗರು ತಿಳಿಯದಿರ ಬಹುದಾದ ಎಲ್ಲಾ ಮಾತುಗಳ ಅರ್ಥ ಹೇಳಿ ಅದೆ, ಟೀಕೆಯಲ್ಲಿ ವಿಂಗಡಿಸದಿರುವ ಸಮಾಸ-ಶಬ್ದಗಳು ವಿಂಗಡಿಸಿ ಅವೆ. ಶ್ಲೋಕಗಳನ್ನು ಅರ್ಥ ಮಾಡುವದು ಕಷ್ಟವಾದರೆ, ಒಂದೊಂದು ಮಾತಿನ ಅರ್ಥವನ್ನು ನಿಘಂಟಿನಲ್ಲಿ ಹುಡುಕಿ ನೋಡ ತಕ್ಕದ್ದಾಗಿದೆ; ಹ್ಯಾಗಂದರೆ ಆಗಿಂದಾಗ್ಯೆ ಒಂದು ಮಾತಿಗೆ ಎರಡು ಅರ್ಥವಿರುವದು. ನಿಘಂಟಿನಲ್ಲಿ ಅರ್ಥ ಕೊಟ್ಟ ಮೇಲೆ ಇರುವ ಅಂಕೆಗಳು ಆಯಾ ಮಾತುಗಳು ಇಷ್ಟಿಷ್ಟನೇ ಶ್ಲೋಕದಲ್ಲಿ ಶಿಕ್ಕುತ್ತವೆಂತ ಗೊತ್ತು ಮಾಡುತ್ತವೆ. ಒಂದು ಮಾತಿಗೆ ಎರಡು ಅರ್ಥ ಹಚ್ಚಿದ್ದರೆ, ಆಯಾ ಸ್ಥಳಕ್ಕೆ ತಕ್ಕಂಥಾದ್ದನ್ನು ಆರಿಸಿ ಕೊಳ್ಳ ಬೇಕು.



MINOR

# Canarese Poetical ANTHOLOGY

## ಸಣ್ಣ ಕರ್ನಾಟಕ ಕಾವ್ಯಮಾಲೆ

---

## I. ಪಾಠ

### AN HUMBLE INTRODUCTION

ದೀನ ಭಾವದ ಪೀಠಿಕೆ

(ಭಕ್ತೀ ಸಾರ)

ಭಾಮಿನಿ-ಷಟ್ಪದಿ

ಗಣಗಳ ಮತ್ತು ಗಣಮಾತ್ರೆಗಳ ಕ್ರಮ—

| | | | | | | | |
|---|---|---|---|---|---|---|---|
| 3 | 4 | 3 | 4 | 1ನೇ ಪದ | | | |
| 3 | 4 | 3 | 4 | 2ನೇ ಪದ | | | |
| 3 | 4 | 3 | 4 | 3 | 4 | 1 | 3ನೇ ಪದ, 1ನೇ ಗಣಸಾಲು |
| 3 | 4 | 3 | 4 | 4ನೇ ಪದ | | | |
| 3 | 4 | 3 | 4 | 5ನೇ ಪದ | | | |
| 3 | 4 | 3 | 4 | 3 | 4 | 1 | 6ನೇ ಪದ, 2ನೇ ಗಣಸಾಲು |

ಗಿಳಿಯ ಮರಿಯನು[1] ತಂದು, ಪಂಜರ–
ದೊಳಗೆ ಪೋಷಿಸಿ, ಕಲಿಸಿ ಮೃದು ನುಡಿ[2]–
ಗಳನು, ಲಾಲಿಸಿ ಕೇಳ್ವ[3] ಪರಿಣತರಂತೆ ನೀನ್ ಎನಗೇ[4] ||

1, ಮರಿಯನ್ನು. 2, ನುಡಿಗಳನ್ನು. 3, ಕೇಳುವ. 4, ನನಗೇ.

ತಿಳುಹು[5] ಮತಿಯನ್ನ[6]; ಎನ್ನ[7] ಜಿಹ್ವೆಗೆ
ಮೊಳಗುವೆಂದದಿ[8] ನಿನ್ನ ನಾಮಾ[9]–
ವಳಿಯ ಪೊಗಳುವದಿತ್ತು[10], ರಕ್ಷಿಸು ನಮ್ಮನೆನವರತಾ[11]! || 1 ||

5, ತಿಳಿಸು. 6, ಮತಿಯನ್ನು. 7, ನನ್ನ. 8, ಮೊಳಗುವ ಅಂದದಿಂದ (ಅಥವಾ ಅಂದದಲ್ಲಿ). 9, ನಾಮ-ಆವಳಿಯ (ನಾಮಗಳ ಆವಳಿಯನ್ನು). 10, ಪೊಗಳುವದ ಇತ್ತು (ಪೊಗಳುವದನ್ನು ಕೊಟ್ಟು; 'ಇತ್ತು' ಎಂಬದಕ್ಕೆ ಈವುವದು ಎಂಬದು ಮೂಲ). 11, ನಮ್ಮನ್ನು ಅನವರತಾ.—ನೀನು (ದೇವರೇ) ಗಿಳಿಯ ಮರಿಯನ್ನು (ಅಂದರೆ ಗಿಳೀ ಮರಿಯ ಹಾಗೆ ನಿನ್ನ ಮುಂದೆ ಇರುವ ನನ್ನನ್ನು) ತಂದು, ---- ಲಾಲಿಸಿ ಕೇಳುವ ಪರಿಣತರ ಅಂತೆ (ಅಂದರೆ ಲಾಲಿಸಿ ಕೇಳುವ ಎಲ್ಲಾ ಪರಿಣತರಿಗೆ ನೀನು ತಿಳಿಸುವಂತೆ) ನನಗೆ (ಸಹ) ತಿಳುಹು ಮತಿಯನ್ನು; ಮೊಳಗುವ ಅಂದದಿಂದ (ನಾನು) ನಿನ್ನ ನಾಮಗಳ ಆವಳಿಯನ್ನು ಹೊಗಳುವದನ್ನು ನನ್ನ ಜಿಹ್ವೆಗೆ ಕೊಟ್ಟು, ಇತ್ಯಾದಿ.

ದೀನ ನಾನು, ಸಮಸ್ತ ಲೋಕಕೆ[1]
ದಾನಿ ನೀನು; ವಿಚಾರಿಸಲು, ಮತಿ-
ಹೀನ ನಾನು, ಮಹಾಂತ[2]-ಮಹಿಮಾ-ಜ್ಯೋತಿ-ಪತಿ ನೀನೂ; ||
ಏನ[3] ಬಲ್ಲೆನು ನಾನು? ನೆರೆ ಸು[4]-
ಜ್ಞಾನ-ಮೂರುತಿ ನೀನು. ನಿನ್ನ ಸ–
ಮಾನರುಂಟೇ? ದೇವ, ರಕ್ಷಿಸು ನಮ್ಮನೆನವರತಾ! || 2 ||

1, ಲೋಕಕ್ಕೆ. 2, ಮಹಾಂತವಾದ ಮಹಿಮೆಯ ಜ್ಯೋತಿಯುಳ್ಳ ಪತಿ. 3, ಏನನ್ನು, ಏನು ಎಂಬದರಲ್ಲಿ ದ್ವಿತೀಯಾವಿಭಕ್ತಿ. 4, ಸುಜ್ಞಾನದ ಮೂರ್ತಿ.



## A EULOGY ON THE CANARESE LANGUAGE

### ಕನ್ನಡ ಭಾಷೆಯ ಸ್ತುತಿ

(ಅನುಭವಾಮೃತ)

ಸುಲಿದ ಬಾಳೆಯ ಹಣ್ಣಿನೆಂದದಿ[1],
ಕಳಿದ ಸಿಗುರಿನ ಕಬ್ಬಿನೆಂದದಿ
ಯುಳಿದ ಉಷ್ಣದ ಹಾಲಿನೆಂದದಿ ಸು-ಲಭಮಾಗ್ಯ ಇದರ್[2] ||

1, ಅಂದದಿಂದ. 2, ಇದ್ದಾ.

ಲಲಿತವೆ[3]ಹ ಕನ್ನಡದ ನುಡಿಯಲಿ[4]
ತಿಳಿದು, ತನ್ನೊ[5]ಳು ತನ್ನ ಸಾಖ್ಯವ
ಘಳಿಸಿ ಕೊಂಡರೆ ಸಾಲದೇ? ಸಂಸ್ಕೃ[6]ತದಲಿನ್ನ ಏನೂ? || 3 ||

3, ಆಗುವ, ಆದ. 4, ನುಡಿಯಲ್ಲಿ. 5, ತನ್ನೊಳಗೆ (ಹೃದಯದೊಳಗೆ; ಮನಸ್ಸೌಖ್ಯವು ಮುಖ್ಯವೆಂಬಂತೆ). 6, ಸಂಸ್ಕೃತದಲ್ಲಿ.—'ತಿಳಿದು' ಎಂಬ ಆಖ್ಯಾತದ ಹಿಂದೆ ಸಹ 'ತನ್ನ ಸೌಖ್ಯವ' ಎಂಬ ಶಬ್ದವಿಡ ಬೇಕು.



## MEANS OF ACQUIRING KNOWLEDGE

### ಬುದ್ಧಿ ಘಳಿಸಿ ಕೊಳ್ಳುವ ಉಪಾಯಗಳು

(ಸೋಮೇಶ್ವರ-ಶತಕ)

ಪ್ರಸಂಗ

ಗಣಗಳ ಮತ್ತು ಗಣಮಾತ್ರೆಗಳ ಕ್ರಮ—
ಇದರ ಗಣಮಾತ್ರೆಗಳು ಬೇರೆ ಶ್ಲೋಕಗಳಲ್ಲಿಯೂ ಯಾವಾಗಲೂ
ಈ ಕ್ರಮದ ಪ್ರಕಾರವಾಗಿಯೇ ಬೀಳ ಬೇಕು.

∪ ∪ — | — ∪ ∪ | — ∪ — | ∪
∪ ∪ — | — — ∪ | — — ∪ | — | 1ನೇ ಪದ
∪ ∪ — | — ∪ ∪ | — ∪ — | ∪
∪ ∪ — | — — ∪ | — — ∪ | — || 2ನೇ ಪದ, 1ನೇ ಗಣಸಾಲು (ಎರಡನೇ ಭಾಗವು ಇದರ ಹಾಗೆಯೇ)

ಕೆಲವಂ[1] ಬಲ್ಲವರಿಂದ ಕಲ್ತು[2],
ಕೆಲವಂ ಗ್ರಂ[3]ಥಂಗಳಂ ಕೇಳುತಾ[4],
ಕೆಲವಂ ಮಾ[5]ಳ್ಪವರಿಂದ ಕಂಡು,
ಕೆಲವಂ ಸು-ಜ್ಞಾ[6]ನದಿಂ ನೋ[7]ಡುತಾ, ||

1, ಕೆಲವನ್ನು. 2, ಕಲಿತು. 3, ಗ್ರಂಥಗಳನ್ನು. 4, ಕೇಳುತ್ತಾ. 5, ಮಾಡುವವರಿಂದ. 6, ಸುಜ್ಞಾನದಿಂದ. 7, ನೋಡುತ್ತಾ.

ಕೆಲವಂ ಸಜ್-ಜನ[8]-ಸಂಗದಿಂದ—
ಲೆಱಿಯೈ[9], ಸರ್ವ-ಜ್ಞನೆಪ್ಪೆ[10] ಅಂತೆ, ನೀನ್! ||
ಪಲವುಂ[11] ಪಳ್ಳ[12] ಸಮುದ್ರವೇ, ನ[13]—
ರ, ನರಾ! ಕೇೞ್ ಬುದ್ಧಿಯಂ[14] ಪೇೞ್ವುದಾ[15]! || 4 ||

8, ಸಜ್ಜನರ ಸಂಗದಿಂದಲೆ. 9, ಅರಿ, ಐಯ್ಯ (ತಿಳುಕೋ, ಐಯ್ಯ). 10, ಅಪ್ಪ್, ಅಪ್ಪ, ಆಗುವ (ಅಪ್ಪಂತೆ, ಆಗುವಂತೆ). 11, ಹಲವು. 12, ಹಳ್ಳ (ಹಲವು ಹಳ್ಳಗಳು ಸಮುದ್ರವೇ; ಅದರಂತೆ ಅನೇಕ ಸಣ್ಣ ದೊಡ್ಡ ಉಪಾಯುಗಳಿಂದ ಬಹಳ ಬುದ್ಧಿ ಬರ ಬೇಕು). 13, ನರನೆ, ನರನೇ! 14, ಬುದ್ಧಿಯನ್ನು. 15, ಹೇಳುವದನ್ನು!

## GOD IS THE MOST HIGH

### ದೇವರು ಸರ್ವ-ಶ್ರೇಷ್ಠನಾಗಿದ್ಧಾನೆ

ಕವಿಯೇ ಪ್ರೌಢರೊಳ್[1] ಉತ್ತಮಂ[2]; ಕ—
ನಕವೇ ಲೋಹಂಗಳೊಳ್[3] ಶ್ರೇಷ್ಠಂ; ಕೇೞ್,
ಶ್ರವವೇ ಶಿಷ್ಯರಿಗುನ್ನತಂ[4]; ರ—
ತುನದೊಳ್ ವಿದ್ಯಾರ್ಥವೇ ವೆಗ್ಗಳಂ[5], ||
ರವಿಯೇ ಸರ್ವ ಗ್ರಹಂಗಳೊಳ್ಗೆ,
ರಸದೊಳ್ ಪಾಲೇ; ವರಂ[6] ಸರ್ವಥಾ
ದಿವ[7]-ಭೂ-ಪಾಲಕನೇ, ಕಣಾ, ನ—
ರ, ನರಾ! ಕೇೞ್ ಬುದ್ಧಿಯಂ ಪೇೞ್ವುದಾ! || 5 ||

1, ಒೞ್, ಒಳು, ಒಳಗೆ. 2, ಉತ್ತಮನು. 3, ಲೋಹಗಳೊಳಗೆ. 4, ಉನ್ನತವು. 5, ವೆಗ್ಗಳವು (ಈ ವಿಶೇಷಣ-ಪದವನ್ನು ಮುಂದಿನ ಎರಡು ವಾಕ್ಯಗಳಿಗೆ ಸಹ ಹಾಕ ಬೇಕು). 6, ವರನು. 7, ದಿವದ ಮತ್ತು ಭೂಮಿಯ ಪಾಲಕನೇ (ದೇವರೇ).

### GOD'S FEAR IS THE FIRST WANT OF MAN

### ದೇವರ ಭಯವು ಮುಖ್ಯವಾದ್ದು

(ಅನುಭವಾಮೃತ)

ಭಾಮಿನಿ-ಷಟ್ಪದಿ (1ನೇ ಶ್ಲೋಕ ನೋಡ ಬೇಕು)

ಏನು[1] ಕಲಿತಡೆದೇನು[2]! ಯತ್ನದ[3]–
ಲೇನು ಮಾಡಿದಡೇನು[4]? ಸರ್ವವು
ಕಾನನದ ಬೆಳ-ದಿಂಗಳೆಂದದಿ ವ್ಯರ್ಥವಾಗ್ಯ ಇಹುದೂ[5]; ||
ತಾನು ದೇವರ ಭಯವ ಕಲಿಯದೆ,
ಮಾನವನು ಬದುಕಿದಡೆದೇನು?
ಶ್ವಾನ[6] ಸೂಕರದಂತೆ ಹೊಟ್ಟೆಯ ಹೊರದು ಕೊಂಡ್ ಇಹನೂ[7]. ||6||

1, ಏನೂ, ಏನಾದರೂ. 2, ಕಲಿತಡೆ, ಕಲಿತರೆ. 3, ಯತ್ನದಲ್ಲಿ. 4, ಮಾಡಿದಡೆ, ಮಾಡಿದರೆ. 5, ಇರುವದು. 6, ಶ್ವಾನದ ಮತ್ತು ಸೂಕರದ ಅಂತೆ. 7, ಇರುವನು.—'ತಾನು ದೇವರ ಭಯವ ಕಲಿಯದೆ' ಎಂಬದನ್ನು ಶ್ಲೋಕದ ಆರಂಭದಲ್ಲಿ ಸಹ ಇಡ ಬೇಕು.



## II. ಪಾಠ.

### THE VAIN CONDUCT OF MAN

### ಮನುಷ್ಯರ ವ್ಯರ್ಥವುಳ್ಳ ನಡತೆ

ಕೆಲರು[1] ಮನೆ ಮನೆವಾರ್ತೆ ಮಕ್ಕಳ[2]–
ಲೊಲಿದು, ಮಮತೆಯ ಮಾಡಿ, ಧನವನು[3]
ಘಳಿಸಿ, ಸಂಸೃತಿ-ಸಂಭ್ರಮದಲಾಸಕ್ತರಾಗ್ಯ[4] ಇಹರೂ. ||

1, ಕೆಲವರು. 2, ಮಕ್ಕಳಲ್ಲಿ. 3, ಧನವನ್ನು. 4, ಸಂಸೃತಿಯ ಸಂಭ್ರಮದಲ್ಲಿ.—

ಫಲವ ಕಂಡರೆದೇನ್? ಅಕಟಕಟ,
ಫಳಿಲನೆಲ್ಲವು ಬಟ್ಟು-ಬರಿದಾಗ್ಯ
ಅಳಿವುದೆದರೊಳ್ ದುಃಖವೆಲ್ಲದೆ, ಸುಖವೆದೆಲ್ಲ್ಯ ಇಹುದೂ? ||7||

(ಅದರ) ಫಲವ ಕಂಡರೆ, ಅದು ಏನು? ಅಕಟ, ಅಕಟ, ಫುಳಿಲನೆ ಎಲ್ಲವು ಬಟ್ಟು-ಬರಿದು ಆಗಿ, ಅಳಿವುದು (ಅಳಿಯುವದು)! ಅದರೊಳ್ (ಹೇಳಿದದರೊಳಗೆ) ಇತ್ಯಾದಿ.

[1]ಮೊದಲೆ ಮರ್ಕಟ; ಮೇಲೆ ಮಧ್ಯದ
ಮದ-ವೆಥೆಯು ಹಿಡಿದಿರಲು, ವೃಶ್ಚಿಕ
ತುದಿಯು ಕಾಲನು ಕಚ್ಚಿದರೆ ಕುಣಿದಾಡುವೆಂದದಲೀ. ||
ಅಧಿಕ ಧನ, ಸಂಪತ್ತು, ಯೌವನ–
ವೊದಗಿರಲು, [2]ವನಿತಾದಿ-ವಿಷಯಾ–
ಸ್ಪದನೆನಿಸಿ ನಿಜವರಿಯದೆವನಿಗೆ ಮೋಕ್ಷ ಶಿಕ್ಕೀತೇ? ||8||

1, (ಮನುಷ್ಯನು) ಮೊದಲೆ ಮರ್ಕಟ (ದ ಹಾಗೆ ಇದ್ಧಾನೆ; (ಆ) ಮೇಲೆ (ಅವನು) ಮಧ್ಯದ (ಮಧ್ಯಪ್ರಾಯದ) ಮದ (ವುಳ್ಳ) ವೆಥೆಯು (ವ್ಯಥೆಯನ್ನು) ಹಿಡಿದು ಇರಲು, ವೃಶ್ಚಿಕವು (ಒಬ್ಬನ) ತುದಿಯ ಕಾಲನು (ಕಾಲಿನ ತುದಿಯನ್ನು) ಇತ್ಯಾದಿ ಅಂದದಲ್ಲಿ (ಇದ್ಧಾನೆ). 2, ವನಿತೆ ಮುಂತಾದ ವಿಷಯಗಳಿಗೆ ಆಸ್ಪದನು.

ತಾಯಿ ತಂದೆಯು ಬಿಟ್ಟು, ಹೆಂಡತಿ
ಸೂಯುವಾನಳಿಯೆಂದು, ಸರ್ವರ
ಬಾಯಿ [1]ಹೊಡದೆಲ್ಲವನು ಮಕ್ಕಳಿಗಿತ್ತು ಮಮತೆಯಲೀ, ||
[2]ನೋಯು ನುಡಿದಾರ್ ಏನನೆಂದರು,
ನಾಯ-ನಕರವನೆಡವ ಲುಬ್ಧಗೆ
ನಾಯ[3]ಕವೆನಿಪ ನರಕವೆಲ್ಲದೆ, ಸಗ್ಗವಿ[4]ಲ್ಲ! ಎಂದಾ. ||9||

1, ಹೊಡದು, ಎಲ್ಲವನ್ನು ಮಕ್ಕಳಿಗೆ ಇತ್ತು (ಕೊಟ್ಟು; ಈವುವದು=ಕೊಡುವದು). 2, (ಮತ್ತೊಬ್ಬರಿಗೆ) ನೋಯ (ನೋಯಲಿಕ್ಕೆ, ನೋವಾಗುವಂತೆ) ನುಡಿದು, ಆರ್ (ಯಾರು) ಏನನ್ನು ಎಂದರೂ, ನಾಯದ (ನ್ಯಾಯದ) ನಕರವನ್ನು ಅಡವ (ಅಡೆಯುವ ಲುಬ್ಧಗೆ (ಲುಬ್ಧನಿಗೆ). 3, ಎಣಿಸುವ. 4, ಈ ಪದಗಳ ಬೋಧಕನೆಂಬದು ಇದಕ್ಕೆ ಆಜ್ಞೆ ಆಗಿದೆ.

ದುಕ್ಕ ವೆಕ್ಕಸವಾ[1]ಗೆ, ಸರ್ವರು
ಸೊಕ್ಕಿ, ಮನದಲಿ ಮರುಗುವರು; ತಮ-
ಗೆಕ್ಕಜದ ಸುಖವಾಗೆ, ಸೊ[2]ಕ್ಕೊರು, ದೇವ[3]ರಂ ಮರೆ[4]ದೂ. ||
ಅಕ್ಕಟಕ್ಕಟ, ಕುರುಡ ಮನುಜನು
ಹಕ್ಕಿಯಂದದಿ ಬಲೆಯ ನೋಡದೆ,
ಶಿಕ್ಕಿ, ಸೊಕ್ಕೊಳ್ ಕುದಿದು, ಹೊರ[5]ಳುತ, ನರಳುತ್ತಿಹನೆಂದಾ. || 10 ||

1, ಆಗಲು, ಆಗುವಾಗ. 2, ಸೊಕ್ಕುವರು. 3, ದೇವರನ್ನು. 4, ಮರೆತು. 5, ಹೊರಳುತ್ತ.—(ಎಲ್ಲರು ಬಹಳ ದುಃಖದೊಳಗೆ ದೇವರ ಪರಿಪಾಲನೆಗೆ ಮೆಚ್ಚದೆ, ಸೊಕ್ಕುವರು; ಬಹಳ ಸುಖದೊಳಗೆ ಪರಿಪಾಲಕನಾದ ದೇವರನ್ನು ಮರೆತು, ಸೊಕ್ಕುವರು; ಅದೆರಡೂ ಅಸಮಾಧಾನದ ಕಾರಣವೇ!)



## THE MISERABLE STATE OF THE WORLDLY MAN

### ಲೌಕಿಕಾಶೆಯುಳ್ಳ ಮನುಷ್ಯರ ನಿರ್ಭಾಗ್ಯದ ಅವಸ್ಥೆ

ಕಾಣದಾ[1]ತಂಗ್ ಏ[2]ಕೆ ಕನ್ನಡಿ?
ಗಾಣದೆತ್ತಿಗೆ ಗೆಜ್ಜೆಯೇ[3]ತಕೆ?
ಗೋಣಿಗೇತಕೆ ಗವಸಣಿಗೆ? ನರಿಗೇಕೆ ಪರಲೋಕಾ? ||
ರಾಣಿಯೇಕೆ ನಪುಂ[4]ಸಕಗೆ? ಗೀ-
ರ್ವಾಣ-ಭಾಷೆಯದೇಕೆ ಗೊಲ್ಲಗೆ?
ಕೇಣವಿಲ್ಲದ ವಿ[5]ಷಯ-ಲಂಪಟಗೇಕೆ ಪರಮ ಸುಖಾ? || 11 ||

1, ಆತನಿಗೆ. 2, ಯಾಕೆ. 3, ಯಾತಕ್ಕೆ 4, ನಪುಂಸಕನಿಗೆ. 5, ವಿಷಯದಲ್ಲಿ ಲಂಪಟನಾದವನಿಗೆ.

ಚಮ್ಮ-ಖಂಡವ ಕಡಿ[1]ವ ಶುನ[2]ಕಕೆ
ಖಮ್ಮನೇ ತುಪ್ಪದಲಿ ರುಚಿ? ದುಷ್-
ಕಮ್ಮ-ಕಿಂಕರರಾದ ದೋ[3]ಷ-ಫಲಾಭಿಲಾಷರಿಗೇ, ||

1, ಕಡಿಯುವ. 2, ಶುನಕಕ್ಕೆ. 3, ದೋಷದಿಂದ ಹೊಂದುವ ಫಲದ ಅಭಿಲಾಷರಿಗೆ.

ಹಮ್ಮಿನಿಂದಲೆ ಸತ್ಯದಲಿ ಮನ
[4]ನೆಮ್ಮದವರಿಂಗ್, ಅಧಮ ಮಾರ್ಗದ
ದುಮ್-ಮತಿಗಳಿಗೆ ದೂರವಾಗ್ಯ ಇಹುದಾತ್ಮ-ನಿಜ-ಸುಖವೂ.||12||

4, (ಮತ್ತು) - - - ನೆಮ್ಮದವರಿಂಗೆ, (ಮತ್ತು) - - ದುಮ್ಮತಿಗಳಿಗೆ.

[1]ಸರ್ಪ-ವದನ-ಗ್ರಾಸವಾಗ್ಯ [2]ಇಹ
ಕಪ್ಪೆ ಮಕ್ಷಿಕ-ಭಕ್ಷಣವ ಬಯ–
[3]ಸಿಪ್ಪ ತೆರದಲಿ, ಮರಣ-ವಶವಾಗ್ಯ ಇರ್ದ ಮಾನವನೂ ||
ದರ್ಪದಿಂದಲೆ ಕೇಡ ಬಗೆವನು,
[4]ತಪ್ಪ ಸಾಧಿಸಿ ಸಕಲರಿಂಗ್. [5]ಅದು
ತಪ್ಪುವುದೆ [6]ತಂಗ್? ಅಕಟ, ನಗುವದು ಹೆಡ-ತಲೇ ಮೃತ್ಯೂ!||13||

1, ಸರ್ಪದ ವದನಕ್ಕೆ ಗ್ರಾಸವು. 2, ಇರುವ. 3, ಬಯಸಿ ಇರುವ (ಅಥವಾ ಬಯಸುವ). 4, ತಪ್ಪನ್ನು. 5, ಅಂದರೆ ಮೃತ್ಯು. 6, ತನಗೆ.

ದುಕ್ಕ ಬೆರಸದ ಸುಖವೆದಾರಿಗೆ
ಶಿಕ್ಕುವದು? ಹೇಳ್, ಕಂದ! ಮರ್ಕಟ
ಸೊಕ್ಕಿ, ಕೀಲನು ಕಿತ್ತು ಬಿಸುಟ[1]ಂದದಲಿ; [2]ಮಧು-ರಸವಾ ||
ಇಕ್ಕಿ ನೆಕ್ಕಲು, ಖಡ್ಗ-ಧಾರೆಯು
[3]ಪೊಕ್ಕು ನಾಲಗೆ ಶೀಳು[4]ವಂದದ–
ಉಕ್ಕಿ, ಮೋಸದ ಸುಖ [5]ಕೆಳೆಸಿ, ಕಡು ದುಕ್ಕ ಬಡು[6]ತ್ತಿಹನೂ.||14||

1, ಮರದ ತುಂಡನ್ನು ಶೀಳುವದಕ್ಕೆ ಒಂದು ಕೀಲು ಅದರಲ್ಲಿ ಹೊಡೆದಿರಲಾಗಿ ಒಂದು ಮರ್ಕಟ ಆ ಕೀಲಿನ ಆಟವಾಡಿ, ಅದನ್ನು ಕೈಯಿಂದ ಕಿತ್ತು ಬಿಸುಟಾಗ, ಕಾಲು ಶೀಳಿನಲ್ಲಿ ಇರಕಾಗಿ, ನೋವು ಪಟ್ಟಿತು; ಆ ಅಂದದಲ್ಲಿ. 2, (ಮತ್ತು) ಒಬ್ಬನು ಮಧು-ರಸವನ್ನು ಖಡ್ಗದ ಧಾರೆಗೆ ಇಕ್ಕಿ ನೆಕ್ಕಲು, ಆ ಧಾರೆಯು ಇತ್ಯಾದಿ. 3, ಹೊಕ್ಕು. 4, ಅಂದದಲ್ಲಿ ಉಕ್ಕಿ. 5, ಕೆಳಸಿ; ಅಂದರೆ ಪ್ರೀತಿ ಮಾಡಿ (ಅಥವಾ ಸುಖಕ್ಕೆ ಎಳಸಿಕೊಂಡು). 6, ಇರುವನು.—'ಉಕ್ಕಿ' ಎಂಬದರಿಂದ ಕಡೇ ಶಬ್ದದ ವರೆಗೆ ಮನುಷ್ಯನೆಂಬದು ಆಖ್ಯೆ.

# III. ಪಾಠ

## THE WORLDLY MAN'S DEPLORABLE CONDITION

### ಲೌಕಿಕನ ದುಃಖಕರವಾದ ಸ್ಥಿತಿ

ಮರುಳು ಹಿಡಿದವ ಮದ್ದು-ಗುಣಿಕೆಯು—
ನೆರದು ಕುಡಿವೆಂದದಲಿ, ಲೋಕಾ[1]—
ವರಣದಲಿ ಮರದಿರ್ದು[2] ಸತ್ಯವ ಮೂಢ ಭಾವದಲೀ, ||
ಪರಿ[3]-ಪರಿಯ ಸಂಸಾರ-ಪಾಶದಿ[4]
ಹಿರಿದು[5] ಬಿಗಿ ವಡದಿರ್ದ ಮನುಜಗೆ
ದೊರಕುವದೆ ಪರ-ಸುಖವು? ತಿರುಳಿನ ಹುಳುವಿನೆಂತ್ ಇಹನೂ. ||15||

1, ಲೋಕದ ಆವರಣದಲ್ಲಿ. 2, ಇದ್ದು. 3, ಬಹಳ ಪರಿಯ. 4, ಪಾಶದಲ್ಲಿ. 5, ಹಿರಿದು=ಹಿರಿದಾಗಿ.—ಅರ್ಥದ ಸೂಚನೆ: ತನ್ನ ಹುಚ್ಚು ಕೆಲಸದಿಂದ ನೀಚ ಮನುಷ್ಯನು ಕೆಡುವನಷ್ಟೇ (ಉಮ್ಮತ್ತದ ಕಾಯಿ ಅರದು ಕುಗಿದ ಒಬ್ಬ ಹುಚ್ಚನ ಹಾಗೆ).

ಒರಲೊಳಗೆ ತಲೆಯಿಟ್ಟು, ವನಕೆಯ
ಭರದ ಘಾಯಕೆ[1] ತಪ್ಪಲಿಕ್ಕೆ ಆರ್[2]
ಅರಿವರ್ರೈ[3]? ಬಹು ದುಃಖ-ಸಂಗ್ರಹವಾದ ಸಂಸೃತಿಯಾ ||
ಶರಧಿಯೊಳು ಹೊಕ್ಕವನಿಗೆಂತ್, ಎಲೆ,
ಪರಿಹರಿಸುವದು ಶಾಪ, ವೇದನೆ,
ಮರಣ, ಭೀತಿಯಿದೆಲ್ಲ, ಸತ್ಯವನೆರಿಯದವಗೆಂದಾ.[4] ||16||

1, ಘಾಯಕ್ಕೆ. 2, ಯಾರು. 3, ಅರಿಯುವರು, ಬಲ್ಲರು. 4, ಸಂಸೃತಿಯ ಶರಧಿಯೊಳಗೆ ಹೊಕ್ಕವನಿಗೆ (ಮತ್ತು) ಸತ್ಯವನ್ನು ಅರಿಯದವನಿಗೆ ಎಂತು ಪರಿಹರಿಸುವದು ಶಾಪ? ಇತ್ಯಾದಿ.

ಕೊರಳ ಸುತ್ತಿದ ಹಾವು ಕಚ್ಚದೆ,
ಮರಳುವದೆ? ಲೋಕ-ಪ್ರಬಂಧದಿ[1]
ಹೊರಳುತಿಹ ಪಾಮರಗೆ ತಪ್ಪದು ನಾಶನದ ಬಂಧಾ. ||

1, ಪ್ರಬಂಧದಲ್ಲಿ.

ಕುರುಡ ಕಾಣದಗಾಧ-ಕೂಪದ–
ಉರುಳುವಂತೆ, ವಿವೇಕ-ಶೂನ್ಯನು
ತಿರುಗುತಿಹ[2] ಪಾಪಾಧ್ವದಲಿ[3] ಕಡೆಘಾನಿ[4] ಹೊಂದುವನೂ. ||17||

2, ಇರುವ. 3, ಪಾಪದ ಅಧ್ವದಲ್ಲಿ. 4, ಕಡೆಗೆ ಹಾನಿ.

ತನ್ನ ಹಿತವನು[1] ತಿಳಿಯಲರಿಯದ[2]
ಕುನ್ನಿ ಬರಿದೇ! ಬಯಸಿ ಬೈಲಿಗೆ,
ಹೊನ್ನು ಹೆಂಣ್ ಎಂದ್ ಎಂಬ ಗಂಟಲ[3] ಗಾಳದಲಿ ಶಿಕ್ಕೀ, ||
ಉನ್ನತೋನ್ನತ[4]-ದುಃಖ-ನಿದಿಯಿಂ[5]
ಬನ್ನ ಬಡುವನು ಮರುಳು ಮನುಜನು[6];
ಹಣ್ಣ್ ಎನುತ[7], ಕಿಚ್ಚಿನಲಿ ಬೀಳುವ ಶಲಭದಂದದಲೀ. ||18||

1, ಹಿತವನ್ನು. 2, ತಿಳಿಯಲಿಕ್ಕೆ ಅರಿಯದ (ಮನುಷ್ಯನೆಂಬ) ಕುನ್ನಿ. 3, ಗಂಟಲಿನ (ಅಂದರೆ ಗಂಟ್ಲಿನೊಳಗೆ ಶೇರಿ ಹಿಡಿಯುವ) ಗಾಳದಲ್ಲಿ. 4, ಉನ್ನತ-ಉನ್ನತ, ಬಹಳ ಉನ್ನತವಾದ. 5, ನಿಧಿಯಿಂದ. 6, ಮನುಜನೆಂಬ ಆಖ್ಯೆಯನ್ನು 'ಬಯಸಿ' ಮುಂತಾದ ಶಬ್ದಗಳ ಹಿಂದೆ ಇಡಬೇಕು. 7, ಎನ್ನುತ್ತ.

ಯಾಕೆ ಮನೆ, ಮನೆವಾರ್ತೆ, ಮಕ್ಕಳು?
ಯಾಕೆ ಮಡದಿಯು ಗೊಡವೆ? ತಾನ್[1]–ಅದು
ಕಾಕ್! ಎಲಾ, ಸಂಸಾರದಧ್ರುವವಾರು ನಂಬುವರೂ? ||
ಸಾಕು, ಸಾಕ್! ಅದು ಬೇಡ! ಬರಿದೇ[2]
ಶೋಕ-ಮೋಹಾಸ್ಪದವದೆಂದ್, ಅದ[3]–
ನೋಕರಿಸಿ ಬಿಡದೆಹಹ[4], ನಿತ್ಯದಿ ಮೋಹಿಸುತ್ತ್ ಇಹನೂ. ||19||

1, ತಾನು ಅಂದರೆ ಮನುಷ್ಯನು; ಈ ಶಬ್ದವು ಮುಂದಿನದಕ್ಕೆ ಆಖ್ಯೆಯಾಗಿದೆ. ಅದು ಎಂತ ಹಿಡಿದು ಆಸ್ಪದವದೆಂದು ಎಂಬದರ ವರೆಗೆ ಅವನು ಹೇಳ ನ್ಯಾಯವಾದ ವಾಕ್ಯಗಳು. 2, ಬರೇ ಶೋಕದ (ಮತ್ತು) ಮೋಹದ ಆಸ್ಪದವು ಅದು! 3, ಅದನ್ನು. 4, ಬಿಡದೆ, ಅಹಹ.

ಬಡವೆಯುಳ್ಳರೆ[1], ಮಡದಿ ಮಕ್ಕಳು
ಕಡು ಮಮತೆಯನು ಮಾಳ್ಪ[2]ರಾತೆಗೆ[3];
ಬಡತನಗಳೆಡಸಿದರೆ, ಮೆಲ್ಲನೆ ಸಡಿಲ[4] ತೊಡಗುವರೂ. ||
ಬಿಡದೆ ಕರು, ಹಾಲ್ ಇರಲು, ತಾಯ್ಯ್ಯನು,
ಕಡೆಗೆ ಹೋ[5]ಹದು, ಬತ್ತಿದರೆ; ತಾ
ಕೆಡುವ ಕಾಲಕ್ಕ್ ಆರಿ[6]ಗಾರ್, ಐ? ಮಗನೆ, ಹೇಳ್! ಎಂದಾ. ||20||

1, ಇದ್ದರೆ. 2, ಮಾಡುವರು. 3, ಆತನಿಗೆ (ಗಂಡನಿಗೆ, ತಂದೆಗೆ). 4, ಸಡಲಲಿಕ್ಕೆ, ಸಡಿಲಾಗುವದಕ್ಕೆ. 5, ಹೋಗುವದು. 6, ಯಾರಿಗೆ ಯಾರು.

ಹೆಂಡಿರೇತಕೆ? ಮಕ್ಕಳೇತಕೆ?
ಭಂಡಿ ತುಂಬಿದ ಧನವದೇತಕೆ?
ಮಂಡೆ ತುಂಬಿದ ಬಳಗವಿದ್ದ್, ಏನ್ ಅಹ[1]ರು? ಮರಣ-ಪತ್ರೀ||
ಚಂಡ ಪಾಶ[2]ದಿ ಕಟ್ಟಿ, ಕಳ್ಳನ
ಕೊಂಡು ಹೋ[3]ಹಂದದಲಿ, ವೈ[4]ವನು.
ಕಂಡು, ಬಿಡಿಸು[5]ವರುಂಟೆ? ಯಾರಿಂದ್ ಏನು ಫಲವೆಂದಾ. ||21||

1, ಆಗುವರು. 2, ಪಾಶದಿಂದ. 3, ಹೋಗುವ. 4, ವೈಯುವನು. 5, ಬಿಡಿಸುವವರು.

ತಂದೆ ತಾಯ್ಯ್ಯ ಘಳಿಸಿರ್ದ ಧನವನು
ನಂದನರು ತಮ್ಮೊಳಗೆ ಪಾಲಿಗೆ
ತಂದು, ಗುದ್ದ್ಯ ಆಡುತ್ತಲಿರಮನೆಗೆರಿಕೆಯನು ಮಾ[1]ಡೇ;||
ಹಿಂದು ಮುಂದನು ನೋ[2]ಡದೆವರನು
ಬಂಧಿಸೆಲ್ಲವ ತೆಗದು ಕೊಂ[3]ಬರು.
ಮುಂದೆ ಭಿಕ್ಷಾ-ಪಾ[4]ತ್ರೆಗಧಿಕಾರಿಗಳು ತಾವ್! ಎಂದಾ. ||22||

1, ಮಾಡಲಾಗಿ. 2, (ಅರಮನೆಯವರು ಹಿಂದನ್ನೂ ಮುಂದನ್ನೂ) ನೋಡದೆ, ಅವರನ್ನು ಬಂಧಿಸಿ, ಎಲ್ಲವ. 3, ಕೊಳ್ಳುವರು. 4, ಪಾತ್ರೆಗೆ ಅಧಿಕಾರಿಗಳು.

## IV. ಪಾಠ

### A GOOD ADVICE

### ಒಳ್ಳೇ ಬುದ್ಧಿಯ ಮಾತು

ಎಡರಿನಲ್ಲ್ಯೆ ಎದೆ ಗುಂದದೆಬ್ಬದೆ[1]
ಪೊಡವಿಯಧಿಪತಿಯಾಗೆ[2], ಬಡತನ–
ವೆಡಿಸಿದರೆ ಕಣ್ಣು ಗೆಡದೆ, ವಿತ್ತವ ಘಳಿಸಿ ಗರ್ವಿಸದೇ, ‖
ಮಡದಿ ಮನೆ ಮನೆವಾರ್ತೆ ಮಕ್ಕಳ[3]–
ಲೊಡವೆಯಲಿ ಕಡು ಮಮತೆಯಿಲ್ಲದೆ,
ದೃಢ ಸು-ಭಕ್ತಿಯಲಿರಲು, ಮೋದವ ಪಡುವನೆವನೆಂದಾ[4]. ‖23‖

1, ಗುಂದದೆ, ಉಬ್ಬದೆ. 2, ಆಗಲು. 3, ಮಕ್ಕಳಲ್ಲಿ (ಮತ್ತು) ಒಡವೆಯಲ್ಲಿ. 4, ಅವನು ಅಂದರೆ ಯಾರೂ ಒಬ್ಬನು ಎಂಬದು ಹಿಂದಿನ ಪೂರ್ಣ ವಚನಕ್ಕೆ ಆಖ್ಯೆಯಾಗಿದೆ.

---

### THE IMPRACTICABILITY OF OBTAINING CLEANNESS BY CEREMONIES

### ಆಚಾರದಿಂದ ಶುದ್ಧತ್ವವು ಪ್ರಾಪ್ತವಾಗದು

(ಭಕ್ತೀ ಸಾರ)

ಎಂಜಲೆಂಜಲೆಯೆಂಬರಾ[1] ನುಡಿ–
ಯೆಂಜಲಿಲ್ಲವೆ? ವಾರಿ ಜಲ-ಚರ–
ದೆಂಜಲಿಲ್ಲವೆ? ಕೀರವದು ಕರುವೆಂಜಲೆನಿಸಿರದೇ? ‖
ಎಂಜಲೆಲ್ಲಿ[2]ಯದೆಲ್ಲಿಯುಂ[3] ಪರ–
ರೆಂಜಲಿಲ್ಲವೆ? ಬೇರೆ[4] ಭಾವಿಸ–
ಲೆಂಜಲುಂಟೇ? ದೇವ, ರಕ್ಷಿಸು ನಮ್ಮನೆನವರತಾ! ‖24‖

1, ಎನ್ನುವರು; ಆ. 2, ಎಂಜಲೆಲ್ಲಿ ಅದು? 3, ಎಲ್ಲಿಯಾದರೂ. 4, ಅಂದರೆ ಹಾಗಲ್ಲವೆಂತ ಭಾವಿಸಲು ಎಂಜಲುಂಟೇ? (ಇಲ್ಲವಿಲ್ಲ! ಎಲ್ಲವೂ ಎಂಜಲೇ!)

ತೊಲಗುವರು ಕಡೆ ಕಡೆಗೆ, ಛೀ, ಹೊಲೆ!
ಹೊಲೆಯೆನುತ ಕಳವಳಿಸಿ, ತಮ್ಮಯ[1]
ಮಲದ ಭಾವವನೇನು[2] ಕಾಣದೆ, ಬರಿದೆ[3] ಮನನೊಂದೂ. ||
ಜಲದೊಳಗೆ ಮುಳುಗಿದರೆ ತೊಲಗದು
ಹೊಲೆ-ಗೆಲಸವೀ[4] ದೇಹದೊಳು ನೀ
ನೆಲಸಿರಲು, ಹೊಲೆಯುಂಟೆ! ರಕ್ಷಿಸು[5] ನಮ್ಮನೆನವರತಾ! || 25 ||

1, ತಮ್ಮ. 2, ಭಾವವನ್ನು ಏನೂ. 3, ಸುಮ್ಮಗೆಯೇ. 4, ಗೆಲಸವು; ಈ. 5, (ದೇವ,) ರಕ್ಷಿಸು.



(ಸೋಮೇಶ್ವರ-ಶತಕ)

ಪ್ರಸಂಗ (4ನೇ ಶ್ಲೋಕ ನೋಡ ಬೇಕು)

ಪಿಡಿಯೊಳ್ ತುಂಬ್ಯ ಇರೆ[1] ಪಂಕ, ಮೇಲೆ
ತೊಳೆಯಲ್, ತಾಂ[2] ಶುದ್ಧನೇ? ಗೈದೊಡಂ[3]
ಕಡು ಪಾಪಂಗಳ, ಮೀಯಲಾತ[4]
ಶುಚಿಯೇ? ಕಾಕಾಳಿಗಳ್[5] ಮೀಯುವೇ? ||
ಗುಡ-ಪಾನಂಗಳೊಳದ್ದೆ[6], ಕೈಪೆ
ಸೋರೆ[7] ತಾಂ ಸ್ವಾದಪ್ಪುದೇ[8]? ಬಾಹ್ಯದೊಳ್
ಮಡಿಯೇ? ನಿರ್ಮಲ[9] ಚಿತ್ತವೇ, ನ–
ರ, ನರಾ! ಕೇಳ್ ಬುದ್ಧಿಯಂ ಪೇಳ್ವುದಾ! || 26 ||

1, ಇರಲು, ಇರಲಾಗಿ. 2, ತಾನು. 3, ಗೈದರೂ. 4, ಮೀಯಲು, ಆತ. 5, ಕಾಕ-ಆಳಿಗಳು. 6, ಅದ್ದಲು. 7, ಸೋರೆ. 8, ಸ್ವಾದಿಸುವದೇ. 9, ನಿರ್ಮಲ ಚಿತ್ತವೇ (ಮಡಿಯಾಗಿದೆ).



(ಅನುಭವಾಮೃತ)

ಜಾಮಿನಿ-ಷಟ್ಪದಿ (1ನೇ ಶ್ಲೋಕ ನೋಡ ಬೇಕು)

ಕೆಲ[1]ರು ಜಪ ತಪಗಳಲಿ, ಕೆಲಬರು
ಬಲುಮೆಯೆ[2]ಹ ಭುಜ-ಬ[3]ಲದಿ, ಕೆಲಬರು
ಹಲವು ವಿಧ[4]-ಯಾಗದಲಿ, ಕೆಲಬರು ದಾ[5]ನ-ಧರ್ಮದಲೀ ||
ಬಳಲುವರು, ಬಹು ಕಷ್ಟದಿಂದಲೆ
ಫಳಿಸಿ ಕೊಳ್ವ[6]ರೆ ತಮ್ಮ ಸುಖಗಳ,
ತಿಳಿಯಲರಿಯದೆ ನಿತ್ಯ ಸುಖವನು ಸತ್ಯ-ಮಾರ್ಗದಲೀ. || 27 ||

1, ಕೆಲವರು, ಕೆಲಬರು. 2, ಆದ. 3, ಬಲದಲ್ಲಿ. 4, ವಿಧದ. 5, ದಾನ ಕೊಡುವದೆಂಬ ಧರ್ಮದಲ್ಲಿ. 6, ಕೊಳ್ಳುವದಕ್ಕೆ.

(ಭಕ್ತೀ ಸಾರ)

ಸ್ನಾ[1]ನ, ಸಂಧ್ಯಾದಿಗಳ ಜಪ, ತಪ,
ದಾನ-ಧರ್ಮ-ಪರೋಪಕಾರದಿ
ಹೀನ ಭಾವದೊಳುಳಿ[2]ವರಲ್ಲದೆ ಬೇರೆ ಗತಿಯುಂಟೇ? ||
ಏ[3]ನು ಮಾಡಿ[4]ದಡೇನು, ಮುಕ್ತಿಗೆ
ಜ್ಞಾನವಿಲ್ಲದೆ? ಸತ್ಯ-ಭಕ್ತಿಗೆ
ನೀ[5]ನೆ ಕಾರಣನಾಗಿ, ರಕ್ಷಿಸು ನಮ್ಮನನವರತಾ! || 28 ||

1, ಸ್ನಾನದಿ, ಸಂಧ್ಯೆ ಮುಂತಾದ ಜಪದಿ, ತಪದಿ, ದಾನಗಳ ಧರ್ಮವೆಂಬ ಪರರ ಉಪಕಾರದಿ. 2, ಉಳಿಯುವರು; ಅಲ್ಲದೆ. 3, ಏನೂ. 4, ಮಾಡಿದರೆ. 5, ನೀನು, ದೇವರೇ.

### PRAYER FOR ETERNAL HAPPINESS

### ಅಚಲವಾದ ಆನಂದ ಬೇಕೆಂಬ ಪ್ರಾರ್ಥನೆ

ನೀರ ಮೇಲಣ[1] ಗುಳ್ಳೆಯೆಂದದಿ
ತೋರಿಯುಡಗುವ ಪಾಪ-ಮಯ[2]-ಸಂ—
ಸಾರ-ಬಹಳಾರ್ಣವದೊಳಗೆ ಮುಳುಗಿದೆನು ನಿತ್ಯದಲೀ. ||
ತೋರಿಸೆಚಲಾನಂದ[3]-ಪದವಿಯ,
ಶೇರಿಸೆಕಟಾ, ನಿನ್ನ ಬಿಲ್ ನಮ—
ಗಾರು ರಕ್ಷಕರುಂಟು? ರಕ್ಷಿಸು ನಮ್ಮನೆನವರತಾ! || 29 ||

1, ಮೇಲಿನ ಮೇಲಿರುವ. 2, ಪಾಪ-ಮಯವಾದ ಸಂಸಾರದ ಬಹಳ ಅರ್ಣವದೊಳಗೆ. 3, ತೋರಿಸಿ ಅಚಲವಾದ ಆನಂದದ ಪದವಿಯ, ಶೇರಿಸು (ನನ್ನನ್ನು ಅದಕ್ಕೆ!) ಅಕಟಾ, ಇತ್ಯಾದಿ.

---

## V. ಪಾಠ

### THE SHORTNESS OF MAN'S LIFE

### ಮನುಷ್ಯನ ಜೀವದ ಕಾಲ ಬೇಗ ತೀರುತ್ತದೆ

ವರುಷ[1] ನೂರ್ ಆಯುಷ್ಯವೆದರೊಳ—
ಗಿರುಳು ಕಳದೈವತ್ತು, ಮಿಕ್ಕ ಆ—
ದ್ದರಲಿ ವಾರ್ಧಕ ಬಾಲ್ಯ ಕೌಮಾರದೊಳು ಮೂವತ್ತೂ ||
ಇರದೆ ಸಂದುದು[2]; ಬಳಿಕಲಿಪ್ಪತ್ತು
ವರುಷವೆದರೊಳಗಾದುದೆಂತಃ—
ಕರಣ ನಿನ್ನೊಳು ತೋರಿ, ರಕ್ಷಿಸು ನಮ್ಮನೆನವರತಾ! || 30 ||

1, ವರುಷ ನೂರು (ಮನುಷ್ಯನ) ಆಯುಷ್ಯವು; ಅದರೊಳಗೆ ಇರುಳಾಗಿರುವ 50 ವರುಷಗಳನ್ನು ಕಳೆದು ಬಿಟ್ಟರೆ, ಮಿಕ್ಕಾದ್ದರಲ್ಲಿ ಮೂವತ್ತು ಇತ್ಯಾದಿ. 2, ಸಂತು (ಸಲ್ಲುತ್ತದೆಂಬದಕ್ಕೆ ಬದಲಾಗಿ); ಬಳಿಕಲೇ ಇಪ್ಪತ್ತು ವರುಷ (ಅತಿವೃದ್ಧಾಪ್ಯಕ್ಕೆ ಉಳಿಯುತ್ತವೆ); ಅದರೊಳಗೆ (ಆಯುಷ್ಯವು) ಆದುದು (ಆಯಿತು).—ನಾವು 'ಸಂದುದು' ಎಂಬದನ್ನು ನಿಜಭೂತಕಾಲದ ಮೇಲೆ ತಿಳುಕೊಂಡರೆ, ಕವಿಯು ತನ್ನ ಆಯುಷ್ಯದಲ್ಲಿ ಸಂದ ವರುಷಗಳನ್ನು ಹೇಳಿದ ಹಾಗೆ ಆಗುತ್ತದೆ.

## THE INSTABILITY OF THE BODY

### ಶರೀರದ ಅಸ್ಥಿರತ್ವ

ಎಂಟು ಗೇಣಿನ ದೇಹ, ರೋಮಗ–
ಳೆಂಟು ಕೋಟಿಯು, ಕೀಲ್[1]ಗಳೆರವತ್ತ
ಎಂಟು, ಮಾಂಸಗಳಿಂದ ಮಾಡಿದ ಮನೆಯು ಮನವ್ರೊಲೆಯೇ, ||
ಹೆಂಟೆಯುಲಿ ಮುಚ್ಚುವರು. ದೇಹದ–
ಲೆಂಟೆ ಸೌಖ್ಯವು? ದೇವ ನಿಜವೆಹೆ[2]
ನಂಟ ನೀನ್ ಆಗ್ಯ, ಇನ್ನು ರಕ್ಷಿಸು ನಮ್ಮನೆನವರತಾ! || 31 ||

1, ಕೀಲುಗಳು. 2, ಆದ.—(ಎಂಟು ಗೇಣಿನ ದೇಹವೆಂಬ, ರೋಮಗಳೆಂಟು ಕೋಟಿಯುಳ್ಳ, ಕೀಲ್ಗಳರವತ್ತೆಂಟು ಇರುವ ಮಾಂಸಗಳಿಂದ ಇತ್ಯಾದಿ).

ಹೊಡಿದೆಲು ಮರಮುಟ್ಟು, ಮಾಂಸದ
ಗೋಡೆ, ಚರ್ಮದ ಹೊದಿಕೆ, ನರವಿನ
ಕೂಡೆ ಹಿಂ[1]ಡಿಗೆ ಬಿಗಿದ ಮನೆಯೊಳಗಾತ್ಮ ಬೇಸತ್ತು ||
ಬೀಡು ತೊಲಗಿದ ಬಳಿಕಲೊ ಸುಡು-
ಗಾಡಿನಲಿ ಬೆಂದ್ ಉರಿವ ಕೊಂಪೆಯು
ನೋಡಿ, ನೆಂ[2]ಬ್ಯ ಇರಬಹುದೆ? ರಕ್ಷಿಸು ನಮ್ಮನೆನವರತಾ! || 32 ||

1, ‘ಪಿಂಡಿಗೆ ಬಿಗಿದ’ ಅಂದರೆ ಪಿಂಡಿಯು (ಅಂದರೆ ದೇಹವು) ಆಗುವ ಹಾಗೆ ಬಿಗಿದ. 2, (ಯಾರಾದರೂ) ನೋಡಿ, ನಂಬಿ.—(ಎಲುವಿನ ಮರಮುಟ್ಟು ಉಳ್ಳ, ಮಾಂಸದ ಗೋಡೆ ಉಳ್ಳ ಇತ್ಯಾದಿ).

ಬಿಗಿದ ರಕುತದ ರೋಮ-ಕೂಪದ
ತೊಗಲ ಕೋಟೆಯ ನೆಂ[1]ಬೆ, ರೋಗೊ–
ದಿಗಳ ಮುತ್ತಿಗೆ ಬಲಿದು, ಜೀವನ ಪಿಡಿಯೆ[2]ಲೆನುವಾಯ್ತು. ||

1, (ಯಾರಾದರೂ) ನಂಬಲು. 2, ಹಿಡಿಯಲು (ಲಿಕ್ಕೆ) ಅನುವು ಆಯಿತು.

ವಿಗಡ ಮೃತ್ಯುವಿನೆವರು ಬರುತ್ತಿರೆ,
[3]ತೆಗಸು ಕಾಲನ ಬಲವ; ಬಲು ಮು–
ತ್ತಿಗೆಯನಿದ ಪರಿಹರಿಸಿ, ರಕ್ಷಿಸು ನಮ್ಮನೆನವರತಾ! || 33 ||

3, (ದೇವರೇ), ತೆಗಸು.—[ರಕ್ತ ಬಿಗಿದಿರುವ (ಮತ್ತು) ರೋಮ ಕೂಪವುಳ್ಳ ತೊಗಲಿನ ಇತ್ಯಾದಿ].

[1]ಪೇಳಲೆನ್ನ ಅಳವಲ್ಲವೀಗ್ ಮೃತ್ತಿ–
ಯೊಳುಗಳು ನೆರೆಯಂ[2]ಗ-ದೇಶವ
ಧಾಳಿ ಮಾಡುವರೆಕಟೆಕಟ, ಶಿರೆ ಸೂರೆಗಳ ಹಿಡಿದೂ, ||
ಕಾಳು ಮಾಡುವರಿನ್ನು ತನುವಿದು
ಬಾಳಲರಿಯದು; ಕೋ[3]ಟೆಯೆವರಿಗೆ
ಕೋಳು ಹೋಗದ ಮುನ್ನ, ರಕ್ಷಿಸು ನಮ್ಮನೆನವರತಾ! || 34 ||

1, ಪೇಳಲು ಎನ್ನ (ನನ್ನ) ಅಳವು ಅಲ್ಲವು; ಈಗ. 2, ನೆರೆ ಅಂಗಗಳ ದೇಶವ (ದೇಹವ). 3, ಕೋಟೆಯು ಅವರಿಗೆ.

ಅಳಿಯುವೊಡಲನು ನೆಚ್ಚಿ, ವಿಷ[1]ಯಂ–
ಗಳಿಗೆ ಕಾತುರನಾಗಿ, ಮಿಗೆ ಕಳ–
ವಳಿಸಿ, ಕಾಲನ ಬಳಿಗೆ ಹಂಗಿಗನಾಗಿ, ಬಾಳಿದೆನೂ. ||
ತಿಳಿದು ಮನದೊಳು ನಿನ್ನ ನಾಮಾ–
ವಳಿಯ, ಜಿ[2]ಹ್ವೆಗೆ ತಂದು, ಪಾಪವ
ಕಳೆದು ಬಿಡುವದೆ ಲೇಸು. ರಕ್ಷಿಸು ನಮ್ಮನೆನವರತಾ! || 35 ||

1, ವಿಷಯಗಳಿಗೆ. 2, (ಅದನ್ನು ಅಂದರೆ ನಾಮಾವಳಿಯನ್ನು) ಜಿಹ್ವೆಗೆ ತಂದು.

[1]ಈಗಲೋವೀ ದೇಹವಿನ್ನ ಯಾ–
ವಾಗಲೋ? ನಿಜವಲ್ಲವೆಂಬು[2]ದ–
ನೀಗ ತಿಳಿಯದೆ, ಮಡದಿ ಮನೆ ಮನೆವಾರ್ತೆಯೆಂದ್ ಎನುತಾ, ||

1, ಈಗಲೋ ಈ ದೇಹವು? ಇನ್ನು ಯಾವಾಗಲೋ? (ಈ ದೇಹವು ಈಗ ನಿಜವಾದದ್ದೋ? ಯಾವಾಗ್ಯಾದರೂ ನಿಜವಾದದ್ದೋ?). 2, ಎಂಬುದನ್ನು.

ರಾಗೆ-ಲೋಭದಿ[3] ಮುಳುಗಿ, ಮುಂದಣ[4]
ತಾಗು ಬಾಗುಗಳೆರಿಯೆ. ನಿನ್ನ ಸ-
ಮಾಗಮವ ಬಯಸುವೆನು! ರಕ್ಷಿಸು ನಮ್ಮನೆನವರತಾ! || 36 ||

3, ಲೋಭದಲ್ಲಿ. 4, ಮುಂದಿನ.

---

## VI. ಪಾಠ

### THE ADVENTURES OF KING NALA

### ನಳರಾಯನ ಕಥೆ

(ರಾಮಾಯಣ)

ಭಾಮಿನಿ-ಷಟ್ಪದಿ (೧ನೇ ಶ್ಲೋಕ ನೋಡ ಬೇಕು)

ದ್ಯೂತದಲಿ ಸಾಮ್ರಾಜ್ಯ[1]-ಲಕ್ಷ್ಮಿಯ-
ನೋತು, ಸತಿ-ಸಹಿತಾಗ ಸು-ಪ್ರ-
ಖ್ಯಾತ ನಳ-ಪತಿಯೆಡವಿ-ಗುರಿಯಾದನು, ಕಣಾಯೆಂದಾ. || 37 ||

1, ಸಾಮ್ರಾಜ್ಯದ ಲಕ್ಷ್ಮಿಯನ್ನು ಓತು (ಓಲು ಕೊಟ್ಟು), ಸತಿಯ ಸಹಿತದಲ್ಲಿ ಆಗ.

ಬಿಸುಟನೈ[1] ಬಳಿಕಡವಿಯೊಳಗಾ-
ಯಸವ ಸೈರಿಸಲಾರದಾಶ್ರಮ-
ಋಷಿಗಳೆಡೆಯಲ್ಲ್ಯ ಆಪ್ತ ದಮಯಂತಿಯನು; ವಿಪಿನದಲೀ ||
ನುಸುಳಿದನು ಬಳಿಕೊಬ್ಬನೇ; ಸಂ-
ಧಿಸಿದ ತತ್[2]-ಕರ್ಕೋಟನ ದೆಸೆಯಿಂದ್
ಅಸುವ ನೀಗದೆ, ಸಾರಿದನು ರುತುಪರ್ನ-ಭೂ-ಪತಿಯಾ. ||38||

1, ಬಿಸುಟನು (ಬಿಸುಡು ಎಂಬದು ಇದಕ್ಕೆ ಮೂಲ), ಐ, ಬಳಿಕ ಅಡವಿಯೊಳಗೆ, ಆಯಸವ ಸೈರಿಸಲಾರದೆ, (ಅಲ್ಲಿರುವ) ಆಶ್ರಮದ ಋಷಿಗಳ ಎಡೆಯಲ್ಲಿ ಆಪ್ತ ದಮಯಂತಿಯೆಂಬ ತನ್ನ ಹೆಂಡತಿಯನ್ನು. 2, ಆ.

ನಳನ ಮನೆಯುವನೆಂ[1]ದರೆಂತನ
ಸಲಹಿ ಕೊಂಡ್ ಇರ್ದ[2]ನು, ಕಣಾ, ನೃ[3]-ಪ-
ತಿಲಕ, ಮನ್ನಣೆಯುಲ್ಲಿ ಋತುಪರ್ನ-ಕ್ಷಿತೀ-ಪಾಲಾ. ||
ಬಳಿಕಲಾ ದಮಯಂತಿ ಭಾರಿಯು
ಬಳಲಿಕೆಯುನೆನುಭವಿಸಿ, ತಂದೆಯು
ನಿಳಯುವನು ಸಾರಿದಳು, ಭೀಷ್ಮಕನೆಂಬ ರಾಜನೆದಾ. ||39||

1, 'ಎಂದರೆ' ಎಂಬದಕ್ಕೆ 'ನಳನು' ಎಂಬದು ಆಖ್ಯೆ. 2, ಇದ್ದನು. ಇದಕ್ಕೆ 'ಕ್ಷಿತಿ-ಪಾಲ' ನೆಂಬದು ಆಖ್ಯೆ. 3, ನೃಪರಲ್ಲಿ ತಿಲಕವಾದವನೇ (ನೃಪರಲ್ಲಿ ಶ್ರೇಷ್ಠನೇ, ಕೇಳು!).

ಅಳಿಯುನನು ಕಾಣದೆ, ವಿದರ್ಭನು
ತೊಳಲಿಚಿದನೆನು[1]ಚರರ ನಾನಾ
ಪಳುವದಲಿ, ಹಳ್ಳಿಯುಲಿ, ನಗರಂಗಳಲಿ, ನಗ-ಕುಲದಾ ||
ಬಳಿಗಳಲಿ. ಬಳಿಕವರು ಕಾಣದೆ,
ಹೊಳಲ ಸಾರ್ದ[2]ರು. ಭೀಷ್ಮಕನು ಮಗ—
ಳು[3]ಳಿವ ಕಾಣದೆ, ಕಂಡನೊಂದ್ ಅನುಮಾನ-ಸಾಧನವಾ. || 40 ||

1, ಅನುಚರರನ್ನು. 2, ಸಾರಿದರು. 3, ಉಳಿವನ್ನು.

ಸೃಜಿಸಿದನು ಸುದ್ದಿಯುನು ನೃ[1]-ಪ ಭೂ-
ಭುಜರ ನಗರಂಗಳಲಿ, ನಿಷಧನ
ನಿಜದ ವನಿತೆಗೆ ಪುನಃ ಸೊಯಂವರವೆಂದು, ಚರರಿಂದಾ. ||
ನಿಜವೆರಿಯುದೆಳಿಯಾಶೆಯುಲಿ ಭೂ-
ಭುಜರು ಬರು[2]ತ್ತಿರ್ದರು, ಕಣಾ, ಕೇಳ್,
ಅಜಯು-ಭೂ-ಪತಿಯೆಲವೊ, ಬಳಿಕಾ ಕುಂಡಿನೀ-ಪುರಕೇ. || 41 ||

1, ಇದು ಆಖ್ಯೆಯಾಗಿದೆ (ನೃ-ಪ=ಭೀಷ್ಮಕನೆಂಬವನು). 2, ಬರುತ್ತ ಇದ್ದರು.

ಸೋೀಕಿತೀ ಕಡು ನಿಂದ್ಯೆ ಪುಣ್ಯ-
ಶ್ಲೋೀಕರಿಗೆ?-ನಳ-ಭೂ-ಪನೀ ನರ-
ಲೋೀಕದೊಳಗುತ್ತಮನೆಲಾ! ಹಯ-ಜ್ಞತೆಯ ಜನರಿಂಗೀ ||
ನಾಕು ಮಡಿ ಮಿಗಿಲೆಂಬ ನಾಣ್-ನುಡಿ
ಕಾಕ ಬಳ[1]ಸಿತೆಯೆಂನುತೊಯಿ— [ಳುಗೀ. || 42 ||
ಕ್ಷ್ವಾಕು-ಕುಲದವನಿ-ಪನು ಸುಯ್ದನು, ಚಿಂತೆಯೊಳ್ ಮು

1, ಬಳಸಿತೇ? ಎನ್ನುತ್ತ, ಆ ಇಕ್ಷ್ವಾಕು-ಕುಲದ ಅವನಿಪನು (ಅಂದರೆ ರುತುಪರ್ನನು).

[1]ಅರಿದನಿದ? ನಾವ್ ನೋೀಡ ಬೇೀಕ್ ಎಂದ್,
ಅರ[2]ಸನೆುತ್ತಮ ವಾಜಿ ಹೂಡಲಿ
ವರ ವರೂಥಕ್ಕ! ಎನಲು; ತಂದನು ಸೂ[3]ತನೆುರು ಹಯ[4]ವಾ. ||
ಅರಸ, ಕೇೀಳ್ ಐ! ನಳ-ಮಹೀ-ಪತಿ
ತುರಗವಿವು ನಾಳಿನಲಿ ಕುಂಡಿನಿ-
ಪುರಿಗೆ ಪರಿಗತಮೊಗದೆ[5]ನೆ; ರುತುಪರ್ನನಿಂತ್ ಎಂದಾ— || 43 ||

1, ಅರಿದನು ಇದನ್ನು? (ಬಲ್ಲನು ಇದನ್ನು ಅಂದರೆ ಹಯವಿದ್ಯೆಯನ್ನು?) 2, ರುತುಪರ್ನನೆಂಬವನು. 3, ರುತುಪರ್ನನಿಗಿದ್ದ ನಳನಲ್ಲದ ಸೂತನು. 4, ಏಕವಚನವು ಬಹುವಚನಕ್ಕೆ ಬದಲಾಗಿ ಹೇಳಿ ಅದೆ (ಈ ಶ್ಲೋೀಕದಲ್ಲಿ 'ತುರಗವು ಇವು' ಎಂಬದನ್ನೂ 44ನೇ ಶ್ಲೋೀಕದಲ್ಲಿ 'ಅಶ್ವಾವಳಿಯ' ಎಂಬದನ್ನೂ 45ನೇ ಶ್ಲೋೀಕದಲ್ಲಿ 'ಅಶ್ವ-ಚಯ' ಎಂಬದನ್ನೂ ಸರಿ ನೋೀಡ ಬೇೀಕು). 5, ಎನಲು, ಎನ್ನಲು (ಇದಕ್ಕೆ 'ನಳ-ಮಹೀ-ಪತಿ' ಎಂಬದು ಆಖ್ಯೆ).

ನಳನು ಬಲ್ಲವನೆಶ್ವ-ಹೃದಯವ—
ನಿಳೆಯೊಳೆಂದು, ಸಮಸ್ತರೆು ನೃ-ಪ-
ತಿಲಕವನು ಕೊಂಡ್ ಆಡುವರು; ನೀೀನ್ ಅಶ್ವ-ಲಕ್ಷಣದಾ ||
ಹೊಲಬ ಬಲ್ಲ್ಯ, ಐ? ಬ[1]ಲ್ಲೆನೆನೆ; ಕಣ್ಣ—
ಗಳಿಗೆ ಸೊಗಸುಪಕರಿಸುವೆಶ್ವಾ—
ವಳಿಯ ತಂ[2]ದನು; ಹೂಡಿದನು ಹೊಂ-ದೇರಿನಲಿ ಹಯವಾ. ||44||

1, ಬಲ್ಲೆನೆಂಬದು ನಳನ ಪ್ರತ್ಯುತ್ತರ. 2, ಅಂದರೆ ನಳನು.

ಏರಿದನು ನೃ-ಪನೊ ರಥವನೊ—
ಬ್ಬ್ ಏರಿ ನಳನೆಬ್ಬ[1]ರಿಸೆ, ಕಣ್ಣ್-ಎವೆ
[2]ಜಾರೆ, ಜಾರಿದವಶ್ವ-ಚಯ, ಪವಮಾನ-ವೇಗದಲೀ. ||
ತೂರಿ ಬಿ[3]ದ್ದುದು ಮುಕುಟ. ತಡೆ ಹಯ—
ವೇರಿದಂತ್ ಇರೆ ಪಥವನೆ[4]ನೆ; ನಳ
ನೂರು ಯೋಜನ ಮುಂ[5]ಚಿತೆನಲೆಬ್ಬರಿಸಿದನು ಹಯವಾ. || 45 ||

1, ಏರಿದನು ನೃಪನು (ರುತುಪರ್ಣನು) ಆ ರಥವನು: ಉಬ್ಬಿ ಏರಿ, ನಳನು ಅಬ್ಬರಿಸಲು. 2, ಜಾರಲಿಕ್ಕೆ, ಜಾರುವ ಪ್ರಕಾರ. 3, ಬಿತ್ತು. 4, ತಡೆ ಹಯವ, (ಅದು) ಪಥವನ್ನು ಏರಿದಂತೆ ಇರಲು! (ಅದು ಆ ಏರುವ ಸ್ಥಳಕ್ಕೆ ಮುಟ್ಟಿದ ಮೇಲೆ) ಎನೆ (ಇದಕ್ಕೆ ರುತುಪರ್ಣನೆಂಬದು ಆಖ್ಯೆ). 5, ಮುಂಚಿತವಾಗಿ (ಬಿತ್ತು).

ಇವನು ತಾ ನಳನೆಲ್ಲ್, ಎಲೇಯೆಂದ್,
ಅ[1]ವನಿ-ಪತಿಯೆನುಮಾನ-ಮುಖದಿಂದ್,
ಇವನನೆರಿಯಲು ಬೇಕ್ ಎನುತ, ದುಮ್ಮ-ಇಕ್ಕಿದನು ಧರೆಗೇ. ||
ಹವಣನೆದನೆರಿದೀತ ಕಡಿಯಾ—
ಣವನು ಸೆಳೆದಿಳೆಗಿಳಿ[2]ದುದೇನ್? [3]ಐ
ಯವನಿಗೆವತರಿಸಿದ ಕಥಾಂತರವೇನು? ಹೇಳ್! ಎಂ[4]ದಾ. || 46 ||

1, ರುತುಪರ್ಣ. 2, ಇಳಿದ್ದು. 3, ಐ, ಅವನಿಗೆ. 4, ಹಣವನ್ನು ಅದನ್ನು ಅರಿದು (ಅರಿತು) ಇತ್ಯಾದಿ ಮಾತುಗಳನ್ನು ಈ ಕಥೆ ಕೇಳುವ ರಾಜನು ಅಂದದ್ದು.

ನಳನು ನೀನ್ ಅಹುದೆನಲು; ಕಣ್ಗಳ
ಜಲದ ಝಾಡಿಯಲೆಪ್ಪಿ, ತುರಗೊ—
ವಳಿಯ ಹೃದಯವನೆ[1]ರಿದನೊತನೆದಕ್ಷ-ಹೃದಯವನೂ ||

1, ಕಣ್ಣುಗಳ ಜಲದ ಝಾಡಿಯಲ್ಲಿ (ರುತುಪರ್ಣನು ನಳನನ್ನು) ಅಪ್ಪಿ, ತುರಗಾವಳಿಯ ಹೃದಯವನು (ಗುಣವನ್ನು) ಅರಿದನು (ನಳನಿಂದ ಕಲಿತು ಕೊಂಡನು); ಆತನದು (ರುತುಪರ್ಣನದಾದ) ಅಕ್ಷ-ಹೃದಯವನು (ಅಕ್ಷ-ವಿದ್ಯೆಯ ಹೃದಯದರ್ಥವನ್ನು) ನಳನು ತದೀಯ ನೃಪಾಲನಿಂದ (ರುತುಪರ್ಣನಿಂದ) ಅರಿದನು. ಒಲವು ಮಿಗೆ (ಮಿಗಲಿಕ್ಕಾಗಿ).

ನಳ ತದೀಯ ನೃ-ಪಾಲನಿಂದ್ ಅರಿ–
ದೊಲವು ಮಿಗೆ, ರಥವೇರಿ, ಭೂಮಿ-ಪ-
ತಿಲಕರಿಬ್ಬರು ಸಾರಿದರು ಭೀಷ್ಮಕನ ಪಟ್ಟಣವಾ. || 47 ||

ಬಂದ ನೃ-ಪರೊಳಗೀತನೇ ನಳ–
ನೆಂದ್, ಅರಿದು, ಭೀಷ್ಮಕನು ತನ್ನ[1]ಯ
ನಂದನೆಯನೊಲಿದಿತ್ತನೈ ಬಳಿಕಾ ಮಹೀ-ಪತಿ[2]ಗೆ; ||
ಬಂದ ಭೂ-ಪರು ಹರದರೀತ[3]ನ
ತಂದು, ನಿಲಿಸಿದನಖಿಳ ಸಂಪದ–
ದಿಂದ ನೈಷಧ-ನಗರಿಯಲಿ. ನರ-ನಾಥ, ಕೇಳ್! ಎಂದಾ. || 48 ||

1, ತನ್ನ. 2, ಅಂದರೆ ನಳನಿಗೆ. 3, ಈತನನ್ನು (ಭೀಷ್ಮಕನು) ತಂದು, ಇತ್ಯಾದಿ.

ಜನ-ಪನಾ ದಾಯಿಗನ ಮರು ಜೂ–
ಜಿನಲಿ ಗೆಲ್ದನು ಧರೆಯ[1]ನಾಳ್ದನು,
ಜನ-ಪರಲಿ ಮಿಗಿಲೆನಿಸಿ, ರಾಜ್ಯವ, ಕೇಳು, ಪೂರ್ವದಲೀ. || 49 ||

1, ಗೆದ್ದನು ಧರೆಯನು; ಆಳಿದನು --- ರಾಜ್ಯವ ('ಜನಪನು' ಅಂದರೆ ನಳನು ಆಖ್ಯೆಯಾಗಿದೆ).

## VII. ಪಾಠ

### COUNTING AN ARMY

ಪೌಜನ್ನು ಎಣಿಸಿದ್ದು
(ಕಲ್ಯಾಣಪ್ಪನ ಪ್ರಸಂಗ)
ದ್ವಿಪದೆ (೨ ಪದದ್ದು)
ಗಣಗಳ ಮತ್ತು ಗಣಮಾತ್ರೆಗಳ ಕ್ರಮ—

| | | | | |
|---|---|---|---|---|
| 5 | 5 | 5 | 3 | 1ನೇ ಪದ |
| 5 | 5 | 5 | 3 | 2ನೇ ಪದ |

ದಳ-ಪನೆಂದನು ಪೌಜ[1]ನೆಣಿಸಿರೆನ್ನುತ್ತಾ; ||
ನಿಲಿಸಿದರು ವಿಧ-ವಿಧದಿ, ವಿಂಗಡಿಸಿ, ಮತ್ತಾ || 50 ||

1, ಪೌಜನ್ನು.

ಕತ್ತಿ ಕೋವಿಗಳ ಭಟ[2]ರೊಂದು ಸಾಲಿನಲೀ, ||
ಅಸ್ತ್ರ) ಬಿಲ್ಲಿನ ಧೀರರೊಂದು ಸಾಲಿನಲೀ, || 51 ||
ಬಡಿಗೆಗಳ ಬೀಸುವವರೊಂದು ಸಾಲಿನಲೀ, ||
ಬಡಿಗೆ ಡೊಣ್ಣೆಯೊಳ್ ಬಡಿ[3]ವರೊಂದು ಸಾಲಿನಲೀ, || 52 ||
ಕೊತ್ತಳಿಗೆ ಪಿಡಿದ ಭಟರೊಂದು ಸಾಲಿನಲೀ, ||
ಕುತ್ತು-ಕೋ[4]ವಿಂ ಪಿಡಿ[5]ವರೊಂದು ಸಾಲಿನಲೀ,— || 53 ||
ಸಾಲು ಸಾಲೊಳ್ ನಿಲಿಸಿಯೆಣಿಸಲಿವರೆಂದೂ ||
ಏಳು ಸಾವಿರ ಫೌಜು ಗಣಿತವಾಯ್ತು, ಅಂದೂ || 54 ||
ತ್ರಿತಯ-ಯುಗ-ಸೇನೆಯೆಂದದಲಿ ಕಾಣುತ್ತಾ; ||
ಅತಿ ಹರುಷದಿಂ ದಳ-ಪ ನಕ್ಕ, ನೋಡುತ್ತಾ. || 55 ||

2, 'ಭಟರ' ಎಂಬದು ('ಧೀರರ' 'ಬೀಸುವವರ' ಇತ್ಯಾದಿ ಸಹ) ಕರ್ಮವಿಭಕ್ತಿಯಾಗಿದೆ; 54ನೇ ಶ್ಲೋಕದಲ್ಲಿ 'ನಿಲಿಸಿ' ಎಂಬದು ಅದಕ್ಕೆ ಆಖ್ಯಾತವಾಗಿದೆ. 3, ಬಡಿಯುವವರ. 4, ಕೋವಿಯನ್ನು. 5, ಹಿಡಿಯುವವರ. 6, (ಆ) 'ಫೌಜು' ಆಖ್ಯೆಯಾಗಿದೆ.

---

## A WICKED WARRIOR'S SLEEPLESS NIGHT

### ಒಬ್ಬ ಖಳ-ಭಟನಿಗೆ ರಾತ್ರಿಯಲ್ಲಿ ನಿದ್ರೆ ಬಾರದ್ದು

(ರಾವಣ-ದಿಗ್ವಿಜಯ)

ದ್ವಿಪದೆ

ದಿನ-ಪನೆಸ್ತಾ[1]ಚಲಂ ಸಾರುತಿರಲೆಂದೂ ||
ಜನಿಸಿ ನಿ[2]ಲದಿದು ಜ[3]ಗಕೆ ಭೂರಿ ನಿಶೆ ಬಂದೂ, || 56 ||
ಬೀಡ್ಯ ಇರಲು; ಬಳಿಕ ಶತ್ರುವಿನ ಬಲದೊಳಗೇ ||
ರೂ[4]ಢಿಸಿದರುರು ಸುಪ್ತರಾಗ್ಯ ಇರುಳಿನೊಳಗೇ. || 57 ||

1, ಅಸ್ತಾಚಲವು (ಅಸ್ತಾಚಲವ ಎಂಬದಕ್ಕೆ ಬದಲಾಗಿ). 2, ನಿಲ್ಲದೆ. 3, ಜಗಕ್ಕೆ. 4, (ಭಟರು) ರೂಢಿಸಿದರು ಉರು ಸುಪ್ತರಾಗಿ (ಅಂದರೆ ಬಹಳ ಸುಪ್ತಿಯುಳ್ಳವರಾದರು).

ಬೆಳ-ದಿಂಗಳೇರಿ, ಶಶಿ ಬಲು ಪ್ರಕಾಶಿಸಲೂ, ||
ಖಳನುರದಿ[5] ಚಿಂತೆಗಳ ಖಡುಗ ಝಳಪಿಸಲೂ; || 58 ||
ಚಂದಿರನ[6] ಕಾಣುತಲೆ, ಕರಗಿದುದು ಚಿತ್ತಾ; ||
ಚಂದದಿಂ ಕಾನನ-ಚ್ಛವಿ ಗಂಡನತ್ತಾ[7]. || 59 ||
ಮಾರುತವು ಮಂದವಾಗಿಯೆ ಬೀಸಲಾಗಿ, ||
ತಾರೆಗಳ ರಾಜಿ ಥಳ-ಥಳಿಸೆ[8] ಶುಭವಾಗೀ, || 60 ||
ನಿದ್ರೆಯನು ಕಾಣನತ್ತಿ ನರಳುಹೊರಳುತ್ತಾ[9], ||
ಛಿದ್ರ-ಮಾನಸನಾಗಿ ಚಲಿಸಿ ಚಲಿಸುತ್ತಾ. || 61 ||

5, ಉರದಲ್ಲಿ. 6, (ಖಳನು) ಚಂದ್ರನನ್ನು ಕಾಣುತ್ತಲೆ (ಅವನ) ಚಿತ್ತ ಕರಗಿದುದು (ಕರಗಿತು). 7, ಕಂಡನು, ಅತ್ತ. 8, ಥಳಿಸಲು. 9, ನರಳುತ್ತ ಹೊರಳುತ್ತಾ.

NIGHTFALL

ರಾತ್ರಿಯಾದ್ದು

(ಭಾರತ)

ಭಾಮಿನಿ-ಷಟ್ಪದಿ (1ನೇ ಶ್ಲೋಕ ನೋಡ ಬೇಕು)

ಶಿಲುಕಿದುದು[1] ಜನ-ದೃಷ್ಟಿ ಬಲು ಗ-
ತ್ತಲೆಯ ಬಂಧದೊಳಂಧಕಾರದ[2]
ಜಲಧಿಯಲಿ ಜಗವೆದ್ದುದೇನ್[3] ಎಂಬೆನು[4] ಮಹಾದ್ಭುತವಾ? ||
ನಳಿನ-ಮಿತ್ರನ ಬೇಹುಕಾರರ
ಸುಳಿವೊ ತಿಮಿರದ ಪಾಳೆಯದೊಳೆನೆ[5],
ನಿಳಯ-ನಿಳಯದ ಸೊಡರು ತಳಿತುದು[6] ಕೂಡೆ ನಗರಿಯಲೀ.||62||

1, ಶಿಲುಕಿತು. 2, ಬಂಧದೊಳು; ಅಂಧಕಾರದ ಇತ್ಯಾದಿ. 3, ಜಗವು ಅದ್ದುದು (ಅದ್ದಿತು). ಏನ್ ಇತ್ಯಾದಿ. 4, ಎನ್ನುವೆನು. 5, ಪಾಳೆಯದೊಳು? ಎನ್ನುವಂತೆ (ಎಂತ ಕೇಳುವಂತೆ). 6, ತಳಿಯಿತು.

# VIII. ಪಾಠ

## WORLDLY HAPPINESS IS TRANSIENT

## ಇಹದ ಭಾಗ್ಯವು ಅಸ್ಥಿರವಾಗಿದೆ

(ದಾಸರ ಪದ)

ರಾಗ ಮುಖಾರಿ; ಝಂಪೆ ತಾಳ

ಗಣಗಳ ಮತ್ತು ಗಣಮಾತ್ರೆಗಳ ಕ್ರಮ—

ಪಲ್ಲ

| | | | | |
|---|---|---|---|---|
| 5 | 5 | 5 | 5 | 1ನೇ ಪದ |
| 5 | 5 | 5 | 3 | 2ನೇ ಪದ |

ಪದಗಳು

| | | | | |
|---|---|---|---|---|
| 5 | 5 | 5 | 5 | 1ನೇ ಪದ |
| 5 | 5 | 5 | 1 | 2ನೇ ಪದ, 1ನೇ ಗಣಸಾಲು |
| 5 | 5 | 5 | 5 | 3ನೇ ಪದ |
| 5 | 5 | 5 | 3 | 4ನೇ ಪದ, 2ನೇ ಗಣಸಾಲು |

ಆರು[1] ಹಿತವರು ನಿನಗೆ ಮೂರು ಮಂದಿಗಳೊಳಗೆ?
ನಾರಿಯೋ? ಧಾರುಣಿಯೊ? ಬಲು ಧನದ ಶಿರಿಯೋ? || ಪಲ್ಲ ||
ಅನ್ಯರಲಿ ಜನಿಸಿರ್ದ ಅಂಗನೆಯು ಕರತಂದು,
ತನ್ನ ಮನೆಗವಳ ಯಜಮಾನಿಯೆನಿ[3]ಸೇ, ||
ಭಿನ್ನವಿಲ್ಲದಲೆರ್ಧ ದೇಹವೆನಿಸುವ ಸತಿ[4]ಯು
ಕಣ್ಣಿನಲಿ ನೋಡಲೆಮ್ಮಳು ಕಾಲ-ವಶದೀ. || 63 ||

1, ಯಾರು. 2, ಇದ್ದ. 3, ಎನ್ನಿಸಲಾಗಿ. 4, (ಅಂಥಾ) ಸತಿಯು ಕಾಲ-ವಶದಲ್ಲಿ (ಶೇರಿದಾಗ ಅವನನ್ನು) ಕಣ್ಣಿನಲ್ಲಿ ನೋಡಲಿಕ್ಕೆ (ಇನ್ನು) ಅಮ್ಮಳು (ಅಂಮುವದಿಲ್ಲ).

ಮುನ್ನ ಶತ-ಕೋಟಿ ರಾಯರುಗಳೆಳ್ದ ಆ ನೆಲನ
ತನ್ನದೆಂದ್ ಎನುತ, ಶಾಸನವ ಬರಸೀ, ||
ಬಿನ್ನಣದ ಮನೆ ಗಟ್ಟಿ, ಕೋಟೆ ಕೊತ್ತಳವಿಕ್ಕಿ,
ಚನ್ನಿನೆವನೆಸುವೆ[1]ಳಿಯೆ; ಹೊರಗೆ ಹಾಕುವರೂ. || 64 ||

1, ಅಳಿಯಲಾಗಿ.

ಉದ್ಯೋಗ[1], ವ್ಯವಹಾರ, ನೃ-ಪ-ಸೇವೆ, ಕುಶಲ-ಗತಿ,
ಚುದ್ರತನ, ಕಳವು, ಪರ-ತಾಪದಿಂದಾ, ||
ಬುದ್ಧಿಯಿಂದಲೆ ಘಳಿಸಿ ಶಿಕ್ಕಿದಂಥ್ ಅರ್ಥವನು
ಸದ್ಯದಲ್ಲ್ಯ ಆರ್ ಉಂಬುವರು[2]? ಹೇಳು, ಮನುಜಾ! || 65 ||

1, ಉದ್ಯೋಗಾದಿ ಕಳವಂತ್ಯವಾದ 6 ಶಬ್ದಗಳು ಸಹ ಕರಣವಿಭಕ್ತಿಯಲ್ಲಿ ಅವೆಂದು ತಿಳು ಕೊಳ್ಳ ಬೇಕು. 2, ಉಣ್ಣುವರು.

ಶೋಕವನು ಗೈಯ್ಯುವರು ಸತಿ ಸುತರು, ಬಾಂಧವರು;
ಜೋಕೆ ತಪ್ಪಿದ ಬಳಿಕಲೆರ್ಥ ವ್ಯರ್ಥಾ. ||
ಲೋಕದೊಳು ಘಳಿಸಿರ್ದ ಪುಣ್ಯ ಪಾಪಗಳೆರಡು
ಸಾಕಾರವಾಗಿ ಸಂಗಡ ಬಪ್ಪು[1]ದಲದೇ || 66 ||

1, ಬರುವದು. ಅಲ್ಲದೆ (ಈ ಕಡೇ ಮಾತು 67ನೇ ಶ್ಲೋಕಕ್ಕೆ ಹೋಗುತ್ತದೆ).

ಅಸ್ಥಿರದ ದೇಹವನು ನಚ್ಚಿ ನಂಬ್ಯ ಇರ ಬೇಡ;
ಸೊಸ್ಥದಲಿ ನೆನೆ, ಕಂಡ್ಯ[1], ಪರಮಾತ್ಮನಾ! ||
ಚಿತ್ತದೊಳು ಶುದ್ಧಿಯಿಂದ್ ಆ ಮಹಾ ಮಹಿಮೆಯೆವ–
ನು[2]ತ್ತಮೋತ್ತಮನೆಂದು, ಸುಖಿಯಾಗು, ಮನುಜಾ! || 67 ||

1, ಕಂಡ್ಯಾ (ನೋಡಿದಿಯಾ). 2, ಉತ್ತಮ-ಉತ್ತಮನು (ಬಹಳ ಉತ್ತಮನು).



## IN THIS MISERABLE, WICKED WORLD GOD'S HELP IS MUCH WANTED

## ಕಷ್ಟವೂ ಪಾಪವೂ ಉಳ್ಳ ಇಹಲೋಕದಲ್ಲಿ ದೇವರ ಸಹಾಯ ಅತ್ಯವಶ್ಯವಾಗಿದೆ

ರಾಗ ಶಂಕರಾಭರಣ; ಆದಿ ತಾಳ

ಗಣಗಳ ಮತ್ತು ಗಣಮಾತ್ರೆಗಳ ಕ್ರಮ—

ಪಲ್ಲ

| | | | | |
|---|---|---|---|---|
| 4 | 4 | 4 | 4 | |
| 4 | 4 | 4 | 1 | 1ನೇ ಪದ (ಎರಡು ಸರ್ತಿ ಇದೇ) |

ಪದಗಳು

4 | 4 | 4 | 4
4 | 4 | 4 | 1 | 1ನೇ ಪದ
4 | 4 | 4 | 4
4 | 4 | 4 | 1 || 2ನೇ ಪದ (ಎರಡು ಸರ್ತಿ ಇದೇ)

ವರ-ದ[1]-ಸು-ಹೃದಯಾ! ವರ-ದ-ಸು-ಹೃದಯಾ!
ವರ-ದ-ಸು-ಹೃದಯಾಯೆನು[2],
ಮನವೇ! ||
ದುರಿತ-ಶರಧಿಯುತ್ತರಿಸ ಬೆಕಾದರೆ[3],
ಪರಮಪತಿಯ ನುತಿಸಿರು,
ಮನವೇ! || ಪಲ್ಲ ||

1, 'ವರ-ದ' ಅಂದರೆ ವರಗಳನ್ನು ಕೊಡುವ ಸುಹೃದಯವುಳ್ಳವನೇ! (ಅಂದರೆ ದೇವರೇ!)
2, ಎನ್ನು. 3, ಬೇಕಾದರೆ.

ಘೋರ-ತರದ ಸಂಸಾರವು ದುಃಖದ
ವಾರಿಧಿಯಿದರೊಳಗೇನ್[1]
ಉಂಟೂ?
ತೋರುವ ಶಿರಿ-ಸಂಪತ್ತಿನ ನೆಲೆಯು ವಿ–
ಚಾರಿಸಲಿದು ಕನಸಿನ
ಗಂಟೂ. ||
ಮೂರು ದಿನದ ಬಾಳಿಕೆಯಿದರೊಳು ನೀನ್
ಆರೈಸುವದೇತರ[2]
ನಂಟೂ?
ಭಾರ-ಹರನ, ಮನ ಮುಟ್ಟಿ, ಭಜಿಸಿದರೆ,
ಕಾರಣದಿಂದ ಮುಕುತಿ–
ಯುಂಟೂ! || 68 ||

1, ವಾರಿಧಿಯು; ಇದರ. 2, ಯಾತರ.

ಮಡದಿ ಸುತರ ಮಮಕಾರಕೆ ನೀ ಮನ–
ನೊಡಬಡುತಲೆ, ನಗುತಿರ
ಬೇಡ!
ಹುಡುಕುತ, ಮೃತಿಯೆವರೈತಂದರೆ, ಹೊರ[1]–
ವಡೆಲೆಂಬರು ತನುವಿನ
ಗೂಡಾ. ||
ಬಿಡಲಾರದ ಪಾಪದ ಪಾಶಕೆ ಶಿಕ್ಕ
ಬಡದು, ನಿ[2] ಕಡೆಯಲಿ ಕೆಡ
ಬೇಡಾ!
ಕಡೆ-ಹಾಯ್ಸುವವನ[3] ಭಜಿಸಲು, ಮುಕುತಿಯು
ಪಡೆಯ ಬಹುದು. ನುತಿಸೋ[4]
ಗಾಡಾ! || 69 ||

1, ಮೃತಿಯುವರು ಐತಂದರೆ (ಬಂದರೆ), ತನುವಿನ ಗೂಡನ್ನು ಹೊರವಡು, ಎಲೆ! ಎಂಬರು. 2, ನೀ. 3, ಕಡೆ-ಹಾಯಿಸುವವನನ್ನು (ದೇವರನ್ನು). 4, (ದೇವರನ್ನು) ನುತಿಸೋ.

ನೆತ್ತ ಪಗಡೆ ಚತುರಂಗವನಾಡುತ
ಹೊತ್ತು ಕಳವದೇತಕೆ[1]?
ನೀನೂ
ಸುತ್ತಿ, ತೊಳಲಿ, ಬಳಲುತ ಮಾಡಿದ ಗೃಹ-
ಕೃತ್ಯದಿ ನಿನಗಹೆ[2] ಫಲ–
ವೇನೂ? ||
ಕತ್ತಲೆಯೊಳು ಕಣ್ಣನು ತೆರದಂದದಿ
ವೆರ್ಥದಿ ಸಂಗ್ರಹಿಸುವ–
ದೇನೂ?

1, ಕಳೆಯುವದು. 2, ಆಗುವ (ಆದ).

ಮೃತ್ಯು-ಭಯವೆಗೆಲ ಬೇಕ್ ಆದರೆ, ಸ—
ರ್ವೋತ್ತಮ ದೇವರೆ! ಶರ—
ಣೆನ್ನೊ! || 70 ||

ಕೂಳಿನ ಬಲದಲಿ ಬೆಳದೀ ಕಾಯದ
ಬಾಳುವೆಯೆಂಬದು ತಿರ—
ವೆಲ್ಲಾ;
ಜಾಳಿಗೆ ತುಂಬಿದ ಹೊನ್ನ-ಆಭರಣವು
ನಾಳೆಗೆ ಸಂಗಡ ಬಹ[1]—
ದೆಲ್ಲಾ; ||
ಮಾಳಿಗೆ-ಮನೆಯುಪ್ಪರಿಗೆಯು ಕೋಣೆಯು
ಪಾಳಿಗಳೆಲ್ಲ ಅಲ್ಲ್ಯ ಇಹು—
ದೆಲ್ಲಾ.
[2]ಕಾಲನ ಭಯವನು ಕಳೆಯಲು ದೇವರ
ನಾಲಿಗೆಯಲಿ ನುತಿಸೋ,
[3]ಸೊಲ್ಲಾ! || 71 ||

1, ಬರುವದು (ಬರುವಂಥಾದ್ದು). 2, ಕಾಲನ ಭಯವನ್ನು ಕಳೆಯಲಿಕ್ಕಾಗಿ ದೇವರನ್ನು ನುತಿಸೋ. 3, ಎಲೆಲಾ!

ಕು-ಮಿತ್ರಿಗಳೆಹ [1]ಷಡ್-ವರ್ಗಗಳ ಪರಾ—
ಕ್ರಮವೆಲ್ಲವ ನೀ ಪರಿ—
ಹರಿಸೊ!
ಬೆಮೆ-ಗೊಳ್ಳಸುವಿಂದ್ರಿಯದಿಚ್ಛೆಗಳಾ—
ಗಮನವ ದಯೆಯಿಂ ನೀ
ನಿಲಿಸೊ! ||

1, ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಎಂಬ ಆರು.

ಯಮನೊಳ್ಗಳನೆಬ್ಬಟ್ಟುವ ಯತ್ನ-[2]
ಕ್ರಮ-ಗತಿಗಳ ಕಾರ್ಯವ
ಬಲಿಸೂ!
ಅಮಿತ-ಮಹಾ-ಪರಮೌಜಸಿನಾತ್ಮನ[3]
ರಮಣೀಯೊಂಘ್ರಿ ಹೃದದೊ-[4]
ಳಿರಿಸೂ! || 72 ||

2, ಯತ್ನದ ಕ್ರಮವುಳ್ಳ ಗತಿಗಳ. 3, ಅಮಿತವಾದ ಮಹಾ ಪರಮ ಓಜಸಿನ. 4, ರಮಣೀಯ ಅಂಘ್ರಿ (ಯನ್ನು).

---

# IX. ಪಾಠ

## GOOD ADVICE

## ಬುದ್ಧೀ ಮಾತುಗಳು

ರಾಗ ರೇಗುಪ್ತಿ; ಮಟ್ಟೆ ತಾಳ

ಗಣಗಳ ಮತ್ತು ಗಣಮಾತ್ರೆಗಳ ಕ್ರಮ—

ಪಲ್ಲ

3 | 3 | 3 | 3 | 1ನೇ ಪದ
3 | 3 | 3 | 3 || 2ನೇ ಪದ, 1ನೇ ಗಣಸಾಲು
3 | 3 | 3 | 3 | 3ನೇ ಪದ
3 | 3 | 3 | 3 | 4ನೇ ಪದ
3 | 3 | 3 ||

ಪದಗಳು

3 | 3 | 3 | 3 | (ಹೀಗೆಯೇ ನಾಲ್ಕು ಪದಗಳು)

ಸಾರಿ, ದೂರಿ, ಹೇಳುತೇನೆ;
ಕೆಟ್ಟೆ, ಕಂಡ್ಯ[1], ಬೊಡ್ಡಿ-ಮನವೆ! ||
ದೂರೊ[2] ಬುದ್ಧಿ ಮಾಡ ಬೇಡ!
ಕೈಯಲಿಕ್ಕೊ ಕಡ್ಡಿ! ನಿನ್ನ
ಕೈಯಲಿಕ್ಕೊ ಕಡ್ಡಿ! || ಪಲ್ಲ ||

1, ಕಂಡಿಯಾ? 2, ದೂರುವ.

ಕೋಪವನ್ನು ಮಾಡದಿರು[1];
ಪಾಪಕೆ ಗುರಿಯಾಗದಿರು; ||
ಶಾಪ-ಹರನ ನುತಿಗಳನ್ನು
ನೀ ಪಠಿಸುತಲಿರು, ಮನವೆ! || 73 ||

1, ಇರು.

ಅಷ್ಟ ಮದದಿ[1] ಬೆರೆಯದಿರು;
ನಷ್ಟಕೆ ಗುರಿಯಾಗದಿರು; ||
ದುಷ್ಟ ಸಂಗವನ್ನು ಮಾಡಿ
ಭ್ರಷ್ಟನಾಗ ಬೇಡ, ಮನವೆ! || 74 ||

1, ಮದದಲ್ಲಿ (ಅನ್ನ, ಅರ್ಥ, ಯೌವನ, ಸ್ತ್ರೀ, ವಿದ್ಯೆ, ಕುಲ, ರೂಪ, ಉದ್ಯೋಗ ಎಂಬ ಎಂಟು ಮದ).

ಸಿರಿಯ ಮೆಚ್ಚಿ ಮೆರೆಯದಿರು;
ಬರಿದೆ ಹೊತ್ತು ಕಳೆಯದಿರು; ||
ಪರರ ನಿಂದೆಯನ್ನು ಮಾಡಿ
ನರಕಿಯಾಗ ಬೇಡ, ಮನವೆ! || 75 ||

ಕಾಯವನ್ನು ನಂಬದಿರು;
ಮಾಯೆಗೆ ಮರುಳಾಗದಿರು; ||
ಸ್ತ್ರೀಯರನ್ನು ಕಂಡು, ನೀನು
ಬಯ್ಸದಿರು[1], ನನ್ನ ಮನವೆ! || 76 ||

1, ಬಯಸದೆ.

ನಿನ್ನ ನಿಜವ ನಂಬದಿರೆ[1]—
ಲಿನ್ನ ತಾಳೆ ಮಾಡದಿರು; ||
ಚನ್ನಗಿನ್ನು ದೇವ್ರ[2] ಪಾದ—
ವನ್ನು ನೀನು ನಂಬು, ಮನವೆ! || 77 ||

1, ನಂಬದಿರು; ಎಲೆ. 2, ದೇವರ.

## IMPOSSIBILITIES

### ಆಗದ ಕಾರ್ಯಗಳು

ರಾಗ ಶಂಕರಾಭರಣ; ಆದಿ ತಾಳ (68ನೇ ಶ್ಲೋಕ ನೋಡ ಬೇಕು)

ಗಣಾಗಳ ಮತ್ತು ಗಣಮಾತ್ರೆಗಳ ಕ್ರಮ—

ಪಲ್ಲ

4 | 4

4 | 4

4 | 4 | 4 | 1 | 1ನೇ ಪದ (ಇದೇ ಎರಡು ಸಾರಿ)

ಪದಗಳು

4 | 4

4 | 4

4 | 4 | 4 | 1 | 1ನೇ ಪದ

4 | 4

4 | 4

4 | 4 | 4 | 1 || 2ನೇ ಪದ, 1ನೇ ಗಣಸಾಲು (ಇದೇ ಎರಡು ಸಾರಿ)

ಈಶನ ಕರುಣೆಯು—
ನೆಂಶಿಸು ವಿನಯದಿ
ದಾಸನ ಹಾಗೆಯೆ, ನೀ ಮನವೇ!
ಕ್ಲೇಶದ ವಿಧ-ವಿಧ-
ಪಾಶವ ಹರಿದು, ವಿ—
ಲಾಸದಿ ಸತ್ಯವ ತಿಳಿ, ಮನವೇ! || ಪಲ್ಲ ||
ಮೋಸದಿ ಜೀವಿಯು
ಘಾಸಿಯು ಗೈದದು
ಕಾಶಿಗೆ ಹೋದರೆ, ಹೋದೀತೇ?
ದಾಸರ ದುಡಿಸುತ
ಕಾಸನು ಕೊಟ್ಟರೆ,
ಲೇಸುವು ಹುಟ್ಟದಲೆದ್ಧೀತೇ? ||

ಭಾಷೆಯ ಕೊಟ್ಟು ನಿ–
ರಾಶೆಯ ಪಡಿಸಲು
ಮೋಸವ ಮಾಡದೆ ಬಿಟ್ಟೀತೇ?
ನಾಶದ ಭೋಗ-ವಿ–
ಲಾಸವ ಸೇವಿಸಿ,
ವಾಸಿಯೆಂದೆಂದಡೆ, ಬಂದೀತೇ? || 78 ||
ಶ್ವಾನದ ಮನಕೆ ಸು-
ಭಾನುವ ಪಾತ್ರದ
ಶಾನೆ ವಿಭಾಸೆಯು ಸೊಗಸೀತೇ?
ಹೀನ ಮನುಜನಿಗೆ
ಜ್ಞಾನವ ಬೋಧಿಸೆ,
ಹೀನ ವಿಷಯಗಳು ಹೋದೀತೇ? ||
ಮಾನಿನಿ-ಮನಸು ನಿ–
ಧಾನದಲಿರದಿರೆ,[1]
ಮಾನದ ಭೂಷಣವುಳದೀತೇ?
ದಾನ-ದ ದೇವಿಗೆ
ಜಾನುವನೊರದ
ದೀನಗೆ ಮುಕುತಿಯು ದೊರಕೀತೇ? || 79 ||

1, ಇರದಿರಲಾಗಿ.

ಸತ್ಯದ ಧರ್ಮವ
ನಿತ್ಯವು ಬೋಧಿಸೆ,
ತೊತ್ತಿನ ಮನಸಿಗೆ ಸೊಗಸೀತೇ?
ತತ್ತ್ವವ-ಸಾರ ವಿ–
ಚಿತ್ರದಿ ಪೇಳಲು,
ಕತ್ತೆಯ ಮನಸಿಗೆ ತಿಳದೀತೇ? ||

ಪುತ್ಥಳಿ-ಬೊಂಬೆಯ
ಚಿತ್ರದಿ ಬರದಿರೆ,
ಮುತ್ತನು ಕೊಟ್ಟರೆ ನುಡದೀತೇ?
ಎತ್ತನು ಕೇಳದ-
ರೊತ್ತಿಗೆ ಹಣವನ್ನ
ಇತ್ತು, ವಿಶೋಕವ ಮಾಡೀತೆ? || 80 ||

ನ್ಯಾಯವ ಬಿಟ್ಟ ಅ-
ನ್ಯಾಯವ ಪೇಳುವ
ನಾಯಿಗೆ ನರಕವು ತಪ್ಪೀತೇ?
ತಾಯ್ ತಂದೆಗಳನು
[1]ನೋಯಿಸಿದಾವ-
ನ್ಯಾಯಿಗೆ ಮುಕುತಿಯು ದೊರಕೀತೇ? ||
ಬಾಯಿಯ ಕೊಬ್ಬಿಂ
ಬೈಯುವ ಮನುಜಗೆ
ಘಾಯವು ತಾಗದೆ ಬಿಟ್ಟೀತೇ?
[2]ಮಾಯೆಯ ನುಡಿ ಸಂ-
ಚೈಯಿಸಿದವನಿಗೆ
ಕಾಯದ ಕಷ್ಟವು ತೊಲಗೀತೇ? || 81 ||

1, ನೋಯಿಸಿದ ಆ ಅನ್ಯಾಯಿಗೆ. 2, ಎಲ್ಲಾ ಮಾಯೆಯಾಗಿದೆ, ನನ್ನ ಕಾಯವು ಸಹ ಮಾಯೆಯೇ ಎಂಬ ವ್ಯರ್ಥ ನುಡಿಯನ್ನು.

ಸಾಧು ಸು-ಜನರನು
ಬಾಧಿಸಿದಾ ಪರ-
ವಾದಿಗೆ ದೋಷವು ತಪ್ಪೀತೇ?

ಬಾಧಿಸಿ, ಬಡವರ
ಸಾಧನ ವೊಯ್ವಗೆ[1]
ವ್ಯಾಧಿಯು ಕೋಟ್ಲೆಯು ಬಿಟ್ಟೀತೇ? ||
ಆದರವಿಲ್ಲದ
ವಾದಕೆ ಪ್ರತಿ-ದನಿ—
ಯೊದರೆ, ಸೊಂಪಗೆ ಕೇಳೀತೇ?
ಶಾದದ ಕೂಪದಿ
ಶೇದಲು, ವಿಮಲೆತ—[2]
ರೋದಕ ಕೊಡದೊಳು ಹೊರಟೀತೇ? || 82 ||

1, ವೊಯ್ಯುವವನಿಗೆ. 2, ವಿಮಲತರ (ವಾದ) ಉದಕ.

ಅಂಗಗಳೊ ವಿಷ—
ಯಂಗಳ ತೊರೆದವ—
ಗಂಗನೆಯರ ಬಗೆ ಸೊಗಸೀತೇ?
ಮಂಗದ ಚೇಷ್ಟೆಯು
ಹಿಂಗಿದ ಮನುಜಗೆ
ಶಿಂಗರ-ಬಗೆಯೈ ಸೊಗಸೀತೇ? ||
ಅಂಗಗಳಿಷ್ಟಾ-[1]
ಸಂಗತನಾದರೆ,
ಭಂಗವು ಬಾರದಲಿದ್ದೀತೇ?
ಮಂಗಳ-ಮಾನಿತ—[2]
ನಂಘ್ರಿಯು ಕಾಣದ
ಕಂಗಳಗಾದರ[3] ದೊರಕೀತೇ? || 83 ||

1, ಇಷ್ಟೆಯ ಸಂಗತನು. 2, ಮಂಗಳವಾದ ಮಾನಿತೆಯುಳ್ಳವನ (ದೇವರ). 3, ಕಂಗಳನಿಗೆ ಆದರ.

# X. ಪಾಠ

## A KING IN A BATTLE

## ಒಬ್ಬ ಅರಸನು ಯುದ್ಧ ನಡಿಸಿದ್ದು

(ರಾಮಾಯಣ)

ಭಾಮಿನಿ-ಷಟ್ಪದಿ (1ನೇ ಶ್ಲೋಕ ನೋಡ ಬೇಕು)

ಬಿಗಿದು ಬೆಳು ವಟ್ಟೆಯು, ಕಠಾರಿಯು
ಮಿಗೆ ಕಟಿಗೆ, ಸಿಂಗರಿಸಿ[1] ಹೊನ್ನ ಆ
ಯುಗದ ಖಡ್ಗವನೆಕ್ಷಯುದ ಮೂಡಿಕೆಯು ದಕ್ಷಿಣದಾ ||
ಹೆಗಲಿಗಾನಿಸಿ, ಹರದ ಜೆಡೆಗಳ
ಜಗುಳದೋಲ್[2] ಬಳ ಚಾಚಿ, ಚಾಪವ [ವಿಂದಾ. || 84 ||
ತೆಗದು ಕೊಂಡ್, ಎಲೆಯಂದು[3] ಹೊರಟನು ನೃ-ಪತಿ ನಲು

1, ಹೊನ್ನಿನ ಆ ಯುಗದ ಖಡ್ಗವನ್ನು ಸಿಂಗರಿಸಿ, ಇತ್ಯಾದಿ ಅರ್ಥ ಮಾಡ ಬಹುದು; ಅಥವಾ (ತನ್ನನ್ನು) ಸಿಂಗರಿಸಿ (ಕೊಂಡು), -- ಖಡ್ಗವನ್ನೂ -- ಮೂಡಿಕೆಯನ್ನೂ ಇತ್ಯಾದಿ ಹೇಳ ಬಹುದು. 2, ಜಗುಳದೋಲ್=ಜಗುಳದ ಹಾಗೆ. 3, ಎಲೆ, (ಕೇಳು,) ಅಂದು (ಆ ಸಮಯದಲ್ಲಿ).

ಮಸಗಿ, ಮಾರ್-ಬಲದಿದಿರಿನಲ್ಲಿ ಮೋ-
ಹಿಸಿದ; ಕೇಳ್ ಐಯೊಗ ಹೂಂ-ಕೃತಿ
ಮಸಗೆ, ಹೂಡಿದನೆಹಿತರೆದೆ[1] ನಿಳಿನಿಟಲೆನಲು, ಧನುವಾ. | 85 |

1, ಹೂಡಿದನು, ಅಹಿತರ ಎದೆ ನಿಳಿನಿಟಲೆನ್ನುವ ಹಾಗೆ, ಧನುವನ್ನು.

ಧನುವ ನೇವರಿಸಿದನು, ಕೊಪ್ಪಿನ
ಕೊನೆಯನೆರ್ರೈದುಭಯದಲಿ[1] ಸಿಂ-
ಜಿನಿಯ ಧನಿ ದೋರಿಸಿದನೆವನೀ-ಘಟವು[2] ಬಿರ-ಬಿರಿಯೆ, ||
ವನ-ಧಿಗಳು ತುಳುಕಾಡೆ, ತಾರಕೆ
ತನಿ ಗೆದರೆ, ತಳ್ಳಂಕ-ಗೊಳೆ ಮೇ- [ರಾಜಾ. || 86 ||
ದಿನಿಯು, ನಗ-ಕುಲವೆಲುಗೆ. ಬೊಬ್ಬ್ಯೆ ಇರಿದುಬ್ಬಿದನು

1, ಭೂಮಿಯಲ್ಲಿಯೂ ಆಕಾಶದಲ್ಲಿಯೂ. 2, ದೋರಿಸಿದನು, (ಆ ಧ್ವನಿಯಿಂದ) ಅವನಿಯೆಂಬ ಘಟವು ಬಿರಬಿರಿಯುವ ಹಾಗೆ ಇತ್ಯಾದಿ.

ಅರಿದರೆದುರಾಳಿಗಳು ರಾಜನ
ಕುರುಹ; ನಿಲ್ಲದೆ, ಭರದಿ[1]ಯೊ ಕ್ಷಣ [ಇರಿದೂ, ||
ನೆರದು, ಕವಿ! ಕವಿಯೆನುತ, ಭೋಯೆಂದ್, ಉಬ್ಬಿ, ಬೊಬ್ಬ್ಯ
ಹರೆಯ ಹೊಯ್ಲಲಿ ಮೇರು-ಗಿರಿ ತರ-
ತರಿಸೆ, ತೂಳಿದರಸ್ತ್ರ ಶಸ್ತ್ರದ
ಹೊರಿ[2]ಗೆಯಲಿ ಹೂಳಿದರು, ಹೊಗಿಸಿದರಾನೆ ಕುದುರೆಗಳಾ. ||87||

1, ಭರದಿ (ಭರದಲ್ಲಿ) ಆ. 2, (ತಾವು ಎಸೆಯುವ) ಅಸ್ತ್ರಗಳ ಮತ್ತು ಶಸ್ತ್ರಗಳ ಮಾರ್ಗದಲ್ಲಿ (ತಾವು ಅಸ್ತ್ರ ಶಸ್ತ್ರಗಳನ್ನು ಪ್ರಯೋಗಿಸುತ್ತಾ ಇರುವಲ್ಲಿ).

ಸರಳ ಸರಿ, ಶಲ್ಲೆಹದ ಮಳೆ, ಮು—
ದ್ಗರದ ವೃಷ್ಟಿ, ಮುಸುಂಡಿ ಮುಸಲದ
ವರುಷ, ಧಾ[1]ರಾಸಾರಕದ ಸಿಡಿಲೆಂಬು ಶಕ್ತಿಗಳಾ ||
ಬಿರುಬಿನೆಗ್ಗದ ಸೋನೆ ಗುಡುಗೊಡ—
ನೆರಿ[2]-ಬಲಾಹಕ-ಪಟಲದಿಂದ್ ಅ—
ಬ್ಬರಿಸಿ ಸುರಿದುದು ರಾ[3]ಜ-ಸುಮನೋದ್ದಾಮ-ಶಿಖರಿಯಲೀ. ||88||

1, ಧಾರಾ-ಆಸಾರಕದ (ಧಾರೆಯ ಆಸಾರಕದ) ಸಿಡಿಲು, ಅಂಬು ಇತ್ಯಾದಿ. 2, ಅರಿಗಳ ಬಲಾಹಕದ ಪಟಲದಿಂದ. 3, ರಾಜನೆಂಬ ಸುಮನಸ್-ಉದ್ದಾಮ-ಶಿಖರಿಯಲ್ಲಿ (ರಾಜನೆಂಬ ಪುಷ್ಪವುಳ್ಳ ಅಥವಾ ಚಂದವಾದ ದೊಡ್ಡ ಗುಡ್ಡದಲ್ಲಿ).

ಬೀಸಿದು[1]ದು ಬಿರು-ಘಾಳಿ ರಾಜ-ಶ—
ರಾಸನದ ಸರಳೋಟದಲಿ; ಹೊರ
ಬೀಸಿ ಬಿದ್ದವು ಹಲವು ಮಾರ್-ಜನ-ಶಿರಸು ನೆಲಕೆಂದೂ. | 89 |

1, ಬೀಸಿತು.

ಶೀಳಿ ಬಿದ್ದವು ಬಲು ಮದೇಭ-ಘ[1]—
ಟಾಳಿ, ಘೋಟಕ-ನಿಕರ; ನೆಲದಲಿ
ಹೋಳುಗಳೆ[2]ದವು, ಕಳಚಿ ಬಿದ್ದು ನಭೀ ತಲಕೆ; ರಥದಾ ||

1, ಘಟಗಳ ಆಳಿ. 2, ಆದವು.

ಗಾಲಿ ತಿರ್ರನೆ ತಿರುಗುತಿರ್ದವು;
ಮೇಲೆ [3]ಪರಿವಾರಾಳಿಗಳ್ ಕರ-
ತಾಳದಲಿ ಕುಣಿದಾಡುತಿರ್ದವು, ಪಾಡುತೆವನಿ-ಪಗೇ,— || 90 ||

3, (ರಾಜನ) ಪರಿವಾರರಾದ ಆಳಿಗಳು.

ಎಲೆಲೆ, ಕವಿ! ತಿವಿ! ಕೊಲ್ಲು! ಕೊಲ್ಲಿರಿ!
ತಲೆಯ ಹೊಯಿ, ಹೊಯಿ! ಕಾಲ ಪಿಡಿದೆ—
ಪ್ಪಳಸು! [1]ನರನೊಟ್ಟೈಸಿ, ಹಿಂದಿರುಗುವರು, ನೋಡ್ ಎನುತಾ. ||
ಬಳಿಕ [2]ವೈರಿಗಳೆಧಿಕರೆಸುಗೆಯು
ಚಳ-ಚಮತ್ಕೃತಿ ನಡೆಯಲೊಬ್ಬನು
ಹಳಚಿದನು [3]ತದ್-ರಾಜನಂ, ಬಲು ರಕ್ತ [4]ಸೋರ್ವ ಅಂತೇ. || 91 ||

1, ನರನೆ (ನರನರನೆ ಎಂದು ತಮ್ಮ ಬಲವನ್ನು) ಒಟ್ಟೈಸಿ, (ಶತ್ರುಗಳು). 2, ವೈರಿಗಳ ಅಧಿಕರ (ವೈರಿಗಳಲ್ಲಿ ಶ್ರೇಷ್ಠರಾದವರ). 3, ಆ ರಾಜನನ್ನು. 4, ಸೋರುವ.

ಉರವಣಿಸಿದರು ಶತ್ರು-ರಾವ್ತರು;
[1]ಕರದ ಖಡುಗದ ನೆಗಹಿನಲಿ ನಿಡು—
ವೆರಿಯ ಗಜ ತೂಳಿದವು; ತೋಳಿನ ಬಾಳ್ ನೆಗಹಿನಲೀ, ||
[2]ಹರಿಗೆ ಖಡ್ಗ ಕಠಾರಿ ಕುಂತದ—
ಲಿರಿತಕಾರರು ಹೊಕ್ಕರೆನಿಬರ
ಚರಣ-ಘೋಷಕ್ಕ ಅವನಿ ಗುಡುಗುಡು-ಗುಡುಗುವಂದದಲೀ. ||92||

1, ಕರದ ಖಡುಗದ=ಕರ (ಸೊಂಡಿಲು) ಎಂಬ ಖಡುಗದ ಅಥವಾ ಸೊಂಡಲಿನಲ್ಲಿರುವ ಖಡುಗದ. 2, ಹರಿಗೆಯಲ್ಲಿ, ಖಡ್ಗದಲ್ಲಿ, ಕಠಾರಿಯಲ್ಲಿ ಇತ್ಯಾದಿ. ಇರಿತಕಾರರು ತೋಳಿನ ಬಾಳಿನ ನೆಗಹಿನಲ್ಲಿ ಮತ್ತು ಹರಿಗೆಯಲ್ಲಿ (ಹರಿಗೆ ಹಿಡುಕೊಂಡು) ಇತ್ಯಾದಿ.—ಕರದ ಖಡುಗದ ನೆಗಹಿನಲ್ಲಿ ಎಂಬದನ್ನು ರಾವ್ತರಿಗೆ ಹಾಕ ಬಹುದು; ಹಾಗಾದರೆ ತೋಳಿನ ಬಾಳಿನ ನೆಗಹಿನಲ್ಲಿ ಎಂಬದನ್ನು ಗಜಗಳಿಗೆ ಹಾಕ ತಕ್ಕದ್ದು (ತೋಳು=ಸೊಂಡಿಲು ಎಂಬಂತೆ ಆದೀತು).

ಆಸುರದ ಬೊಬ್ಬ್ಯ-ಆಟ, ಹಯದುರು
ಹೇಷಿತ ಧ್ವನಿ, ಕರಿಯ ಬೃಂಹಿತ-
ಘೋಷ, ರಥ-ರಾಜಿಗಳ ಚಿತ್ಕೃತಿ, ಭಟರ ಸಿಂಹ-ರವಾ, ||

ಆ ಸಮರ-ವಾದ್ಯದ ಘಡಾವಣೆ–
ಯೊಸುರದಿ ಬೆದರಿಸಿತು, ನಡುಗಿಸಿ–
ತಾ ಸಮಯದಲಿ ರಾಜ-ಪರಿವಾರೆಳಿಯನು; ಕೇಳೂ! || 93 ||

ಮುಸುಕಿದರಿ-ಶರ-ಜಾಲವನು ಖಂ–
ಡಿಸಿದನಾ ಭೂ-ನಾಥ; ಮೂಗ್-ಉ–
ಬ್ಬಸವ ಮಾಡಿದನೆಸುಗೆಯಲಿ ಬಳಿಕಾಯೆದುರ್-ಬಲಕೇ. ||
ಶಶಗಳೆಂದದಲೆಂದು ವೈರಿಗ–
ಳೆಸುವ ಲಾಭಕ್ಕ ಓಡುತೋಡುತ,
ನುಸುಳಿ ಪೊಕ್ಕರು ತಮ್ಮ ಮೇರುವೆಯೊಳಗೆ ಭಯದಿಂದಾ. ||94||

## XI. ಪಾಠ

### COMPARISONS

### ಸಾಮ್ಯಗಳು

(ದಾಸರ ಪದ)

ರಾಗ ಮುಖಾರಿ; ಝಂಪೆ ತಾಳ

ಗಣಗಳ ಮತ್ತು ಗಣಮಾತ್ರೆಗಳ ಕ್ರಮ–

ಪಲ್ಲ

5 | 5 | 5 | 5 | 1ನೇ ಪದ
5 | 5 | 5 | 3 || 2ನೇ ಪದ

ಪದಗಳು

5 | 5 | 5 | 5 | 1ನೇ ಪದ
5 | 5 | 5 | 3 || 2ನೇ ಪದ, 1ನೇ ಗಣಸಾಲು (ಇದೇ ಎರಡು ಸಾರಿ)

ಅ[1]ಹುದೆಂದರೆಹುದೆನ್ನಿ
ಯಲವೆಂದರೆಲವೆನ್ನಿ!
ಬಹು ಜನರು ಕೂ[2]ಡಿದೆನು
ಪೇಳಿ ಮತ್ತೆ ಇದನೂ! || ಪಲ್ಲ ||

1, ಅಹುದು (ಹೌದು) ಆದರೆ, ಅಹುದು ಎನ್ನಿ! ಅಲ್ಲವು ಆದರೆ, ಅಲ್ಲವು ಎನ್ನಿ (ಎನ್ನಿರಿ)!
2, ಕೂಡಿದ ಅನು, ಕೂಡಿದ ವೇಳೆ.

ದೇವರಿಲ್ಲದ ದೇಶ
ಭೂ[1]ತ-ಗಣ-ಸು-ನಿವೇಶ;
ಭಾವವಿಲ್ಲದ ಭಕುತಿ—
ಯೆಂದು ಕುಹಕ ಯುಕುತೀ. ||
ಹೇವವಿಲ್ಲದ ಹೆಣ್ಣು
ಗಜುಗ ಬೆಳದೆಂ ಕಣ್ಣು;
ಸೇವೆಯರಿಯದ ಧಣಿಯು
ಕಲ್ಲಿನಂ ಕಣಿಯೂ. || 95 ||

1, ಭೂತಗಳ ಗಣದ ಸುನಿವೇಶ.

ಧರ್ಮ-ಹೀನತೆಯರಸು
ಮುರಿದ ಕಾಲಿನ ಗೊರಸು;
ನಿರ್ಮಲಿಲ್ಲದ ಬಳಸು
ತಾ ಕೊಳಚೆ-ಹೊಲಸೂ. ||
ಶರ್ಮವಿಲ್ಲದ ಗಂಡು
ಕರಿಯ ವನಕೆಯ ತುಂಡು;
ಮರ್ಮವಿಲ್ಲದ ಮಾತು
ಪೊಡ-ಮೊಗೆಯ ತೂತೂ. || 96 ||

ಮಕ್ಕಳಿಲ್ಲದ ಶ್ರೀಯು
ಕೊಳತ ತೆಂಗಿನ ಕಾಯ್ಯು;
ಸಾಕ್ಯ-ಹೀನತೆಯೊಟ-
ವೆದು ಕಾಳಕೂಟಾ. ||
ಒಕ್ಕಲೇನ್ ಇರದೊರು
ಕೊಳತು ನಾರುವ ನೀರು;
ಸೊಕ್ಕಿ ನಡೆಯುುವ ಭೃತ್ಯ-
ನೆವಕೂರ-ಕೃತ್ಯಾ. || 97 ||

ಕಂಡು ಕರೆಯುದ ನಂಟ
ವೊನೆಯು ಕೆಟ್ಟಿಹ[1] ಕಂಟ-
ವೊಂಡು ನಗದಿಹ ವೋರೆ-
ಯೆದುವೆ[2] ಕಹಿ ಸೋರೇ. ||
ದಂಡಿಗೆಂಜುವ ಬಂಟ-
ನೊಡಕು-ಹರವಿಯು ಕಂಟ;
ಗಂಡಗೆಂಜದ[3] ನಾರಿ-
ಯೆವಳೆ ಹೆಮ್ಮಾರೀ. || 98 ||

1, ಇರುವ. 2, ಅದೇ. 3. ಗಂಡನಿಗೆ.

ಬಿಟ್ಟು ನುಡಿವಾ ಗೆಣೆಯು
ಹರಕು-ತೊಗಲಿನ ಮಿಣಿಯು;
ಕೊಟ್ಟು ಪೇಳುವ ದಾತ-
ನೆವ ಹೀನ ಜಾತಾ. ||

ಸೃಷ್ಟಿಯೊಳು ದುಸ್ಸಂಗಿ—
ಯಾಗಿ ಪರಮಾತ್ಮಾಂಘ್ರಿ[1]
ಬಿಟ್ಟು ನಡೆವಾ ನರನು
ಬರೆ ಕಾಡು-ಮರನೊ.[2] || 99 ||

1, ಪರಮಾತ್ಮನ ಅಂಘ್ರಿ(ಯನ್ನು). 2, ಮರವು.

---

## IMPOSSIBILITIES

## ಆಗದ ಕಾರ್ಯಗಳು

ರಾಗ ಮುಖಾರಿ; ಝುಂಪೆ ತಾಳ

ಗಣಗಳ ಮತ್ತು ಗಣಮಾತ್ರೆಗಳ ಕ್ರಮ—

ಪಲ್ಲ

| | | | | |
|---|---|---|---|---|
| 5 | 5 | 5 | 5 | 1ನೇ ಪದ |
| 5 | 5 | 5 | 3 || | 2ನೇ ಪದ |

ಪದಗಳು

| | | | | |
|---|---|---|---|---|
| 5 | 5 | 5 | 5 | 1ನೇ ಪದ |
| 5 | 5 | 5 | 1 || | 2ನೇ ಪದ, 1ನೇ ಗಣಸಾಲು |
| 5 | 5 | 5 | 5 | 3ನೇ ಪದ |
| 5 | 5 | 5 | 3 || | 4ನೇ ಪದ, 2ನೇ ಗಣಸಾಲು |

ಪಾಪಿ ಬಲ್ಲನೆ ಪರರ ಸುಖ ದುಃಖದಿಂಗಿತವ?
ಕೋಪಿ ಬಲ್ಲನೆ ದಾನ-ಧರ್ಮಗಳ ಗುಣವಾ? || ಪಲ್ಲ ||

ಕತ್ತೆ ಬಲ್ಲುದೆ ಹೊತ್ತ ಕಸ್ತುರಿಯ ಪರಿಮಳವ?
ಮೃತ್ಯು ಬಲ್ಲುದೆ ವೇಳ್ಯ ಹೊತ್ತೆಂಬುದಾ? ||
ತೊತ್ತು ಬಲ್ಲಳೆ ಮಾನವೆವಮಾನವೆಂಬುದನು?
ಕೊತ್ತಿ ಬಲ್ಲುದೆ ಕದ್ದ ಕ್ಷೀರವೆಂಬುದನೂ? || 100 ||

ಮೂಢ ಬಲ್ಲನೆ ಜ್ಞಾನ-ದೃಢ-ಭಕ್ತಿ-ಮರ್ಮವನು?
ಕಾಡ ಕಪಿ ಬಲ್ಲುದೇ ಮರ್ಯಾದೆಯಾ? ||
ಬೇಡ ಬಲ್ಲನೆ ಹರಿಣಿ ಹಾಕುವಾ ಬಾಷ್ಪವನು?
ಚಾಡಿಗನು ಬಲ್ಲನೇ ಕೀರ್ತಿ-ವಾಸನೆಯಾ? || 101 ||

ಹೇನು ಬಲ್ಲುದೆ ಮುಡಿದ ಹೂವಿನಾ ಪರಿಮಳವ?
ಶ್ವಾನ ಬಲ್ಲುದೆ ರಾಗ-ಭೇದಂಗಳಾ? ||
ಮೀನು ಬಲ್ಲುದೆ ನೀರು ಪಾಳು ಸೋದ್ ಎಂಬುದನು?
ಹೀನ ಬಲ್ಲನೆ ದಾನ-ಧರ್ಮಗಳ ಗುಣವಾ? || 102 ||

ಹೇಡಿ ಬಲ್ಲನೆ ರಣದ ಸಾಹಸದ ಶೌರ್ಯವನು?
ಕೋಡಗವು ಬಲ್ಲುದೇ ರತ್ನ-ಬೆಲೆಯಾ? ||
ಬೇಡಿ[1]ದುದ ಕೊಡಲು ನಿಜ ಕರುಣಾಳುವಲ್ಲದಲೆ
ನಾಡ ದೈವಗಳು ಕೊಡ ಬಲ್ಲವೇ, ಮನುಜಾ? || 103 ||

1, ಬೇಡಿದ್ದ(ನ್ನು) ಕೊಡಲಿಕ್ಕೆ (ದೇವರು ಬಲ್ಲ).

ಕೋಣ ಬಲ್ಲುದೆ ವಿದ್ಯೆಯನ್ನ್ ಓದಿ ಕಲಿಯಲಿಕೆ?
ಗೋಣಿ ಬಲ್ಲುದೆಯೆತ್ತಿನಾ ದುಃಖವಾ? ||
ಪ್ರಾಣ ತೊಲಗಿದ ಹೆಣವು ಕಿಚ್ಚಿಗಂಜಲು ಬಲು[1]ದೆ?
ಕ್ಷೋಣಿಯೊಳು ಕುರುಡ ಬಲ್ಲನೆ ಹಗಲನಿರುಳಾ? || 104 ||

1, ಬಲ್ಲುದೆ.

ಬಧಿರ ಕೇಳುವನೆ, ಸಂಗೀತವನು ಪಾಡಿದರೆ?
ಚದುರ ಮಾತುಗಳಾಡುವನೆ ಮೂಕನೂ? ||
ಅಧರವಿಲ್ಲದವನೆಮೃತಾನ್ನವನು ಸವಿದಾನೆ?
ಮಧುರ ವಚನವ ನುಡಿವನೇ ದುಷ್ಟ ಮನುಜಾ? || 105 ||

ಭುಜ-ಬಲದಿ ಯುಕ್ತಿಯನು ಗೆಲ ಬಲ್ಲನೇ ಶೂರ?
ನಿಜ ಮುಕುತಿ[1], ಭಕುತಿ-ಸುಖವನ್ನು ಕೊಡುವಾ, ||
ಸೃಜಿಸಿದ ಮಹಾ ಮಹಿಮೆಯಿಂ ಶೋಭಿತಾತ್ಮವನು
ಭಜಿಸಲಿಕ್ಕ್ ಅರಿಯದೆವ ಕಡು ಪಾಪಿ, ಮನುಜಾ! || 106 ||

1, ಮುಕುತಿ(ಯನ್ನು ಮತ್ತು).

---

# XII. ಪಾಠ

## MORALITY PRAISED

## ಪುಣ್ಯದ ಸ್ತೋತ್ರ

(ನೀತಿಸಾರದ ವಚನಗಳು)

ಗಣಗಳ ಮತ್ತು ಗಣಮಾತ್ರೆಗಳ ಕ್ರಮ —

4 | 4 | 4 | 1ನೇ ಪದ
4 | 4 | 4 | 4 | 4 || 2ನೇ ಪದ, 1ನೇ ಗಣಸಾಲು (ಇದೇ ಎರಡು ಸಾರಿ)

ಪುಣ್ಯಂ[1] ಗೈಯದ ಪಾಪಿಗೆ
ಪುಣ್ಯಂ ಬಳಕೇಕೆ, ಮರುಗಿ ಕುವಿದೊಡೆ[2], ಬರ್ಕುಂ[3]?
ಪುಣ್ಯದೊಳು ತೊಡರು ಬೇಗಂ!
ಪುಣ್ಯಂ ಶ್ರೇಷ್ಠಂ, ಕೇಳ್! ಎಲೆ, ನಿಜಮಿದು[4] ತನಯಾ! || 107 ||

1, ಪುಣ್ಯವು. 2, ಕುವಿದರೆ. 3, ಬರುವದು. 4, ನಿಜವು ಇದು.

ಪರ-ವಧುವಿಂಗ್[1] ಅಳುಪಿದವಗೆ,
ಪರರರ್ಥವ ಕೊಳ್ಕೊಂಬುವ[2] ಪಾತಕತನದಿಂ ||
ಪರರಂ ಪೀಡಿಪ[3] ಪಾಪಿಗೆ
ಪರರರ್ಥಂ ಗತಿ-ಗೇಡ್. ಎಲೆ, ನಿಜಮಿದು ತನಯಾ! || 108 ||

1, ವಧುವಿಗೆ. 2, ಕೊಳ್ಳುವ. 3, ಪೀಡಿಸುವ.

ಮತಿ ಗೆಡಿಸುವ, ಗತಿ ಗೆಡಿಸುವ,
ಶ್ರುತಿ ಗೆಡಿಸುವ, ವಪ್ಪು ಗೆಡಿಸುವೆಂಥಾ ಕಳ್ಳಂ[1] ||
ಕ್ಷಿತಿಯೊಳು ಕುಡಿವೀ[2] ಬಳನ
ಸ್ಥಿತಿ ಕೆಡುವದು ಕೌತುಕವೇನ್? ನಿಜಮಿದು ತನಯಾ! || 109 ||

1, ಕಳ್ಳನ್ನು. 2, ಕುಡಿಯುವ ಈ.

ಮನದ ಮಲಕ್ಕೆ ಅಂತರ್ಯದೊ-
ಳೆನುಮತಿಸಿರೆ, ಪೊರಗೆ ತೊಳೆಯೆ, ಶುದ್ಧತೆಯಾಗದು. ||
ಮನದೊಳು ಭಕ್ತಿಯು ರತ್ನಂ
ಬೆಳಗಲು, ಶುದ್ಧಾಂತರ್ಯಂ. ನಿಜಮಿದು ತನಯಾ! || 110 ||

ಗಿರಿ-ದುರ್ಗಂ, ವನ-ದುರ್ಗಂ,
ಜಲ-ದುರ್ಗಂ, ಯಂತ್ರಂ, ತಂತ್ರ-ಬಲಂ ಕಾಯ್ವುವೆ?[1] ||
ನಿರುತಂ ಕಾಯ್ವುದು[2] ಸತ್ಯಂ.
ಶರಣಂ ಸತ್ಯಂ, ಶರಣಂ ಸತ್ಯಂ! ನಿಜಮಿದು ತನಯಾ! || 111 ||

1, ಕಾಯುವವೇ? 2, ಕಾಯುವದು.

## SUNDRY COUNSELS

### ಬೇರೆ ಬೇರೆ ಬುದ್ಧೀ ಮಾತುಗಳು

(ಸೋಮೇಶ್ವರ-ಶತಕ)

ಪ್ರಸಂಗ (4ನೇ ಶ್ಲೋಕ ನೋಡ ಬೇಕು)

ಕೊಡ ಬೇಕ್ ಉತ್ತಮನಾದವಂಗೆ[1]
ಮಗಳಂ, ಸದ್-ಧಾರ್ಮಿಕಂ ದಾನಮನ್[2];
ಇಡ ಬೇಕ್ ದೇವರ ಮೇಲೆ ಭಕ್ತಿ-
ರಸಮಂ[3], ವಿಶ್ವಾಸಮಂ ರಾಯನೊಳ್. ||

1, ಆದವನಿಗೆ. 2, ದಾನಮಂ, ದಾನವನ್ನು. 3, ರಸವನ್ನು.

ಬಿಡ ಬೇಕ್, ಐ, ಧನ-ಲಾಭ ಬಂಧು-
    ಜನರೊಳ್; ದುಷ್ಟಾತ್ಮರೊಳ್ ಗೋಷ್ಟಿಯುಂ
ಬಿಡ ಬೇಕ್; ಇರ್ದ್ ಉಣ ಬೇಕ್, ಎಲೇ, ನ-
    ರ, ನರಾ! ಕೇಳ್ ಬುದ್ಧಿಯುಂ ಪೇಳ್ವುದಾ! || 112 ||

ಪೊರ ಬೇಡ್ ಅಂಗಡಿ-ಸಾಲಪೊರ
    ಪೊಣೆ[1]ಯುಂ, ನಿಂದ್ಯಂಗಳಂ, ಪಾಪವುಂ;
ಮರೆ[2] ಬೇಡಾ[3] ದಯೆಯುನ್ನು ತನ್ನ
    ಸತಿಯೊಳ್, ನ್ಯಾಯಂಗಳೊಳ್ ಸತ್ಯವುಂ. ||
ನೆರ ಬೇಡ್ ಬಂಡರ ಸಂಘವುಂ, ವಿ-
    ಕಟದಾತ್ಮ-ಸ್ತೋತ್ರ-ದುರ್ಭಾವರಂ;
ತೆರ ಬೇಡ್ ಬತ್ತಿಗೆ ಬಡ್ಡಿಯುಂ, ನ-
    ರ, ನರಾ! ಕೇಳ್ ಬುದ್ಧಿಯುಂ ಪೇಳ್ವುದಾ! || 113 ||

1, ಪೊಣೆಯನ್ನು. 2, ಮರೆಯು. 3, ಬೇಡವೇ.

ಸುಡು, ಕಂದಾ[1], ಕರಕೆನ್ನದೊಟ-
    ವ, ಪರಾನ್ನಾ[2]ಪೇಕ್ಷಿತಾ ಜಿಹ್ವೆಯುಂ;
ಸುಡು ಜೋಕ್ಯ ಇಲ್ಲದ ಬಾಳ್ಕೆಯುಂ; ಸು-
    ಡು, ಸದಾ ಕಾಪಟ್ಯದ ಸ್ನೇಹವುಂ! ||
ಸುಡು ವಾಕ್[3]-ಸ್ವಚ್ಛ-ವಿಹೀನ-ವಕ್ತ್ರ-
    ವ, ಪರ-ಸ್ತ್ರೀ-ನೋಟದಾ ಕಣ್ಗಳಂ,
ನುಡಿ[4]ದುಂ ತಪ್ಪುವ ರಾಜನಂ, ನ-
    ರ, ನರಾ! ಕೇಳ್ ಬುದ್ಧಿಯುಂ ಪೇಳ್ವುದಾ! || 114 ||

1, ಕಂದನೇ. 2, ಪರರ ಅನ್ನದ ಅಪೇಕ್ಷೆಯುಳ್ಳ ಆ. 3, ವಾಕ್ಯದ ಸ್ವಚ್ಛವಿಲ್ಲದ. 4, ನುಡಿದೂ, ನುಡಿದರೂ.

## RULES FOR KINGS

### ಅರಸರಿಗೆ ತಕ್ಕ ಕಟ್ಟಳೆಗಳು

ಪುರ ದುರ್ಗಂಗಳ ಬಲ್ಮೆ ಮಾಡ-
ದೆ, ಪ್ರಜಾ-ಕ್ಷೋಭಂಗಳಂ ನೋಡದೆ-
ಲ್ಲರು ವಿಶ್ವಾಸಿಗಳೆಂದು ನಂಬಿ,
ಬಹುದಂ[1] ಪೋದೆಪ್ಪುದಂ[2] ಕಾಣದಾ- ||
ತುರದಿಂದ್ ಉಂಡ್, ಅತಿ ನಿದ್ರೆ ಗೈದು,
ಮದನಂಗ್[3] ಆಳ್ ಆಗ್ಯೆ ಇಹಂ[4] ಲೋಕದೊಳ್
ಧೊರೆಯೇ? ಸೊಕ್ಕಿದ ಕೋಣನೇ, ನ-
ರ, ನರಾ! ಕೇಳ್ ಬುದ್ಧಿಯಂ ಪೇಳ್ವುದಾ! || 115 ||

1, ಬರುವದನ್ನು. 2, ಹೋಗುವದನ್ನು. (248ನೇ ಶ್ಲೋಕದಲ್ಲಿರುವ 'ಇದ್ದಪರೆ' ಎಂಬದನ್ನೂ 183ನೇದರಲ್ಲಿ 'ಇರ್ದಪರು' ಎಂಬದನ್ನೂ ಸರಿ ನೋಡಿರಿ). 3, ಮದನನಿಗೆ. 4, ಇರುವನು.

ಧುರದೊಳ್, ತನ್ನಯು[1] ವೀರರೊಳ್, ಪ್ರ-
ಜೆಗಳೊಳ್, ದಾಯಾದ್ಯರೊಳ್, ಭೃತ್ಯರೊಳ್,
ಪುರದೊಳ್, ಬಂಧುಗಳೊಳ್, ಸು-ಭೋಜ-
ನಗಳೊಳ್, ವೈದ್ಯಂಗಳೊಳ್, ಯಾನದೊಳ್ಗ್, ||
ಅರಿಯೊಳ್, ಕಾಲ[2]-ನಿಯೋಗ-ವಾಕ್-ಕು-
ಟಿಲರೊಳ್, ವಿದ್ವಾಂಸರೊಳ್, ಮಂತ್ರಿಯೊಳ್ಗ್
ಅರಸಿಂಗ್ ಎಚ್ಚರು ಬೇಕ್, ಎಲೇ, ನ-
ರ, ನರಾ! ಕೇಳ್ ಬುದ್ಧಿಯಂ ಪೇಳ್ವುದಾ! || 116 ||

1, ತನ್ನ. 2, ಕಾಲದ ನಿಯೋಗಕ್ಕೆ ಬೇಕಾದ ವಾಕ್ಯದಲ್ಲಿ ಕುಟಿಲರಾದವರೊಳ್.



## SIGNS OF A BAD CLERK

### ಕೆಟ್ಟ ಶಾನಭೋಗನ ಲಕ್ಷಣಗಳು

ಅಣು[1]-ಮಾತ್ರಾನ್ನ-ದನೆಲ್ಲದಾಣ್ಮ —
　　ನೆಡೆಯೊಳ್ ಲಂಚಕ್ಕ್ ಒಡಂಬಟ್ಟು, ವ[2]ಪ್-
ಪಣವುಂ ಕೊಂಡ್, ಅತಿ ದ್ರವ್ಯವುಂ ಕೆ—
　　ಡಿಸಿ, ಚಾಡೀ ಕೇಳಿ, ದ್ರೋಹಂಗಳನ್ನ್ ||
ಎಣಿಸುತ್ತ್, ಎಲ್ಲರ ಬಾಳ್ಗೆ ನೀರ—
　　ನೆರದಾ[3]ರುಂ ಕಾಣದೇ ಭಕ್ಷಿ[4]ಪಾ
ಗ[5]ಣಕಂ ಹೆಗ್ಗ[6]ಣಕಂ ಸ[7]ಮಂ, ನ—
　　ರ, ನರಾ! ಕೇಳ್ ಬುದ್ಧಿಯುಂ ಪೇಳ್ವುದಾ! || 117 ||

1, ಅಣು-ಮಾತ್ರ-ಅನ್ನ-ದನು (ಕೊಡುವವನು) ಅಲ್ಲದೆ, ಆಣ್ಮನ. 2, ಒಂದು. 3, ಆರನ್ನೂ. 4, ಭಕ್ಷಿಸುವ ಆ. 5, ಗಣಕನು. 6, ಹೆಗ್ಗಣಕ್ಕೆ. 7, ಸಮನು (ಸಮಾನನು).

## XIII. ಪಾಠ

### IT IS DIFFICULT TO SOUND HYPOCRITES

### ಕಪಟಸ್ಥರನ್ನು ಶೋಧಿಸುವದು ಕಷ್ಟವಾಗಿದೆ

ಕ್ಷಿತಿಯುಂ ಶೋಧಿಸಲಕ್ಕು[1], ವೀಚಿ—
　　ಗಳ ಲೆಕ್ಕಂ ಮಾಡಲಕ್ಕು, ಆಗ[2]ಸೋ—
ನ್ನತಿಯುಂ ಕಾಣಲು ಬ[3]ಕ್ಕು, ಸಾಗ—
　　ರಗಳೇಳಂ ದಾಂಟಲಕ್ಕುಂ[4], ಸು-ಭಾ- ||
ಗತಿಯುಂ ಸಾಧಿಸಲಕ್ಕು, ಬೆಟ್ಟ—
　　ಗಳು ಚೂರ್ ಅಕ್ಕ್; ಐಬೊ, ಕಾಪಟ್ಯರಾ
ಮತಿಯುಂ ಸೋಸಲಭೇದ್ಯವೈ, ನ—
　　ರ, ನರಾ! ಕೇಳ್ ಬುದ್ಧಿಯುಂ ಪೇಳ್ವುದಾ! || 118 ||

1, ಆಗುವದು. 2, ಆಗಸದ ಉನ್ನತಿಯನ್ನು. 3, ಬರುವದು. 4 ಆಗುವದು.

## BE CONTENT

### ಇದ್ದದ್ದು ಸಾಕೆಂದು ಸುಖ ಪಡು

ಮುಕುರಂ ಕೈಯೊಳಿರಲ್ಕೆ[1], ನೀರ
    ನೆಳಲೇಕ್, ಐ? ಕಾಮ-ಧೇನ್ ಇರ್ದುಂ, ನೋ–
ಟಕೆ ಗೊಡ್ಡ್-ಆಕಳನಾಯ್ವರೇ[2]? ಗು–
    ಣ-ಯುತರ್ ಪಾಲ್ ಉಂಡು, ಮೋಲ್ ಉಂಬರೇ? ||
ಶುಕನೋದಿಂದ್[3] ಅತಿ ಚೆಲ್ವೆ ಕಾಕ-
    ರವ? ನೌಲ್-ನಾಟ್ಯೋಟದಿಂ ಡೊಂಬರೇ?
ಸುಕದಿಂದ್ ಉನ್ನತ ವಸ್ತುವೇ, ನ–
    ರ, ನರಾ? ಕೇಳ್ ಬುದ್ಧಿಯಂ ಪೇಳ್ವುದಾ! || 119 ||

1, ಇರಲಿಕ್ಕೆ. 2, ಆಯುವರೇ. 3, ಶುಕನ ಓದಿನಿಂದ.

——ooxoo——

## THE RIGHT THING AT THE RIGHT TIME

### ಬೇಕಾದದ್ದು ತಕ್ಕ ಕಾಲಕ್ಕೆ ಬರ ಬೇಕು

ಉಣದಿರ್ಪಂ[1] ಧನವಿದ್ದಡೇನು?
    ಸತಿಯಿರ್ದ್ದ ಏನ್, ನಂಬಿಕ್ಕೆ ಪೋದ ಮೇಲ್?
ಬಣಗಲ್ ಪೈರಿಗೆ ಬಾರದಿರ್ದ
    ಮಳೆ ತಾಂ[2] ಬಂದ್ ಏನು? ಬಿಕ್ಕಟ್ಟಿನೊಳ್ ||
ಮಣಿದುಂ[3] ನೋಡದ ಬಂಧುವೇತ–
    ಕೆಣಿಸಲ್ ಕಾಲೋಚಿತಕ್ಕೆ ಐದದಂ
ತೃಣವೇ ಪರ್ವತಮಲ್ಲವೇ, ನ–
    ರ, ನರಾ? ಕೇಳ್ ಬುದ್ಧಿಯಂ ಪೇಳ್ವುದಾ! || 120 ||

1, ಉಣ್ಣದೆ ಇರುವ ಆ. 2, ತಾನು. 3, ಮಣಿದೂ, ಮಣಿದರೂ.

——o::o——

## PLACES WHICH ARE TO BE AVOIDED

### ವಾಸ ಮಾಡ ತಕ್ಕವಲ್ಲದ ಸ್ಥಳಗಳು

ಫಲವೊತ್ತ್ರ್ಯ ಇಲ್ಲದ ರಾಜ್ಯದಲ್ಲಿ,
    ಪ್ರಭು ದಂಡಕ್ಕ್ ಆಶೆ ಗೈ[1]ವೆಲ್ಲಿ, ಬಲ್
ಪುಲಿಗಳ್ ಸಿಂಹಗಳೆಕ್ಕೆಯಲ್ಲಿ,
    ಪರ-ಸ್ತ್ರೀಯೆರ್ದೆಲ್ಲಿ, ಕು-ಗ್ರಾಮದೊಳ್, ||
ಗೆಲವಂ ತೋರದೆ ದುಃಖವೊಗು—
    ವೆಡೆಯೊಳ್, ಭೂತಂಗಳೊವಾಸದೊಳ್
ಸಲೆ ಬಲ್ಲರ್ ಇರ ಸಲ್ಲದೈ, ನ—
    ರ, ನರಾ! ಕೇಳ್ ಬುದ್ಧಿಯುಂ ಪೇಳ್ವುದಾ! || 121 ||

1, ಗೈಯುವಲ್ಲಿ.

## A GOOD POET NEVER DESPAIRS

### ಸತ್ಕವಿಯು ಎಂದಿಗೂ ನಿರಾಶೆಯವನಾಗುವದಿಲ್ಲ

ಚರಿ[1]ಪೊರಣ್ಯದ ಪಕ್ಷಿಗೊಂದು
    ತರು ಗೊಡ್ಡ್ ಆಗಲ್, ಫಲಂ ಶ್ರೀವಿದೊ
ಮರಗಳ್ ಪುಟ್ಟವೆ? ಪುಷ್ಪವೊಂದು
    ಬಳಲಲ್, ಭೃಂಗಕ್ಕೆ ಪೂವ್ ಇಲ್ಲವೇ? ||
ನಿರು[2]ತಂ ಸತ್-ಕವಿಗೋರ್ವ ಗರ್ವ-
    ವಿಭು ತಾನುಂ[3] ಲೋಭಿಯಾಗಲ್, ನಿಜಂ[4]
ಧರೆಯೊಳ್ ದಾತರು ಪುಟ್ಟರೇ, ನ—
    ರ, ನರಾ? ಕೇಳ್ ಬುದ್ಧಿಯುಂ ಪೇಳ್ವುದಾ! || 122 ||

1, ಚರಿಸುವ. 2, ನಿರುತವು (ನಿರುತದಲ್ಲಿ). 3, ತಾನೂ, ತಾನಾದರೂ. 4, ನಿಜವು (ಯಾವಾಗ್ಯಾದರೂ).

## VAIN THINGS

### ವ್ಯರ್ಥವಾದ ವಿಷಯಗಳು

[1]ಸುರ-ಚಾಪಾಯತಮಿಂದ್ರ-ಜಾಲ-
ದ ಬಲಂ, ಮೇಘಂಗಳಾಕಾರ, ಬಾ-
ಲರು ಕಟ್ಟಿಯ ಆಡುವ ಕಟ್ಟೆ, ಸ್ವಪ್ನ-
ದ ಧನಂ, ನೀರ್-ಗುಳ್ಳೆ, ಘೂಳೀ ಸೊಡರ್, ||
ಪರಿವುತ್ತ್ [2]ಇಪ್ಪ ಮರೀಚಿಕಾ-ಜ-
ಲ, [3]ಜಲಾವರ್ತಾಕ್ಷರಂ, ಧಾರಿಣೀ
ಶಿರಿ ಪುಲ್ಲ್-ಅಗ್ರದ ತುಂತುರ್ವೈ, ನ-
ರ, ನರಾ! ಕೇಳ್ ಬುದ್ಧಿಯುಂ ಪೇಳ್ವುದಾ! || 123 ||

1, ಸುರ-ಚಾಪ-ಆಯತಂ (ಮಳೆ ಬಿಲ್ಲು ಪಸರಿಸಿದ್ದು). 2, ಇರುವ. 3, ಜಲದ ಆವರ್ತ-(ದಲ್ಲಿಯ) ಅಕ್ಷರಂ.



## GREAT THINGS ARE EFFECTED BY SMALL MEANS

### ಚಿಕ್ಕ ಉಪಾಯಗಳಿಂದ ದೊಡ್ಡ ಕಾರ್ಯಗಳಾಗುವವು

ಅರೆಯುಂ ಶೀ[1]ಳುವಡಾನೆ ಮೊಟ್ಟ-
ಲಿಹುದೇ? [2]ಚಾಣಂಗಳಿಂದ್ ಅಲ್ಲದೇ?
[3]ಕಿರಿದಾಗ್ಯ ಇರ್ದಡೆದೇನ್? ಉಪಾಯ-
ಪರನೋ[4]ರ್ವಂ ಕೋಟಿಗೀಡ್ [5]ಅಕ್ಕು. ಹೆಂ- ||
ಮರಸಿರ್ದ್ ಏನ್? ಅದರಿಂದಲೆತ್ತ
ಬಹುದೇ ಬಲ್ ಭಾರವಂ? ಸನ್ನೆ ಸಾ-
ವಿರ ಕಾಲ್-ಆಳಿನ ಸತ್ವವೈ, ನ-
ರ, ನರಾ! ಕೇಳ್ ಬುದ್ಧಿಯುಂ ಪೇಳ್ವುದಾ! || 124 ||

1, ಶೀಳುವದಕ್ಕೆ. 2, ಚಾಣಂಗಳಿಂದ (ಶೀಳುವದಕ್ಕೆ ಆಗುವದು) ಅಲ್ಲವೇ? 3, (ಉಪಾಯವು) ಕಿರಿದಾಗಿ ಇರ್ದಡೆ ಅದು ಏನು? 4, ಒಬ್ಬನು. 5, ಆಗುವನು.



## MAN MUST ACT ACCORDING TO HIS ABILITIES

### ಒಬ್ಬನು ತನ್ನ ತೂಕ ನೋಡಿ ಏನಾದರೂ ಮಾಡ ತಕ್ಕದ್ದಾಗಿದೆ

ಇರಿಯಲ್ ಬ[1]ಲ್ಲರೆ, ವೀರನಾಗು;
ಧರೆಯೊಳ್ ನಾನಾ ಚಮತ್ಕಾರವನ್ನ
ಅರಿಯಲ್ ಬಲ್ಲರೆ, ಮಂತ್ರಿಯಾಗು;
ಪ್ರಭುವಾಗ್, ಆರ್ ಎಂ[2]ದೊಡಂ ಕೋಪವಂ ||
ತೊರೆಯಲ್ ಬ[3]ಲ್ಲರುಪಾಧ್ಯನಾಗ್, ಏ[4]-
ಲರಿ-ಷಡ್-ವರ್ಗಂಗಳಂ ಗೆದ್ದ ಮೇಲ್;
ತೆರ ಬ[5]ಲ್ಲರ್ ಪೊಣೆಯ[6]ಪ್ಪುದೇ, ನ-
ರ ನರಾ! ಕೇಳ್ ಬುದ್ಧಿಯಂ ಪೇಳ್ವುದಾ! || 125 ||

1, ತಿಳಿದರೆ. 2, ಎಂದರೂ (ನುಡಿದರೂ). 3, ಬಲ್ಲರೆ; ಇತ್ಯಾದಿ. 4, ಎಲೆ! 5, ಬಲ್ಲರೆ. 6, ಆಗುವದೇ.

---

## GOD'S SUPREMACY

### ದೇವರ ಸರ್ವೇಶತನ

ಕ[1]ಡಿದಾಡಲ್ ರಣ-ರಂಗದೊಳ್, ನೃ-
ಪರನೇನ್ ಏನ್ ಅಂದದೊಳ್ ಕಾ[2]ದೊಡಂ;
ದೃಢದೊಳ್ ಗುಡ್ಡವ ಕಿತ್ತೊಡಂ; ತೊ-
ಳಲುತೇನ್ ಗ್ರಂಥಂಗಳಂ ಮಾ[3]ಡಲುಂ; ||
ಕಡಲೇಳಂ ಮುಗುಚಿಟ್ಟೊಡಂ; ಕ-
ಲಿಯುಲುಂ ಬಲ್ ವಿದ್ಯ ಪದ್ಯಂಗಳಂ;
ಪಡೆದಷ್ಟ್ ಅಲ್ಲದೆ, ಬ[4]ಪ್ಪುದೇನ್, ನ-
ರ, ನರಾ? ಕೇಳ್ ಬುದ್ಧಿಯಂ ಪೇಳ್ವುದಾ! || 126 ||

1, ರಣರಂಗದೊಳಗೆ ಕಡಿದಾಟ ನಡೆಯಲಾಗಿ ನೃಪರನ್ನು ಬಹಳ ಪ್ರಕಾರವಾಗಿ ಕಾಯುತ್ತಾರೆ; ಕಾದರೂ, ದೇವರು ನೇಮಿಸಿದ್ದು (ಅಥವಾ ರಾಜನು ಪಡೆದ್ದು) ಆಗುವದು; ದೇವರ ಚಿತ್ತದ ಪ್ರಕಾರ ಅವನು ಸಾಯ ಬೇಕಾದರೆ, ಸಾಯುತ್ತಾನೆ. 2, ಕಾದರೂ. 3, ಮಾಡಲೂ, ಮಾಡಿದರೂ. 4, ಬರುವದು.

## THE RIGHT THING IN THE RIGHT PLACE

### ಎಲ್ಲವೂ ತನ್ನ ಸ್ಥಳದಲ್ಲಿಯೇ ಚಂದವಾಗಿದೆ

ರವಿಯಾಕಾಶಕೆ ಭೂಷಣಂ; ರ[1]—
    ಜನಿಗಂ ಚಂದ್ರಂ ಮಹಾ ಭೂಷಣಂ;
ಕುವರಂ ವಂಶಕೆ ಭೂಷಣಂ; ಸ—
    ತಿಗೆ ಪಾತಿ-ವ್ರತ್ಯವೇ ಭೂಷಣಂ; ||
ಹವಿ ಯ[2]ಜ್ಞಾಳಿಗೆ ಭೂಷಣಂ; ಸ—
    ರಸಿಗೆಂಭೋ-ಜಾತಗಳ್ ಭೂಷಣಂ;
ಕವಿಯಾಸ್ಥಾನಕೆ ಭೂಷಣಂ, ನ—
    ರ, ನರಾ! ಕೇಳ್ ಬುದ್ಧಿಯುಂ ಪೇಳ್ವುದಾ! || 127 ||

1, ರಜನಿಗೆ. 2, ಯಜ್ಞದ ಆಳಿಗೆ.

---

# XIV. ಪಾಠ

## A PRAYER IN A TIME OF FAMINE

### ಬರಗಾಲದಲ್ಲಿ ಮಾಡಿದ ಪ್ರಾರ್ಥನೆ

(ದಾಸರ ಪದ)

ರಾಗ ಆನಂದಭೈರವಿ; ಝಂಪೆ ತಾಳ

ಗಣಗಳ ಮತ್ತು ಗಣಮಾತ್ರೆಗಳ ಕ್ರಮ—

ಪಲ್ಲ

| | | | | |
|---|---|---|---|---|
| 5 | 5 | 3 | 5 | 1ನೇ ಪದ |
| 5 | 5 | 1 | | 2ನೇ ಪದ |

ಅನುಪಲ್ಲ

| | | | | |
|---|---|---|---|---|
| 5 | 5 | 5 | 5 | 1ನೇ ಪದ |
| 5 | 5 | 5 | 5 | 2ನೇ ಪದ |

ಪದಗಳು

| | | | | |
|---|---|---|---|---|
| 5 | 5 | 1 | 5 | 1ನೇ ಪದ |
| 5 | 5 | 1 | | 2ನೇ ಪದ, 1ನೇ ಗಣಸಾಲು |
| 5 | 5 | 5 | 5 | 3ನೇ ಪದ |
| 5 | 5 | 1 | | 4ನೇ ಪದ, 2ನೇ ಗಣಸಾಲು |

ಏನ ಮಾಡಲಿ ನನ್ನ ದೇವ? ಯೀ ಬೆಳೆಯು
ಸೋನೆಯಿಲ್ಲದಲು[1]ರಿದುದೂ. || ಪಲ್ಲ ||
ನಾನಾ ಪ್ರಕಾರದೊಳು ಹಾನಿಯಾಗ್ಯ ಇದೆಯಿರವು;
ಹೀನರಾದೆವು ನಾವು. ಕರುಣಾಳುವೇ ಕೇಳೂ! || ಅನುಪಲ್ಲ ||

ಮೂಡ ದೆಸೆಯೊಳು ಬಂ[2]ದುದು ವೃಷ್ಟಿಯೂ
ಬಡಗ ದೆಸೆಯೊಳು ಸುರಿದುದೂ; ||
ಎಡೆ ಬಿಡದೆ ತೆಂಕ ಕಡೆಯಲಿ ಹೊಡೆದ ಮಳೆಯು ತಾ
ನಡುವೆ ಬಿಡುವದು ಯಾತಕೇ? || 128 ||

1, ಉರಿಯಿತು. 2, ಬಂತು.

ಕಟ್ಟೆ[1]-ಕಡು ಮದಗ-ಸಹಿತವೀಯೂರ
ಕಟ್ಟಿನೊಳು ನಾ ಕಾಣೆನೂ; ||
ಕೆಟ್ಟು ಹೋಯಿತು ಮಳೆಯು, ಹೊಟ್ಟೆಯನ್ನು ಉರಿಸುತ್ತ.
ದೃಷ್ಟಿಯಲಿ ನೋಡು ನೀನೂ! || 129 ||

1, ಬಹಳ ದೊಡ್ಡ ಮದಗದ ಸಹಿತದ ಈ ಊರ ಕಟ್ಟಿನೊಳಗೆ (ಮೋರೆಯೊಳಗೆ) ನಾ (ಮಳೆಯನ್ನು) ಕಾಣೆನು.

ಮಳೆಯಿಲ್ಲದಿಳೆಯಾರಿತು; ನಟ್ಟ ಇರ್ದ
ಫಲವೆಲ್ಲ ಬೆಳೆ ಕೆಟ್ಟಿತೂ. ||
ಸ್ಥಳದ ತೆರಿಗೆಯ ಬಿಟ್ಟು, ಕಳು[1]ಹುವನೆ ಧೊರೆಯು? ತಾನ್
ಎಳದೆಳದು ಕೊಲ್ವ[2]ನೆಲ್ಲಾ? || 130 ||

1, (ತೆರಿಗೆಯನ್ನು ಬಿಟ್ಟೆನೆಂಬ ಸುದ್ದಿಯನ್ನು) ಕಳುಹಿಸುವನೇ. 2, ಕೊಲ್ಲುವನು.

ಕಷ್ಟ ಬಂದುದು ಜನರಿಗೆ; ಮಳೆಯೆಕಟ
ಬಿಟ್ಟು ಹೋದುದು ಭೂಮಿಯಾ. ||
ಸುಟ್ಟು ಗ್ರಾಮವು, ತಟನಿಯೆಲ್ಲನಾರಿದ ಮೇಲೆ,
ಮುಟ್ಟಿ ನೋಡುವರಿಲ್ಲವೋ[1]? ||131||

1, ನೋಡುವವರು.

ಹದಿನಾಲ್ಕು[1] ಲೋಕಗಳ್ಗೆ ನೀನ್ ಐಯ್ಯ
ವುದಕವಂ ಕೊಡದಿರುವಿಯೋ? ||
ಬಿದರುತದೆ[2] ಭೂ-ಲೋಕವುರಿವದೇ[3] ಜನವೆಲ್ಲ—
ವುದುರದೇತಕ್ಕೆ ಮಳೆಯೂ? ||132||

1, ಅಂದರೆ ಎಲ್ಲಾ. 2, ಬಿದರುತ್ತದೆ. 3, ಉರಿಯುವದೇ.

ಎಲ್ಲ[1] ಬೇಡಿಯೆ ಕೊಂಬರು; ತದ್[2]-ಹರಕೆ—
ಗೆಲ್ಲಿಯೆಂತರ ಬಾರದೂ. ||
ಹಲ್ಲು[3], ಬಾಯ್ಯ್ ಆರ್ಯ್ ಇದರ್ ಮಕ್ಕಳಿಂಗ್ ಎಳೆ ನೀರು,
ಬೆಲ್ಲವಾಗ್ಯ ಇಹ[4] ಮಳೆಯೆರೇ! || 133 ||

1, ಎಲ್ಲವಾಗಿ (ಎಲ್ಲ ಪ್ರಕಾರವಾಗಿ) ಬೇಡಿ ಕೊಳ್ಳುತ್ತಲೇ ಇರುವರು. 2, ಆ ಹರಕೆಗೆ ಎಲ್ಲಿಯೂ. 3, ಹಲ್ಲು (ಮತ್ತು) ಬಾಯ್ಯು. 4, ಇರುವ.

ತೋಳ ಚಾಚ್ ಐಯ್ಯ ಬೇಗ! ಕಾಣಲೊಂ
ಮೂ-ಲೋಕದೊಡೆಯ ನೀನೂ. ||
ಕಾಲ-ಮೇಘವು ನಿನಗೆ ದೂರವಾಗುವದುಂಟೆ
ಯಾಲಸ್ಯ ಮಾಡ ಬೇಡಾ! || 134 ||

ಬಡವರೆಲ್ಲರು[1] ಕೂಡಿಯೆಯೊಪ್ಪು-ಕೈ
ವಿಡಿದು, ಬೇಡಿಯೆ ಕೊಂಡೆವೂ. ||

1, ಬಡವರೆಲ್ಲರು (ಬಡವರಾದ ನಾವೆಲ್ಲರು) ಕೂಡಿ ಕೊಳ್ಳುತ್ತಲೇ ಇದ್ದು, ಒಪ್ಪು-ಕೈ ಹಿಡಿದು (ಅಂದರೆ ಒಡಂಬಟ್ಟು).

ಶಿಡಿಲು ಮಳೆ ಮಿಂಚುಗಳು ಹೊಡ-ಕರಿಸಿ ಬಪ್ಪ ಹಾಗ್,
ಒಡೆಯ, ದಯ ದೋರೆಂ ನೀನೂ! || 135 ||

ಸ್ವಾಮಿ, ನಿನ್ನಯ ನಾಮವು ಜನರಿಂಗೆ
ಕಾಮಿತಾರ್ಥವನೀವುದೂ. ||
ಪ್ರೇಮಪಾಗ್ಯ ಇಹ ಮಳೆಯ ಭೂಮಿಯಲ್ಲ್ಯ[1] ಇಳ ಬಿಟ್ಟು,
ನಾಮ-ಗೊಳ್ಳ ಐಯಿಲ್ಲಿಯೇ! ||136||

1, ಇಳಿಯಲಿಕ್ಕೆ.



SEEK FOR GOD'S HELP IN ALL DISTRESS

ಎಲ್ಲಾ ಆಪತ್ತಿನಲ್ಲಿ ದೇವರ ಸಹಾಯವನ್ನು ನೋಡಿಕೋ

(ಸೋಮೇಶ್ವರ ಶತಕ)

ಪ್ರಸಂಗ (4ನೇ ಶ್ಲೋಕ ನೋಡ ಬೇಕು)

ಧರೆ ಬೀಜಂಗಳ ನುಂ[1]ಗೆ, ಬೇಲಿ
ಹೊ[2]ಲನೆಲ್ಲಂ ಮೇದರೇ, ಗಂಡ ಹೆಂ–
ಡಿರನೆತ್ಯುಗ್ರದಿ ಶಿಕ್ಷಿಸಲ್, ಪ್ರ–
ಜೆಗಳಂ ಭೂ-ಪಾಲಕಂ ಬಾಧಿಸಲ್, ||
ತರುವೇ ಪಣ್ಗಳ ಮೆಲ್ಲೆ, ಮಾತೆ
ವಿಷವಂ ಪೆತ್ತ ಅರ್ಭಕಂಗ್ ಊಡೆ, ದೇ–
ವರ ಬಿಟ್ಟೆ ಆರು ಸು[3]ರಕ್ಷಿಪರ್, ನ–
ರ, ನರಾ? ಕೇಳ್ ಬುದ್ಧಿಯಂ ಪೇಳ್ವುದಾ! || 137 ||

1, ನುಂಗಲಾಗಿ. 2, ಹೊಲವ. 3, ಸುರಕ್ಷಿಸುವರು.

ಗಿಡ ವೃಕ್ಷಂಗಳಿಗಾರು ನೀರ–
    ನೆರೆವರ್? ನಿತ್ಯಂ ಮಹಾ ಬೆಟ್ಟಗಳ್
ಕಡು ಕಾರ್ಪಣ್ಯದಿ ಕೇಳ್ವವೇ?[1] ನೆ[2]–
    ಲ, ಜಲಾಗ್ನೀ, ವಾಯುವಾಕಾಶವನ್ನ್, ||
ಉಡು-ಭಾ-ರಾಶಿಯುಮಾರು ಕಾಂಬ[3]–
    ರು? ಜಗತ್-ಪ್ರೇರೇಪಕಂ ನೀನ್ ಇರಲ್,
ಕೊಡುವರ್, ಕೊಂಬರು[4] ಮರ್ತ್ಯರೇ, ನ–
    ರ, ನರಾ? ಕೇಳ್ ಬುದ್ಧಿಯುಂ ಪೇಳ್ವುದಾ! || 138 ||

1, ಕೇಳುವವೇ? (ಅವು ತಾಳ್ಮೆಯಿಂದಿದ್ದು, ದೇವರ ಜೋಪಾನ ಕಾದು ಕೊಂಡವೆ.) 2, ನೆಲ (ವನ್ನು), ಜಲ (ವನ್ನು), ಅಗ್ನೀ (ಯನ್ನು). 3, ಕಾಣುವವರು, ಅಂದರೆ ಜಾಗ್ರತೆ ತಕ್ಕೊಳ್ಳುವರು ಯಾರು? 4, (ಕಸು) ಕೊಳ್ಳುವರು.



## BY GOD'S GRACE A MAN MAY BECOME GREAT

### ದೇವರೊಲ್ಮೆಯಿಂದ ಒಬ್ಬನು ಒಳ್ಳೇ ಸ್ಥಿತಿವಂತನಾಗ ಬಹುದು

ಉಡು-ರಾಜಂ ಕಳೆಗುಂದಿ, ಪೇರ್ಚ–
    ದಿಹನೇ? ನ್ಯಗ್ರೋಧ-ಬೀಜಂ ಕೆಲಂ
ಶಿಡಿದುಂ, ಪೇರ್ ಮರನಾಗದೇಯೆ–
    ಳೆ ಗರುಂ ಎತ್ತ್ ಆಗದೇ? ಲೋಕದೊಳ್ ||
ಮಿಡಿ ಪಣ್ಣ್ ಆಗದೆ? ದೇವರೊಲ್ಮೆ–
    ಯಿರಲಿಕ್, ಕಾಲಾನುಕಾಲಕ್ಕೆ ತಾಂ
ಬಡವಂ ಬಲ್ಲಿದನಾಗನೇ, ನ–
    ರ, ನರಾ? ಕೇಳ್ ಬುದ್ಧಿಯುಂ ಪೇಳ್ವುದಾ! || 139 ||



# XV. ಪಾಠ

## SIGNS OF A GOOD AND OF A BAD WIFE

## ಹೆಂಡಿರಲ್ಲಿ ಗುಣವಂತಳ ಮತ್ತು ಗುಣಹೀನಳ ಲಕ್ಷಣಗಳು

(ಜೈಮಿನೀ ಭಾರತ)

ವಾರ್ಧಕ-ಷಟ್ಪದಿ

ಗಣಗಳ ಮತ್ತು ಗಣಮಾತ್ರೆಗಳ ಕ್ರಮ—

| | | | | | | | |
|---|---|---|---|---|---|---|---|
| 5 | 5 | 5 | 5 | 1ನೇ ಪದ, | | | |
| 5 | 5 | 5 | 5 | 2ನೇ ಪದ, | | | |
| 5 | 5 | 5 | 5 | 5 | 5 | 1 | 3ನೇ ಪದ, 1ನೇ ಗಣಸಾಲು (ಇದೇ ಎರಡು ಸಾರಿ) |

ಮಾವಂಗೆ ಭಾವಂಗೆ ಮೇಣ್ ಅತ್ತೆಗೈದೆ ಸಂ—
ಭಾವಿಸುತ, ಸೇವಿಸುತ, ಕಾಂತನಂ ಸದ್-ವ್ರತದಿ[1]—
ನೋವುತಿಹ ಯುವತಿಗಿಹ-ಲೋಕದೊಳ್ ಸು-ಕೃತ ಫಲಮಾಯತ್ತ
[ವೆಂತ್[2] ಅಲ್ಲದೇ? ||
ಪಾವಿನೆಂತ್[3] ಆವಿನೆಂತ್ ಅಡಿಗಡಿಗೆ ಮೊರದೆದ್ದು,
ಡಾವರಿಸಿ, ಸೇವರಿಸಿ, ಮನೆ-ಗೆಲಸಮಂ ಗೈಯು—
ದಾ ವನಿತೆ ಸಾವ್[4] ಅನಿತೆ; ಲೇಸ್ ಎನಿಸದಿಹಳ್[5] ತತ್-ಪತಿಗೆ, ತದ್-ಗೃಹ-
[ಜನಕ್ಕೇ! || 140 ||

1, ಸದ್-ವ್ರತದಿಂ ಓವುತ್ತ ಇರುವ. 2, ಅಂತೆ. 3, ಹಾವಿನಂತೆ. 4, ಸಾವಿನ ಅನಿತೇ. 5, ಎನ್ನಿಸದೆ ಇರುವಳೆ.

## PEOPLE NOT LIKELY TO BE SUCCESSFUL

## ಸುಗತಿಯನ್ನು ಹೊಂದದ ಜನರು

ಹೊಸ್ತಿಲಲಿ ಮರ-ಗೊಡ್ಡಿಯೆಂತೆ ಕುಳ್ತ್[1] ಇರ್ಪವನ,
ಮಸ್ತಕವನೆರಡು ಕೈಯಿಂ ತುರಿಸಿ ಕೊಂಬುವನ,[2] [ಡಿವನಾ,[4] ||
ವಿಸ್ತರದ ಜೂಜುಗಳ್ ಗೆಳಸುವನ, ಪಿರಿದುಂಬುವನ,[3] ಮದ್ಯಮಂ ಕು

1, ಕೂತು ಇರುವವನ (ಅಂದರೆ ಮೈಗಳ್ಳನ). 2, ಕೊಳ್ಳುವವನ (ಹೇಸಿಕೆಯುಳ್ಳವನ). 3, ಉಣ್ಣುವವನ. 4, ಕುಡಿಯುವವನ.

ಅಸ್ತಮಯದುದಯ-ಕಾಲದಿ ನಿದ್ರೆ ಗೈ[1]ವನಾ—
ತ್ಮ-ಸ್ತುತಿಯ ಪರ-ನಿಂದೆಯವನ, ಸಾಧಿಸಿ ಪರರ
ವಸ್ತುವಂ ಕಳುವನ, ನಿರುದ್ಯೋಗದವನ ಸಿರಿ ತೊ[2]ಲಗಿದೆಲ್ಲದೆ ಮಾ
[ಣ್ಬು[3]ದೇ? || 141 ||

1, ಗೈಯುವವನ. 2, ತೊಲಗಿದ್ದು. 3, ಮಾಣುವದೇ.



EVERY MAN HAS TO BEAR HIS OWN BURDEN

ಪ್ರತಿ ಮನುಷ್ಯನು ತನ್ನ ತನ್ನ ಭಾರ ಹೊತ್ತು ಕೊಂಡಿರ ಬೇಕು

(ಸೋಮೇಶ್ವರ-ಶತಕ)

ಪ್ರಸಂಗ (4ನೇ ಶ್ಲೋಕ ನೋಡ ಬೇಕು)

ಮಡಯಂಗ್ ಉತ್ತಮ ವಿದ್ಯ ಬೆಟ್ಟ;
ಕುರು[1]ಡಂಗಂ ಮಾರ್ಗವೇ ಬೆಟ್ಟ; ಕೇಳ್,
ಬಡವಂಗ್ ಎಲ್ಲರ ದ್ವೇಷ ಬೆಟ್ಟ;
ಜಡ-ದೇಹಿಂ[2]ಗೇ ಜರೇ ಬೆಟ್ಟ; ಮುಪ್ಪ ||
ಅಡಸಿದ್ದಾತಗೆ ಬಾಳ್ವೆ ಬೆಟ್ಟ;
ಋಣವೇ ಪೇರ್ ಬೆಟ್ಟ ಮೂ-ಲೋಕದೊಳ್;
ಕಡು ಲೋಭಿಂಗ್ ಅಣು ಬೆಟ್ಟವೇ, ನ—
ರ, ನರಾ! ಕೇಳ್ ಬುದ್ಧಿಯಂ ಪೇಳ್ವುದಾ. || 142 ||

1, ಕುರುಡನಿಗೆ. 2, ದೇಹಿಗೆ.



## MAN BECOMES ESTEEMED BY HIS GOOD DEEDS

### ತಾನು ಮಾಡುವ ಒಳ್ಳೇ ಕೆಲಸದಿಂದ ಮನುಜನು ಮಾನಸ್ಥನಾಗುತ್ತಾನೆ

ಪ್ರಜೆಯಂ ಪಾಲಿಸ ಬಲ್ಲ[1]ಡೆಂತ–
 ನರಸಂ; ಕೈಯಾಶೆಯಂ ಬಿಟ್ಟ ಮಾ–
ನುಜ ಮಂತ್ರೀಶ್ವರ; ತಂದೆ ತಾಯಿ
 ಸಲಹಲ್ ಬಲ್ಲಾತನೇ ಧಾರ್ಮಿಕಂ; ||
ಭಜಕಂ, ಸತ್ಯದಿ ಭಕ್ತಿಯು[2]ಳ್ಳ–
 ಡೆ; ಭಟಂ, ನಿರ್ಭೀತ ತಾನ್ ಆದಡೇ;
ನಿಜ ಮಾತ್ ಆಡುವನಾರ್ಯನೇ, ನ–
 ರ, ನರಾ! ಕೇಳ್ ಬುದ್ಧಿಯಂ ಪೇಳ್ವುದಾ! || 143 ||

1, ತಿಳಿದರೆ. 2, ಇದ್ದರೆ.

## THERE ARE THINGS WITHOUT ANY PARALLEL

### ಅತುಲ್ಯವಾದ ವಸ್ತುಗಳುಂಟು

ಸರಿಯೇ ಸೂರ್ಯಗೆ ಕೋಟಿ ಮಿಂಚು-
 ಬುಳುಗಳ್? ನಕ್ಷತ್ರಮಿಷ್ಟ ಆದೊಡಂ,
ದೊರೆಯೇ ಚಂದ್ರಗೆ? ಜೀವ-ರತ್ನ–
 ಕೆಣೆಯೇ ಮಿಕ್ಕ ಆದ ಪಾಷಾಣಮಿನ್ನ ||
ಉರಗೇಂದ್ರಂಗೆ ಸಮಾನವೊಳ್ಳೆ–
 ಯೆ? ಸು-ಗಂಧಕ್ಕ ಈಡೆ ಬೆಳ್ಳುಳ್ಳಿ? ಸ–
ಕ್ಕರೆಗುಪ್ಪಂ ಸರಿ ಮಾ[1]ಳ್ಪರೇ, ನ–
 ರ, ನರಾ? ಕೇಳ್ ಬುದ್ಧಿಯಂ ಪೇಳ್ವುದಾ! || 144 ||

1, ಮಾಡುವರೇ?

## IT IS VERY DIFFICULT FOR A BAD MAN TO BECOME CHANGED

ನೀಚನು ಹೊಸ ಅಂದದವನಾಗುವದು ಬಲು ಕಷ್ಟವಾಗಿದೆ

ಹಿಡಿಯಲ್, ಪಿಂಗದೆ ವತ್ಸರಂ ನ–
ಡೆಯದೇ? ದುರ್-ಗಂಧಮೇ, ಘಾಳಿಯೊಳ್
ತಡೆಯಲ್, ನಾರದೆ? ನಾಯ್ಯ ಬಾಲ-
ಸೆಡೆಯಂ ಕಟ್ಟಲ್ಕೆ[1], ಚನ್ನ ಅಪ್ಪುದೇ? ||
ಸುಡೆ[2], ಚೇಳಂ ತೆಗೆಯಲ್ಕೆ, ಸುಮ್ಮ–
ನಿಹುದೇಯೇನ್ ಅಂದು[3]ಮೆಷ್ಟ ಆದೊಡಂ[4],
ಬಿಡ ತನ್ನ ಅಂದವ ನೀಚ ತಾಂ, ನ–
ರ, ನರಾ! ಕೇಳ್ ಬುದ್ಧಿಯಂ ಪೇಳ್ವುದಾ! || 145 ||

1, ಕಟ್ಟಲಿಕ್ಕೆ. 2, ಅದು (ಚೇಳು) ಸುಡಲಾಗಿ, ಚೇಳನ್ನು. 3, ಅಂದುಂ, ಅಂದರೂ. 4, ಆದರೂ.

## IMPOSSIBILITIES

ಆಗದ ಕಾರ್ಯಗಳು

(ದಾಸರ ಪದ)

ರಾಗ ಭೈರವಿ; ತ್ರಿವಿಡೆ ತಾಳ

ಗಣಗಳ ಮತ್ತು ಗಣಮಾತ್ರೆಗಳ ಕ್ರಮ—

ಪಲ್ಲ

3 | 4 | 3 | 1 | 3 | 4 || 1ನೇ ಪದ
3 | 4 | 3 | 4 | 3 | 4 | 3 | 1 | 2ನೇ ಪದ
3 | 4 | 3 | 4 | 3 | 4 | 3 | 4 || 3ನೇ ಪದ

ಪದಗಳು

3 | 4 | 3 | 4 | 3 | 4 | 3 | 1 | 1ನೇ ಪದ
3 | 4 | 3 | 4 | 3 | 4 | 3 | 1 || 2ನೇ ಪದ, 1ನೇ ಗಣಸಾಲು (ಇದೇ ಎರಡು [ಸಾರಿ)

ಕೇಳೊ, ಕೇಳೋ, ಮನುಜನೆ! ಕೇಳೊ, ಕೇಳೋ! ||
ಕೇಳು, ಲೋಕದ ಬಾಳನೊಗೆತನ
ಕಾಳು ಮಾಡದೆ ಬಿಡುವದೆ?
ನಾಳೆ ಯಮನಾಳುಗಳು ಬೇಗದಿ
ಕಾಲ ಹಿಡಿದೆಳದೊಯ್ಯದಿರುವರೇ? || ಪಲ್ಲ ||

ಕೋತಿ-ಕಂಠಕೆ ರತ್ನ-ಹಾರವ ಕೋತು[1] ಹಾಕಲು ಬಲ್ಲುದೆ?
ಪ್ರೀತಿಯಿಂದಲೆ ಕತ್ತೆ ಘೊಲ್-ಓಗರವನಿಕ್ಕಲು, ರುಚಿಪುದೇ[3]? ||
ಜಾತಿ-ರತ್ನದ ತಕ್ಕ ಮೌಲ್ಯವ ಕುರುಬನಾ ಮನವೆರಿವುದೆ?
ರೀತಿಯಿಂದಲೆ ಪೇಳ್ವ ಧರ್ಮದ ರೀತಿ ಮೂರ್ಖಗೆ ತಿಳಿವು
[ದೇ? || 146 ||

1, ಅಂದರೆ ಪೋಣಿಸಿ (ಕೋಯು ಎಂಬದು ಅದಕ್ಕೆ ಮೂಲ). 2, ಕತ್ತೆಗೆ ಹಾಲ್ ಇತ್ಯಾದಿ. 3, ರುಚಿಸುವದೇ.

ಕುರುಡನಿಗೆ ಕರ್ಪೂರ-ದೀಪವ ಕಾಣಿಸಿದರೆವ ಕಾಣ್ಬನೆ[1]?
ಬರಿದೆ ಕಿವುಡಗೆ ಗೀತ-ವಾದ್ಯವ ಬಾರಿಸಲಿಕೆವ ಕೇಳ್ವನೇ? ||
ಕರದು ಮೋಟನ, ಬರದು ತೋರ್ ಎನೆ[2], ಬರದು ತೋರಿಸ ಬಲ್ಲನೆ?
ಕರುಣೆಯಿಲ್ಲದವಂಗೆ ದುಃಖವನೊರೆಯೆ, ಕರುಣಿಸಲಾಪೆ[3]
[ನೇ? || 147 ||

1, ಕಾಣುವನೆ. 2, ಎನ್ನಲು. 3, ಆಗುವನೇ, ಬಲ್ಲನೇ.

ನೀಚನಿಗೆ ಸಂಪತ್ತು ಬಂದರೆ, ನೀಚತನವನು ಬಿಡುವನೆ?
ನಾಚಿಕೆಯು ಬಿಟ್ಟ ಇರ್ಪ[1] ಮನುಜನು ಹಿಂದು ಮುಂದನು ನೋ[2]
[ಳ್ಪನೇ? ||
ಬಾಚಿ ಕೊಂಬ್ ಆ ದುರುಳ ರಾಜನು, ಬಡವನೆಂದೊಡೆ, ಬಿಡುವನೆ?
ನೀ ಚತುರನಾಗ್ಯ ಇದ್ದು ದೇವರ ನೆನಸಲೊತನು ಬಿಡುವ
[ನೇ? || 148 ||

1, ಇರುವ. 2, ನೋಡುವನೇ.

# XVI. ಪಾಠ

## NEAR THE SEA-SHORE

### ಸಮುದ್ರ-ವರ್ಣನೆ

(ಚನ್ನಬಸವ ಪುರಾಣ)

ವಾರ್ಧಕ-ಷಟ್ಪದಿ (140ನೇ ಶ್ಲೋಕ ನೋಡ ಬೇಕು)

ಮ[1]ಕರ-ಕರ್ಕಟ-ಕಮಠ-ಶಾಲೂರ-ಕಿಂಚುಲುಕ-
ನಿಕರದಿಂ, ತಿ[2]ಮಿ-ತಿಮಿಂಗಿಳ-ಮುಖ್ಯ-ಜಲ-ಚರ-
ಪ್ರಕರದಿಂ, ಮೊಸಳೆ ನೀರ್-ಆನೆ ನೀರ್-ವಾವು ನೀರ್-ಉಡುಗಳ
[ಸಮೂಹದಿಂದಾ, ||
ಅಕಳಂಕ ರತ್ನಂಗಳೆಳ್ಗೆಯಿಂದ್, ಐತ[3]ಪ್ಪ
ಸಕಲ ಭಂಗದ ಸುಳಿಯ ಸವ್ವಳಿಗಳಿಂದ್, ಒಳಗೆ
ತಕಪಕನೆ ಕುದಿವ ವಡಬಾಗ್ನಿಯ ಕಳಾಪದಿಂದ್ ಆ ಕಡಲ್
[ಕಣ್ಗ ಎಸೆದು[4]ದೂ. || 149 ||

1, ಮಕರ ಇತ್ಯಾದಿಗಳ ನಿಕರದಿಂ. 2, ತಿಮಿ, ತಿಮಿಂಗಿಳ ಮುಂತಾದ ಜಲಚರಗಳ ಪ್ರಕರದಿಂ. 3, ಐತರುವ. 4, ಎಸೆಯಿತು.

ಅಡಿಗೆಡಿಗೆ ನಡ[1]ವ ಪೇರ್ ವಡಗುಗಳ ಬೆಡ[2]ಗುಗಳ,
ಘುಡು-ಘುಡಿಸುತೇಳ್ವ ಮತ್ಸ್ಯಾಳಿಗಳ ಕೇಳಿಗಳ,
ಬಿಡ-ಬಿಡದೆ ನಡೆ-ತಪ್ಪ ವೀಚಿಗಳ, ರೋಚಿಗಳೆಸುಗುಳ್ವ ನವ
[ರತ್ನಂಗಳಾ, ||
ಎಡೆಯೆಡೆಯೊಳಡಿಕಿರಿದ ದೋಣಿಗಳ ಶ್ರೇಣಿಗಳ,
ಸಿಡಿ-ಸಿಡಿದುರುಳ್ವ ಜಲ-ಬಿಂದುಗಳ ಪೊಂದುಗಳ
ತಡಿ-ತಡಿಗೆಡ[3]ರ್ವ ಜಲದೊತ್ತುಗಳ, ಮುತ್ತುಗಳ ಪದಪಿನಿಂ ಕಡ
[ಲೆಸೆದುದೂ. || 150 ||

1, ನಡೆಯುವ. 2, ಈ ಶ್ಲೋಕದಲ್ಲಿರುವ "ಬೆಡಗುಗಳ" ಮುಂತಾದ ಎಂಟು ಮುಖ್ಯವಾದ ಸಂಬಂಧವಿಭಕ್ತಿಗಳನ್ನು "ಪದಪಿನಿಂ" ಎಂಬದಕ್ಕೆ ಹಾಕ ಬೇಕು. 3, ಅದರುವ.

## A KING'S PALACE

### ಅರಮನೆಯು

ನೀ[1]ಲ ರನ್ನಂಗಳಿಂ ನೆಲ-ಗಟ್ಟು, ಪಳಕುಗಳ
ಸಾಲ್ ಎಸೆವ ಭಿತ್ತಿಗಳ್; ವಜ್ರದೊಳ್ ಗಂಬಂಗ-
ಳಾಲಲಿತ ಪಚ್ಚೆಗಳ ತೊಲೆ, ರನ್ನ-ಬೋದುಗೆಗಳು ಪ್ರವಾಳಂಗ
[ಳಿಂದಾ; ||
ಮೇಲ್ ಎಸೆವ ಜಂತೆಗಳ್ ತೋರ್ಪ ನವ ಪುಷ್ಯರಾ-
ಗಳಯಿಂ; ಸವದ ಬಾಗಿಲ್ ಪೊಂ-ಗದಂಗಳಿಂ.
ಪೇ[2]ಳಲಚ್ಚರಿಯಾದುದರಮನೆಯುಂ ಬಲು ಯುಕ್ತಿಯಿಂದ ನಿರ್ಮಿ
[ತಮಾಗ್ಯೆ ಇರೇ. || 151 ||

1, ನೀಲ ರನ್ನಂಗಳಿಂ ನೆಲಗಟ್ಟೂ ಭಿತ್ತಿಗಳೂ (ನಿರ್ಮಿಸಿದ್ದವು); ವಜ್ರದೊಳ್ ಗಂಬಂಗಳು; ಆಲಲಿತ ಪಚ್ಚೆಗಳಿರುವ ತೊಲೆ (ಮತ್ತು) ರತ್ನವಿರುವ ಬೋದುಗೆಗಳು ಪ್ರವಾಳಂಗಳಿಂದ (ನಿರ್ಮಿಸಿದ್ದವು) ಇತ್ಯಾದಿ. 2, ಪೇಳಲಿಕ್ಕೆ ಅಚ್ಚರಿಯು ಆದುದು (ಆಯಿತು); ಅರಮನೆಯು ಇತ್ಯಾದಿ.

ಎಸೆದವೆಲ್ಲ್ಯ ಅಲ್ಲಿ, ವಾಸ್ತು-ಕ್ರಮಂ ಬಿಡಿದು, ರಂ-
ಜಿಸುವ ಮಜ್ಜನ-ಶಾಲೆಯುಂ[1], ಸೂಪ-ಶಾಲೆ, ಶೋ-
ಭಿಸುವ ಭೋಜನ-ಶಾಲೆಯೊಮಂತ್ರ-ಶಾಲೆ, ನರ್ತನ-ಶಾಲೆ,
[ವಸ್ತ್ರ-ಶಾಲೇ, ||
ಮಿಸುಪ ಹಯ-ಶಾಲೆ, ಗಜ-ಶಾಲೆಯೋಲಗ-ಶಾಲೆ,
ಪೊಸ ಗೀತ-ಶಾಲೆಯೊಪ್ಪುವ ಶಯನ-ಶಾಲೆ. ಭೂ-
ವಿಸಲರಸು-ಠೀವಿಗುಳ್ಳ[2] ಅನಿತು ಶಾಲೆಗಳೊಪ್ಪಿದವು ರನ್ನ-ರಂಜ
[ನದೊಳೂ. || 152 ||

1, ಶಾಲೆಯೂ. 2, ಉಳ್ಳ ಅಂದರೆ ಇರುವ (=ಬೇಕಾಗಿರುವ).

[1]ಸಕಲ ಕೋಶದ ಗೃಹಂಗಳ್, ತೈಲ-ಘೃತ-ಗುಡ-
ಪ್ರಕರ-ರಸ-ಭಾಂಡದುಗ್ರಾಣದೊಳ್-ವನಿಗಳುಂ,
ಸುಕರ ಧಾನ್ಯದ ಕಣಜಗಳ್, ಸರ್ವ ವಿನಿಯೋಗದವರಿಪ್ಪ
[ಚಾವಡಿಗಳೂ, ||
[2]ಪ್ರಕಟತರ ತರು ಲತೆಗಳಿಂ ರನ್ನ-ಜಗಲಿ-ರ-
ಮ್ಯಕ ಸರಸಿ-ಕೃತಕಾದ್ರಿಗಳು ತರ-ತರದೊಳಿರಲ್ಕೆ;
ಅಕಳಂಕ, ಕೇಳ್, ಈ ವನಂ ಮೆ[3]ರೆದುದೆನಿತು ಲೋಕದ ವನ
[ಮಂಮುರೆ ಜ[4]ರೆವುತಾ. || 153 ||

1, ಸಕಲ ಕೋಶವುಳ್ಳ ಗೃಹಂಗಳು, ತೈಲದ (ಮತ್ತು) ಘೃತದ (ಮತ್ತು) ಗುಡದ ಪ್ರಕರವಿರುವ ರಸ-ಭಾಂಡದ ಉಗ್ರಾಣದ ಒಳ್ವನಿಗಳೂ. 2, ಪ್ರಕಟತರವಾದ ತರು (ಮತ್ತು) ಲತೆಗಳಿಂದಲೂ ರನ್ನ-ಜಗಲಿಗಳಿಂದಲೂ ರಮ್ಯಕವಾದ ಸರಸಿಯು (ಸರಸಿಯಲ್ಲಿ) ಕೃತಕ ಅದ್ರಿಗಳು. 3, ಮೆರೆಯಿತು. 4, ವನವನ್ನು ಜರೆಯುತ್ತ.

ತರ-ತರದೊಳೆ[1]ಸೆವ ಬಾಗಿಲ ಗೋಪುರಂಗಳೊಳ್
ಕರುವಿಟ್ಟ ಪುತ್ತಳಿಗಳಿಂ, ಭಿತ್ತಿ-ಭಿತ್ತಿಯೊಳ್
ಬರೆದ ನಾನಾ ತೆರದೊಳೆಸೆವ ಬೊಂಬೆಗಳಿಂದ, ಕಸ್ತೂರಿ ಕುಂಕು
[ಮದೊಳೂ ||
ಪೊರೆದ ಸಾರಣೆಗಳಿಂ, ಕಾರಣೆಗಳಿಂ, ಚಿತ್ರ-
ತರ ಪಟ್ಟೆ ಜಲ್ಲಿ ಕನ್ನಡಿ ಕಲಶ ಮು[2]ತ್ತುಗಳ
ಪರಿ-ಪರಿಯ ರನ್ನಗಳ ಕೊಚ್ಚುಗಳ ಮೇಲ್-ಕಟ್ಟಿನಿಂ ಕರಂ
[ಚಲ್ವ [3]ಆದುದೂ. || 154 ||

1, ಎಸೆಯುವ. 2, ಮುತ್ತುಗಳ (ಮತ್ತು) ಪರಿಪರಿಯ ರನ್ನಗಳ ಕೊಚ್ಚುಗಳ ಮೇಲ್ಕಟ್ಟಿನಿಂ. 3, ಆಯಿತು (ಇದಕ್ಕೆ ಅರಮನೆಯೆಂಬದು ಆಖ್ಯೆ).

ಬಾಗಿಲ್ಗಳೆರ್ ಎಸೆದವೆರಮನೆಗೆ, ಹೇಮ-ಮಯ—
ಮಾಗಿ ತೋ[1]ರ್ಪವು; ವಿಶಾಲಂಗಳಿಂದ್ ಅವರೆವರ
ಮೇಗೆ ಮುಗಿಲಂ ಮುಟ್ಟುವುಪ್ಪರಿಗೆಗಳ್ ಮೆರದವೆರು, ಮಣಿ-
[ಖಚಿತಮಾಗೀ; ||

ಭೂ-ಗಗನ-ಪಾತಾಳದೆರ[2]ಮನೆಗಳಿದರೊಡನೆ
ತೂಗೆ, ಸರಿ ಬಾರವೆಂದ್ ಎಲ್ಲರುಂ ಪೊಗಳುವೆಂ[3]ತ್.
ಆಗಲಾಗೆತ ಜನರು ತಮ್ಮ ಗೃಹ-ಸೌಖ್ಯಮಂ ಮರತು ಬಿಟ್ಟು,
[ಅಲ್ಲ್ಯಿ ಇರ್ದರೂ. || 155 ||

1, ತೋರುವವು. 2, ಅರಮನೆಗಳು, ಇದರೊಡನೆ ತೂಗೆ, ಸರಿ ಇತ್ಯಾದಿ. 3, ಅಂತೆ.

## A PUBLIC OFFICE

### ಚಾವಡಿ

(ಜೈಮಿನೀ ಭಾರತ)

ಪಳಕುಗಳ ನೆಲೆ-ಕಟ್ಟು, ಮರಕತಂಗಳ ಜಗಲಿ,
[1]ಪೊಳೆವ ನೀಲದ ಭಿತ್ತಿ, ಬಜ್ಜರದ ಕಂಭಮುರೆ
ತೊ[2]ಳಪ ವೈಡೂರಿಯದ ಮದನಕೈ, ಮಿರುಪ ಗೋಮೇಧಿಕದ
[ಬೋದಿಗೆಗಳೂ, ||

ಸಲೆ ಪುಷ್ಯರಾಗದ ತೊಲೆಗಳೆಸೆವ ಮಾಣಿಕಂ—
ಗಳ ಲೋವೆ, ಮುತ್ತುಗಳ ಸೂಸಕಂ, ಮಿನುಗುವ ಪ—
ವಳದ ಪುತ್ಥಳಿ, ಪೊನ್ನ ಪೊದಕೆ ರಂಜಿಸಿತು ಚಾವಡಿಯು ಸೊಂಪ್
[ಬಳ-ಗಡೆಯುಲೀ. || 156 ||

1, ಪೊಳೆಯುವ. 2, ತೊಳಯುವ (ಅಥವಾ ತೊಳಪಿನ.)

ಅಂಚೆಗಳ್, ಕೊಳ-ವಕ್ಕಿಗಳ್, ಜೊನ್ನ-ವಕ್ಕಿಗಳ್,
ತಂಚೆಗಳ್, ಗಿಳಿಗಳೆಣೆ-ವಕ್ಕಿಗಳ್, ಪರಮೆಗಳ್,
ಕೊಂಚೆಗಳ್, ಕೋಗಿಲೆಗಳೆಲ್ಲ್ಯ ಅಲ್ಲಿ ರಂಜಿಸಿತು ಸಜ್-ಜೀವ-
[ಭಾವದಿಂದಾ. ||

ಪಂಚಾನನಾದಿ[1]-ಮೃಗ-ತತಿ, ಗಜ-ಹಯಾವಳಿ, ಸು-
ರಂಚಿ-ಸೃಷ್ಟಿಯೊಳೆಲ್ಲ ಮೂ-ಜಗದ ನಾನಾ ಪ್ರ-
ಪಂಚಗಳ ಚಿತ್ರ-ಪತ್ರಂಗಳೆಸೆದಿರ್ದವಾ ಸಭೆಯೊಳ್, ಮನೋ[2]-ಹರ
[ಮೆನೇ. || 157 ||

1, ಪಂಚ-ಆನನ ಮುಂತಾದ ಮೃಗಗಳ ತತಿ, ಗಜ (ಮತ್ತು) ಹಯಗಳ ಆವಳಿ, ಸುರಂಚಿಯು (ಸುರಚಕನ, ದೇವರ). 2, ಮನೋಹರವು ಎನ್ನಲಿಕ್ಕೆ (ಎಂಬಂತೆ.)

ನೀಲ-ಮಣಿ-ಕಾಂತಿಗಳ ಕತ್ತಲೆಯು, ಮುತ್ತುಗಳ
ಧಾಳಗಳ ಕೌಮುದಿಯು, ಮಾಣಿಕದ ರಸ್ಮಿಗಳ
ಬಾಲಾತಪದ, ವಿದ್ರುಮ-ಚ್ಛವಿಯ ಸಂಜೆ-ಗೆಂಪಿನ ಪಗಲಿರುಳ್ಗಳಲ್ಲೀ[1]||
ತೀಲದಿಹವಲ್ಲದೆ ದಿವಾ-ರಾತ್ರಿಯುಂಟೆ? ಎಂಬ[2]
ಕಾಲ-ಭೇದವನರಿಯದಾ[3] ಸಭೆಯು ಮಿಕ್ಕ ಅರಸ-
ರೋಲಗದ ಮಂಟಪದ ಸೌಭಾಗ್ಯಕೆಂಟು ಮಡಿಯಾಗ್ಯ ಇರ್ದುದೆ[4]
[ಚ್ಚರಿಯೆನೇ. || 158 ||

1, ಆ ಬೇರೆ ಬೇರೆ ಬಣ್ಣದಿಂದ ಆಗುವ ಹಗಲಿರುಳುಗಳು ಅಲ್ಲಿ ತೀಲದೆ ಇಹವು (ಇರುವವು), ಅಲ್ಲದೆ (ಅಂದರೆ ಬೇರೆ ವಿಧವಾಗಿ). 2, ಎಂಬಂತೆ. 3, ಅರಿಯದು (ಅರಿಯ ಕೂಡದು); ಆ ಸಭೆಯು ಇತ್ಯಾದಿ. 4, ಇತ್ತು.

ಕಸ್ತೂರಿ ಜವಾದಿಗಳ ಸಾರಣೆಯು[1], ಕುಂಕುಮ-ಪ-
ರಿಸ್ತರಣದಗರು-ಚಂದನ-ಧೂಪ-ವಾಸಿತದ[2]
ವಿಸ್ತರದ, ಕರ್ಪೂರ ತೈಲದಿಂದ್ ಅಲ್ಲ್ಯ ಅಲ್ಲಿಗುರಿವ ಬೊಂಬಾಳಂ
[ಗಳಾ, ||

1, ಸಾರಣೆಯು, ಪರಿಸ್ತರಣದ, ವಿಸ್ತರದ, ಬೊಂಬಾಳಂಗಳ, ಜ್ವಾಲೆಗಳ ಎಂಬ ಸಂಬಂಧ ವಿಭಕ್ತಿಗಳನ್ನು 'ಸಭೆ' ಎಂಬದಕ್ಕೆ ಹಾಕ ಬೇಕು. 2, ಅಗರಿನಿಂದಲೂ ಚಂದನದಿಂದಲೂ ಧೂಪದಿಂದಲೂ ವಾಸಿತ (ಸ್ಥಿತಿಯ) ವಿಸ್ತರದ, ಮತ್ತು ಇತ್ಯಾದಿ.

ಶಸ್ತ್ರ-ರತ್ನ-ಪ್ರದೀಪ-ಜ್ವಾಲೆಗಳ[1] ಸಭೆ ಸ-
ಮಸ್ತ ಸೌಭಾಗ್ಯದಿಂದ್ ಒಪ್ಪುತಿರಲಾಗ ಭೂ-
ಪ-ಸ್ತೋಮ-ಸಹಿತ ಬಂದ್, ಅರ್ಜುನನ ವರ-ಸುತಂ ಕುಳ್ಳಿರ್ದನೋ[2]
[ಲಗದೊಳೂ. || 159 ||

1, ಶಸ್ತ್ರವಾದ ರತ್ನಗಳ ಹೊಳಪಿನ ಜ್ವಾಲೆಗಳ. 2, ಕೂತನು.

---

## XVII. ಪಾಠ

### A FOREST ON FIRE

### ಕಾಡು ಸುಟ್ಟದ್ದು

(ಭಾರತ)

ಜಾಮಿನಿ-ಷಟ್ಪದಿ (1ನೇ ಶ್ಲೋಕ ನೋಡ ಬೇಕು)

ತನು-ಗಿಡಿಯು ಧಳ್ಳ್-ಉರಿಯು ನಾಲಿಗೆ
ಕೊನೆಗಳಲ್ಲ್ಯ[1] ಆಡಿದವು ಕಡು ಲಾ-
ಗಿನಲಿ; ಲಂಬಿಸಿ ಚುಂಬಿಸಿದುದುರಿ ಲಲಿತ ನಂದನವಾ. | 160 |

1, (ಟೊಂಗಿಗಳ) ಕೊನೆಗಳಲ್ಲಿ.

ಹೊದರಿನಲಿ ಭುಗು-ಭುಗಿಲು ಭುಗಿಲೆಂದ್
ಒದದುದುರಿಯೆಂಬರವನೊಣಗಿದ[1]
ಬಿದಿರ ಮೆಳೆಯಲಿ ಧಗ-ಧಗಿಸಿ, ಛಟ-ಛಟ-ಛಟನೆ ಛಟಿಸೀ. ||
ಕದಳಿ-ಖರ್ಜೂರಾದಿ-ತರು-ಜಾ-
ಲದಲಿ ಸಿಮಿ-ಸಿಮಿ ಸಿಮಿಸಿ, ಮಾರುತ-
ವೊದಗೆ, ಗಹನೋದರದೊಳಗೆ[2] ಝಾಡಿಸಿತು ಘನ-ವಹ್ನೀ. || 161 ||

1, ಒದೆಯಿತು ಉರಿಯು ಅಂಬರವನು, ಒಣಗಿದ ಇತ್ಯಾದಿ. 2, ಗಹನ-ಉದರ.

ಜಂಬು-ಚೂತ-ಪಲಾಶ-ವಟ-ದಾ-
ಳಿಂಬ-ಬಿಲ್ವ-ತಮಾಲ-ಚಂಪಕ-
ನಿಂಬ-ಬಕುಳ-ಕಪಿತ್ಥ-ಕುಟಜವಶೋಕ-ಪುನ್ನಾಗಾ- ||

ತುಂಬುರೆರಳು-ಲವಂಗ-ಪೂಗ-ಕ—
ದಂಬ-ಗುಗ್ಗುಳ-ಸಾಲ-ತಿಲಕೋ[1]—
ಡುಂಬರಾದಿ-ದ್ರುಮ-ಕುಲವನಾಲಿಂಗಿಸಿತು ವಹ್ನೀ. || 162 ||

1, ತಿಲಕ-ಉಡುಂಬರ-ಆದಿ.

ಧರಿಣಿ-ಪತಿ, ಕೇಳ್! ಶರಭ, ಮೃಗ-ಪತಿ,
ಕರಿ-ಕಲಭ, ಶಾರ್ದೂಲ, ಸೂಕರ,
ಕರಡಿ, ಕಾಸರ, ಶಲ-ಮೃಗಾವನ[1]-ಖಡ್ಗ, ಗೋಮಾಯೂ, ||
ಎರಳೆ, ಮೊಲ, ಸಾರಂಗ, ವಾನರ—
ನೂರು ಕುರಂಗ ಪ್ರಮುಖ[2]-ಮೃಗ-ಕುಲ—
ಮುರುಬಿ ಬಿದ್ದುದು ಧಳ್ಳು[3]-ಉರಿಯ ಬೆಳ್ಳಾರ-ವಲೆಗಳಲೀ. || 163 ||

1, ಶಲ-ಮೃಗ, ಅವನ-ಖಡ್ಗ. 2, ಮುಂತಾದ. 3, ಧಳ್ಳುರಿಯೆಂಬ ಬೆಳ್ಳಾರ-ವಲೆಗಳಲೀ.

ಶುಕ, ಮರಾಳ, ಮಯೂರ, ಟಿಟ್ಟಿಭ,
ಪಿಕ, ಚಕೋರ, ಕಪೋತ, ವಾಯಸ,
ಬಕ, ಪದಾಯುಧ, ಚಕ್ರವಾಕ, ಕಳಿಂಗ, ಕಲವಿಂಕಾ ||
ಕುಕಿಲ ಸಾರಸ, ಕಾಕ-ರಿಪು, ಚಾ—
ತಕ, ಭರದ್ವಾಜಾದಿ-ಪಕ್ಷಿ-
ಪ್ರಕರ ಬಿದ್ದುದು ಬಿಗಿದ ಕೇಸ್ ಉರಿ[1]-ಕಣ್ಣಿ-ವಲೆಗಳಲೀ. ||164||

1, ಉರಿಯೆಂಬ ಕಣ್ಣಿ-ವಲೆಗಳಲೀ.

ಝುಳಕೆ ತಿಳಿ ಗೊಳದುದಕ[1] ಕಾದ್, ಉ—
ಚ್ಛಳಿಸಿದವು; ತನಿ ಗುದಿದು ಮತ್ಸ್ಯ[2]—
ವಳಿಗಳೆಂಬುಜದೆಸಳು ಸೀದವು; ತುಂಬಿಗಳು ಸಹಿತಾ ||

1, ಆ ಕಾಡಿನಲ್ಲಿದ್ದ ಕೊಳದ ಉದಕ. 2, ಮತ್ಸ್ಯಗಳ ಆಳಿಗಳು ತನಿ ಕುದಿದು, ಅಂಬುಜದ ಎಸಳು ಇತ್ಯಾದಿ.

ಹಿಳಿದು ಸಿಡಿದವು; ಚಾರು-ಚಂದ್ರೋ-
ಪಲ-ರಚಿತ-ಸೋ[1]ಪಾನ-ರತುನಾ-
ವಳಿಯ ರಾಶಿಗಳಿದ್ದಲಾದವು ಬಿದ್ದ ಕಿಡಿಗಳಲೀ. || 165 ||

1, ಆ ಕೊಳದ ನೀರಿಗೆ ಹೋಗುವಂಥ ಸೋಪಾನಗಳ.

ಇಟ್ಟಣಿಸಿ, ಛಿಟಿ-ಛಿಟಿಸಿ, ಶಿಖಿ ಪುಟ-
ವಿ[1]ಟ್ಟಿದೊಣಗಿಲು ಹೊದರಿನಲಿ; ಮಿಗೆ
ತೊಟ್ಟು ಕ[2]ಬ್ಬು-ಹೊಗೆ-ಝುಗೆಯು ಹೊರಳಿಯು ಕಿಡಿಯು ಗಡಣದಲೀ ||
ಹುಟ್ಟಿದುರಿ ಹೆಂ-ಮರದ ಸುತ್ತಲು
ಕ[3]ಟ್ಟಿತ್ತಲ್ಲಿಯ ತೊಡಕಿನಲಿ ಭುಗಿ-
ಲಿಟ್ಟು, ಕವಿದುದು ತುದಿಗೆ ಬಹು ಶಾಖೋಪಶಾಖೆಗಳಾ. || 166 ||

1, ಇಟ್ಟಿತು. 2, ಕಪ್ಪು ಹೊಗೆಯ ಝುಗೆಯ ಹೊರಳಿಯ (ಹೊರಳಿಯೊಳಗಿದ್ದ) ಕಿಡಿಯ ಗಡಣದಲಿ ಹುಟ್ಟಿದ ಇತ್ಯಾದಿ. 3, ಕಟ್ಟಿತು; ಅಲ್ಲಿಯ ಇತ್ಯಾದಿ (ಆ ಉರಿ) ಭುಗಿಲಿಟ್ಟು, ಕವಿಯಿತು ಶಾಖೆ-ಉಪಶಾಖೆಗಳ ತುದಿಗೆ.

ಹೊಗೆಯು ಹಬ್ಬುಗೆಯೇರಿಯಾಗಸ-
ವು[1]ಗಿದುದುರಿ-ನಾಲಿಗೆಯು ಗರಗೊ-
ಟ್ಟುಗೆಯು ತೊಳಲಿಕೆ ತೆರಳಿಚಿತು ಖಗ-ಜಾತಿ-ಕೋಟಿಗಳಾ. ||
ಹಗಲ ತಡಿತಕೆ ಹೊ[2]ಕ್ಕುದೋ ಕಡೆ-
ಮುಗಿಲ? ಕಾಣೆ[3]ನು ದಿವವನೆತ್ತಣ
ಗಗನ-ಮಣಿ ನಕ್ಷತ್ರ ಚಂದ್ರಮರೆರಸ, ಕೇಳ್! ಎಂದಾ. || 167 ||

1, ಉಗಿಯಿತು. 2, (ಆ ಹೊಗೆಯು) ಹೊಕ್ಕಿತೋ. 3, ಕಾಣೆನು ದಿವವನು; ಎತ್ತಣ (ಯಾವ ಕಡೆಯಿಂದ, ಯಾವ ಪ್ರಕಾರವಾಗಿ) ಗಗನಮಣಿಯನ್ನೂ ನಕ್ಷತ್ರಗಳನ್ನೂ ಚಂದ್ರಮನನ್ನೂ (ಕಂಡೇನು?) ಅರಸ, ಇತ್ಯಾದಿ.

ಛಿಳಿ-ಛಿಳಿಲು-ಛಿಳಿ-ರವ[1]ದಿ, ಘುಳು-ಘುಳು-
ಘುಳು-ಘುಳು-ಧ್ವನಿ-ಮಯದಿ, ಕಪಿಗಳ
ಕಿಳ[2]-ಕಿಳಾಯುತ-ರವದಿ, ಮೃಗ-ಸಂಕುಳದ ಕಳ-ಕಳದೀ, ||
ಹಿಳಿದುರಿವ ಹೆಬ್-ಬಿದಿರ ಗಂಟಿನ
ಠಳ-ಠಳತ್ಕಾರದಿ ದಿಶಾ-ಮಂ—
ಡಲದ ಮೂಲೆಗಳೊಡೆ[3]ದುದದ್ಭುತವಾಯ್ತು ವನ-ದಹನಾ. ||168||

1, ರವದಿಂದ (ಅಥವಾ ರವದಲ್ಲಿ). 2, ಕಿಳ-ಕಿಳಾ ಆಯುತ. 3, ಒಡೆಯಿತು.

ಆ ಮಹಾ ವನ-ವಹ್ನಿ ಭೂತ[1]-
ಸ್ತೋಮ-ಸಂಹೃತಿ-ಕರ್ಮ-ಶೌರ್ಯೋ—
ದ್ದಾಮವವಗಾಹಿಸುತ ಬರುತಿರೆ, ಮುಂದೆ ಚೂಣಿಯಲೀ ||
ಧೂಮವಿಳಿದುದು; ಹುತ್ತಿನಲಿ ನಿಸ್[2]-
ಸೀಮ-ಜನಿತ ಜ್ವಾಲೆಗಳ ಝಳ—
ವಾ ಮ[3]ಹೋರಗ-ಚಯವ ಚುಂಬಿಸಿತೆರಸ, ಕೇಳ್! ಎಂದಾ. ||169||

1, ಭೂತಗಳ (ಜೀವಿಗಳ) ಸ್ತೋಮದ ಸಂಹೃತಿಯ ಕರ್ಮಕ್ಕೆ ಶೌರ್ಯದ ಉದ್ದಾಮವನ್ನು ಅವಗಾಹಿಸುತ. 2, ನಿಸ್ಸೀಮವಾಗಿ ಜನಿತ. 3, ಮಹಾ ಉರಗ.

ಹೂಸಿ, ಹುತ್ತಿನ ಮಣ್ಣು ರಂಧ್ರಿಸಿ,
ಕಾಸಿ[1]ದವು ಫಣಿ-ಕುಲವ; ಮೇಣ್ ಜೊ—
ಳ್ಳಸದಲಿ ಡಾವರಿಸಿದವು ಕಿಡಿ[2] ಧೂತ ಧೂಮದಲೀ; ||
ಆಸುರದ ಕಬ್ಬ-ಹೊಗೆಯು ಕವಚದ
ಕೇಸ್-ಉರಿ[3]ಗಳೊಳ ಬಿದ್ದುದುರಿ ಹೊರ
ಸೂಸಿ, ಹಿಡಿದವು ಹಾವುಗಳ, ಬಲು ಹೊದರ ಹೊರಳಿಗಳಾ. || 170 ||

1, ಇದಕ್ಕೆ ಜ್ವಾಲೆಗಳೆಂಬುದು ಆಖ್ಯೆ. 2, ಕಿಡಿಗಳು ಧೂತವಾಗುವಂಥ (ಹಾರ್ಯಾಡುವಂಥ). 3, ಉರಿಗಳು (ಹುತ್ತಿನ) ಒಳ ಬಿದ್ದುದು; ಉರಿಯು ಹೊರಗೆ ಸೂಸಿ, (ಓಡಿ ಹೋಗುವಂಥ) ಹಾವುಗಳನ್ನೂ ಹೊದರಿನ ಹೊರಳಿಗಳನ್ನೂ ಹಿಡಿದವು.

ಹೆಡೆಯ ಮಣಿಗಳ ಕಂಡು, ಸೂಸಿದ
ಕಿಡಿಗಳೆಹಹಾಯೆನಲು; ಶಿರಗಳ
ಕೊಡಹಿ, ಮರುಗಿದರುರಗಿಯರು, ಮರಿಗಳಿಗೆ ಮೈ ಚಾಚೀ;||
ಕಡು ಹೊಗೆಯ ಕೇಸ್-ಉರಿಯ ಕಿಡಿಗಳ
ಗಡಣದಲಿ ಕಾರ್ ಎದ್ದು, ಮೈಗಳ
ಕೊಡಹಿ, ಬಿಸು-ಸುಯ್ಯುತ್ತ, ಮುಗ್ಗಿದವಹಿಗಳುರಿಯೊಳಗೇ.||171||



## XVIII. ಪಾಠ

### A HUNTING PARTY

### ಬೇಟೆಯಾಡಿದ್ದು

(ಜೈಮಿನೀ ಭಾರತ)

ವಾರ್ಧಕ-ಷಟ್ಪದಿ (140ನೇ ಶ್ಲೋಕ ನೋಡ ಬೇಕು)

ತಪ್ಪ-ತಪ್ಪಲೊಳೆಲ್ಲಿಗೆಲ್ಲಿ, ಮಂಜುಗಳೆಸೆವ
ಕಪ್ಪ-ಕಪ್ಪನೆಯ ಗಿರಿಗಳ ಪರ್ಬುಗೆಗಳಂತೆ,
ಬಪ್ಪ ಬಪ್ಪ್ ಎಳೆ ನಾಯ್ಗಳಂ ಹಾಸೊಳಾಂತು[1] ಬಂದುದು [2]ಶಬರ-ಸೇ
[ನೆ. ಬಳಿಕಾ||
ಸೊಪ್ಪು-ಸೊಪ್ಪುಗಳ ಮೆಳೆ-ಮೆಳೆಗಳಂ ಸೋವುತ್ತ,
ತಪ್ಪ-ತಪ್ಪದೆ ಶರ-ಶರಂಗಳಂ, ತೆಗದೆಚ್ಚು[3],
ತೊಪ್ಪ-ತೊಪ್ಪನೆ ಮೃಗ-ಮೃಗಂಗಳಂ ಕೆಡಹಿದರ್ ಕಾನನದೊ
[ಳೇಂ[4] ವೇಳ್ವೆನೂ? ||172||

1, ಆತು (ಆನು ಎಂಬದು ಅದಕ್ಕೆ ಮೂಲ). 2, ಇದು ಆಖ್ಯೆಯಾಗಿದೆ. ಕಪ್ಪು ಮೈಯವರಾದ ಶಬರರು ಬರುವದು ಕಪ್ಪು ಗಿರಿಗಳ ಪರ್ಬುಗೆಗಳಂತೆ ಕಾಣಿಸಿತು. 3, ಎಸೆದು. 4, ಏನು ಹೇಳುವೆನು?

ಚಾಪ ಬಾಣಂಗಳಂ ಪಿಡಿದು ಕೊಂ[1]ಡವರೆಲ್ಲ—
ದಾಪ-ಗಾಪ-ಗಗಳಮತಿಕ್ರಮಿಸುತೋಡುತಿಹ
ಚಾಪಲ-ಭ್ರೂ-ಲತೆಯ ವನ-ಲ[2]ಕ್ಷ್ಣಾನನ-ಪುಳಿಂದಿಯರ್ ತಮ್ಮ
[ತಮ್ಮಾ ||

ಓಪರಂ ಬೞಿ-ವಿಡಿದು, ಬರುತಿರ್ದರಾಗ ಸ—
ಲ್ಲಾಪದಿಂದ್, ಎಸೆವ ಹರಿ ಹರಿಣ ಕರಿ ಚಮ[3]ರಿಗಳ
ರೂಪಂಗಳವಯವದೊಳಾರಾಜಿಸಲ್ಕೆ, ಅವಕೆ ತಾವೆ ದೇಹಂಗ
[ಳಾಗೀ. || 173 ||

1, ಅಂದರೆ ಗಂಡಂದ್ಯರಲ್ಲದೆ, ಆಪ-ಗ ಆಪ-ಗಗಳಂ ಅತಿಕ್ರಮಿಸುತ ಇತ್ಯಾದಿ. 2, ವನ-ಲಕ್ಷ್ಣದ ಆನನವುಳ್ಳ. 3, ಚಮರಿಗಳಾದಿ ಮೃಗ-ರೂಪಗಳು (ಆ ಪುಳಿಂದಿಯರ) ಅವಯವದೊಳ್, ಅವಕ್ಕೆ (ಆ ಅವಯುವಗಳಿಗೆ) ತಾವೆ (ಆ ರೂಪಗಳು ತಾವೆ) ದೇಹಗಳಾಗಿ, ಆರಾಜಿಸಲ್ಕೆ (ಆರಾಜಿಸುವಂತೆ).—ಆ ಹೆಂಗಸರು ಚಂದಾದ ಹರಿ ಮುಂತಾದ ಮೃಗಗಳಿಗೆ ಹೋಲಿದರಷ್ಟೇ.

ಸೊಕ್ಕ್-ಆನೆಗಳ ಸೊ[1]ಗಡನೆರ್ವ ಕತ್ತುರಿಯ ಮೃಗ—
ದಿಕ್ಕೆಗಳನೆಲ್ಲ್ಯ ಅಲ್ಲಿ ಪುಣುಗಿನ ಜವಾದಿಗಳ
ಬೆಕ್ಕುಗಳ ಬಿಡೆಯವಾಡ್ಯ ಉಂ[2]ಬ್ ಹೊಲಬನರಸುವ ಕಿರಾ[3]ತರಂ
[ಗ-ಚ್ಛವಿಗಳೂ, ||
ಅಕ್ಕರಿಂದ್ ಅವರವರ ತನು-ಪರಿಮಳಂಗಳ್ಗೆ
ತುಕ್ಕುವೆಳೆ ದುಂಬಿಗಳ ಬಳಗಂಗಳೆಂಬ್ ಅಂತೆ,
ಪೊಕ್ಕು ಪೊಕ್ಕ್ ಅಡವಿಯೊಳ್ ಕಣ್ಗೆ ಕಾಣಿಸುತಿರ್ದವೇನ್ ಎಂಬೆ
[ನಚ್ಚರಿಯನೂ? || 174 ||

1, ಸೊಗಡನ್ನೂ --- ಇಕ್ಕೆಗಳನ್ನೂ --- ಹೊಲಬನ್ನೂ ಅರಸುವ ಕಿರಾತರ ಛವಿಗಳು ---- ಕಾಣಿಸುತಿರ್ದವು ಎಂಬಂತೆ ಗ್ರಹಿಸ ಬೇಕು. 2, ಆಡಿ ಕೊಳ್ಳುವ. 3, ಆ ಕಿರಾತರ ಅಂಗಗಳ ಛವಿಗಳು ಕಣ್ಣಿಗೆ ಕಾಣಿಸುತ್ತಿದ್ದವು. ಎಲ್ಲಿಯೆಂದರೆ, ಅವರು ಪೊಕ್ಕು ಪೊಕ್ಕ ಅಡವಿಯೊಳು. ಅದರೊಳಗೆ ಯಾತರಂತೆ ಕಾಣಿಸಿದವೆಂದರೆ, ಹೇಳಿದಂಥ (ಕಪ್ಪಾದ) ಎಳೆ ದುಂಬಿಗಳ ಬಳಗಗಳಂತೆ.

ಇದೆ ಪಂದಿ ಕೆದರಿದ ನೆಲಂ! ನೋಡ್, ಎಲಿದೆ[1] ದಂತಿ
ಕದಡಿದ ಕೊಳಂ! ತೋರ್, ಎಲಿದೆ ಪುಲಿಯೊಗಿದ ಮೃಗದ
ಮಿದುಳಿತ್ತಲಿದೆ ಸಿಂಗಮೆರಗಿದಾನೆಯ ತಲೆಯ ಮುತ್ತ್, ಉದುರಿ
[ನೆತ್ತರೊಡನೇ! ||
ಇದೆ ವನ-ಮಹಿಷನೊದ್ದಿ ಕೊಂಡ ಮರ-ದಿಗುಡಿತ್ತ–
ಲಿದೆಕೊ ಸಾರಂಗಮಿಕ್ಕಡಿ ಗೈದ ಪಾವ್! ಇತ್ತ–
ಲಿದೆ ಪುಲ್ಲೆಗಳ ಪಕ್ಕೆ-ಮರಿಗಳಿಕ್ಕೆಗಳೆಂದು, ಪರಿದರ್[2] ಪುಳಿಂದರೆಂ
[ದೂ. || 175 ||

1, ಎಲೆ, ಇದೆ (ಈ ಸ್ಥಳವೆ). 2, ಪರಿದರು.

ನಡೆ! ಪಜ್ಜೆ ವಿಡಿ! ಪೋಗು! ತಡೆ! ನಿಲ್ಲು! ಜಡಿ! ಬೊಬ್ಬೆ-
ಗೊಡು! ಪೊದರೊಳೆಡಗು! ಕೈ-ಗೆಡದಿರೆಸೆ! ನಿಡು ಸರಳ
ತೊಡು! ಕೆಲಕೆ ಸಿಡಿಯದಿರ್! ಪೊಡೆ! ಸಾರ್ಚು! ತುಡುಕು! ಮೊ
[ಗಸೆಡುಗು! ಮರಕೆಡರೊಡರ್ಚು! ||
ಅಡಗಿ ಪೊಯಿ! ಜಡಿ! ಕೋಲನೆಸು! ಮುಂದು-ಗಡೆ ನಾಯಿ
ವಿಡು! ಕೂಡೆ[1] ಪಡಿ-ತಳಸು! ಸೆಡೆಯದಿರ್! ಕೆಡೆಪೆಂಬ[2]
ನುಡಿಗಳೆಡಿಗೆಡಿಗೆ ಕಿವಿಗಿಡಿದುದೆಲ್ಲ[3] ಎಡೆಯೊಳೆಂದ್ ಅಡವಿಯೊಳ್,
[ಕಡು ಪೊಸತೆನೇ. || 176 ||

1, (ಉಳಿದವರ) ಸಂಗಡವೇ. 2, ಕೆಡುಹು! ಎಂಬ. 3, ಇಡಿಯಿತು (ನುಡಿಗಳೆಂಬದು ಆಖ್ಯೆ).

ಉಬ್ಬಿದುರದೇರ[1] ದೆಗದೊಡಲ, ಬಾಗಿದ ಬೆನ್ನ,
ಹಬ್ಬುಗೆಯ ಪಚ್ಚಳದ, ಸೆಳೆದ ಬಾಲದ ಕೊನೆಯ,
ಕೊಬ್ಬಿದ ಕೊರಳ, ಸಂಣ ಜಂಘೆಗಳ, ಕೊಂಕ್ ಉಗುರ, ಮಡಿ-ಗಿ
[ವಿಯ, ಕಿಡಿ-ಗಣ್ಗಳಾ, ||

1, ಉಬ್ಬಿದ ಉರದ, ಏರ (ಏರನ್ನು).

ಹೆಬ್ಬಲ್ಲ, ವಿಡು-ವಾಯ್ಯ, ಜೋಲ್ವ ಕೆಂ-ನಾಲಿಗೆಯ
ಗಬ್ಬಿನಾಯ್ಗಳ[1] ಹಾಸನುಗಿದು, ಬಿಡೆ[2]; ಪಂದಿಗಳ-
ನೆಬ್ಬರಿಸಿ, ತುಡುಕಿ[3]ದವು; ಕೇಸರಿಗೆ[4]ಡೆದರ್ದು, ಮೇಲ್ ವಾಯ್ದು,
[ಪುಲಿಯುಂ ಕೊಂದವು. || 177 ||

1, ನಾಯಿಗಳ. 2, ಬಿಡಲಾಗಿ (ಬೇಟೆಗಾರರೆಂಬುದು ಆಖ್ಯೆ). 3, ಇದಕ್ಕೆ ನಾಯಿಗಳೆಂಬುದು ಆಖ್ಯೆ. 4, ಅಡರಿ.

ಬಿಡದೆ ಕುತ್ತುಗರ್ಗಳಂ ಸೋವಿ[1]ದರ್; ತೀವಿದರ್
ಗಿಡಗಳ; ಪೊದರ್ಗಳಿಂದ್ ಎಬ್ಬಿಸಿದರೆಬ್ಬಿಸಿದ-
ರೊಡನೊಡನೆ ಖಗ-ಮೃಗ-ವ್ರಾತಮಂ; ಪಾತಮಂ ಮಾಡಿದರ್ ಕೂ
[ಡೆ ಕೂಡೇ ||
ಸಿಡಿ-ಗುಂಡು ಬಡಿ-ಗೋಲ್ಗಳುರುಬೆಯಿಂದ್, ಇರುಬೆಯಿಂದ್
ಇಡುವ ರಣೆ ನೇಣ್ ಉರುಲ್-ಗೊಲೆಗಳಿಂ, ಬಲೆಗಳಿಂ
ಜಡಿ[2]ದಾರ್ದು ಬೊಬ್ಬೆಯುಬ್ಬರದಿಂದ, ಶರದಿಂದ ಕಾಡೊಳ್ ಕಿರಾತ
[ರೆಂದೂ. || 178 ||

1, ಸೋವಿದರು (ಈ ಮುಂತಾದ ಕ್ರಿಯಾಪದಗಳಿಗೆ ಕಿರಾತರೆಂಬುದು ಆಖ್ಯೆ). 2, ಜಡಿದು, ಆರ್ದು (ಆರಿ, ಸಾರಿ, ಕೂಗಿ).

ಕುತ್ತುರೊಳ್ ಪುದುಗಿರ್ದ ಪುಲಿ ಪೊರಮಡಲ್; ಕಂಡು,
ಕಿತ್ತು ಕೂರ್-ಗಣೆಗಳಂ, ಪೂಡಿ, ಲುಬ್ಧಕರೀರ್ವ-
ರಿತ್ತ್ ಅತ್ತಲಿರ್ದು, ಸರಿಸದೊಳೆಚ್ಚ[1]ಡೆದರೊಡಲನುಚ್ಚಳಿಸಿದೆಂಬು
[ತಾಗೀ, ||
ಇತ್ತಂಡ[2]ವುಂ ವ್ಯಾಘ್ರದೊಡನಿಳೆಗುರುಳ್ದ[3]ರುದ್-
ವೃತ್ತದಿಂದ್ ಉಭಯ ಜನಮೇಕಾರ್ಥ ಕೆಳಸಿ[4]ದೊಡೆ,
ಮತ್ತೆ ಲೇಸ್ ಆದಪುದೆ[5]? ಜಗದೊಳೀ ಮೂವರುಪಹತಿ ಚಿತ್ರ
[ಮೆಲ್ಲ ಎಂದನೂ. || 179 ||

1, ಎಸೆದರೆ, (ಎಸೆದಾಗ); ಹುಲಿಯು ಇತ್ತೂ ಅತ್ತೂ ಇದ್ದ ಲುಬ್ಧಕರಿಬ್ಬರೆಂಬುದು ಇದಕ್ಕೆ ಆಖ್ಯೆ. 2, ಇತ್ತಂಡವೂ. 3, ಉರುಳಿದರು (ಆ ಲುಬ್ಧಕರು). 4, ಕೆಳಸಿದರೆ. 5, ಆಗುವದೆ?

ನಳಿ ತೋಳ, ಯುವ-ಸೊಕ್ಕ, ಕಾಡ್-ಹಂದಿ-ದುಪ್ಪ-ಪರಿ–
ಮಳ-ಗಾತ್ರದೆಳ-ಕುಂತಳದ, ನೌಲ್-ನಡೆಯ ಶಬರಿ
ಹಳುವದೊಳ್ ತನ್ನ ಕಾಂತನ ಬಳಿಯ ಬರಲೊಂದು ಸಿಂಗಮೆತ್ತಿ
[ಭರದೊಳೆದ್ದು, ||
ಬಳಿಕವಳ ಹೊಂಚುತಲೆ ನೋಡಿ, ಕೆಂ-ನಯನಮಂ
ತಳೆದು, ಮತ್ತೆ ಆಕೆಯ ಸು-ವೀರ್ಯಮಂ ಲಕ್ಷಿಸದೆ,
ಮುಳಿದೆಡರಲಾ ಕೇಸರಿಯನ್ನೆಚ್ಚು, ಕೆಡಹಿದಂ[1] ಕ್ರೋಧದಿಂದ್
[ಆ ವ್ಯಾಧನೂ. || 180 ||

1, ಕೆಡಹಿದನು.

ಮರಿಗೆ ಮರೆಯಾಗಿ ಮೈಯೊಡ್ಡಿ, ಮಡಿದವು ಕೆಲವು[1];
ಬರಿಯ ಬಿಲ್ಲ್-ದನಿಗೆ, ರಮಣನ[2] ತಾಗಿ, ತಾಂ[3] ಬೆದರಿ,
ನೆರೆ ಮೋಹದಿಂ[4] ಪೊರಳ್ದವು ಕೆಲವು; ರಾಪು-ಗೊಂಡ್ ಓಡಿದಿನೆಯ
[ನನೆಗಲ್ದು[5], ||
ಮರುಗಿ, ದುಃಖಾಸ್ತ್ರ ತಿವಿದಿಳೆಗೆ ಬಿದ್ದವು ಕೆಲವು;
ಬಿರು ಸರಳ್ ತಮ್ಮ ಕೂಪರರನ್ನು ದಾಟಿ ಬರೆ,
ಗುರಿಯಾಗಿ ತೊರದವೆಸುವಂ ಕೆಲವು ಪುಲ್ಲೆಗಳ್; ಬೇಡರೆಸೆವೆಸು
[ಗೆಯಿಂದಾ. || 181 ||

1, ಕೆಲ್ಲವು ಪುಲ್ಲೆಗಳು. 2, ರಮಣನ ಬಳಿಯಲ್ಲಿದ್ದು. 3, ತಾವು. 4, (ತಮ್ಮ ರಮಣನು ಮೃತವಾದಾನೆಂಬ) ಮೋಹದಿಂದ (ನೊಂದು). 5, ಅಗಲಿ.

ಪುಲಿ ಕರಡಿ ಕರಿ ಸಿಂಗ ಸಾರಂಗ-ಮರಿ ಪಂದಿ
ಮೊಲ ಹುಲ್ಲೆ ಕಾಡ್-ಎಮ್ಮೆ ಚಮರಿಗಳ್ ಮೊದಲಾದ
ಪಲವು ಮೃಗ-ಜಾತಿಯಂ, ಕ್ರೌಂಚ ಶಿಖಿ ತಿತ್ತಿರಿ ಕಪೋತಾದಿ ಪ
[ಕ್ಷಿಗಳನೂ, | 182 |

ಕರಿಯ ಕುಂಭ-ಸ್ಥಳದ ಮುಕ್ತಾಫಲಂಗಳಂ,
ಬರುಹಿಗಳ ಗರಿಗಳಂ, ಚಮರಿ-ವಾಲಂಗಳಂ,
ದ್ವಿರದ-ನವ-ದಂತಾಂಕುರಂಗಳಂ, ಕತ್ತುರಿಯ ಕೋಶಗಳಮೊಡ
[ವಿಯೊಳಗೇ ||
ಇರದೆತ್ತಿ[1] ಕೊಂಡು ಬರುತಿರ್ದಪರು ಶಬರರು,
ಸ್ವರ ಗೈದು, ಕಾಲ್ ದಣಿದು, ಮೈ ಬೆವರಿ, ಬಾಯಿಯಾರ್‍,
ಉರ ಬೆಂದು; ಬೊಗಳುತಿಹ, ತೇಗುತಿಹ, ಮೂಸುತಿಹ ನಾಯಿಗಳ
[ಮೇಳದೊಡನೇ. || 183 ||

1, ಇರುವರು (115ನೇ ಶ್ಲೋಕದಲ್ಲಿ 'ಪೋದಪ್ಪುದ' ಎಂಬದನ್ನೂ 212ನೇದರಲ್ಲಿ 'ಇರ್ದಪರೆ' ಎಂಬದನ್ನೂ 228ನೇದರಲ್ಲಿ 'ಬಂದಪುದು' ಎಂಬದನ್ನೂ ಸರಿ ನೋಡಿರಿ).

---

# XIX. ಪಾಠ

## A BATTLE

## ಯುದ್ಧವು

ಧರಣಿ-ಮಂಡಲವಂ[1] ಚತುರ್-ಬಲಂ[2], ಪಕ್ಷಿಗಳ
ಸರಣಿ-ಮಂಡಲವಂ ಧ್ವಜ ಛತ್ರ ಚಾಮರಂ,
ತರಣಿ-ಮಂಡಲವಂ ಚಮೂ[3]-ಪದ-ಹತೋದ್ಧೂತ-ರೇಣು-ವ್ರಜಂ
[ಮುಸುಕಲೂ;- | 184 |

1, ಮಂಡಲವನ್ನು. 2, ಬಲವು. 3, ಚಮೂ-ಪದದಿಂದ ಹತವಾಗಿ ಉದ್ಧೂತ ರೇಣುವಿನ ವ್ರಜವು.

ಅರ್ಬುದ ಗಜಂ, ಪತ್ತು ಕೋಟಿ ಸು-ವರೂಥಮೆರ—
ಡರ್ಬುದ ತುರಂಗಮಂ ಕೂಡಿದ ಪದಾತಿ-ಮೂರ್-
ಅರ್ಬುದಂ ಜೋಡಿಸಿದು[1]ದಾಹವ[2]-ಪ್ರೌಢರ್ ಸುಬುದ್ಧಿ ಮೊದಲಾದ
[ಭಟರೂ; ||

1, ಜೋಡಿಸಿತು, ಜೋಡಣೆ ಆಯಿತು; ಇದಕ್ಕೆ ಗಜಂ, ಸುವರೂಥಂ, ಪದಾತಿಯ ಮೂರು ಅರ್ಬುದಂ ಎಂಬದು ಆಖ್ಯೆ. 2, ಆಹವದಲ್ಲಿ ಪ್ರೌಢರು (ಯಾರಂದರೆ) ಸುಬುದ್ಧಿ ಮುಂತಾದ ಭಟರು.

ಸರ್ಬ ಸನ್ನಾಹದಿಂದ್ ಒತ್ತರಿಸಿತೆತ್ತಣ ಚ-
ತುರ್-ಬಲಮೊ? ಮಿಡಿತೆಗಳ ವಿಸ್ತಾರ ಮೇಘಮೆನೆ,
ಪರ್ಬಿದುದು ನೆಲದೆಗೆಲಕೆರ್ಜುನನ[1] ವರ-ಸುತಂ ತರಿಸಿದಂ ಮಣಿ-ರ
[ಥವನೂ. || 185 ||

1, ಅಗಲಕ್ಕೆ.

ಚಿತ್ರ-ಶೋಭಿತಮಾದ, ಮಣಿ-ಮಯ ವರೂಥಮಂ
ಚಿತ್ರಾಂಗದೆಯ ತನೂ-ಭವನೆಡೆರ್ದಂ. ಕೂಡೆ
ಚಿತ್ರಮಾದುದು ಸಮರಮೆರಡು ಭಟ್ಟನ ಚೂಣಿ ಸಂದಣಿಸಿತುರವ
[ಣಿಯೊಳೂ. ||
ಮಿತ್ರ-ಮಂಡಲವನೊಡದ್ಯೈದುಮೆತ್ತಿ ಭರದಿಂದ್ ಅ-
ಮಿತ್ರ-ಭಟರಂ[1] ತಾಗಿದರ್ ಕಡು ಗಲಿಗಳೆಂಗ
[2]ಮಿತ್ರ-ಭಾವದ ನೇಹದಿಂದ ಮರುಗದೆ ಮಾಣದೆಂಭೋ-ರುಹಂಗ
[ಳೆನೆಲೂ[3]. || 186 ||

1, ಭಟರನ್ನು. 2, ಅಂಭೋ-ರುಹಗಳು (ಮಿತ್ರ-ಮಂಡಲದ ಕಷ್ಟವನ್ನು ನೋಡಿ, ತಾವು ಸೂರ್ಯನ ಮೇಲೆ ಪಡುವ) ಮಿತ್ರ-ಭಾವವುಳ್ಳ ನೇಹದಿಂದ ಇತ್ಯಾದಿ. 3, ಎಂಬಂತೆ.

ತೇರ ಮಂಗಡದ ಜರ್ಜಾ-ರವಂ, ಗಜದ ಘಂ-
ಟಾ-ರವಂ, ಹಯದ ಹೇಷಾ-ರವಂ, ನಡೆವ ಸೇ-
ನಾ-ರವಂ, ವಾದ್ಯದ ಮಹಾ ರವಂ, ಬಹಳ ಕಹಳಾ-ರವಂ, ಸಂಗ
[ಡಿಸಿದಾ ||
ಜ್ಯಾ-ರವಂ, ಭಟರ ಬಾಹಾ-ರವಂ, ದಳದ ಬಂ-
ಭಾ-ರವಂ, ರಣ-ಕಿಲಕಿಲಾ-ರವಂ, ಪಟಹ-ಢ-
ಕ್ಕಾ-ರವಂ, ಪುದಿದ ನಾನಾ ರವಂ ಕಿವಿಗೆತ್ತಿ ಕಠೋರಮಂ[1] ತೀವಿ
[ತಂದೂ. || 187 ||

1, ಕಠೋರವಾಗಿ (ಅಥವಾ ಕಠೋರವನ್ನು = ಭಯಂಕರವಾದದ್ದನ್ನು.)

ಸಿಂಧ ಸೀಗುರಿ ಛತ್ರ ಚಾಮರ ಪತಾಕೆಗಳ್
ಸಂದಣಿಸಿ, ಗಗನಮಂ ಮುಸುಕಲ್ಕೆ, ತವೆ ಮೂಡಿ-
ದಂಧಕಾರಂಗಳಂ ಕೆಡಿಸಿದವು ರತ್ನಾಭರಣ-ಕಾಂತಿಗಳ್ ಭೂ[1]-ಪರಾ; ||
ಕೆಂ-ಧೂಳ್ ಅಡರ್ದು, ನಭಮಂ ಮುಸುಕಿತಾಗೆ[2] ವರ-
ಸಿಂಧು-ಪ್ರವಾಹಮುತ್ತುಂಗ-ಶೋಣಾಚಲದ
ಬಂಧುರ-ತಟ-ಪ್ರದೇಶದೊಳೊಪ್ಪ-ವಜ್ರದ ನಿಧಿಯೆಂಬ ತೆರನಾಗ
[ಲೂ[3]. || 188 ||

1, ಭೂಪರ ರತ್ನಾಭರಣಗಳ ಕಾಂತಿಗಳು. 2, ಆಗ (ಆ ರತ್ನಾಭರಣಗಳ ಮತ್ತು ಅಡರಿದ ಕೆಂ-ಧೂಳಿನ ನಾನಾ ಕಾಂತಿಗಳ ದೆಸೆಯಿಂದ ಹ್ಯಾಗಾಯಿತೆಂದರೆ) ಗಂಗೆಯ ಪ್ರವಾಹವು ಉತ್ತುಂಗವಾದ ಶೋಣ-ಅಚಲವೆಂಬ ತನ್ನ ಬಂಧುರವಾದ ತಟದ ಪ್ರದೇಶದೊಳಗೆ (ನಾನಾ ಬಣ್ಣವುಳ್ಳ) ಒಪ್ಪ-ವಜ್ರದ ನಿಧಿಯಂತಿರುವ ತರವಾಯಿತು. 3, ಆಗುವಂತೆ.

ಚೂಣಿಯೊಳ್ ಬೆರಸಿ, ಪೊಯ್ದ್ ಆಡಿದರ್[1] ತಮ-ತಮಗೆ;
ಬಾಣ ತೋಮರ ಪರಶು ಚಕ್ರಾಸಿ[2] ಮುದ್ಗರ ಕೃ-
ಪಾಣ ಡೊಂಕಣಿ ಕುಂತ ಸುರಗಿ ಶಲ್ಯಹ ಶಕ್ತಿ ಮೊದಲಾದ ಕೈದು
[ಗಳೊಳೂ, ||
ಕೇಣಮಿಲ್ಲದೆ, ಚಾರಿ[3]-ಚಳಕ-ಚಾಳೆಯು, ಚದುರ್-
ಪಾಣಿ-ಲಾಘವ, ಪಂಥ-ಪಾಡುಗಳನರಿದು, ಬಿಂ-
ನಾಣದಿಂ ಘಾಯು ಗಾಣಿಸಿದರತಿ ಬಲರೆಲ್ಲಿ ನಾನಾ ಪ್ರಹಾರದಿಂ
[ದಾ. || 189 ||

1, ಇದಕ್ಕೆ ಮುಂದಗಡೆ ಇರುವ ಬಲರು (ಬಲವುಳ್ಳವರು) ಎಂಬದು ಆಖ್ಯೆ. 2, ಚಕ್ರ ಅಸಿ. 3, ಚಾರಿಯ ಚಳಕವಾದ ಚಾಳೆಯು (ನ್ನು) ಇತ್ಯಾದಿ ಅರಿದು (ತಿಳಿದು).—'ಕೈದುಗಳೊಳು' ಎಂಬದನ್ನು 'ಪೊಯಿದಾಡಿದರು ತಮ ತಮಗೆ' ಎಂಬದಕ್ಕೆ ಹಾಕ ಬೇಕೋ? ಕೈದುಗಳೊಳು, ಕೇಣವಿಲ್ಲದೆ, ಘಾಯ ಗಾಣಿಸಿದರು' ಎಂತ ಹೇಳ ಬೇಕೋ? ಪೂರ್ಣ ನಿಶ್ಚಯವಿಲ್ಲ. ನಮ್ಮ ವಿರಾಮ ಚಿನ್ಹೆಯ ಪ್ರಕಾರ ( , ) 'ಕೈದುಗಳೊಳು' ಎಂಬದು ಘಾಯ ಗಾಣಿಸಿದರೆಂಬದಕ್ಕೆ ಹೋಯಿತು.

ತೂೞಿಸಿದರೊನೆಯುಂ ಜೋಧರುರವಣಿಸಿ; ದು—
ವ್ವಾೞಿಸಿದರುಬ್ಬ್ಯ ಎದ್ದು, ರಾವುತರ್ ತೇಜಿಯುಂ;
ಕೇೞಿಸಿದರಾಹವದ ನಾಟ್ಯಮಂ ರಂಗದೊಳ್ ಚಟುೞ್-ಪಟು-ಭಟ
[ರಥಿಕರೂ; ||
ಏೞಿಸಿದರೊಳ್ತನದ ಪಂಥಮಂ ಕಾಲಿವರ್;
ಬೀೞಿಸಿದರೆಹಿತರಂ; ಪೊಯ್ದ್ದು[1] ಆಡಿ, ತಲೆಯುಂ ನಿ—
ವಾೞಿಸಿದರೊಳ್ದಂಗೆ, ಕೈದುಗಳ ಹೋರಟೆಯು ಖಣಿ-ಕಟಿಲ-ರಭಸದಿಂ
[ದಾ. || 190 ||

1, (ತಲೆಗಳನ್ನು) ಹೊಯ್ದಾಡುತ್ತಾ ಇದ್ದು, (ಹೊಯ್ದು ಕತ್ತರಿಸಿದ) ತಲೆಯನ್ನು.

ಕಾರ್-ಮುಗಿಲ ಶಿಡಿಲ ರವದಂದಮಾಗ್ಯಿ ಇರೆ[1] ಕರದ
ಕಾರ್ಮುಕ-ಧ್ವನಿ, ಮಿಂಚಿನಂತೆ ಪೊಳ-ಪೊಳವ ಪೊಂ-
ದೇರ್ ಮೆಱೆಯೆ,—ಶರ-ವರುಷಮಂ ಕರವುತಿರ್ದರ್[2] ಉಭಯ-ದಳ-
[ವೀರ-ಭಟರೂ. || 191 ||

1, ಇರಲಾಗಿ. 2, ಕರಸುತ್ತ ಇದ್ದರು.

SCENES ON A BATTLE FIELD

ರಣಾಂಕಣದಲ್ಲಿ ತೋರಿದ್ದು

(ಚನ್ನಬಸವ ಪುರಾಣ)

ನಿಡು ಸರಳ ಸಾರದಿಂ ಘೋರದಿಂ ಭಾರದಿಂದ್
ಅಡಗೆಡದ ಸೇನೆಯಿಂದ್ ಆನೆಯಿಂ, ಬೇನೆಯಿಂದ್
ಬಡನೆ ಧರೆಗುರ್ಳ್ವರಿಂ[4] ನರ್ಳ್ವರಿಂ, ತೆರ್ಳ್ವರಿಂ ತಮ-ತಮಗೆ ಕಂಡ
[ಕಡೆಗೇ, ||

1, ಉರುಳುವರಿಂದ.

ಕಡಿವಡ ಕೊರಳಿಂದ ಕರುಳಿಂದ, ಮರುಳಿಂದ
ಪೊಡೆಯೊಡದ ಶೂರರಿಂ, ಮಾರರಿಂ, ಹಾರರಿಂ,
ಮಡಲೇರಿದ ಭೀತಿಯಿಂ ಘಾತಿಯಿಂ, ಹೇತಿಯಿಂದ್ ಆ ರ[1]ಣಾಂಗಣಮೆ
[ಸದುದೂ. || 192 ||

1, ರಣ-ಅಂಗಣಂ.

ಕಡಿದ ತಲೆ-ಶೀಳ್ಗಳಿಂ ತೋಳ್ಗಳಿಂ, ಬಾಳ್ಗಳಿಂದ್
ಎಡೆಗೆಡೆದ ರುಂಡದಿಂ ಮುಂಡದಿಂ ಖಂಡದಿಂದ್,
ಇಡಿದ ಕರ-ಜಾತದಿಂ, ನಾತದಿಂ, ಭೂತದಿಂ, ಪ್ರೇತದಿಂ, ಯಾತುವಿಂ
[ದಾ, ||

ಉಡಿದ ಗಜ-ರಾಜಿಯಿಂದ್, ಆಜಿಯಿಂ, ವಾಜಿಯಿಂದ್,
ಎಡೆ ವಿಡಿದ ಘೂಕದಿಂ ಕಾಕದಿಂ, ಶೋಕದಿಂ,
ಸಡಿ[1]ಲೊ ರಣ-ಚೋರರಿಂ ವೀರರಿಂ ಧೀರದಿಂದ್ ಆ ರಣಾಂಗಣಮೆಸ
[ದುದೂ. || 193 ||

1, ಸಡಿಲುವ ಚೋರರು ಭಯದಲ್ಲಿ ಸಡ್ಲಾದರು, ವೀರರೂ ಧೀರರೂ ಧೈರ್ಯದಲ್ಲಿ ಸಡ್ಲಾದರು.

ಕೆಟ್ಟ್ ಓಡಿದರ್ ಕೆಲ[1]-ಕೆಲರ್, ಗಜ ರಥಂಗಳಂ
ಬಿಟ್ಟ್ ಓಡಿದರ್ ಕೆಲ-ಕೆಲರ್, ಕೈದುಗಳನೆವನಿ–
ಗಿಟ್ಟ್ ಓಡಿದರ್ ಕೆಲ-ಕೆಲರ್, ಜೀವದಾಶೆಯಿಂ ಹಣ-ರಾಶಿ-ರಾಶಿಗಳನೂ||
ಮೆಟ್ಟ್ಯ ಓಡಿದರ್ ಕೆಲ-ಕೆಲರ್, ಬಿರುದನಾಗಲ್ ಬಿ–
ಸುಟ್ಟ್ ಓಡಿದರ್ ಕೆಲ-ಕೆಲರ್, ಬೆದರಿ ರಣಕೆ ಬೆಂ-
ಗೊಟ್ಟ್ ಓಡಿದರ್ ಕೆಲ-ಕೆಲರ್, ಶತ್ರು-ಕಣೆ ತಾ[2]ಗದೆುಳದ ಭಟ-ವೀರರೊ
[ಳಗೇ. || 194 ||

1, ಕೆಲವರು ಕೆಲವರು. 2, ತಾಗದೆ.



# XX. ಪಾಠ

## ENCAMPMENT OF AN ARMY

### ಪಾಳೆಯವು

(ಚನ್ನಬಸವ ಪುರಾಣ)

ಮೇಲೆ ಮೇಲ್ ಐತಂದು, ಕೋಟೆಯಂ ಪತ್ತಿ, ಹೊರ
ಪಾಳೆಯವನೀಕ್ಷಿಸುತ್ತ್ ಇಪ್ಪರ್ಗೆ[1] ಕಾಣಿಸಿತು,
ಪೇಳಲೇನ್ ಅಚ್ಚರಿ[2]ಯನಿಡಿಕಿರಿದ ಬಣ್ಣ-ಗೂಡಾರಗಳ ಸಾಲ್ಗಳಿಂ
[ದಾ. | 195 |

1, ಇರುಪವರಿಗೆ. 2, ಅಚ್ಚರಿಯನ್ನು? ಇಡಿಕಿರಿದ ಇತ್ಯಾದಿ.

ಪೊಳೆವ ಗೂಡಾರಗಳ ಬುದ್ಬುದದ, ಪೋಪ ಬ-
ಪ್ಪ ಲಘು ವಾಜಿಗಳ ತೆರೆಗಳ, ಕರಿಯ ಗಿರಿಯ, ಜನ[1]-
ಜಲಚರದ, ಮಿನಗುವಾಯುಧದ ನೊರೆಗಳ, ವಾದ್ಯದಾರ್ಭಟೆಯ
[ಪೇರ್ ಮೊರಹಿನಾ, ||
ಚಲಿಪ[2] ಕೇತನ-ತತಿಯ ಸುಳಿಯ, ಸಬಳದ ಸಾಲ
ತೊಳ-ತೊಳಪ ಪವಳ-ವಳ್ಳಿ[3]ಗಳಭಯ[4]-ರಸ-ಸಮು-
ನ್ಮಿಳಿತ ವರ-ರಾಜ-ಸೇನಾ-ಸಮುದ್ರವನಾಗ ಪುರ-ಜನಂ ನಿಟ್ಟಿಸಿದು
[ದೂ. || 196 ||

1, ಜನವೆಂಬ ಜಲ-ಚರವ. 2, ಚಲಿಸುವ. 3, ಪವಳ-ವಳ್ಳಿಗಳ ಎಂಬ ಸಂಬಂಧವಿಭಕ್ತಿಯನ್ನು ಬುದ್ಬುದವ ಮುಂತಾದವುಗಳ ಸಂಗಡ ಸಮುದ್ರವನ್ನು ಎಂಬದಕ್ಕೆ ಹಾಕ ಬೇಕು. 4, ಅಭಯದ ರಸದಿಂದ ಸಮುನ್ಮಿಳಿತವಾದ (ತುಂಬಿದ್ದಾದ,) ವರರಾಜನ ಸೇನೆಯೆಂಬ ಸಮುದ್ರವನ್ನು. (ಪಾಳೆಯದಲ್ಲಿ ಸಮುದ್ರದ ಸಾಮ್ಯ ತೋರಿತು).

ಎರಡು ತೆರದೊಳಗೊಪ್ಪುವೆಂಗಡಿಯ ಮುಂಗಡಿಯ[1]
ಸುರಿದ ಧಾನ್ಯದ ರಾಶಿ[2]ಯೊತ್ತುಗಳ ಜೊತ್ತುಗಳ,
ಕರಿ-ತುರಗ-ನಿಚಯದೆಡೆಯಾಟ[3]ಗಳ ಘಾಟಗಳ, ಪೊಂ-ದೇರ ಸಂದಣಿ
[ಗಳಾ, ||

1, ಮುಂದಗಡೆಯ(ಲ್ಲಿರುವ). 2, ಒತ್ತಾಗಿಯೂ ಜೊತ್ತಾಗಿಯೂ ಸುರಿದ ಧಾನ್ಯದ ರಾಶಿಗಳ ಎಂತ ಹೇಳ ಬಹುದು. 3, ಮೇಲಕ್ಕೂ ಕೆಳಯಕ್ಕೂ ಆಡುತ್ತಿರುವ ಘಾಟಗಳ.

ಅರಮನೆಗೆ ಪೋಪ ನೃಪರೆಂದಳದ ಗೊಂದಳದ,
ಪರಿಚರರ ವಿವಿಧ-ಬಿರುದಾವಳಿಯ ಗಾವಳಿಯ,
ಪರಮ-ಭೀಷಣ-ಪಟು-ಭಟಾಳಿಗಳ ಕೇಳಿಗಳ ಪಾಳಿಯಿಂ ಕಣ್ಗ ಎಸೆ
[ದುದೂ. || 197 ||



## A FINE TANK

ಚಂದಾದ ಕೊಳವು.

(ಜೈಮಿನೀ ಭಾರತ)

ಪರಿಶೋಭಿಸಿತು[1] ಮುಂದೆ ಹಂಸ-ಕಾರಂಡ-ಮಧು-
ಕರ-ಕೋಕ-ಮಧುರ-ಮೃದುತರ-ಕಲ-ಸ್ವನ-ಮದೋ-
ತ್ಕರ-ಕಮಲ-ಕುವಲಯ-ವಿರಾಜಿತ, ಶ್ರೀಕರಂ ಪದ್ಮಾಕರಂ; ಚೆಲ್ವ[2]
[ಎನೇ. | 198 |

1, ಇದಕ್ಕೆ ಪದ್ಮ-ಆಕರಂ ಎಂಬದು ಆಖ್ಯೆ. ಹಂಸಗಳ ಮತ್ತು ಕಾರಂಡಗಳ ಮತ್ತು ಮಧುಕರಗಳ ಮತ್ತು ಕೋಕಗಳ ಮಧುರವಾದ (ಮತ್ತು) ಮೃದುತರವಾದ ಕಲವೆಂಬ ಸ್ವನವುಳ್ಳ ಮದೋತ್ಕರದಿಂದಲೂ ಕಮಲಗಳಿಂದಲೂ ಕುವಲಯಗಳಿಂದಲೂ ವಿರಾಜಿತವಾದಂಥ ಇತ್ಯಾದಿ. 2, ಚೆಲ್ವು ಎನ್ನುವಂತೆ.

ಲಸದಮಲ-ರತ್ನ-ಸೋಪಾನದಿಂ, ಮೀನದಿಂ,
ಬಿಸವನಾಸ್ವಾದಿಸುವ ಚಕ್ರದಿಂ, ನಕ್ರದಿಂ,
ದೆಸೆ-ದೆಸೆಗೆ ಬೀರ್ವ ತನಿ ಗಂಪಿನಿಂ, ತಂಪಿನಿಂ, ತೊಳಪ[1] ಹಿಮಕರ-
[ಕಾಂತದಾ ||
ಪೊಸ ಸಣ್ಣಿಗೆಯೊಳಿಡಿದ ಪುಳಿನದಿಂ, ನಳಿನದಿಂದ್,
ಒಸದು ಬಿನದಿಪ[2] ಹಂಸ-ಕೇಳಿಯಿಂದ್, ಓಳಿಯಿಂದ್
ಎಸೆವ ನೀರ್-ವಕ್ಕಿಗಳ ಸಂಗದಿಂ, ಭೃಂಗದಿಂದ್ ಆ ಕೊಳಂ[3] ಕಣ್ಗ
[ಎಸೆದುದೂ. || 199 ||

1, ತೊಳಪಿನ (ಅಥವಾ ತೊಳೆಯುವ). 2, ಬಿನದಿಸುವ (ವಿನೋದ ಮಾಡುವ). 3, ಇದು ಆಖ್ಯೆಯಾಗಿದೆ.

[2]ತಳೆದೊಳೊಪ್ಪುವ ಪಸುರೆಸಳ ರೋಚಿಯಿಂ, ನಡುವೆ
ತೊಳಪ ಕೆಂ-ದಳದ ದೀಧಿತಿಯಿಂದ, ಮೇಲೆ ಕಣ್ಣೊ-
[3]ಗೊಳಿಪ ಹೊಂ-ಗೇಸರದ ಕಾಂತಿಯಿಂದ್, ಎರಗುವ[4]ಸಿತಾಳಿಯ ಮ
[ರೀಚಿಯಿಂದಾ ||
ಹೊಳ-ಹೊಳವ ಕೋಕನದ ಪಂಕ್ತಿಗಳ ಬ[1]ಂಣಮುಜ್-
ಜ್ವಳದಿಂದ್ರ-ಚಾಪದಾಕಾರಮಂ ಸಂತತಂ
[5]ಪಳಿವಂತೆ ಕೊಳದೊಳಾರಾಜಿಸಿತು ತುಹಿನ-ಗಿರಿ-ಗಾಡಿನೆಂತರ್ಯ್
[ದೊಳಗೇ. || 200 ||

1, ಬಣ್ಣವು; ಇದು ಈ ಪೂರ್ಣ ಶ್ಲೋಕದ ಆಖ್ಯೆ.—ರೋಚಿಯಿಂದಲೂ - - - ದೀಧಿತಿಯಿಂದಲೂ - - - ಕಾಂತಿಯಿಂದಲೂ - - - ಮರೀಚಿಯಿಂದಲೂ ಹೊಳಹೊಳೆಯುವ ಕೋಕನದಗಳ ಪಂಕ್ತಿಗಳ ಬಣ್ಣವು, (ತಾನು) ಉಜ್ಜ್ವಳದ ಇಂದ್ರಚಾಪದ ಆಕಾರವನ್ನು ಸಂತತವೂ ಪಳಿಯುವಂತೆ, ಆರಾಜಿಸಿತು. 2, ಬುಡದೊಳಗೆ, ಕೆಳಗಡೆ. 3, ಗೊಳ್ಳಿಸುವ. 4, ಅಸಿತವಾದ ಅಳಿಯ. 5, ಪಳಿಯುವಂತೆ.

[1]ಕಲ-ಹಂಸಮಾಕೀರ್ಣಮಾಗ್ಯ ಇರ್ದು ಕಾಳಗದ
ಕಳಮೆಲ್ಲ, [2]ವಿಷ-ಭರಿತಮಾಗ್ಯ ಇರ್ದು ಸರ್ಪ-ಸಂ-
ಕುಲಮೆಲ್ಲ, ಕು[3]ಮುದ-ಯುತಮಾಗ್ಯ ಇರ್ದು ಖಳರೆಂತರಂಗದೊಳಾ
[ಪಮೆಲ್ಲಾ, ||
ಅಳಿದುಳಿದ [4]ಭಂಗ-ಮಯಮಾಗ್ಯ ಇರ್ದು ಮುರಿದ ನೃಪ-
ದಳಮೆಲ್ಲ, ಬಹು-ವಿ[5]ಚಾರ-ಸ್ಥಾನಮಾಗ್ಯ ಇರ್ದು,
ತಿಳಿಯಲ್ಕ, ಉಪದ್ರವ-ಸ್ಥಳಮೆಲ್ಲಮೆನಿಸಿರ್ದುದಾ ವಿಮಲ ಸರ[6]ಸಿ
[ಕಣ್ಗೇ. || 201 ||

1, ಕಲ ಅಂದರೆ ಮೃದುವಾದ ಧ್ವನಿ. 2, ವಿಷ ಅಂದರೆ ನೀರು ಮತ್ತು ಸರ್ಪವಿಷ. 3, ಕುಮುದ ಅಂದರೆ ಕೆಟ್ಟ ಆಶೆ ಮತ್ತು ನೈದಿಲೆ. 4, ಭಂಗ ಅಂದರೆ ನಾಶನ ಮತ್ತು ನೀರಿನ ತೆರೆ. 5, ವಿಚಾರ ಅಂದರೆ ವಿಧವಿಧದ ವಸ್ತು ಮತ್ತು ನ್ಯಾಯವಿಚಾರ, ದುಃಖ. 6, ಇದು ಆಖ್ಯೆಯಾಗಿದೆ.—ಈ ಶ್ಲೋಕದಲ್ಲಿ ಶ್ಲೇಷಾಲಂಕಾರವು ಅಂದರೆ ಒಂದೇ ಮಾತಿನಲ್ಲಿ ಎರಡು ಅರ್ಥವಿರುವಂಥಾದ್ದು ಕಾಣುತ್ತದೆ (232ನೇ ಶ್ಲೋಕ ಸರಿ ನೋಡ ಬಹುದು); ಶ್ಲೋಕದ ಆರಂಭದಲ್ಲಿ ಎರಡು ಅರ್ಥವಾಗುವಂತೆ ಮೊದಲು ಇದ್ದ ಹಾಗೆಯೇ ಓದಿ, ಆ ಮೇಲೆ ಕಲಹಂ ಸಮಾಕೀರ್ಣಮಾಗಿ (ಕಲಹವು ಬಹಳ ತುಂಬಿದ್ದಾಗಿ) ಎಂಬಂತೆ ಓದ ಬೇಕು.

## A BEAUTIFUL RIVER

### ರಮ್ಯವಾದ ನದಿ

ತೆರ-ತೆರದ ಕಲ್ಲೋಲ-ಮಾಲೆಗಳ ಲೀಲೆಗಳ,
ಬೆರ-ಬೆರವ ರಾಜ-ಹಂಸಾಳಿಗಳ ಕೇಳಿಗಳ,
ಪರಿ-ಪರಿಯ ನೀರ್-ವನಿಗಳಾಕರದ ಸೀಕರದ, ನೊರೆಯ ಬೊಬ್ಬು
[ಳಿಯ ಸುಳಿಯಾ, ||
ಮೊರೆ-ಮೊರೆದು ಘೂರ್ಣಿಸುವ ಪರಿವುಗಳ ಮುರಿವುಗಳ,
ತಿರು-ತಿರುಗಿ ಸುಳಿವ ಜಲ-ಜಂತುಗಳ ಗಂತುಗಳ,
ನೆರ-ನೆರದು ಪೊಯ್ಯುತಿಹ ಮೊಯ್ಯುತಿಹ ನಾ[1]ವಿಕರ ಗಂಗೆಯೆತಿ
[ಶೋಭಿಸಿದುದೂ. || 202 ||

1, ನಾವಿಕರ ಎಂಬ ಸಂಬಂಧವಿಭಕ್ತಿಯನ್ನೂ ಅದಕ್ಕೆ ಹಿಂದೆ ಇರುವ ೬ ಮುಖ್ಯವಾದವುಗಳನ್ನೂ ಗಂಗೆಯೆಂಬದಕ್ಕೆ ಹಾಕ ಬೇಕು.

ತೆಂಗ್, ಎಳೆ ಕವುಂಗು, ಪನಸ, ದ್ರಾಕ್ಷೆ, ಜಂಬು, ನಾ—
ರಂಗ, ಜಂಬೀರ, ಖರ್ಜೂರ, ಕಿತ್ತಳೆ, ಮಾತು—
ಳಂಗ, ತಿಂತ್ರಿಣಿ, ಚೂತ, ನೆಲ್ಲಿ, ಬಿಲ್ವ, ಕಪಿತ್ಥವೆಂಬ ನಾನಾ ತ[1]ರು
[ಗಳೂ ||
ತೊಂಗುವ ಫಲಾವಳಿಯ ಭಾ[2]ರಂಗಳಾವಗಂ
ಪಿಂಗದಿವಸಿಳೆಗಿಳಿಪ ಬೇಕ್ ಎಂದು ಬಾಗಿ, ಬಂದ್
ಅಂಗನೆಯರಿಂಗ್ ಎಸೆದಪ್ಪಿಕ್ಕೆಲದೊಳಾ ನದಿಯ ರಮ್ಯ-ತಟ-ಬನಗ
[ಳೊಳಗೇ. || 203 ||

1, ಇದು ಆಖ್ಯೆಯಾಗಿದೆ. 2, ಭಾರಗಳ (=ಭಾರಗಳನ್ನು) ಯಾವಾಗಲೂ ಪಿಂಗದೆ, ಇವನ್ನು (ಈ ಫಲಗಳ ಭಾರಗಳನ್ನು) ಇಳೆಗೆ ಇಳಿಸ ಬೇಕೆಂತ ಬಾಗಿ, (ನೀರಿಗೆ) ಬಂದ ಇತ್ಯಾದಿ.



## A FOREST

### ಒಂದು ಹಳುವ

ಇಳಿದು ರಥದಿಂದ, ಮಂದಾಕಿನಿಗೆ ಪೊಡಮಟ್ಟು,
ಬಳಿಕ ನಾವಿಕರೊಡನೆ ನಾವದೊಳ್ ಗಂಗೆಯಂ
ಕ[1]ಳೆದವಯವಾನಾಮಯಕರ ನೀರೊಳ್ ಮಿಂದು, ಪ[2]ಯಣಸ್ಥನೆದ್ದು,
[ತದನೊ ||
ಬಳಗೊಳಗೆ ಮರುಗಿ, ಬಿಸು-ಸುಯ್ದು, ಚಿಂತಿಸುತ ಮುಂ-
ದಳಿದುಗ್ರ-ಮೃಗ-ಪಕ್ಷಿ-ಗಣದಿಂದ ಘೂರ್ಣಿಸುವ
ಹಳುವಮಂ ಪೊಕ್ಕನೆಡಿಯಿಡು[3]ವಡೆಸದಳಮೆಂಬ ಕರ್ಕಶದ ಮಾ
[ರ್ಗದಿಂದಾ. || 204 ||

1, ಕಳೆದು, ಅವಯವ-ಅನಾಮಯಕರವಾದ. 2, ಇದು ಆಖ್ಯೆಯಾಗಿದೆ. 3, ಇಡುವಡೆ, ಇಡುವದಕ್ಕೆ.

ಶಕುನಿ-ಚಿತ್ಕಾರ-ಘೋಷಣ-ಮಯಂ, ತೃಣ-ಮಯಂ,
ವಿ[1]ಕಿರದುಪಲಾಳಿ-ಕರ್ಕಶ-ಮಯಂ, ಶಶ-ಮಯಂ,
ಪ್ರಕಟ-ಕಂಟಕ-ಶೀರ್ಣ-ತರು-ಮಯಂ, ರುರು-ಮಯಂ, ವಿವಿ[2]
[ಧೋಗ್ರ-ಜಂತು-ಮಯಮೂ, ||
ನಕುಲ-ಮೂಷಕ-ಸರೀಸೃಪ-ಮಯಂ, ದ್ವಿಪ-ಮಯಂ,
ಸಕಲ-ಭೂ-ವಿಷಮ-ಸಂಕುಲ-ಮಯಂ, ಬಿಲ-ಮಯಂ,
ವೃಕ-ಶೂಕರ-ವ್ಯಾಘ್ರ-ಚಯ-ಮಯಂ, ಭಯ-ಮಯಂ ತಾನ್ ಎನಿ
[ಸಿ, ಕಾ[3]ಡ್ ಇರ್ದುದೂ. || 205 ||

1, ವಿಕಿರದ ಉಪಲ-ಆಳಿ. 2, ವಿವಿಧ ಉಗ್ರ. 3, ಇದು ಪೂರ್ಣ ಶ್ಲೋಕದ ಆಖ್ಯೆಯಾಗಿದೆ.

# XXI. ಪಾಠ

## DAWN

### ಪ್ರಾತಃಕಾಲ

ಸ್ವರ ಗೈದವೆನಿತರೊಳ್ ಚರಣಾಯುಧಂ; ಖಳ-ಜ—
ನರ ಮನಂ ಬೆಚ್ಚಿದುದು; ಮೂಡ ದೆಸೆ ಬೆಳಗಿತು; ಪ—
ಸರಿಸಿದುದು ತಂ-ಗಾಳಿ; ಖಗ-ನಿಕರಮುಲಿದೆದ್ದ[1]ವರಳಿದವು ತಾವರೆ
[ಗಳುಂ; ||
ಮೊರದವಾರಡಿ; ನೆರೆದವೆಣೆ-ವಕ್ಕಿ; ತಾರೆಗಳ್
ಪರೆದ[2]ವಿಡಿದಿರ್ದ ಕತ್ತಲೆ ತೊಲಗಿತುತ್ಪಲಂ
ಕೊರಕಿದುದು; ಜನದ ಕಣ್ಣ-ಎವೆ ದೆರೆದುದೊದರಿದರು ನೇಗಿಲಂ
[ಬಡಿವ ಜನರುಂ. || 206 ||

1, ಉಲಿದು (ಉಲಿಯುತ್ತಾ ಆಕಾಶಕ್ಕೆ) ಎದ್ದವು; ಅರಳಿದವು ಇತ್ಯಾದಿ. 2, ಪರದವು; ಇಡಿದು ಇರ್ದ ಇತ್ಯಾದಿ.

ಅರಳಿದ ಶೋಣಾಬ್ಜ[1]ಗಳ ಛಾಯೆಗಳಡರ್ದ[2]ವೆನೆ,
ಭರದಿಂದ ಕತ್ತಲೆಯ ಮೇಲೆ ಬಹ[3] ರವಿಯ ರಥ-
ತುರಗ-ಖುರ-ಪುಟದಿಂದಲೇಳ್ವ ಕೆಂ-ಧೂಳ್ಗಳೆನೆ, ಪ್ರಾಚೀನ ಗಿರಿಗ
[ಳಲ್ಲೀ ||
ಸರಸದಿಂ ಬೇಗೆ ಬಿಸಿಲಿಂ ಬೆಂದ ಪುಲ್ಲ ಮೆಂದ್
ಉರುಪುರಿದು ಖ-ಮುಖದಲಿ ಬಿಂಬಿಸಿದುದೆನಲು, ವಿ—
ಸ್ತರದ ಸಂಧ್ಯಾ[4]-ರಾಗವೈದೆ ರಂಜಿಸುತಿರ್ದುದೆಂದು ಮೂಡಣ
[ದೆಸೆಯೊಳುಂ. || 207 ||

1, ಶೋಣ (ಕೆಂಪು ಬಣ್ಣದ) ಅಬ್ಜಗಳ. 2, ಅಡರಿದವು ಎಂಬಂತೆ. 3, ಬರುವ. 4, ಸಂಧ್ಯೆಯ ರಾಗಂ (ಬಣ್ಣಂ); ಇದು ಆಖ್ಯೆ.



## EVENING-TIME

### ಸಾಯಂಕಾಲ

ಅರಸ, ಕೇಳ್! ಆದುದೆನಿತರೊಳೆಸ್ತಮಯ-ಸಮಯ;
ಮರವಿಂದೆಲರ್ಗಳೊಳ್ ಶಿರೆಯೊದವಾರಡಿಗ[1]—
ಳಿರದೆ ಪರಿದವು ಬಿಸಿಲ ಬೀಡುಗಳ್; ಗೂಡು-ಗೊಂಡವು ಕೂಡೆ
[ಪಕ್ಷಿ-ಜಾತೀ; ||
ಪಿರಿದೆನಿಪ[2] ಕತ್ತಲೆಯ ರಾಶಿಯಂ ಪೊತ್ತು[3] ಕೊಂಡ್
ಉರಿವ ಬೆಂಕಿಯ ಕಡೆಯಲುಳಿದ ಕೆಂ-ಗೆಂಡಮೆನೆ,
ತರಣಿ-ಮಂಡಲಮೆಸೆದುದಪರ ದಿಗ್-ಭಾಗದೊಳ್ ಕೂರಗಿದವು ಕೋ
[ಕಂಗಳೂ. || 208 ||

1, ಆರಡಿಗಳು; ಇರದೆ ಪರಿದವು ಇತ್ಯಾದಿ. 2, ಎನ್ನಿಸುವ. 3, ಕತ್ತಲೆಯ ರಾಶಿಯನ್ನು (ಒಂದು ದೊಡ್ಡ ಭಾರದಂತೆ) ಹೊತ್ತು ಕೊಂಡು ಉರಿವ ಕೆಂಗೆಂಡವೆಂಬಂತೆ ಸೂರ್ಯನು (ಮಂದವಾಗಿ) ಎಸೆದುದು; ಅಪರ ಇತ್ಯಾದಿ.

ಸುಲಲಿತಾಂಬರ-ಮಣಿ-ವಿಭೂಷಣವನುಳಿದು, ಮಂ—
ಗಳ-ರಂಗವಂ ತಾಳ್ದು, ತಾರಾಭರಣವನಾಂ—
ತಳೊ ಸಂಜೆ[1]-ರಾಣಿಯೆನೆ, ಕೆಂಪ್ ಇಡಿದುಡು-ಗಣಂಗಳೆಸೆದವಾಗಸ
[ದೊಳಾಗಾ[2] ||
ನಳಿನಾಳಿ, ನಾಳಿನಳಿ-ಕುಲ-ಕೀರ-ವಿಸರ-ಪರಿ—
ಮಳ-ಸಾರ-ಮಧುವೆಂದು ಬಾಗಿಲ್ಗಳಂ ಪೂಡಿ
ಕೊಳುತಿರ್ಪವೆಂಬ್ ಅಂತೆ, ಮುಗಿವುತಿರ್ದವು; ಕೂಡೆ ತೀವಿದವು
[ಕತ್ತಲೆಗಳೂ. || 209 ||

1, ಇದು ಆಖ್ಯೆಯಾಗಿದೆ. ಸಂಜೆಯೆಂಬ ರಾಣಿಯು ಸುಲಲಿತವಾದ ಅಂಬರ-ಮಣಿಯ (ಸೂರ್ಯನ) ವಿಭೂಷಣವನ್ನು ಉಳಿದು (ಬಿಟ್ಟು), ಮಂಗಳದ (ಮಂಗಳವೆಂಬ ಗ್ರಹದ) ರಂಗವನ್ನು (ಬಣ್ಣವನ್ನು) ತಾಳಿ (ಉಟ್ಟುಕೊಂಡು), ತಾರೆಗಳ ಆಭರಣವನ್ನು ಆಂತಳೋ? (ಆತಳೋ? ತಕ್ಕೊಂಡಳೋ?) ಎಂಬಂತೆ, ಕೆಂಪು ಇಡಿದು ಇತ್ಯಾದಿ. 2, ಆಗ ನಳಿನ-ಆಳಿ, (ಇದು) ನಾಳಿನ (ನಾಳೆ ಬರುವ) ಅಳಿ-ಕುಲದ ಕೀರವಾದಂಥ, ವಿಸರವಾದ ಪರಿಮಳದ ಸಾರವಾದಂಥ ಮಧುವೆಂದು, ಬಾಗಿಲುಗಳನ್ನು (ಎಸಳುಗಳೆಂಬವುಗಳನ್ನು) ಪೂಡಿ ಕೊಳ್ಳುತ್ತಿರುವವೆಂಬ ಹಾಗೆ, ಇತ್ಯಾದಿ.

## MOON-RISE

### ಚಂದ್ರೋದಯ

ಸುತ್ತ-ಸುತ್ತಲುಮಂಧಕಾರಮಹೊಗ್ಯ ಇರುತಿರಲ್,
ಚಿತ್ತವಿಸು, ತಂಬ್-ಎಲರ್ ಬೀಸಿದೊಡೆ ಪ್ರಜ್ವಲಿಸಿ
ಮೆತ್ತ್[1] ಉರಿವ ಕಿಚ್ಚಿನೇಳಿಗೆಯಂತೆ, ಮೂಡಿದಂ ಚಂದ್ರಮಂ ಚೆ
[ಲ್ವಿನಿಂದಾ. | 210 |

1, ಮತ್ತು, ಮತ್ತಾಗಿ (ಸಂತೋಷವಾಗಿ).

ಮುರುಗಿದವು ಕೋಕ ಕೋಕನದಂ[1]ಗಳೊಗ, ಬಾಯ್ದ್ಯ
ದೆರದವು ಚಕೋರ-ಕೋರಕ-ಕುಮುದ-ರಾ[2]ಜಿಗಳ್,
ತುರುಗಿದ ತ[3]ಮಿಸ್ರಮಾಲೋಕ-ಲೋಕ-ಸ್ಥಿತಿಗೆ ತೊಲಗಿದವು ದೆಸೆ-ದೆ
ಸೆಯೊಳೂ, ||
ಮೊರೆದುದು ಸಮುದ್ರಮುದ್ದ್ರವದ ಪೆಚ್ಚುಗೆಯಿಂದ—
ಒ[4]ರೆತುದುಡು-ಕಾಂತ-ಕಾಂತ-ಪ್ರತತಿ, ಟಿಟ್ಟಿಭ-
ಸ್ವರಟಿಟ್ಟಿಟಿಟ್ಟಿಕರಿಸಿದುದೊಂಟಿ ದಾರಿಗರ ಕಿವಿಗೆ, ಚಂದ್ರೋದ
[ಯದೊಳೂ. || 211 ||

1, ಯಾಕಂದರೆ ಇವು (ತಮ್ಮನ್ನು ಅಗಲಿ ಹೋದ) ಸೂರ್ಯನ ಮಿತ್ರರು. 2, ಇವು ಚಂದ್ರನ ಕಿರಣಗಳಿಂದ ಬದುಕುತ್ತವೆಂಬ ಕಥೆ ಅದೆ. 3, ತಮಿಸ್ರಂ (ತಮಿಸ್ರಗಳು ಚಂದ್ರನ) ಆ ಲೋಕದ (ದೃಷ್ಟಿಯು, ಚಂದ್ರನು ದೃಷ್ಟಿಸುವ) ಲೋಕದ ಸ್ಥಿತಿಗೆ (ಮೇರೆಗೆ), ಅಂದರೆ ಚಂದ್ರನಿಗೆ ದುರಾದ ಲೋಕದ ಪ್ರದೇಶಕ್ಕೆ, ತೊಲಗಿ ಹೋದವು. ಆ ಲೋಕವೆಂಬದಕ್ಕೆ ಪ್ರಕಾಶವೆಂಬ ಅರ್ಥವು ಸಹ ಅದೆ; ಈ ಪ್ರಕಾರವಾಗಿ ಆ ವಚನದ ಅರ್ಥ ಮಾಡ ಬೇಕಾದರೆ, ತಿಮಿಸ್ರಂ ಪ್ರಕಾಶವುಳ್ಳ ಲೋಕ-ಸ್ಥಿತಿಗೆ ತೊಲಗಿದವು (ಆ ಸ್ಥಿತಿಯನ್ನು ತೊಲಗಿ ಬಿಟ್ಟವು) ಎಂತ ಆಗುತ್ತದೆ. 4, ಒರೆಯಿತು (ಒರ್ತಿಯಾಯಿತು) ಉಡು-ಕಾಂತನ (ಉಡುಗಳ ರಾಜನ, ಚಂದ್ರನ) ಕಾಂತಗಳ (ಕಲ್ಲುಗಳ) ಪ್ರತತಿ. (ಚಂದ್ರ-ಕಾಂತಗಳೆಂಬ ಕಲ್ಲುಗಳು ಚಂದ್ರನ ಕಿರಣಗಳು ತಾಗಿ ನೀರನ್ನು ಬಿಟ್ಟು ಕೊಡುತ್ತವೆಂಬ ಕಥೆ ಅದೆ).

ತವೆ ಶಾಂತಮಮೃತ-ರೂ[1]ಪಂ, ಶೈತ್ಯ-ವರ್ಧನಂ,
ಭುವನ-ಪ್ರಕಾಶಂ, ಜನಾವಲೋಕ-ಪ್ರಿಯಂ,
ಧವಳಂ, ಸು-ವೃತ್ತಂ, ಗಗನ-ಮುಖ-ಸುಭೂಷಣಂ, ಶಶ-ಬಿಂಬ
[ಮಂಪದ-ಗಾಮಿ, ||
ನವ-ನವಾಗಮವಾದ ರಾಜನಭ್ಯುದಯದೊಳ್
ಕುವಲಯ-ಶ್ರೀ ವಿರಾಜಿತಮಪ್ಪ[2]ದೇನ್ ಕೌತು–
ಕಮೆ? ಜಾರ ಚೋರರ್ಗಳೆಡಗದಿರ್ದ[3]ಪರೆ? ಪೇಳ್! ಎನಲಿಂ[4]ದು ಮ
[ರದನೆಂದೂ. || 212 ||

1, (ಹಾಲಿನ) ರೂಪವುಳ್ಳವನು. ಶಾಂತಂ, ಅಮೃತ-ರೂಪಂ ಇತ್ಯಾದಿ ವಿಶೇಷಣಪದಗಳು 'ಆದ, ಎಂಬ' ಅನುಬಂಧಕ್ರಿಯಾಪದದಿಂದ 'ರಾಜನ' (ಚಂದ್ರನ) ಎಂಬದಕ್ಕೆ ಹೋಗುತ್ತವೆ. 2, ಆಗುವದು. 3, ಇರುವರೇ? (183ನೇ ಶ್ಲೋಕ ನೋಡಿರಿ). 4, ಎನ್ನಲು, ಎನ್ನುವಂತೆ.

## SPRING-TIME

## ವಸಂತ-ಕಾಲ

(ಭಾರತ)

ಭಾಮಿನಿ-ಷಟ್ಪದಿ (1ನೇ ಶ್ಲೋಕ ನೋಡ ಬೇಕು)

ತೆ[1]ಗೆದುದೆಗ್ಗದ ತಂಪು; ನದಿ ಸರ–
ಸಿಗಳ ತಡಿಯಲಿ ಹೆ[2]ಜ್ಜೆಯಾದುದು;
ಹಗಲು ಹಾವಸೆ ಹ[3]ರಿದುದೊಕ್ಕರಿಸಿದುದು ಹಿ[4]ಮ ಜಲವಾ; ||
ಸೊಗಸಿದವು ನೆಳಲುಗಳು; ದೂ[5]ರಕೆ
ಶೆಗಳಿಕೆಗಳೇರಿದವು; ತಂ-ಗಾ–
ಳಿಗೆ ವಿಹಾರಿಸಿ, ವೈಯು ತೆ[6]ತ್ತುದು ಕೂಡೆ ಜನ-ನಿಕರಾ. || 213 ||

1, ತೆಗೆಯಿತು (ತೆಗೆಯಲ್ಪಟ್ಟಿತು). 2, (ಅಲ್ಲಿ ತಂಪು ಅದೆಂತ ಜನರ) ಹೆಜ್ಜೆ ಆಯಿತು. 3, (ಬಿಸಲಿಗೆ) ಹರಿಯಿತು. 4, ಇದು ಕರ್ತೃವಿಭಕ್ತಿ. 5, ವಿಸ್ತಾರಕ್ಕೆ, ವಿಸ್ತಾರವಾಗಿ. 6, ತೆತ್ತಿತು (ಕೊಟ್ಟಿತು).

ಮೊರವ ತುಂಬಿಯು ಗಾಯಕರ, ನಯ
ಸರದ ಕೋಕಿಲ-ಪಾಠಕರ, ಬಂ–
ಧುರದ ಗಿಳಿಗಳ ಪಂಡಿತರ, ಮಾ-ಮರದ ಕರಿ-ಘಟೆಯಾ, ||
ಅರಳಿದೆಂಬುಜ-ಸತ್ತಿಗೆಯು, ಮಂ–
ಜರಿಯ ಕುಸುಮದ ಚಾಮರದ ಚಾ–
ತುರ-ವಸಂತ-ನೃಪಾಲ[1] ನಡೆದನು ಜನರ ಮೈ ಮೇಲೆ. || 214 ||

1, ಚಾತುರವಾದ ವಸಂತವೆಂಬ ರಾಜನು; ಗಾಯಕರ, ಪಾಠಕರ ಇತ್ಯಾದಿ ಮುಖ್ಯ ಸಂಬಂಧವಿಭಕ್ತಿಗಳನ್ನು ಇವನಿಗೆ ಹಾಕ ಬೇಕು.

ಫಲಿತ ಚೂತದ ಬಿಣ್ಪುಗಳ, ನೆರೆ
ತಳಿತಶೋಕೆಯ ಕೆಂಪುಗಳ, ಪರಿ–
ದಳಿತ ಕಮಲದ ಕಂಪುಗಳ, ಬನ-ಬನದ ಗುಂಪುಗಳಾ, ||
ಎಳೆ ಲತೆಯ ನುಣ್ಪುಗಳ, ನವ ಪರಿ–
ಮಳದ ಪವನದ ಸೊಂಪುಗಳ ವೆ[1]–
ಗ್ಗಳಿಕೆ ಝುಳಪಿಸಿ, ಹೊಯ್ದು, ಸೆಳದುದು ಜನದ ಕಣ್ಣ ಮನ
[ವಾ. || 215 ||

1, ಇದು ಆಖ್ಯೆಯಾಗಿದೆ; ಇದಕ್ಕೆ ಆ ಮುಖ್ಯ ಸಂಬಂಧವಿಭಕ್ತಿಗಳನ್ನು ಹಾಕ ಬೇಕು.

ಪಸರಿಸಿತು ಮಧು-ಮಾಸ; ತಾವರೆ–
ಯೆಸಳ ದೋಣಿಯ ಮೇಲೆ ಹಾಯ್ದವು
ಕುಸುಮ-ರಸದುಬ್ಬರದ ತೊರೆಯನು ಕೂಡೆ ತುಂಬಿಗಳೂ[1]; ||
ಒಸೆರೊ[2] ಮಕರಂದದ ತುಷಾರದ
ಕೆಸರೊಳೆದ್ದವು[3] ಕೊಂಚೆಗಳು, ಪಗ–
ಲೆಸೆವ ದಂಪತಿ-ವಕ್ಕಿ, ಸಾರಸ, ರಾಜ-ಹಂಸೆಗಳೂ. || 216 ||

1, ತುಂಬಿಗಳು ತಾವರೆಯ ಎಸಳಾಗಿರುವ ದೋಣಿ ಹತ್ತಿ, ಕುಸುಮ-ರಸದ ಉಬ್ಬರದ ತೊರೆಯನ್ನು ಹಾಯ್ದವು (ದಾಟಿದವು). 2, ಒಸರುವ. ತೊರೆಯೂ ಅದರ ಕೆಸರೂ ಹೂವುಗಳ ಜೇನುತುಪ್ಪದಿಂದ ತುಂಬಿತ್ತು ಎಂಬಂತೆ. 3,=ಅದ್ದಿದವು, ಮುಣುಗಿದವು.

257. ಪಾಕಶಾಸನತಯ[1] ! ಕೇಳ್ಬಳಿಕ ಮಂತ್ರಿ ಸುತ

He sees there his son's corpse.

ಶೋಕದಿಂದಲ್ಲಿಹ ಮರುಳ್ಗಳಂ ಕಾಣದವಿ
ವೇಕದಿಂ ಬೇವ ಕುಣಪದ ಚಿತಿಯೊಳುರಿವ ಕಾಷ್ಟಂಗಳಂ ತೆದು
[ದುಕೊಂಡೂ.

ಆಕಾಳಿಕಾಲಯಕೆ ಬಂದದರ ಬೆಳಗಿನೊ
ಳ್ವ್ಯಾಕೀರ್ಣಕೇಶದ, ನಿಮಿರ್ದ ಕೈಕಾಲುಗಳ,
ನೇಕಾಯುಧದ ಘಾಯದೊಡಲ ರುಧಿರದ ಪೊನಲ ಸುಕುಮಾರನಂ
[ಕಂಡನೂ.

1. ಪಾಕಎಂಬ ರಾಕ್ಷಸನನ್ನು ಸಂಹಾರಮಾಡಿದವನು= ಇಂದ್ರ

258. ಕೈಯ್ಯೊಳಿಹ ಕಾಷ್ಟಂಗಳಂ ಬಿಸುಟು ತನುಭವನ

His lamentations.

ಮೈಯ್ಯ ಘಾಯಂಗಳಂ ತಡಹಿ ತಕ್ಕೈಸಿ ಮಗು
ಳೊಯ್ಯನೊಯ್ಯನೆ ಕುಳ್ಳಿರಿಸಿ ಮೊಗಕೆ ಮೊಗವಿಟ್ಟು ಚುಂಬಿಸಿ
[ಕುಮಾರನಿನ್ನಾ !

ಐಯ್ಯ ನಾ ಬಂದೆನೇಳೈ ! ತಂದೆ ! ನಾಡನಾ
ರೈಯ್ಯ ಬೇಡವೆ ? ಕಂದ ! ಕುಂತಳಾಧೀಶನೇ
ಗೈಯ್ಯ ಹೇಳದನೆನಗೆ ವಿವರಿಸದೆ ಸುಮ್ಮನಿರ್ದಪೆ ? ಯೆಂದೊರಲ್ದ
[ನವನೂ.

259. ಕಂಬನಿಗಳರುಣಾಂಬುವಂತೊಳೆಯೆ[1], ಮುಂದಾಡಿ

He kills himself.

ಪಂಬಲಿಸಿ ಹಲುಬಿದಂ ; ಮರುಗಿ ತಂನಿಂ ಮಡಿದ
ನೆಂಬಳಲ್ಕಿಗೆ, ಮಂತ್ರಿ ಸೈರಿಸದೆ ಕೆಲಬಲದ ಕಂಬಂಗಳಂ ಪಾಯು
[ಲೂ.

1. ಕೆಂಪುನೀರು = ರಕ್ತ.

ಜ್ವಾಲೆ ಶೀತಳವಾದುದಗ್ನಿಯುಂ ಬಿಟ್ಟು ಕೈ
ಕಾಲುಗಳು ದಿನ-ಮಣಿಯ ನಸು ಬಿಸಿಲ ಬಯಸಿದವು;
ಮೂ-ಲೋಕಮಂ ಮಾಗಿ ನಡುಗಿಸಿತು, ಮೇಣ್ ಉಡುಗಿಸಿತು ಪೇ
[ರ್ಚಿದೈಕಿಲಿಂದಾ. || 219 ||

ನೆರೆ ಲೋಭಿ ವಿತ್ತಮಂ ಸುವಿಧಾನಮಂ ಗೇದ್, ಅ—
ತಿರ ಲಾಭಮಂ ಸಂತತಂ ಕರ-ಸ್ಥಮೆಂದೆಂಬ
ತೆರದಿಂದಲಿಡಿದ ಶೈಶಿರದ ಶೀತಳಕೆ ಪಗಲಿರುಳು ತಮ್ಮ[1] ಗೂಡುಗಳ
[ನೂ ||
ಪೊರಮಟ್ಟು ಪಾರಲೊಲ್ಲದೆ, ವಾಯಸ-ಪ್ರತತಿ
ಗರಿಗಳಂ ಪೊದಿಸಿ[2], ಮಗ್ಗುಲೊಳೆಟ್ಟು ಕೋಗಿಲೆಯ
ಮರಿಗಳಂ, ಮೈಯೊಳ್ ಪುದುಗಿ ಕೊಂಡು, ಮರುಕದಿಂದ್ ಐದೆ
[ಪಾಲಿಸುತಿರ್ದವೊ. || 220 ||

1, (ವಾಯಸಗಳು) ತಮ್ಮ. 2, (ಕೋಗಿಲೇ ಮರಿಗಳ ಮೇಲೆ) ಪೊದಿಸಿ.

ಭುವನಮಂ ತೀವ್ವಿ ಇರ್ದ ಹಿಮವನುಂ[1] ತಮವನುಂ
ತವಿಸುವುತ್ಸವದಿಂದಲೆವಗಡಿಸಿ, ಜವ-ಗೆಡಿಸಿ,
ಭವಣಿ-ಗೊಂಡ್, ಅಭ್ರದೊಳ್ ತೊಳಲುತ್ತ ಬಳಲುತ್ತ ಬಂದೊಡಂ[2];
[ಮತ್ತೆ[3] ಬಿಡದೇ ||
ಕವಿಯಲ್; ಪ್ರತಾಪದೇಳಿಗೆ ನಂದಿ, ಮಿಗೆ ಕುಂದಿ,
ರವಿ ತಣ್ಣಗಾದುದೆನೆ ಕಾಣಿಸಿತು. ಮಾಣಿಸಿತು[4]
ತವೆ ತನ್ನ ದಯೆಯರಿಯ ಬಲ್ಲರೊಳ್ ನಲ್ಲರೊಳ್ ಮುನಿಸನಾ ಶೈಶಿರ
[ದೊಳೂ. || 221 ||

1, ಹಿಮವನ್ನೂ. 2, ಬಂದರೂ (ಈ ವರೆಗೆ ರವಿಯೆಂಬುದು ಅಧ್ಯಾ.) 3, ಮತ್ತೆ ಹಿಮವೂ ತಮವೂ ಬಿಡದೆ ಕವಿಯಲಾಗಿ. 4, (ರವಿಯು ತನ್ನ) ಮುನಿಸನ್ನು ಮಾಣಿಸಿತು ತನ್ನ ದಯೆಯನ್ನು ಅರಿಯ ಬಲ್ಲವರೊಳಗೂ ನಲ್ಲರೊಳಗೂ (ತನ್ನ ಕಿರಣಗಳು ಛಳಿಯಲ್ಲಿ ಬಹಳ ಹಿತವೆಂತ ತಿಳುಕೊಳ್ಳುವ ಗೆಳೆಯರೊಳಗೆ).

## SPRING-TIME (BY A DIFFERENT AUTHOR)

### ವಸಂತ-ಕಾಲ

(ಜೈಮಿನೀ ಭಾರತ)

ಬಂದ್ ಎಡೆಯೊಳುಂ[1] ತನಗೆ ನಿಲವಿಲ್ಲದೆತಿ ವೇಗ–
ದಿಂದ ನಿರುತಂ ಪ್ರಬಲವೆಮಾಗಿ ಬೀಸುವ ಗಾಳಿ[2],
ಚಂದನ-ದ್ರುಮಂಗಳಂ ತೊಡರ್ದಹಿಗಳಾಹಾರವಂ ಕೊಂಡು ಕೊಂ
[ಡು, ಮಿಕ್ಕು, ||
ಮಂದತ್ವಮಂ ತಳೆದು, ಮಲಯಾಚಲದ ಸೀಮೆ–
ಯಿಂದ, ಸರಸಿಜದೊಳ್ ಭ್ರಮಿಸುವ ಮರಿ-ದುಂಬಿಗಳ
ವೃಂದಮಂ ಕೂಡಿ ಕೊಂಡ್, ಎಳೆವೆಲರ್ ಬಂದುದೈ, ಕೊಳ-ಕೊಳದ
[ನೀರ್ ಬರಸುತಾ. || 222 ||

1, ಬಳಗೂ. 2, (ಅಂಥ) ಗಾಳಿಯು, ಚಂದನ-ದ್ರುಮಂಗಳನ್ನು ತೊಡರಿದ ಅಹಿಗಳು (ಅದರಲ್ಲಿ ತಮ್ಮ) ಆಹಾರವನ್ನು (ಘಾಳಿ ಅವುಗಳ ಆಹಾರವೇ ಎಂಬ ಕಥೆ ಅದೆ) ಕೊಂಡು ಕೊಂಡ ಮೇಲೆ, ಮಿಕ್ಕು (ತಕ್ಕಷ್ಟು ಉಳಿದದ್ದಾಗಿ), ಮಂದತ್ವಮಂ ತಳೆದು (ತಳೆದ ಬಳಿಕ), ಒಂದು ಎಳೇ ಎಲರು ಮಲಯ-ಅಚಲದ ಸೀಮೆಯಿಂದ ಇತ್ಯಾದಿ.

ಮಿರುಗುವ ತಳಿರ್-ದೋರಣಂಗಳಂ ಕಟ್ಟಿಸುತ,
ಮರಿ-ಗೋಗಿಲೆಗಳ ಬಾಯ್ಗಳ ಬಲಿದ ಬಂಧನದ
ಸೆರೆಗಳಂ ಬಿಡಿಸುತ್ತ*, ತುಂಬಿಗಳ ಬಳಗಕ್ಕೆ ಕಮಲಗಳ ಸೂರೆ
[ವಿಡುತಾ, ||
ಕಿರುವೆಲರೊಳೆತ್ತಲುಂ ಸಾರಿಸುತ, ಬಾಳೆಗಳ–
ನೆರಗಿಸುತ, ಮದನ-ರಸಮಂ ಪೇರ್ಚಿಸಿ, ವಸಂತ[1]
ಪೊರಮಟ್ಟು, ಮಾಗಿಯನ್ನ್ ಉಡುಗಿಸಿ, ಸಮಸ್ತ ವನ[2]-ರಾಷ್ಟ್ರಮಂ
[ಕೈ[3]ಕೊಂಡನೂ. || 223 ||

* 218ನೇ ಶ್ಲೋಕ ನೋಡಿರಿ. 1, ಇದು ಪೂರ್ಣ ಶ್ಲೋಕಕ್ಕೆ ಆಖ್ಯೆಯಾಗಿದೆ. 2, ವನವೆಂಬ ರಾಜ್ಯವನ್ನು. 3, ಕೈದು ಕೊಳ್ಳುವದು = ಹಿಡು ಕೊಳ್ಳುವದು.

[1]ಪೊಸ ಮಾವ್ ಅಶೋಕೆಯೊಳ್, ಮರಿ-ದುಂಬಿ ಕೋಗಿಲೆಯೊ–
ಳೆಸೆವ ಸಂಪಗೆ ಪೊಚ್ಚ ಪೊಂ-ದಾವರೆಯೊಳು, ಪವ–
ಡಿಸಿದ ಮಲ್ಲಿಗೆಯಲರ್ ಬೆಳತ ಬೆಳ-ದಿಂಗಳೊಳ್, ಗಿಳಿ-ವಿಂಡು ಬನ-
[ಸಿರಿಯೊಳೂ ||
ಮಸದವೊಂದ್ ಬಂದರೊಳ್ ಮಧು-ಮಾಸಕುದಯಾದ್ರಿ-
ದೆಸೆಯೆಂತೆ [2]ಚಿತ್ರಿಯೆಂತೆ [3]ಧನದಂತೆ [4]ಜಸದಂತೆ
[5]ಪಸುರು-ವೆಳಗಂತೆ ಕೆಂಪ್ ಅಸಿತಂ ಪಳದಿ ಪಳುಕು ಪಚ್ಚೆಗಳ ಬಣ್ಣಾ
[ದಿಂದಾ. || 224 ||

1, ಪೊಸ ಮಾವು ಅಶೋಕೆಯೊಳ್ (ಮಸೆಯಿತು), ಮರಿ-ದುಂಬಿಯು ಕೋಗಿಲೆಯೊಳ್ (ಮಸೆಯಿತು), ಎಸೆವ ಸಂಪಗೆಯು ಪೊಚ್ಚ ಪೊಂದಾವರೆಯೊಳ್ (ಮಸೆಯಿತು) ಇತ್ಯಾದಿ, ಮಧು-ಮಾಸಕ್ಕೆ (ಆ ಮಾಸದ ದೆಸೆಯಿಂದ), ಉದಯ-ಅದ್ರಿಯ ದೆಸೆಯಂತೆ (ಇದು ಕೆಂಪಾಗಿದೆ). 2, ಇದು ಕಪ್ಪಾಗಿದೆ. 3, ಇದು ಹಳದಿ ಆಗಿದೆ. 4, ಕೀರ್ತಿಯು ಪಳುಕಿನಂತೆ ಬಿಳೇದಾಗಿದೆ. 5, ಮದಿವೆಯಲ್ಲಿ ಸುಡುವ ಚಂದ್ರಜ್ಯೋತಿಯಂತೆ.

ತಳಿತೆಸೆವ ತರುಗಳ ನೆಳಲ್ಗಳಂ [1]ಸಾರ್ದು, ಶೀ–
ತಳದ ನಿರ್ಮಲ ವಾರಿಯಂ ನೀಂಟಿ, ನವ್ಯ ಪರಿ–
ಮಳದಿಂದ ಸೊಗಸು ತೀಡುವ ತೆಳುವೆಲರ್ಗೆ ಮೈಯೊಡ್ಡಿದರು ಮಾ
[ರ್ಗಸ್ಥರೂ. | 225 |

1, ಸಾರಿ.

[1]ಆ ಚೈತ್ರ-ಮಾಸಮೆಸೆದುದು ಧರ್ಮ-ಜನ-ಕೀರ್ತಿ
ಭೂ-ಚಕ್ರಮಂ ಮುಸುಕಿದಂತೆ, ಬೆಳ್-ದಿಂಗಳಿರೆ;
ಯಾಚಕರನೆತ್ತಲುಂ ಕೂಗಿ ಕರೆವೆಂತ್, [2]ಉಲಿಯೆ ಕೋಗಿಲೆಗಳಿಳೆಯ
[ಜನದಾ ||

1, ಆ ಚೈತ್ರ-ಮಾಸಂ ಎಸೆದುದು ಎಂಬದನ್ನು ಮುಂದಿನ ಒಂದೊಂದು ಸಾಮ್ಯಕ್ಕೆ ಹಾಕಬೇಕು. 2, ಉಲಿಯೆ ಕೋಗಿಲೆಗಳು; ಇಳೆಯ ಜನದ ಇತ್ಯಾದಿ.

ಲೋಚನಕುದಯಿಪ[1] ಪೊಸತೆಂತೆ[2], ಚೂತಾಂಕುರಂ
ಗೋಚರಿಸೆ; ಪಾತಕ-ಕ್ಷಯದಂತೆ, ಮಾಗಿಯ[3] ವಿ—
ಮೋಚನಂ ಕಾಣಿಸಲ್; ಪುಣ್ಯ-ವಾಸನೆಯೆಂತೆ, ದಕ್ಷಿಣದ ವಾಯು[4]
[ಸುಳಿಯೇ. || 226 ||

1, ಉದಯಿಸುವ. 2, ಅದ್ಭುತದಂತೆ. 3, ವಸಂತವು ಮಾಗೀ ಕಾಲವನ್ನು ಪರಿಹರಿಸುತ್ತದಲ್ಲ? 4, ಇದು ಚಂದನಗಂಧವುಳ್ಳದ್ದು.

## THE HOT SEASONS

### ಗ್ರೀಷ್ಮ-ಕಾಲ

ಅಲ್ಲಿಂದ ಮುಂದೆ ನಡೆದುದು ಗ್ರೀಷ್ಮ-ಕಾಲದೊಳ್
ಸಲ್ಲಲಿತ ವಾಜಿ; ದಿನ-ಮಣಿಯುರಿಗೆ ಭೂ-ತಳದೊ—
ಳೆಲ್ಲಿಯುಂ ಕೆರೆ ತೊರೆಗಳೊರತೆ ಬರತುದು[1], ನೀರ್ ನೆಳಲ್ಗಳನರಸೆ[2]
[ಪಾಂಥರೂ; ||
ಘಲ್ಲಿಸುವ ಬೇಸಿಗೆಯ ಬಿಸಿಲಿಂದ ಮೂ-ಜಗಂ
ತಲ್ಲಣಿಸಿತಿಳೆಯ[3] ಕಾಹ್ ಏರಿದುದು; ಸೂರ್ಯನ ವಿ—
ಸ್ಫುಲ್ಲಿತ ಕ್ರೋಧಾಕ್ಷೆಯುರಿಯ ಬಾಣಂಗಳಿಂದ್ ಹಾರದಲೆ ಮಾಣವು,
[ಕಣಾ. || 227 ||

1, ಬತ್ತಿತು. 2, ಅರಸುವಂತೆ. 3, ತಲ್ಲಣಿಸಿತು; ಇಳೆಯ ಇತ್ಯಾದಿ.

ಒಂದು[1] ಕಡೆಯೊಳ್ ಸೋವಲೊಂದು ಕಡೆಯೊಳ್ ತಮಕೆ
ನಿಂದು ಮರೆಯಾಗ್ಯ ಇಪ್ಪುದಿನ್ನ್ ಇದಂ ಕರಗಿಸುವೆ—
ನೆಂದು, ಕನಕಾಚಲವನುರುಪುವನೊ[2] ತರಣಿ ಕಿರಣದೊಳೆನೆ, ಬಿಸಿಲ್
[ಗರೆಯಲೂ; ||

1, ಇವು ತರಣಿಯ ಮಾತುಗಳು, ಹ್ಯಾಗಂದರೆ—(ನಾನು ಕನಕಾಚಲದ) ಒಂದು ಕಡೆಯೊಳಗೆ (ತಮವನ್ನು) ಸೋವಲು, (ಅದು ಅಂದರೆ ಆ ಕನಕಾಚಲವು) ಒಂದು ಕಡೆಯೊಳಗೆ ತಮಕ್ಕೆ ನಿಂತು ಮರೆಯಾಗಿ (ಆಶ್ರಯವಾಗಿ) ಇರುವದು; ಇನ್ನು ಇದನ್ನು (ಈ ಪರ್ವತವನ್ನು) ಇತ್ಯಾದಿ. 2, ಉರಿಸುವನೋ ತರಣಿ (ತನ್ನ) ಕಿರಣದೊಳು? ಎಂಬಂತೆ.

ಬೆಂದು, ಬೆಂಡ್ ಆಗಿ, ಕುಲ-ಶೈಲಂಗಳೊಸರಿಂ
ಕಂದರದ ಮೊಗದಿಂದ ಬಿಡುವ ಬಿಸು-ಸುಯ್ಯ್-ಎಲರ್
ಬಂದಪುದೆನಲ್ಕೆ, ಜಳದಿಂ ಬಿಡದೆ ಬೀಸುತಿರ್ದುದು ಗಾಳಿ ಬೇಸಿಗೆಯೊ
[ಳೂ. || 228 ||

1, ಕುಲ (ಒತ್ತೊತ್ತಾಗಿರುವ) ಶೈಲಗಳು ಬೆಂದು, ಬೆಂಡು ಆಗಿ, ಆಸರಿಂದ (ತಮ್ಮ ಬಾಯಿಯಾದ (ಕಂದರದ ಮೊಗದಿಂದ ಬಿಡುವ ಬಿಸುಸುಯ್ಯು ಎಂಬ ಎಲರು ಇತ್ಯಾದಿ. 2, ಬರುವದು, ಬರುತ್ತದೆ (115ನೇ ಶ್ಲೋಕದಲ್ಲಿ 'ಪೋದಪ್ಪುದಂ' ಎಂತ ಸರಿ ನೋಡ ಬಹುದು).

ಅವನಿಯೊಳ್ ಸಕಲ ಭೂ-ಭೃತ್-ಕುಲದ ಸೀಮೆಗಳ-
ನೆವಗಡಿಸಿ ಪೊಕ್ಕು ನಿಖಿಳ ಪ್ರಾಣಿಗಳ್ಗೆ ತಾ-
ಪವನೊದಗಿಸುವ ದುರ್ಧರ-ಗ್ರೀಷ್ಮ-ರಾಜಂ ನೆಗಳ್ದ ಚತುರಂಗ
[ಮೆನಲೂ, ||
ರವಿಯು ಕಡು ಗಾಯ್ಪುಗಳ್-ತೇರ್ ಐಸಲೊತ್ತರಿಸಿ,
ಕವಿದವು; ಬಿಸಿಲ್-ಗುದುರೆಗಳ್, ಕಾದ್ ಉರಿಯು ಕರಿಗ-
ಳೆವಧಿಯಿಲ್ಲದೆ ಮುಸುಕಿದವು; ಬಹಳ ತರು-ಗಳಿತ-ದಳ-ದಳೊಳಗ
[ಳಿಳದವೂ. || 229 ||

1, ಗಾಯ್ಪುಗಳಾದ ತೇರು ಐಸಲೆ (ಅಹಹಾ!). 2, ತರುಗಳಿಂದ ಗಳಿತವಾದ ದಳಗಳ (ಎಲೆಗಳ) ದಳವಾದ (ದಂಡಾದ) ಆಳಿಗಳು.



## XXIII. ಪಾಠ

### THE RAINY SEASON

### ವರ್ಷ-ಕಾಲ

(ಜೈಮಿನೀ ಭಾರತ)

ಭೂ-ಭುಜ-ಲಲಾಮ, ಕೇಳ್! ಅರ್ಜುನನ ವರ-ತುರಗ-
ಮೀ ಭೀಷಣ ಸೀಮೆಯಂ ತಳೆದು ಬರೆ; ಮುಂದೆ
ಶೋಭಿಸಿತು ವರುಷಾಗಮಂ, ಧರೆಯು ಬೇಸಿಗೆಯು ಬೇಸರಂ ತವೆ
[ತವಿಸುತಾ. ||

ಲಾ[1]ಭಿಸುವ ಚಾತಕ-ಪ್ರೀತಿಯಂ ಕಂಡ್, ಅಸೂ—
ಯಾ-ಭರವನೆಂಚೆಗಳ್ ತಾಳಲಾರದೆ, ಘನ-
ಕ್ಷೋಭದಿಂದ್ ಓಡಿದವು, ಪರರ ಶಿರಿಯಂ ಸೈರಿಸದ ವಿಜಾತಿಯ
[ಜನೆ[2]ಮೆನೇ. || 230 ||

1, ಮಳೆಯುಳ್ಳ ಮೋಡಗಳು ಬರುವದರಿಂದ ಚಾತಕಕ್ಕೆ ಪ್ರೀತಿ ಹುಟ್ಟುತ್ತದೆ, ಲಾಭ ಬರುತ್ತದೆ; ಯಾಕಂದರೆ ಅದು ಮೋಡದ ನೀರನ್ನು ಮಾತ್ರ ಕುಡಿಯುತ್ತದೆಂಬ ಕಥೆ ಅದೆ. 2, ಜನದಂತೆ (ಜನವು ಎಂಬಂತೆ).

ಎದ್ದವು ಮುಗಿಲ್ಗಳೇೞ್ ದೆಸೆಗಳೊಳ್, ಥರ-ಥರದೊ—
ಳಿದ್ದವು ಗಿರಿಗಳೆಂತೆ; ದುರ್ಭಿಕ್ಷ-ತಾಪದಿಂದ್
ಉದ್ದೀಪ್ತ ಚಕ್ಷುಗಳ ದಿಕ್ಕುಗಳು ಮಿಂಚಿದವು, ಮಳೆ ತಡೆ[1]ವರಾರ್?
[ಎನ್ನುತಾ ||
ಉದ್ದಂಡ ರೋಷದಿಂ ದೋಷ-ಭರ ಮರ್ತ್ಯರಂ
ಗದ್ದಿಸುವ ತೆರದಿಂದ ಮೊಳಗಿದವು; ಹಂಸಾಳಿ
ಸಾರ್ದ[2]ವಾಗಸಕೆ; ಚಾತಕ ಶುಕ ದ್ವಿಪ ಕೃಷಿಕ ಶಿಖಿಗಳ್ಗೆ ಮುದ
[ಮೊದವಿತೂ. || 231 ||

1, ತಡವವರು (ತಡಿಸುವವರು). 2, ಸಾರಿದವು.

ವರ ನವಿಲ ಸೌಖ್ಯ-ನೃತ್ಯದಿ ರಾ[1]ಜ-ನಂದನದ
ಧರಣಿಯಂ, ಕುವಲಯಾನಂದಕರವಾದ ಘನ-
ಪರಿಶೋಭೆಯಿಂದ ಚಂದ್ರೋದಯವನಾಲೋಕ-ಚಂಚಲೋದ್ಭಾ
[ಸದಿಂದಾ ||

1, (ಯಾವಾಗಲೂ ಮಳೆಗಾಲಕ್ಕೆ ಸುಖ ಪಡುವ—247ನೇ ಶ್ಲೋಕ ನೋಡಿರಿ—ನೌಲುಗಳಿರುವದೊಂದು) ರಾಜನಂದನದ ಧರಣಿಯನ್ನು (ಪೋಲ್ದು), ಕುವಲಯಗಳ ಆನಂದಕರವಾದ ಘನವುಳ್ಳ ಪರಿಶೋಭೆಯಿಂದ ಚಂದ್ರನ ಉದಯವನ್ನು (ಪೋಲ್ದು), ಆಲೋಕದ (ದೃಷ್ಟಿಗೆ ಬೀಳುವ ಅಥವಾ ದೃಷ್ಟಿಯ) ಚಂಚಲೆಯ ಅಥವಾ ಚಂಚಲದ (ಚಂಚಲೆಯ ಅಂದರೆ ಮಳೆಯಿಂದ ಹುಟ್ಟಿದ ಸಿರಿಯ; ಚಂಚಲದ ಅಂದರೆ ಅಸ್ಥಿರತ್ವದ) ಉದ್ಭಾಸದಿಂದ(ಮತ್ತು) ತರುಣಿಯ (ಬಿಳೇ ಗುಲಾಬೀ ಹೂವಿನ ಅಥವಾ ಹೆಣ್ಣು ಮಗಳ) ಕಟಾಕ್ಷದಿಂದ (ಪ್ರಕಾಶದಿಂದ ಅಥವಾ ಇತ್ತೂ ಅತ್ತೂ ಹುಡುಕಿ ಹೋಗುವ ಕಣ್ಣಿನ ನೋಟದಿಂದ (ಮತ್ತು) ರಾಜಹಂಸಗಳ ಪ್ರಭೆಯ ಹರಣದಿಂದ (ಅಷ್ಟರಿಂದ) ಹರಿಶ್ಚಂದ್ರನ ತಾಪವನ್ನು (ಪೋಲ್ದು).

ತರುಣಿಯ ಕಟಾಕ್ಷದಿಂ ರಾಜಹಂಸ-ಪ್ರಭಾ-
ಹರಣದಿ ಹರಿಶ್ಚಂದ್ರ[1]-ರಾಯ-ತಾಪವನಧಿಕ-
ತರ ವಾಹಿನೀ[2] ಘೋಷದಿಂ ನೃ-ಪನ ಯಾತ್ರೆಯಂ ಪೋಲ್ದು, ಕಾರ್[3]
[ಎಸೆದಿರ್ದುದೂ. || 232 ||

1, ಹರಿಶ್ಚಂದ್ರರಾಯನು ತನ್ನ ಹೆಂಡತಿಯನ್ನು ಕಳಕೊಂಡನು; ಅದರ ಪ್ರಕಾರ ರಾಜಹಂಸಗಳ ಪ್ರಭೆಯು ಹರಣವಾಗಿತ್ತು. ಕಳಕೊಂಡು ಹೋದ ಆ ತರುಣಿಯು ಅವನನ್ನು ದೃಷ್ಟಿಯ ಅಸ್ಥಿರವಾದ ಉದ್ಭಾಸದಿಂದಲೂ ಕಟಾಕ್ಷದಿಂದಲೂ ಹುಡುಕಿ ಕೊಂಡಳು. ಈ ತಾಪಕ್ಕೆ ಆ ಮಳೆಗಾಲದ ಲಕ್ಷಣಗಳು ಹೋಲಿದವು. 2, ವಾಹಿನಿ ಅಂದರೆ ನದಿ ಅಥವಾ ದಂಡು.—ಈ ಶ್ಲೋಕದಲ್ಲಿ ಶ್ಲೇಷಾಲಂಕಾರವು ಅಂದರೆ ಒಂದೇ ವಾಕ್ಯದಲ್ಲಿ ಎರಡು ಅರ್ಥವಿರುವ ಅಲಂಕಾರವು ಕಾಣುತ್ತದೆ. 3, ಇದು ಪೂರ್ಣ ಶ್ಲೋಕದ ಆಖ್ಯೆಯಾಗಿದೆ; ಕಾರು ಹೇಳಿದ್ದನ್ನು ಪೋಲ್ದು (ಅಂದರೆ ಪೋಲಿ), ಎಸೆದು ಇರ್ದುದು.

ಜಾತ ನವ ಶಾಡ್ವಲದ ಸೊಂಪ್ ಇಡಿದೆಸೆವ ನೆಲದ,
ಪೂತ್ ಎಸೆವ ಜಾಜಿಗಳ ವರ-ಕುಟಜ-ರಾಜಿಗಳ,
ಕೇತಕಿಯ ಧೂಳಿಗಳ ಕೆದರುತಿಹ ಗಾಳಿಗಳ, ಲಸದಿಂದ್ರ-ಗೋಪ-
[ಚಯದಾ, ||
ಕಾತ್ ಎಳೆಯ ಮಾವುಗಳ ಬನ-ಬನದ ತಾವುಗಳ,
ನೂತನ ಸುವಾರಿಗಳನೆಡೆ ಗೊಂಡ ದಾರಿಗಳ[1]
ಭೂ-ತಳದ ಶಿರಿ ಮೆರೆಯೆ, ಮುಗಿಲ್ಪೈದೆ ಮಳೆ ಗರೆಯೆ; ವರುಷ-ಋ
[ತು ಚೆಲ್ವ ಆದುದೂ. || 233 ||

1, ಈ ಸಂಬಂಧವಿಭಕ್ತಿಯೂ ಇದಕ್ಕೆ ಹಿಂದೆ ಇರುವ 5 ಮುಖ್ಯವಾದವುಗಳೂ ಭೂತಳದ ಎಂಬದಕ್ಕೆ ಹೋಗುತ್ತವೆ.



## ANOTHER DESCRIPTION OF THE RAINY SEASON

### ವರುಷ-ಕಾಲದ ಮತ್ತೊಂದು ವರ್ಣನೆ

(ಭಾರತ)

ಭಾಮಿನಿ-ಷಟ್ಪದಿ (1ನೇ ಶ್ಲೋಕ ನೋಡ ಬೇಕು)

ಒಡ್ಡು ಮೆರದುದು ಮೇಘ-ಘಟೆ; ಬಿಸಿ-
ಲೊಡ್ಡು ಮುರಿದುದು; ಚಂದ್ರ ಸೂರ್ಯರ-
ನೆಡ್ಡವಿಸಿ, ಕರಿ ಡಾಲ ಹಿಡಿದವು ಮುಗಿಲ ಚೂಣಿಗಳು; ||
[1]ಖಡ್ಡಿ ತಡವುದೆ ಕಡಲನುಡು-ಗಣ-
ದೊಡ್ಡು ಕಾಣೆನು; ಮುಗಿಲ ಬಾಯಿಗೆ
ಲಡ್ಡುಗೆಗಳಾದವು ಸಮಸ್ತ ಗ್ರಹ ಸು-ತಾರೆಗಳು. || 234 ||

1, ಖಡ್ಡಿ ತಡವುದೆ ಕಡಲನ್ನು? ಉಡು ಇತ್ಯಾದಿ.

ಆಳ ಕರೆ! ಕಟಕವನು ಸೂರ್ಯನ
ಮೇಲೆ ಬರ ಹೇಳ್! ಎಂಬ ಮೇಘ-ನೃ-
ಪಾಲಕನ ಡಂಗುರವೊ? ಮೊಳಗುವ ಶಿಡಿಲಿನೆಬ್ಬರವೋ?- ||
ಆಲಿ-ಕಲ್ಗಳೊ? ಮುಗಿಲ ಮುಂಗುಡಿ
ಯೊಳ ಹೊಯ್ಲಲಿ ಬೀಳ್ವ ತಾರಾ-
ಮಾಲೆಗಳೊ? ಜೀಮೂತ-ಲತೆ ಲಂಬಿಸಿದು[1]ದಂಬರವಾ. || 235 ||

1, ಅಥವಾ ಅಂಬರದಿಂದ.

ಮಿಂಚಿದುದು ದೆಸೆಗಳಲಿ; ಗಮನಕೆ
ಮುಂಚಿದವು ಹಂಸಗಳು; ನಭದಲಿ
ಹೊಂಚಿದುದು ಜೀವನಕೆ ಜೀವನ-ವಿರಹಿ-ನಿ[1]ಕುರುಂ
[ಬಾ. | 236 |

1, ಜೀವನ-ರಹಿತವಾಗಿದ್ದ ನಿಕುರುಂಬ (ಅಂದರೆ ಚಾತಕಗಳು; 230ನೇ ಶ್ಲೋಕ ನೋಡಿರಿ).

ಜನ-ಪ, ಕೇಳ್, ಐ! ಕಾರ್-ಮುಗಿಲ ಮುಂ-
ಬನಿಗಳೊಳು ವಹಿಲದಲಿ,[1] ಕೇರಳ
ಜನಪದದ ತೌಳವದ ಕೊಂಕಣ ವಿಷವು-ವೀಥಿಯಲೀ ||
ಜಿನುಗಿನಲಿ ಬಹು ಮಳೆಗಳಲಿ ನೆನ-
ನೆನದು, ಸಾಗರ-ತೀರದಲಿ ಬಂ–
ದನು ಕಿರೀಟಿ, ವಿಚಾರಿಸುತಲಾ ದ್ವಾರಕೀ-ಪುರವಾ. || 237 ||

1, ವಹಿಲದಲ್ಲಿ (ಬೇಗದಲ್ಲಿ); ಇದಕ್ಕೆ ನಡೆಯುಲಾರಂಭಿಸಿ ಎಂಬಂಥಾ ಒಂದು ಕ್ರಿಯಾಪದವನ್ನು ಭಾವಿಸಿ ಕೊಳ್ಳ ಬಹುದು, ಅಥವಾ ಆ ಮುಂಬನಿಗಳೊಳು ಬೇಗದಲ್ಲಿ ನೆನ-ನೆನದು, ಕೇರಳ ---- (ಮತ್ತು) ನೆನ-ನೆನದು ಎಂತ ಹೇಳ ಬಹುದು.

---

## AUTUMN

### ಶರತ್-ಕಾಲ

(ಜೈಮಿನೀ ಭಾರತ)

ವಾರ್ಧಕ-ಷಟ್ಪದಿ (140ನೇ ಶ್ಲೋಕ ನೋಡ ಬೇಕು)

ತುರಗಂ ನಡೆದುದು ಮಣಿ-ಪುರದಿಂ ಶರದ್-ದಿನದೊ[1]–
ಳರಸೆಂಚೆ ಸಂಚರಿಸ ತೊಡಗಿದವು; ನದಿಗಳು–
ಬ್ಬರವೆಡಗಿ ತಿಳಿದು ಪರಿದವು; ಬೆಳೆ[2]ತುದಾಗಸಂ; ಮೊರದವೃಡು-
[ರಾಜಿ; ಕೂಡಾ ||
ತರಣಿ ಶಶಿಗಳ ಕಿರಣವೈದೆ ನಿರ್ಮಲವಾದ[3]–
ವರವಿಂದದೆಲರನರಸಿ[4]ದವಳಿಗಳೆಲ್ಲಿಯುಂ,
ಪರದೆಯುಂ ರಂಗದ ಸ್ಥಳದಿಂದ ಶಳದಂತೆ, ಗಿರಿ-ನಿಕರಮೊಸೆದಿರ್ದು
[ದೂ. || 238 ||

1, ಶರದ್-ದಿನದೊಳು; ಅರಸು-ಅಂಚೆ (ರಾಜ-ಹಂಸೆ) ಇತ್ಯಾದಿ. 2, ಬೆಳೆಯಿತು, ಬೆಳಗಿತು. 3, ಆದವು; ಅರವಿಂದದ ಇತ್ಯಾದಿ. 4, ಅರಸಿದವು ಅಳಿಗಳು; ಎಲ್ಲಿಯುಂ, ಇತ್ಯಾದಿ.

ಕರ-ಕರದ ತಮ್ಮ ಮಳೆ-ಮನೆಗಳಿಂ ಶಶಿ-ಕಾಂತ-
ದೊರತೆ ಪೊನಲುರೆ ವೆಗ್ಗಳಿಸೆ ನಾಚಿ ಬೆಳ್ಪು ಆದ
ತೆರದಿಂ ಮುಗಿಲ್ಗಳಿರೆ, ಬೆಳ್-ದಿಂಗಳೊಪ್ಪಿದುದು ಬೆಳಸುಗಳ ಪ
[ಣ್ಣ-ದೆನೆಗಳಾ ||
ಮಿರುಪ ಪೊಂ-ಬಣ್ಣದ ಹರಿದ್ರ-ಲೇಪನದಿಂದ
ಮೆರೆವ ಪೈ-ಶಿರಿಯ ಮಾಂಗಲ್ಯದಿಂ ಭೂ-ಮಾತೆ
ನೆರೆ ಶೋಭಿಸುವ ಶರತ್-ಕಾಲದೊಳ್ ತಿರುಗಿತರ್ಜುನ-ಹಯಂ
[ಧರೆಯ ಮೇಲೇ. || 239 ||

1, ವೆಗ್ಗಳಿಸಲಿಕ್ಕೆ (ತಮಗಿಂತ ಹೆಚ್ಚಾದ್ದಕ್ಕೆ). 2, ಇದನ್ನು ಹಿಡಿದು ಶೋಭಿಸುವ ಎಂಬದರ ವರೆಗೆ ಭೂ-ಮಾತೆ ಎಂಬದು ಆಖ್ಯೆ ಆಗಿದೆ (ಭೂ-ಮಾತೆ ಅಂದರೆ ತಾಯಿಯಾದ ಭೂಮಿ; ಇದು ಬೆಳೆಗೆ ಗರ್ಭವಾಗಿರುವದರಿಂದ ಕಾವ್ಯದಲ್ಲಿ ಆ ಹೆಸರು ತಕ್ಕದ್ದು).

# XXIV. ಪಾಠ

## A BEAUTIFUL COUNTRY

### ಒಂದು ಚಲೋ ಶೀಮೆಯ ವರ್ಣನೆ

(ಜೈಮಿನೀ ಭಾರತ)

ಭೂ[1]-ವಧೂ-ರಮಣ, ಕೇಳ್ ಐ, ಮುಂದೆ ನಡೆಸುವ ಕ-
ಥಾ-ವಿಸ್ತರವನಿನ್ನು ಪಯಣ-ಗತಿಯಿಂದ ಭ-
ದ್ರಾವತೀ-ದೇಶಮಂ ಪೊಕ್ಕರನಿಲಜ[2], ವೃಷಧ್ವಜ, ಘಟೋತ್ಕಚ-
[ತನುಜರೂ. | 240 |

1, ಭೂಮಿಯೆಂಬ ವಧುವಿನ ರಮಣನೇ ಅಂದರೆ ರಾಜನೇ. 2, ಅನಿಲಜನು (=ಭೀಮನು), ವೃಷಧ್ವಜನು ಮತ್ತು ಘಟೋತ್ಕಚನ ಮಗನು (=ಮೇಘನಾದನು) ಎಂಬವರು.

ಎಲ್ಲಿ[1]ಯುಂ ಪರಿವ ಪೇರ್ ದೊರೆಯಿಂದ, ಕೆರೆಯಿಂದ-
ಲೆಲ್ಲಿಯುಂ ಕುಸುಮದಾಗರದಿಂದ, ಸರದಿಂದ-
ಲೆಲ್ಲಿಯುಂ ರತ್ನ-ಮಯದಿಳೆಯಿಂದ, ಬೆಳೆಯಿಂದ, ಮ[2]ಣಿ-ಕೃತಕ-
[ಶೈಲದಿಂದಾ, ||

1, ಎಲ್ಲಿಯಾದರೂ. 2, ಮಣಿಯಿಂದ ಕೃತಕವಾದ ಶೈಲದಿಂದ.

ಎಲ್ಲಿಯುಂ ಸುಳಿವ ಗೋ-ವ್ರಜದಿಂದ, ಗಜದಿಂದ-
ಲೆಲ್ಲಿಯುಂ ಕತ್ತುರಿಯ ಮೃಗದಿಂದ, ಖಗದಿಂದ-
ಲೆಲ್ಲಿಯುಂ ವಿರಚಿತ ಭವನದಿಂದ, ಜನದಿಂದಲೆ ನಾಡ ಸಿರಿ[1] ಮೆರ
[ದುದೂ. || 241 ||

1, ಇದು ಆಖ್ಯೆಯಾಗಿದೆ.

ಅಂಚೆ-ವಿಂಡ್ ಆಡದ ಕೊಳಂ, ಕೊಳಂಗಳೊಳಗೆ ಪ-
ಳಂಚಿ ಸುಳಿಯದ ಗಾಳಿ, ಗಾಳಿಗಳ ಬಳಿ ವಿಡಿದು
ಸಂಚರಿಸದೆಳೆ ದುಂಬಿ, ದುಂಬಿಗಳ ಬಿಡಯುಕೆಂಪ್ ಎನಿಸದೆೞ್ದ ಅಲ
[ರೆಲರ್ಗಳಾ ||

ಗೊಂಚಲೆರಗಿಸದ ಲತೆ[2], ಲತೆಗಳೆಡರದ ತಳ್ಕಿ-
ನಿಂ ಚಿಗುರದೆ ಮಾವು, ಮಾವುಗಳ ಚೆಂ-ದಳಿರ್
ಮಿಂಚದ ಬನಂ, ಬನಗಳಂ ಬಳಸದೂರ್ಗಳಿಲ್ಲದೆಡೆ[1]ಯಿಲ್ಲ್[3] ಆವಿಳೆ
[ಯೊಳೂ. || 242 ||

1, ಇಲ್ಲದ ಎಡೆ ಎಂಬುದು ಮುಖ್ಯ ಆಖ್ಯೆಯಾಗಿದೆ. ----- ಕೊಳಂ, ---- ಗಾಳಿ, ---- ದುಂಬಿ, ---- ಅಲರು, ---- ಲತೆ, ---- ಮಾವು, ---- ಬನಂ, ---- ಊರ್ಗಳು ಎಂಬವುಗಳು ಇಲ್ಲದ ಎಂಬದಕ್ಕೆ ಆಖ್ಯೆಯಾಗಿವೆ. 2, ಲತೆಗಳು ಅಡರದ (ಮತ್ತು) ತಳ್ಕಿನಿಂದ ಚಿಗುರದ ಆ ಮಾವು. 3, ಇಲ್ಲ ಆ ಇಳೆಯೊಳು.

ಬೆಳೆಯದ ಪೊ[1]ಲಂಗಳಂ, ಬೆಳ್-ದಾವರೆಗಳೆಲರ್
ದಳೆಯದ ಕೊಳಂಗಳಂ, ಮಣಿ[2]-ಶಿಲಾ-ರೋಚಿಯಿಂ
ಪೊಳೆಯದೆಚಲಂಗಳಂ ತರುಣಾರುಣ-ಪ್ರಭೇ ಚೆಂ-ಮುಖಂ ನಗು
[ವೆಂತ್ ಇರೇ, ||

1, ಇದು ಮುಂತಾದ ಮುಖ್ಯ ದ್ವಿತೀಯಾವಿಭಕ್ತಿಗಳನ್ನು ಅರಸಲು ಎಂಬದಕ್ಕೆ ಹಾಕಬೇಕು. 2, ತರುಣವಾದ ಅರುಣದ ಪ್ರಭೆಯು ಚೆಂಮುಖವು ನಗುವ ಹಾಗೆ ಇರಲಾಗಿ ಮಣಿಯುಳ್ಳ ಶಿಲೆಗಳ ರೋಚಿಯಿಂದ ಪೊಳೆಯದ ಅಚಲಂಗಳಂ.

ತಳೆಯುದ ಬನಂಗಳಂ, ಕಿವಿಯೊಳಿಡಿದೊಸರಂ
ಕಳೆಯುದ ಸ್ವನಂಗಳಂ, ಮನಕೆನವರತ ಸುಖಂ
ಮೊಳೆಯುದ ಜನಂಗಳಂ ಮುಳಿದಿರಸಲೆ[1]ಂ ಕಾಣೆನೆ ಮಹೀ-ಮಂಡ
[ಲದೊಳೂ. || 243 ||

1, ಆಂ ಅಂದರೆ ನಾನು.

ಉರ್ವರೆಯು ಶಾಲಿಗಳ ಪಾಲ್-ದೆನೆಗೆ ನಭದಿಂ ಮು–
ಗುರ್ವ ಗಿಳಿ-ವಿಂಡುಗಳನುಲಿಯಿಂದ ಪಾ[1]ಮರಿಯು–
ರೆರ್ವಿಸಿದೊಡಿರದೆ ಬಾಂದಳಕೆ ಮಗುಳೇಳ್ವ ವೋಲ್, ಕಲಮಂಗಳೆ
[ಕ್ಕೆಲದೊಳೂ ||
ಕೊರ್ವಿ ನಳ-ನಳಸಿ ನಿಳ್ದ್ ಉರೆ ಬೆಳದ ರಸದಾಳಿ-
ಗರ್ವುಗಳ ಸೋಗೆಗಳ ಪಸುರು ವೊಗರಾಗಸಕೆ
ಪರ್ವುತಿಪ್ಪ್ ಆ ನಾಡೊಳೆಲ್ಲಿಯುಂ ದಾರಿಗರ ಕಣ್ಗೆ ಕೌತುಕವೊದು
[ದೂ. || 244 ||

1, ಪಾಮರಿಯರು ಗಿಳಿ-ವಿಂಡುಗಳನ್ನು ಎರ್ವಿಸಿದೊಡೆ (ಎಬ್ಬಿಸಿದರೆ), ಇವುಗಳು ಇರದೆ ಇತ್ಯಾದಿ. 2, ಪಸುರಾದ ವೊಗರು ಆಗಸಕ್ಕೆ ಪರ್ವುತ್ತಿಪ್ಪ ಆ ನಾಡೊಳು ಎಲ್ಲಿಯೂ.

ತಂಬ್-ಎಲರ ಸೊಗಸಿಂಗೆ ತಲೆ ದೂಗುವಂತೆ, ತಳೆ–
ದಂಬುಜದ ಪರಿಮಳಕೆ ಶಿರವನೊಲವಂತೆ, ಮರಿ-
ದುಂಬಿಗಳ ಗಾನಕ್ಕೆ ಕೊರಳನೊಲದಾಡುವಂತ್ ಒಯ್ಯೊಯ್ಯನೊಲೆ[1]
[ದಾಡುವಾ, ||
ಪೊಂ-ಬಣ್ಣಮೆಸೆವ ಕಳಮ-ಸ್ತ್ರೀಯು ಪರಿಚರ್ಯ–
ಮಂ ಬಿಡದೆ ಮಾಳ್ಪ ಕೆಳದಿಯುರೆನಲ್ ಕೀರ-ನಿಕು–
ರುಂಬಮಂ ಸೋವಲಿಕ್ಕ್ ಅಲ್ಲ್ಯ ಇರ್ದ ಪಾಮರಿಯರೊದಗಿದವ
[ರಿಗೆ ತೋ[2]ರ್ಪರೂ. || 245 ||

1, ಹೇಳಿದ ಪ್ರಕಾರವಾಗಿ ಒಲದಾಡುವ (ಮತ್ತು) ಪೊಂಬಣ್ಣವು ಎಸೆಯುವ ಕಳಮವೆಂಬ ಸ್ತ್ರೀಯು ಪರಿಚರ್ಯವನ್ನು ಬಿಡದೆ ಮಾಡುವ ಕೆಳದಿಯರ ಹಾಗೆ (ಇರುವ) ಕೀರಗಳ ನಿಕುರುಂಬವನ್ನು (ಆ ಕೀರಗಳು ಕಳಮದ ಗೆಳತಿಯರು; ಅವು ಗುಂಪುಗುಂಪುಗಳಾಗಿ ಬಂದು, ತಿನ್ನಲಿಕ್ಕೆ ಬೆಳೆಯ ಮೇಲೆ ಬೀಳುವವು). 2, ತೋರುವವರು.

## A BEAUTIFUL GARDEN

### ಚಂದವಾದ ತೋಟ

ತರುಣ-ಪಲ್ಲವದ ವಿಸ್ತಾರದಿಂ, ನೇರದಿಂ
ಸ್ವರ ಗೈವ ಕಲ[1]-ಪಿಕೋಚ್ಚಾರದಿಂ, ಸಾರದಿಂ
ಸುರಿವ ಪೂ-ದೊಂಗಲ ತುಷಾರದಿಂ, ಸ್ವೈರದಿಂ ಸಲ್ಲಾಪ ಕೆಳಸಿ
[ಬಳಸೀ ||
ಮೊರೆವ ತುಂಬಿಗಳ ಝೇಂಕಾರದಿಂ, ತೋರದಿಂ
ಪರಿಪಕ್ವಮಾದ ಫಲ-ಭಾರದಿಂ, ಕೀರದಿಂ .
ಕರಮೆಸವುತಿಪ್ಪ ಸಹಕಾರದಿಂ ತೀ[2]ರದೆಲ್ಲ್ಯ ಎಲ್ಲಿಯುಂ ನಂದನ
[ದೊಳೂ. || 246 ||

1, ಕಲವುಳ್ಳ ಪಿಕದ ಉಚ್ಚಾರದಿಂ. 2, ತೀರದು, ತೀರುವದಿಲ್ಲ (ಆಖ್ಯೆ ಇದರಲ್ಲೇ ಅದೆ).

ಮಿಗೆ ಮುತ್ತಿ ಮೊರೆವ ತುಂಬಿಗಳ ತಿಂಥಿಣಿಯನೇ
ಮುಗಿಲೆಂದು, ಸುಳಿವ ಗಾಳಿಗೆ ಬಿಡದೆ ನರ್ತಿ[1]ಪ ಲ-
ತೆಗಳ ಕುಡಿ-ಗೊನರ ನುಣ್-ಬೊಗರನೇ ಮಿಂಚ್ ಎಂದು, ಸೊಗ
[ಯಿಸುವ ಪೂಗಳಿಂದಾ ||
ಪೊಗುವ ಮಕರಂದ-ಬಿಂದುಗಳನೇ ಮಳೆಗಳೆಂದ್,
ಬಗೆವ ಸಂತಸದೊಳೆವ[2]ಗಮಿದ್ದು ಕುಣಿವ ಸೋ[3]-
ಗೆಗಳ ಬಳಗಂಗಳಂ, ಮಗನೆ, ಕಂಡ್ಯ ಐ, ತಳಿತ ನ[4]ಗರೋಪವ
[ನದೆಡೆಯೊಳೂ? || 247 ||

1, ನರ್ತಿಸುವ. 2, ಯಾವಾಗಲೂ. 3, ಸೋಗೆಗಳ ಅಂದರೆ ಶಿಖಿಗಳ; ಹಿಂದಿನಪದೆಲ್ಲಾ ಇವಕ್ಕೆ ವಿಶೇಷಣವಾಗಿ ಹೇಳಿ ಆದೆ. ಮಳೆಗಾಲಕ್ಕೆ ಮೆಚ್ಚುವ (231ನೇ ಶ್ಲೋಕ ನೋಡಿರಿ) ನವಿಲುಗಳು ಹೇಳಿದ ಕಾರಣಗಳಿಂದ ಒಗೆವ (ಹುಟ್ಟುವ) ಸಂತೋಷದೊಳಿದ್ದು ಕುಣಿಯುತ್ತವೆ. 4, ನಗರದ ಉಪವನದ.

ಕುದ್ದಾಲ-ಹತಿಯನುರೆ ತಾಳ್ದ್[1] ಎಂಮನಿನ್ನೆ[2]ಗಂ
ಮುದ್ದು ಗೈದ್ ಈ ಮಾಕೆ ಬೆಳೆಯಿಸಿದಳೆಂದು, ತುರು—
ಗಿದ್ದ ತನಿ ವಣ್ಗಳಂದ್ ಎಸೆವ ಪೇರ್ ಗೊನೆಗಳಂ ಸಲೆ ಸಮರ್ಪಿಸ [ಲೆಂಶಿಸೀ, ||

ಎದ್ದ್ ಇರದೆ, ಬಾಗಿದವು ಕದಳಿಗಳ್[3] ಧರಣಿಗೆನ—
ಲಿದ್ದ[4]ಪರೆ ಮರದು ಮಮತೊರ್ಥವಂ ಮಾಡಿದರ[5]—
ನೆದ್ದಾಮ ಗುಣಮುಳ್ಳ ಜೀವಿಗಳ್? ತನುಜ, ನೋಡ್! ಎಂದನೆ [ಭೀಮನೆಂದೂ. || 248 ||

1, ತಾಳಿ. 2, ಇನ್ನೆಗೂ, ಈ ವರಿಗೂ. 3, ಕದಳಿಗಳು ಧರಣಿಗೆ ಎಂನಲು (ಎಂಬ ಹಾಗೆ); ಕದಳಿಗಳು ಎಂಬದು ಹಿಂದಿನದಕ್ಕೆ ಆಖ್ಯೇಯಾಗಿದೆ; ಅವು ಭೂಮಿಯೆಂಬ ಉಪಕಾರ ಮಾಡಿದ ಮಾತೆಗೆ ತಮ್ಮ ಗೊನೆಗಳನ್ನು ಕೊಡಲಿಕ್ಕೆ ಬಾಗಿದವು; ಅದರಂತೆ ಉದ್ದಾಮ ಗುಣವುಳ್ಳ ಜೀವಿಗಳು ತಮಗೆ ಪ್ರೀತಿ ಮಾಡಿದವರನ್ನು ಮರತು ಇರುವರೇ? (ಮರತು ಬಿಡುವದುಂಟೇ?) 4, ಇರುವವೇ (115ನೇ ಶ್ಲೋಕದಲ್ಲಿರುವ 'ಪೋದಪ್ಪುದಂ' ಎಂಬದನ್ನು, 179ನೇದರಲ್ಲಿರುವ 'ಆದಪುದು' ಎಂಬದನ್ನು ಸರಿ ನೋಡಿರಿ). 5, ಮಾಡಿದವರನ್ನು.

ಕಡು-ಗೆಂಪ್ ಎಸೆವ ತಳಿರ ತನಿ-ಗೆಂಡವಂ ಕಲಕಿ[1],
ನಡೆದು, ಮೊನೆ-ಮುಗುಳ ಶಸ್ತ್ರಂಗಳಂ ಪಾಯ್ದು, ಮಾ-
ಮಿಡಿಯ ರಾಜಿಪ[2] ವಜ್ರ-ಮುಷ್ಟಿಯಂ ಪಿಡಿದು, ಲತೆಗಳ ಕೊನರ [ಚಾಟಿಯಿಂದಾ ||

ಬಡಿದು, ಕೋಗಿಲೆಯ ನಿಡು ಸರದ ಬೊಬ್ಬೆಯೊಳಾಲ್ದು,
ಬಿಡದೆ, ಬನ-ರಾಣಿಯೋಲಗದೊಳುತ್ಸವದಿಂದ—
ಲಿಡಿಗೆಡಿಗೆ ತೂಣ-ಗೊಂಡವನೆಂತ್ ಎಸೆವ ಮಂದ ಮಾರುತವ [ನೋಡ್! ಎಂದನೂ. || 249 ||

1, ಕಲಕಿ, ನಡೆದು, ಪಾಯ್ದು, ಪಿಡಿದು, ಬಡಿದು, ಆಲ್ದು (=ಆಲಿ), ಬಿಡದೆ, ಎಸೆವ ಎಂಬ ಶಬ್ದಗಳು ಮಾರುತವ ಎಂಬದಕ್ಕೆ ವಿಶೇಷಣವಾಗಿವೆ. 2, ರಾಜಿಸುವ.



# ನಿಘಂಟು.

## ಅ

ಅಂಗಣ=ಸ್ಥಳ 192, 193
ಅಂಗನೆ=ಸ್ತ್ರೀ 63, 83, 203
ಅಂಘ್ರಿ=ಪಾದ, ಕಾಲು 72, 83, 99
ಅಂಚೆ=ಹಂಸ 157, 230
ಅಂತೆ=ಹಾಗೆ
ಅಂತರ=ಬಿಡುವಿಕೆ, ನಿಲ್ಲುವಿಕೆ 133
ಅಂತರಂಗ=ಒಳಗಡೆ 201
ಅಂತರ್ಯ=ಒಳಗಡೆ 200
ಅಂದ=ರೀತಿ, ಪ್ರಕಾರ 1, 3, 10, 14, 15, 21, 126, 145
ಅಂದಳ=ಪಾಲಕಿ 197
ಅಂಬರ=ಆಕಾಶ 161, 209, 235
ಅಂಬುಜ=ನೀರಿನಲ್ಲಿ ಹುಟ್ಟಿದ್ದು, ತಾವರೆ 165 214
ಅಂಭೋ-ಜಾತ=ನೀರಿನಲ್ಲಿ ಹುಟ್ಟಿದ್ದು, ತಾವರೆ 127
ಅಂಭೋ-ರುಹ=ತಾವರೆ 186
ಅಕಟ=ಐಯ್ಯೋ 7, 13
ಅಕಳಂಕ=ನಿರ್ಮಲ 149, 153
ಅಕ್ಕಜ=ಆಶ್ಚರ್ಯ 10
ಅಕ್ಕಟ=ಅಕಟ 10
ಅಕ್ಕರು=ಪ್ರೀತಿ 174
ಅಖಿಳ=ಎಲ್ಲ 217
ಅಗಾಧ-ಕೂಪ=ಆಳವಾದ ಭಾವಿ 17
ಅಗ್ಗ=ಅಗ್ರ, ಮೊನೆ, ಹೆಚ್ಚುವಿಕೆ 88, 213
ಅಗ್ರ=ತುದಿ 123
ಅಚಲ=ಚಲವಿಲ್ಲದ, ಸ್ಥಿರ, ಪರ್ವತ 29, 188, 243
ಅಚ್ಛ, ಅಚ್ಚ=ಪ್ರಕಾಶವುಳ್ಳ, ಚಂದ 242
ಅಚ್ಚರಿ=ಆಶ್ಚರ್ಯ 151, 158
ಅಜಯನು=ಅಪಜಯ ಪಡದವನು 41
ಅಡಗೆಡೆಯುವದು=ಬೀಳುವದು 192
ಅಡರುವದು=ಏರುವದು, ಮೇಲ್ಬೀಳುವದು 150, 176, 177, 180, 186, 188, 207
ಅಡವದು=ಪಡೆಯುವದು, ಹೊಂದುವದು 9
ಅಡಸುವದು=ಬಿಗಿ ಹಿಡಿಯುವದು 20, 23, 142
ಅಡಿ=ಕಾಲು, ಹೆಜ್ಜೆ 204
ಅಡಿಗಡಿಗೆ (ಅಡಿಗೆ ಅಡಿಗೆ)=ಹೆಜ್ಜೆಗೆ ಹೆಜ್ಜೆಗೆ, ಬರುತ್ತ ಬರುತ್ತ, ಎಡೆ ಬಿಡದೆ, ಅಲ್ಲಲ್ಲಿ 140, 176, 249
ಅಡ್ಡವಿಸುವದು=ತಡಿಸುವದು, ಮರೆ ಮಾಡುವದು 234
ಅಣು-ಮಾತ್ರ=ಅಣುವಿನ ಪರಿಮಾಣ 117
ಅತಿಕ್ರಮಿಸುವದು=ದಾಟುವದು 173
ಅತಿರ=ಅಸ್ಥಿರ 220
ಅತ್ಯುಗ್ರ=ಬಹಳ ಕೋಪ 137
ಅದ್ದುವದು=ಮುಳುಗುವದು 62, 216
ಅದ್ರಿ=ಪರ್ವತ 224
ಅಧಮ=ಕೆಟ್ಟ 12
ಅಧರವು=ಕೆಳಗಣ ತುಟಿ 105
ಅಧಿಕತರ=ಹೆಚ್ಚಾಗಿ ಬೀಳುವ ಹೆಚ್ಚಾದ 232
ಅಧಿಕಾರಿ=ಯೋಗ್ಯನು, ತಕ್ಕವನು 22
ಅಧ್ವ=ಮಾರ್ಗ 17
ಅಧ್ರುವ=ಸ್ಥಿರವಲ್ಲದು 19
ಅನವರತ=ಎಂದೆಂದಿಗೂ, ನಿತ್ಯ 1, 2, 24, 25, 28—36, 243
ಅನಾಮಯಕರ=ಸೌಖ್ಯ ಹುಟ್ಟಿಸುವಂಥ 204
ಅನಿತು=ಅಷ್ಟು 152, 153, 206

ಅನಿತೆ=ಅಷ್ಟೇ 140

ಅನಿಬರು=ಅಷ್ಟು ಜನರು 92

ಅನು=ಸಮಯ 33, 95

ಅನುಚರ=ದೂತ 40

ಅನುಮತಿಸುವದು=ಮೆಚ್ಚುವದು 110

ಅನುಮಾನ=ಬುದ್ಧಿಗನುಸಾರವಾದ ಆಲೋಚನೆ, ಸಂಶಯ 40, 46

ಅಪದ-ಗಾಮಿ=ಕಾಲಿಲ್ಲದೆ ನಡೆಯುವಂಥವ 212

ಅಪರ=ಬೇರೆ, ಅತ್ತಾಗಿರುವ 208

ಅಪ್ಪಳಿಸುವದು=ಹೊಡೆಯುವದು 91

ಅಬ್ಜ=ತಾವರೆ 207

ಅಬ್ಬರ=ಕೂಗು, ಕೂಗುವಿಕೆ, ಬಾಹುಳ್ಯ 178, 235

ಅಬ್ಬರಿಸುವದು=ಕೂಗುವದು, ದೊಡ್ಡ ಶಬ್ದ ಮಾಡುವದು, ಬೊಗಳುವದು 45, 88, 177

ಅಭಿಲಾಷೆ=ಆಶೆಗಾರ 12

ಅಭೇದ್ಯ=ಅಸಾಧ್ಯ, ಕೂಡದಂಥಾದು 118

ಅಭ್ಯುದಯ=ಹುಟ್ಟುವಿಕೆ, ಉದಯ

ಅಭ್ರ=ಆಕಾಶ 221

ಅಮಿತ=ಮಿತಿಯಿಲ್ಲದ, ಮೇರೆಯಿಲ್ಲದ 72

ಅಮಿತ್ರ=ಶತ್ರು 186

ಅಮೃತ=ಹಾಲು, ಬಿಳೇ ಬಣ್ಣ 212

ಅಮೃತಾನ್ನ=ಅಮೃತದ ಅನ್ನ 105

ಅರವಿಂದ=ತಾವರೆ 238

ಅರಸುವದು=ಹುಡುಕುವದು 174, 227

ಅರಳು=ದಾಸಾಳು, ಕೆಂಪು ತಾವರೆ 162

ಅರಿ=ಶತ್ರು 88, 92, 94, 116, 125

ಅರುಣ=ಸೂರ್ಯ 243

ಅರೆ=ಬಂಡೇ ಕಲ್ಲು 124

ಅರ್ಣವ=ಸಮುದ್ರ 29

ಅರ್ಥ=ದ್ರವ್ಯ 65

ಅರ್ಬುದ=ಹತ್ತು ಕೋಟಿ 185

ಅರ್ಭಕ=ಶಿಶು 137

ಅಲರ್, ಅಲರು=ಹೂವು 208, 224, 238, 242

ಅವಕೂರ=ಅನ್ನವಿಲ್ಲದೆ ಹೋಗುವಂಥ 97

ಅವಗಡಿಸುವದು=ಮೇಲ್ಬೀಳುವದು, ಮುತ್ತುವದು 221, 229

ಅವಗಾಹಿಸುವದು=ಹಿಡುಕೊಳ್ಳುವದು 169

ಅವತರಿಸುವದು=ಕೆಳಗಿಳಿಯುವದು 46

ಅವಧಿ=ಅಡ್ಡಿ, ಮೇರೆ 229

ಅವನಿ=ಭೂಮಿ 42, 46, 86, 92, 194

ಅವನಿ-ಪ=ರಾಜ 42, 90

ಅವಯವ=ಶರೀರದ ಅಂಗ

ಅವಲೋಕ=ದೃಷ್ಟಿ 212

ಅಶೋಕ=ಮುಳ್ಳುಮುತ್ತುಗ 162, 215, 224

ಅಶೋಕೆ=ಅಶೋಕ 215, 224

ಅಶ್ವ=ಕುದುರೆ 44

ಅಶ್ವಾವಳಿ (ಅಶ್ವ-ಆವಳಿ) =ಕುದುರೆಗಳ ಆವಳಿ 44

ಅಷ್ಟ=ಎಂಟು 74

ಅಸದಳ=ಅಸಾಧ್ಯ, ಕೂಡದ್ದು 204

ಅಸಿ=ಕತ್ತಿ 189

ಅಸಿತ=ಕಪ್ಪು 200, 224

ಅಸು=ಜೀವ 38, 64, 94, 181

ಅಸುವಳಿಯುವದು (ಅಸುವು ಅಳಿಯುವದು) =ಸಾಯುವದು 64

ಅಸುವಾಸನಾ(-ನೆ)=ಸುವಾಸನೆಯಿಲ್ಲದ್ದು 219

ಅಸೂಯಾ (-ಯೆ) =ಹೊಟ್ಟೆಕಿಚ್ಚು 230

ಅಸ್ತ್ರ=ಹಾರಿಸುವ ಆಯುಧ 51, 87

ಅಸ್ತಾಚಲ (ಅಸ್ತ-ಅಚಲ) =ಅಸ್ತಮಯದ ಪರ್ವತ 56

ಅಹಿ=ಸರ್ಪ 171, 222

ಅಹಿತ=ಶತ್ರು 85, 190

ಅಳವು=ಸಾಮರ್ಥ್ಯ, ತ್ರಾಣ 34

ಅಳಿ=ಭ್ರಮರ, ತುಂಬಿ 180, 200, 209, 238

ಅಳಿ-ಕುಂತಳ=ಭ್ರಮರಕ್ಕಿರುವಂಥ ಕೂದಲು 180

ಅಳಿದುಳಿಯುವದು=ಕೆಟ್ಟರೂ ಜೀವದಿಂದುಳಿಯುವದು, ಅಡಗಿ ಹೋಗಿ ತಿರಿಗಿ ಹುಟ್ಟುವದು 201

ಅಳಿಯಾಶೆ=ವ್ಯರ್ಥವಾದ, ನೆಲೆಯಿಲ್ಲದ ಆಶೆ 41
ಅಳಿಯುವದು=ನಾಶವಾಗುವದು, ಸಾಯುವದು 7, 35
ಅಳುಪುವದು=ಕೇಡು ಮಾಡುವದು 108
ಅಕ್ಷ=ಪಗಡೆ 47
ಅಕ್ಷಯ=ಬರೇದು ಆಗದ 84

ಆ

ಆಕರ=ಗುಂಪು 202
ಆಕೀರ್ಣ=ತುಂಬಿದ್ದು 201
ಆಗತ=ಕೂಗಿ ಬಂದ 155
ಆಗಮನ=ಹತ್ತಿರ ಬರುವದು 72
ಆಗರ=ಸ್ಥಳ 241
ಆಗಸ=ಆಕಾಶ 209
ಆಜಿ=ಓಟ, ಜಗಳ, ಬೈದಾಟ 193
ಆಣ್ಮ=ರಾಜ 117
ಆತುರ=ಬಹಳ ಆಶೆ 115
ಆತ್ಮ-ಸ್ತೋತ್ರ (-ಸ್ತುತಿ)=ತನ್ನನ್ನೇ ಸ್ತೋತ್ರ ಮಾಡಿ ಕೊಳ್ಳುವದು 113, 141 [232
ಆದರ=ಪ್ರೀತಿ, ದಯೆ 82, 83
ಆನಂದಕರ=ಆನಂದ ಉಂಟು ಮಾಡುವಂಥ
ಆನನ=ಮುಖ 173
ಆನುವದು=ಇಡುವದು, ಬಿಗಿದು ಕೊಳ್ಳುವದು, ತಕ್ಕೊಳ್ಳುವದು 172, 209
ಆಪ-ಗ=ನೀರು ಹೋಗುವಂಥಾದ್ದು, ಹೊಳೆ, ಹಳ್ಳ 173
ಆಪ್ತ=ಪ್ರಿಯ 38
ಆಮಂತ್ರ=ಭೇಟಿ, ದರ್ಶನ 152
ಆಯತ=ವಿಸ್ತಾರವಾಗಿ ಹಾಕಿರುವಂಥಾದು, ವಿಸ್ತಾರವಾದಂಥ 123, 168
ಆಯತ್ತ=ಸಿದ್ಧ, ಪ್ರಾಪ್ತ 140
ಆಯಸ=ಆಯಾಸ 38
ಆಯುವದು=ಆರಿಸಿ ಕೊಳ್ಳುವದು 119
ಆಯುಷ್ಯ=ಮನುಷ್ಯನ ಜೀವದ ಕಾಲ 30
ಆರಡಿ=ಆರು ಕಾಲಿನದು, ಭ್ರಮರ 206, 208
ಆರಾಜಿಸುವದು=ತೋರುವದು, ಪ್ರಕಾಶಿಸುವದು 173, 200
ಆರುವದು=ಆಲುವದು, ಕೂಗುವದು 178
ಆರೈಯುವದು=ನೋಡಿ ಹಿಡು ಕೊಳ್ಳುವದು 86
ಆರೈಸುವದು=ಆಶಿಸುವದು 68
ಆರ್, ಆರು=ಯಾರು 117
ಆರ್ಭಟಿ=ದೊಡ್ಡ ಶಬ್ದ 196
ಆರ್ಯನು=ಮಾನಸ್ಥನು, ಆರ್ಯಕುಲದವನು 143
ಆಲಲಿತ=ಚಂದವಾದ 151
ಆಲಾಪ=ಸಂಭಾಷಣೆ, ಹಾಸ್ಯ 201
ಆಲಿಂಗಿಸುವದು=ಕೂಡುವದು, ಹಿಡಿಯುವದು 162
ಆಲಿ-ಕಲ್ಲು=ಆನೆಕಲ್ಲು 235
ಆಲುವದು=ಆರುವದು, ಕೂಗುವದು 249
ಆಲೋಕ=ದೃಷ್ಟಿ, ಪ್ರಕಾಶ 211
ಆಲ್ದು=ಆಲಿ, ಕೂಗಿ 249
ಆವರಣ=ಮುಚ್ಚುವಿಕೆ, ಮರುಳು ಮಾಡುವಂಥಾದು 15
ಆವರ್ತ=ಸುಳಿದಾಡುವ ನೀರಿನ ಸ್ಥಳ 123
ಆವಳಿ=ಸಾಲು, ಸಮೂಹ 1, 26
ಆವಾಸ=ವಾಸಸ್ಥಳ 121
ಆವು=ಆಕಳು, ದನ 140
ಆಶ್ರಮ=ಋಷಿಗಳ ವಾಸಸ್ಥಳ 38
ಆಸಕ್ತ=ಮನಸು ಅಂಟುವವ, ಮನಸು ಕೊಟ್ಟವ 7
ಆಸರ=ಆಯಾಸ
ಆಸರು=ಆಯಾಸ 228, 243
ಆಸಾರಕ=ಝಳಪಿಸುವಿಕೆ 88
ಆಸುರ=ಬಹಳ ಘೋರವಾದ ರೀತಿ 93, 170
ಆಸ್ಥಾನ=ರಾಜಸಭೆ 127
ಆಸ್ಪದ=ಸ್ಥಳ, ನೆಲೆಗಟ್ಟು, ಕೆಲಸ 19
ಆಸ್ಪದನು=ಹತ್ತಿರ ಹೋಗುವವನು, ಪ್ರೀತಿ ಮಾಡುವವನು 8

ಆಹವ=ಯುದ್ಧ 185, 190
ಆಳ್ತನ=ಅರಸುತನ, ದೊಡ್ಡಸ್ತಿಕೆ 190
ಆಳ್ದ=ಅರಸು, ಪತಿ 190

## ಇ

ಇಂಗಿತ=ಗುಟ್ಟು, ಗೊತ್ತು 100
ಇಂತ್, ಇಂತು=ಹೀಗೆ 43
ಇಂದು=ಚಂದ್ರ 212
ಇಂದ್ರ-ಗೋಪ=ಮಿಂಚುಹುಳ 233
ಇಂದ್ರ-ಚಾಪ=ಮಳೆಬಿಲ್ಲು 200
ಇಂದ್ರ-ಜಾಲ=ಮಾಯೆ, ಮಾಟ 123
ಇಂಪು=ಚಂದ 217
ಇಕ್ಕಡಿ=ಎರಡು ತುಂಡು 175
ಇಕ್ಕೆ=ಸ್ಥಳ 121, 174, 175
ಇಕ್ಕೆಲ=ಎರಡು ಕಡೆ 203, 244
ಇಕ್ಕೊ=ಇಗೋ 73
ಇಟ್ಟಣಿಸುವದು=ಗುಂಪಾಗಿರುವದು, ಬಹಳವಾಗಿರುವದು 166
ಇಡಿಕಿರಿಯುವದು=ಗುಂಪು ಗುಂಪಾಗಿರುವದು 150, 195
ಇಡಿಯುವದು=ಬೀಳುವದು, ಕೂಡಿ ಬರುವದು, ಗುಂಪಾಗಿರುವದು, ತುಂಬುವದು 176, 193, 199, 206, 209, 220, 243
ಇತ್ತಂಡವೂ=ಎರಡು ಕಡೆಯಲ್ಲಿಯೂ 179
ಇತ್ತು=ಕೊಟ್ಟು (ಈವುವದು=ಕೊಡುವದು) 1, 9, 48, 80
ಇದ್ದಲು=ಇದ್ದಲಿ 165
ಇನ=ಸೂರ್ಯ 219
ಇನೆಯ=ಪ್ರಿಯ, ಗಂಡ 181
ಇಪ್ಪ=ಇರುವ 153, 195
ಇರವು=ಇರುವಿಕೆ, ಸ್ಥಿತಿ 128
ಇರಿತಕಾರ=ಹೊಡೆಯುವವ, ತಿವಿಯುವವ 92
ಇರಿಯುವದು=ಹಾಕುವದು, ಹೊಡೆಯುವದು, ತಿವಿಯುವದು 86, 87, 125, 192
ಇರಿಸುವದು=ಇರ ಮಾಡುವದು, ಇಡುವದು 72
ಇರುಬೆ=ಸಮೂಹ 178
ಇಳೆ=ಭೂಮಿ, ನೆಲ 44, 46, 130, 242

## ಈ

ಈಡ್, ಈಡು=ಸಮಾನ, ಸರಿ 124, 144
ಈರ್ವರು=ಇಬ್ಬರು 179
ಈವುವದು=ಕೊಡುವದು 1, 9, 136
ಈಶ=ಆಳುವವ, ಕರ್ತ 78
ಈಕ್ಷಿಸುವದು=ನೋಡುವದು 195

## ಉ

ಉಗಿಯುವದು=ಹಾರುವದು, ಹರಿಯುವದು, ಹರಿದು ಬಿಡುವದು, ತೆಗೆದು ಬಿಡುವದು 167, 175, 177
ಉಗ್ರ=ಕೋಪವುಳ್ಳ, ಕೆಟ್ಟ 204
ಉಚ್ಚಳಿಸುವದು=ಹೆಚ್ಚಾಗಿ ಬೀಳುವದು, ಪಾರಾಗಿ ಹೋಗುವದು 165, 179
ಉಚ್ಚಾರ=ನುಡಿಯುವಿಕೆ 246
ಉಜ್ಜ್ವಳ=ಬಹಳ ಹೊಳೆಯುವಿಕೆ 200
ಉಡಿಯುವದು=ಶೀಳಾಗುವದು, ತುಂಡಾಗುವದು 193
ಉಡು=ನಕ್ಷತ್ರ 138, 211
ಉಡುಂಬರ=ಒಂದು ಜಾತೀ ಅತ್ತಿಮರ 162
ಉಡು-ಕಾಂತ=ನಕ್ಷತ್ರಗಳ ರಾಜ, ಚಂದ್ರ 211
ಉಡುಗುವದು=ಉಡುಗಿಸಿ ಕೊಳ್ಳುವದು (ಮೈ ಚಿಕ್ಕ ಮಾಡಿ ಕೊಂಡು ಕುಂದ್ರುವದು) 176
ಉಡು-ರಾಜ=ಉಡು-ಕಾಂತ 139
ಉಣುವದು=ಉಣ್ಣುವದು 112, 120
ಉತ್ತಂಗ=ಉದ್ದ 188
ಉತ್ತರಿಸುವದು=ದಾಟುವದು 68
ಉತ್ಫಲ=ನೈದಿಲೆ 206

ಉದಕ=ನೀರು 82
ಉದರ=ಹೊಟ್ಟೆ, ನಡುವೆ 161
ಉದುರುವದು=ಬೀಳುವದು 132
ಉದ್ದಂಡ=ಬಹಳ, ದೊಡ್ಡ 231
ಉದ್ದಾಮ=ಮುಖ್ಯ, ದೊಡ್ಡದಾದ, ಹೆಚ್ಚುವಿಕೆ, ಗರ್ವ 88, 169
ಉದ್ದೀಪ್ತ=ಉರಿಯಲಿಕ್ಕೆ ಹಿತ್ತಿದ 231
ಉದ್ದುವದು=ತಿಕ್ಕುವದು 175
ಉದ್ದ್ರವ=ಭರ್ತಿಯಾಗುವಿಕೆ 211
ಉದ್ಧಾಮ=ಪ್ರಕಾಶವುಳ್ಳ ಕೀರ್ತಿಯುಳ್ಳ, 248
ಉದ್ಧೂತ=ಎಬ್ಬಿಸಲ್ಪಟ್ಟ 184
ಉದ್ಭಾಸ=ಬಹಳ ಹೊಳೆಯುವಿಕೆ 232
ಉದ್ವೃತ್ತ=ಹೆಚ್ಚು. ಆಶೆ, ವೇಗತ್ವ 179
ಉನ್ನತಾಶೆ=ಉನ್ನತವಾದ ಆಶೆ, ದೊಡ್ಡ ಆಶೆ 77
ಉನ್ನತಿ=ಉದ್ದಳತೆ 118
ಉಪಕರಿಸುವದು=ಒಪ್ಪುವದು ಶೋಭಿಸುವದು 44
ಉಪಲ=ಕಲ್ಲು 205
ಉಪವನ=ತೋಟ 247
ಉಪಶಾಖೆ=ಚಿಕ್ಕ ಕೊಂಬೆ 166
ಉಪಹತಿ=ಕೊಲ್ಲಲ್ಪಟ್ಟದ್ದು 179
ಉಪಾಯ-ಪರ=ಉಪಾಯ ಬಲ್ಲವನಾದ 124
ಉಬ್ಬರ=ಉಬ್ಬುವಿಕೆ, ಹೆಚ್ಚುವಿಕೆ 216, 238
ಉಬ್ಬಸ=ಉಸುಲಿನ ಕಟ್ಟುವಿಕೆ, ಬಿಕ್ಕಟ್ಟು 94
ಉಬ್ಬು, ಉಬ್ಬ್=ಸೊಕ್ಕು, ಮದ 45
ಉಬ್ಬುವದು=ಸೊಕ್ಕುವದು, ಮದವಾಗುವದು 86, 87
ಉಬ್ಬೆ=ಉಬ್ಬು 190
ಉಭಯ=ಎರಡು
ಉರ=ಎದೆ 58, 177, 183
ಉರಗ=ಸರ್ಪ, ಹಾವು 169
ಉರಗಿ=ಹೆಣ್ಣುಸರ್ಪ 171
ಉರಗೇಂದ್ರ=ಹಾವುಗಳ ರಾಜ 144
ಉರವಣೆ=ಬೇಗ 186
ಉರವಣಿಸುವದು=ಸಿದ್ಧ ಮಾಡುವದು ಬೇಗವಾಗಿ ಬರುವದು, ಗರ್ವ ಪಡುವದು 92, 190
ಉರು=ದೊಡ್ಡ 43, 57, 93, 163
ಉರುಪು=ದೊಡ್ಡದಾಗಿ 207
ಉರುಬುವದು=ಬಹಳವಾಗುವದು, ಗುಂಪಾಗುವದು 163
ಉರುಬೆ=ಹೆಚ್ಚುವಿಕೆ 178
ಉರೆ=ಬಹಳ 153, 156, 239
ಉರ್ವ=ದೊಡ್ಡ, ಶ್ರೇಷ್ಠ 174
ಉರ್ವರೆ=ಉತ್ಕೃಷ್ಟ ಭೂಮಿ 244
ಉಲಿ=ಕೂಗುವಿಕೆ 244
ಉಲಿಯುವದು=ಹಾಡುವದು, ಕೂಗುವದು 206, 226
ಉಷ್ಣ=ಬಿಸಿ 3
ಉಳಿವು=ಉಳಿಯುವಿಕೆ, ರಕ್ಷಣೆ 40

## ಊ

ಊಡುವದು=ಉಣ್ಣಿಸುವದು 137

## ಋ

ಋತು (ರುತು)=ಸಮಯ 233

## ಎ

ಎಂತು, ಎಂತ್=ಹ್ಯಾಗೆ 16
ಎಂಮನ್ನು=ನಮ್ಮನ್ನು 248
ಎಕೊ=ಇಗೋ 175
ಎಚ್ಚು=ಎಸೆದು 179, 180
ಎಡರು=ಇಕ್ಕಟ್ಟು, ಕಷ್ಟ 23
ಎಡೆ=ಸ್ಥಳ 38, 117, 121
ಎಡೆಗೆಡೆಯುವದು=ಬೀಳುವದು 193
ಎಣಿಸುವದು=ಯೋಚಿಸುವದು 117, 120
ಎಣೆ, ಎಣೆಯು=ಗೆಳೆಯ
ಎಣೆ-ವಕ್ಕಿ=ಕೆಂಪು ಹಂಸ 157, 206
ಎತ್ತಣ=ಎತ್ತಾಣಗಿನ, ಎಲ್ಲಿಯಣ 185

ಎತ್ತಲೂ=ಎತ್ತಲಾಗೂ 223
ಎದೆ=ಧೈರ್ಯ 23
ಎನುವದು=ಎನ್ನುವದು
ಎಬ್ಬಟ್ಟುವದು=ಓಡಿಸುವದು 72
ಎರಗುವದು=ಮೇಲ್ಬೀಳುವದು 175
ಎರಳೆ=ಜಿಂಕೆ 163
ಎರ್ಬಿಸುವದು=ಎಬ್ಬಿಸುವದು 244
ಎಲರು, ಎಲರ್=ಘಾಳಿ 210, 217, 222, 223
ಎಲೆ=ಎಲವೋ 16, 112, 116
ಎಸವುವದು=ಎಸೆಯುವದು
ಎಸಳು=ಎಲೆ 165, 200
ಎಸುಗೆ=ಎಸೆಯುವಿಕೆ, ಹಾರಿಸುವಿಕೆ 91, 94, 181
ಎಸೆಯುವದು=ಹಾಕುವದು, ಹಾರಿಸುವದು, ಹೊಳೆಯುವದು 149, 150, 151, 152, 154, 172, 176

## ಏ

ಏಣ್=ಎಂಟು 231
ಏರು=ಬಾವು, ಏರುವಿಕೆ 177
ಏಳಿಗೆ=ಏಳುವಿಕೆ, ಹೆಚ್ಚುವಿಕೆ, ಬಲ, ಪ್ರಕಾಶ 210, 221
ಏಳ್ಗೆ=ಏಳಿಗೆ 149

## ಐ

ಐ=ಐಯ್ಯಾನೇ 4, 112, 123
ಐಕಿಲು=ಛಳಿ 219
ಐತರುವದು=ಬರುವದು, ಹೋಗುವದು 69, 149, 195
ಐದುವದು=ಶೇರುವದು, ಮುಟ್ಟುವದು, ಹೋಗುವದು 120, 186
ಐದೆ=ಚನ್ನಾಗಿ 140, 207, 220
ಐಜೋ=ಐಯ್ಯೋ 118

## ಒ

ಒಕ್ಕರಿಸುವದು=ವಾಕರಿಸುವದು, ವಾಂತಿ ಮಾಡುವದು 213
ಒಗತನ=ಕೆಲಸ, ವ್ಯವಹಾರ 146
ಒಗು-ಮಿಗೆ=ಹೆಚ್ಚಾದ ರಾಶಿ 217
ಒಗೆಯುವದು=ಹುಟ್ಟುವದು 247
ಒಡರ್ಚುವದು=ಆರಂಭಿಸುವದು, ಕೂಗುವದು 176
ಒಡನೆ=ಸಂಗಡ, ಸಂಗಡಲೇ 88, 155, 192
ಒಡಬಡುವದು=ಒಡಂಬಡುವದು 69
ಒಡಲು=ಹೊಟ್ಟೆ 35
ಒಡ್ಡು=ಗುಂಪಾಗಿ, ಗುಂಪು, ಹಿಂಡು 234
ಒಡೆಯುವದು=ಅಡೆಯುವದು 69
ಒಣಗಿಲು=ಒಣಗಿದ್ದಾದ 166
ಒತ್ತರಿಸುವದು=ಮುಂದಕ್ಕೆ ಹೋಗುವದು, ಗುಂಪಾಗಿ ಬರುವದು 185, 229
ಒತ್ತುವದು=ಬಹಳವಾಗಿರುವದು 121
ಒದಗುವದು=ಬರುವದು 8, 161
ಒದರುವದು=ಕೂಗುವದು 206
ಒದವುವದು=ಒದಗುವದು 231
ಒಪ್ಪ=ಪ್ರಕಾಶ 188
ಒಪ್ಪುವದು=ಪ್ರಕಾಶಿಸುವದು, ಚನ್ನಾಗಿರುವದು 152, 159, 200, 239
ಒಯ್ಯನೊಯ್ಯನೆ=ಮೆಲ್ಲಗೆ 245
ಒರತೆ=ನೀರಿನ ವರ್ತೆ 227
ಒರುಷ=ವರುಷ 30
ಒರೆಯುವದು=ಹೇಳುವದು, ನೀರು ಬಿಡುವದು 147, 211
ಒಲವು=ಮೆಚ್ಚುವಿಕೆ, ಪ್ರೀತಿ 47
ಒಲಿಯುವದು=ಮೆಚ್ಚುವದು 7, 31, 48
ಒಲೆಯುವದು=ಒಲಿಯುವದು; ಅಗಲಾಡುವದು 245
ಒಲ್=ಬಿಲ್, ಓಲು, ಹಾಗೆ 219
ಒಲ್ಮೆ=ಮೆಚ್ಚುವಿಕೆ 139
ಒಸರುವದು=ಹನಿಹನಿಯಾಗಿ ಬೀಳುವದು 216
ಒಸೆಯುವದು=ಸಂತೋಷ ಪಡುವದು 199
ಒಳ್, ಒಳು, ಒಳ, ಒಳ್ಗ=ಒಳಗೆ
ಒಳ್ಳೆ=ಒಂದು ತರದ ಹಾವಾಕೃತಿಯುಳ್ಳ ಜಂತು 144

## ಓ

ಓಕರಿಸುವದು=ವಾಕರಿಸುವದು, ವಾಂತಿ ಮಾಡುವದು 19
ಓಗರ=ಅನ್ನ 146
ಓಜಸು=ಜ್ಯೋತಿ, ಪ್ರಕಾಶ 72
ಓತು=ಓಲು ಕೊಟ್ಟು, ಒತ್ತಿ ಇಕ್ಕಿ (ಓಲುವದು) 37
ಓದು=ನುಡಿ, ಸ್ವರ 119
ಓಪ=ಪ್ರಿಯ, ಗಂಡ, ಪತಿ 173
ಓರ್ವ=ಒಬ್ಬ 122, 124
ಓಲಗ=ಸಭೆ 152
ಓಲು, ಓಲ್=ಹಾಗೆ
ಓವುವದು=ಪ್ರೀತಿ ಮಾಡುವದು 140
ಓಳಿ=ಆಳಿ, ಸಾಲು, ಗುಂಪು 199

## ಕ

ಕಂಗಳ=ಕುರುಡ 83
ಕಂಟ=ಲೇಖಿನಿ, ಒಂದು ಪಾತ್ರದ ಕಂಠ, ಕೊರಳು 98
ಕಂಟಕ=ಮುಳ್ಳು 205
ಕಂಠ=ಕೊರಳು 146
ಕಂದ=ಮಗ 14, 114
ಕಂದರ=ತಗ್ಗು, ಗುಹೆ 228
ಕಂಪು=ವಾಸನೆ 215
ಕಟಕ=ದಂಡು 235
ಕಟಿ=ನಡುವು, ಸೊಂಟ 84
ಕಟ್ಟ-ಕಡು=ಬಹಳ ದೊಡ್ಡ 129
ಕಟ್ಟು=ಮೇರೆ 129
ಕಠೋರ=ಭಯಂಕರ 187
ಕಡಲು=ಸಮುದ್ರ 126, 149
ಕಡಿಯಾಣ=ಕಡಿವಾಣ 46
ಕಡಿವಡೆಯುವದು=ಕಡಿಯಲ್ಪಡುವದು 192
ಕಡು=ಬಹಳ, ಹೆಚ್ಚು, ದೊಡ್ಡ 14, 23, 26, 42, 129, 138
ಕಡೆ-ಹಾಯಿಸುವದು=ದಾಟಿಸುವದು 69
ಕತ್ತುರಿ=ಕಸ್ತೂರಿ 183
ಕಥಾಂತರ=ಕಥೆ-ಅಂತರ, ನಡುವೆ ಬಂದ ಕಥೆ 46
ಕದಂಬ=ಹೆಬ್ಬಳಸು 162
ಕದನುವದು=ಕೆಸರೆಬ್ಬಿಸುವದು 175
ಕದಳಿ=ಬಾಳೆ 161, 248
ಕನಕ=ಭಂಗಾರ 5
ಕನಕಾಚಲ=ಕನಕದ ಅಚಲ, ಮೇರು ಪರ್ವತ 228
ಕಪಿತ್ಥ=ಬೆಳವಳ 162, 203
ಕಪೋತ=ಪಾರಿವಾಳ 164, 182
ಕಪ್ಪನೆ=ಕಪ್ಪಾದ 172
ಕಬ್ಬ=ಕಪ್ಪ, ಕಪ್ಪು 166, 170
ಕಮಠ=ಕೂರ್ಮ 149
ಕಮಲ=ತಾವರೆ 198, 215
ಕರ=ಕೈ, ಸೊಂಡಿಲು 90, 92
ಕರಂ=ದೊಡ್ಡದು, ಬಹಳ, ಬಹಳವಾಗಿ 154, 246
ಕರಕು=ಕಪ್ಪು, ಮೈಲಿಗೆಯಾದ 114
ಕರ-ಜಾತ=ಉಗುರು 193
ಕರತರುವದು=ಕರಕೊಂಡು ಬರುವದು 63
ಕರವುವದು=ಎಸೆಯುವದು, ಹಾಕುವದು, ಹಾರಿಸುವದು 191
ಕರ-ಸ್ಥ=ಕೈಯಲ್ಲಿರುವಂಥಾದು 220
ಕರಿ=ಆನೆ 93, 163, 196, 214
ಕರಿ, ಕರಿಯ=ಕಪ್ಪು, ಮೈಲಿಗೆಯಾದ 96, 234
ಕರುಣಾಳು (-ಲು)=ಕರುಣೆಯುವ 103, 128
ಕರುವಿಡುವದು=ಕೆತ್ತುವದು 154
ಕರೆಯುವದು=ಎಸೆಯುವದು, ಹಾಕುವದು, ಹಾರಿಸುವದು, ಸುರಿಸುವದು 191, 235
ಕರ್ಕಟ=ದೊಡ್ಡ ಏಡಿ 149
ಕರ್ಕಶ=ಕೊರಕಲು 204, 205
ಕರ್ಕೊಟ, ಕರ್ಕೋಟ=ಒಂದು ಸರ್ಪದ ಹೆಸರು 38

ಕಲ=ಮೃದುವಾದ ಧ್ವನಿ 246
ಕಲಭ=ಆನೇ ಮರಿ, ಒಂಟೇ ಮರಿ 163
ಕಲಮು=ಭತ್ತದ ಪೈರು 244
ಕಲವಿಂಕ=ಗುಬ್ಬೆ 164
ಕಲಾಪ=ಸಮೂಹ 149
ಕಲ್ಲೋಲ=ಸಮುದ್ರದ ತೆರೆ 202
ಕವಚ=ಅಂಗಿ
ಕವಿಯುವದು=ಮೇಲ್ಬೀಳುವದು 87, 91, 166
ಕವುಂಗು=ಅಡಿಕೆ 203
ಕಳ=ಕಣ, ಸ್ಥಳ 201
ಕಳ-ಕಳ=ದುಃಖದ ಧ್ವನಿ 168
ಕಳಮ=ಕಲಮ 201
ಕಳವಳಿಸುವದು=ಚಿಂತೆ ಪಡುವದು 25, 35
ಕಳಿಂಗ=ಒಂದು ಜಾತೀ ಹಕ್ಕಿ 164
ಕಳ್ಳು=ತೆಂಗಿನ ಸಾರ, ಸಾರಾಯ 109
ಕಾಂತ=ಒಡೆಯ, ಗಂಡ, ಕಲ್ಲು 140, 180, 211
ಕಾಂತಿ=ಪ್ರಕಾಶ 158
ಕಾಕ=ಕಾಗೆ 26
ಕಾಕ-ರಿಪು=ಕಾಗೆಗೆ ವೈರಿಯಾದ ಒಂದು ಹಕ್ಕಿ 164
ಕಾಕು=ಕೆಟ್ಟದ್ದು 19
ಕಾತು=ಹುಟ್ಟಿ (ಕಾಯುವದು) 233
ಕಾತುರನು=ಆಶೆಯುಳ್ಳವನು 35
ಕಾನನ=ಅಡವಿ, ಕಾಡು 6, 172
ಕಾನನ-ಚ್ಛವಿ=ಕಾಡಿನ ಪ್ರಕಾಶ 59
ಕಾಪಟ್ಯನು=ಕಪಟವುಳ್ಳವನು 118
ಕಾಪಟ್ಯವು=ಕಪಟವು 114
ಕಾಮಿತಾರ್ಥ=ಕಾಮಿತ ಅರ್ಥ, ಆಶಿಸಿದ ವಸ್ತು 136
ಕಾಯ=ದೇಹ 71, 76
ಕಾಯುವದು=ಕಾಪಾಡುವದು, ಹುಟ್ಟುವದು (ಕಾಯಿಯಾಗುವದು?) 233
ಕಾರಂಡ=ಬಾತುಕೋಳಿ 198
ಕಾರಣನು=ಕಾರಣವಾದವನು 28
ಕಾರಣೆ=ಚಿತ್ರವಾಗಿ ಬರದ ಗೆರೆ 154
ಕಾರು, ಕಾರ್=ಕಪ್ಪು, ಮಳೇ ಕಾಲ 191, 232
ಕಾರ್ಪಣ್ಯ=ಲೋಭ 138
ಕಾರ್ಮುಕ=ಬಿಲ್ಲು 191
ಕಾಲ (-ನು, -ವು)=ಕಾಲ, ಮರಣ, ಕಪ್ಪು 33, 35, 63, 71, 134 [139
ಕಾಲಾನುಕಾಲ=ಕಾಲ-ಅನುಕಾಲ, ಕಾಲ-ಗತಿ
ಕಾಲೋಚಿತ=ಕಾಲ-ಉಚಿತ, ತಕ್ಕ ಕಾಲ 120
ಕಾಸರ=ಕಾಡುಕೋಣ 163
ಕಾಹು, ಕಾಹ್=ಕಾವು 227
ಕಾಳಕೂಟ=ಕೆಟ್ಟ ವಿಷ 97
ಕಾಳಗ=ಯುದ್ಧ 201
ಕಾಳು=ಹಾಳು, ಕೇಡು 34, 146
ಕಿಂಕರ=ಸೇವಕ 12
ಕಿಂಚುಲುಕ=ಚಿಕ್ಕ ಏಡಿ 149
ಕಿಚ್ಚು=ಬೆಂಕಿ 18, 104
ಕಿರ=ಹಂದಿ, ಹೀನ, ಚಿಕ್ಕ
ಕಿರಾತ=ಒಂದು ಜಾತೀ ಕಾಡುಜನ 174
ಕಿರಿ=ಚಿಕ್ಕ 124
ಕಿರೀಟಿ=ಕಿರೀಟವುಳ್ಳವ, ರಾಜ, (ಅರ್ಜುನ) 237
ಕಿರುವು=ಚಿಕ್ಕ, ಮಂದ 223
ಕಿಳ-ಕಿಳಾ=ಜೇನೇ ಧ್ವನಿ 168
ಕೀರ=ಕ್ಷೀರ, ಹಾಲು, ರಸ, ಗಿಳಿ 24, 100, 209, 245, 246
ಕು=ಕೆಟ್ಟ 121
ಕುಂತ=ಈಟಿ 92, 189
ಕುಂತಳ=ಕೂದಲು 180
ಕುಂಭ-ಸ್ಥಳ=ಹಣೆ 183
ಕುಕಿಲು=ಕೋಗಿಲೆಯ ಧ್ವನಿ 164
ಕುಗ್ಗುವದು=ಒಳಬೀಳುವದು, ಕಡಿಮೆಯಾಗುವದು, ಕಟ್ಟಿ ಹೋಗುವದು 218
ಕುಟಜ=ಒಳ್ಳೇ ಮದ್ದಿನ ಮರ 162, 233
ಕುಟಿಲ=ಕಪಟಸ್ಥ, ಸುಳ್ಳುಗಾರ 116
ಕುತ್ತು-ಕೋವಿ=ಕುತ್ತುವಂಥ ಅಂದರೆ ಹಾರಿಸುವಂಥ ಕೋವಿ, ತುಬಾಕಿ 53

ಕುತ್ತುರು, ಕುತ್ತುರ್=ಬಹಳ ಗಿಡಗಳು ಕೂಡಿದ ಸ್ಥಳ, ಪೊದೆ 178, 179
ಕುದಿಯುವದು=ತಾಪ ಪಡುವದು 10
ಕುದ್ದಾಲ=ಕೊದ್ಲಿ 248
ಕುನ್ನಿ=ನಾಯಿ ಮರಿ 18
ಕು-ಮತಿ=ಕೆಟ್ಟ ಬುದ್ಧಿಯವ, ಶತ್ರು 72
ಕುರಂಗ=ಕೋತಿ, ಕಸ್ತೂರೀ ಮೃಗ 163
ಕುರುಹು=ಗುರುತು 87
ಕುವರ=ಕುಮಾರ 127
ಕುವಲಯ=ಭೂಮಿ, ನೈದಿಲೆ 198, 212, 232
ಕುವಿಯುವದು=ಕೂಗುವದು 107
ಕುಶಲ=ವಿದ್ಯೆಯುಳ್ಳ 65
ಕುಸುಮ=ಹೂವು 214
ಕುಸುಮ-ರಸ=ಜೇನುತುಪ್ಪ 216
ಕುಹಕ=ಕಪಟವುಳ್ಳ 95
ಕೂಡೆ=ಆಗಲೇ, ಸಂಗಡ 216
ಕೂಪ=ಗುಂಡಿ, ಭಾವಿ 17, 82
ಕೂಪರ=ಗಂಡ 181
ಕೂರು, ಕೂರ್=ಮೊನೆಯಾದ 179
ಕೂಳು=ಅನ್ನ 71
ಕೃತಕ=ಮಾಡಲ್ಪಟ್ಟ 153, 241
ಕೃತಕಾದ್ರಿ=ಕೃತಕ ಅದ್ರಿ, ಮಾಡಲ್ಪಟ್ಟ ಗುಡ್ಡ 153
ಕೃತ್ಯ=ಕಾರ್ಯ
ಕೃಪಾಣ=ದೊಡ್ಡ ಕತ್ತಿ 189
ಕೃಷಿಕ=ಒಕ್ಕಲಿಗ 231
ಕೆಂ=ಕೆಂಪು 177, 180, 188
ಕೆಡಹುವದು=ಬೀಳಿಸುವದು 172
ಕೆಲ=ಕಡೆ 176
ಕೆಲಂ=ಕೆಲವು
ಕೆಲರು=ಕೆಲವರು 7
ಕೆಳದಿ=ಸ್ನೇಹಿತಳು, ಗೆಣತಿ 245
ಕೆಳಸುವದು=ಪ್ರೀತಿ ಮಾಡುವದು 14, 179, 246
ಕೇಣ=ನಾಚಿಕೆ, ಲಜ್ಜೆ 11, 189
ಕೇತನ=ಪತಾಕೆ, ಬಾವಟಿ 196
ಕೇಸರಿ=ಸಿಂಹ 177
ಕೇಸು, ಕೇಸ್=ಕೆಂಪು 164, 170, 171
ಕೇಳಿ=ಆಟ 150, 197
ಕೈದು=ಆಯುಧ 189, 190, 194
ಕ್ಲೇಶ=ಲೌಕಿಕ ದುಃಖ 78
ಕೊಂಕು=ಡೊಂಕು 177
ಕೊಂಚೆ=ಕ್ರೌಂಚ 157, 216
ಕೊಂಪೆ=ಗುಡಸಲು, ಮನೆ, ದೇಹ 32
ಕೊಚ್ಚು=ಗೊಂಚಲು 154
ಕೊಡಹುವದು=ಅಗಲಾಡಿಸುವದು 171
ಕೊನರು=ತುದಿ 249
ಕೊಪ್ಪು=ಬಿಲ್ಲನ್ನು ಬೊಗ್ಗಿಸಿದ ಮೇಲೆ ಅದರ ಹಗ್ಗ ಬಿಗಿಯುವ ಸ್ಥಳ 86
ಕೊರಕುವದು=ಬಾಡುವದು 206
ಕೊರಗುವದು=ಕೂಗುವದು 208
ಕೊರ್ವುವದು=ಕೊಬ್ಬುವದು 244
ಕೊಳ=ಕೆರೆ 175, 199
ಕೋಕ=ಕೆಂಪು ಹಂಸ 198, 208
ಕೋಕನದ=ಕೆಂಪು ನೈದಿಲೆ 200
ಕೋಕಿಲ=ಕೋಗಿಲೆ 214
ಕೋಟಲೆ=ಉಪದ್ರ 82
ಕೋಯುವದು=ಪೋಣಿಸುವದು 146
ಕೋರಕ=ಹೂವಿನ ಮೊಗ್ಗೆ 211
ಕೋಶ=ಚೀಲ, ದ್ರವ್ಯ 153, 183
ಕೋಶ-ಗೃಹ=ತೋಷೇ ಖಾನೆ 153
ಕೋಳು=ಕೊಳ್ಳೆ, ಲೂಟಿ 34
ಕೌತುಕ=ಆಶ್ಚರ್ಯ 109, 212, 244
ಕೌಮುದಿ=ಚಂದ್ರನ ಬೆಳಕು 158
ಕೌರು, ಕೌರ್=ಕಮರುಳ್ಳ ನಾಶ 171
ಕ್ರೋಧಾಕ್ಷೆ=ಕ್ರೋಧದ ಅಕ್ಷಿ, ಕೋಪದ ಕಣ್ಣು 227
ಕ್ರೌಂಚ=ಹೆಂಟಿಯಷ್ಟು ದೊಡ್ಡ ಹಕ್ಕಿ 182

## ಖ

ಖ=ಆಕಾಶ 207
ಖಂಡ=ತುಂಡು 12, 193

ಖಮ್ಮನೆ=ರುಚಿಯುಳ್ಳ 12
ಖ-ಗ=ಆಕಾಶ-ಗಾಮಿ, ಪಕ್ಷಿ 167
ಖಚಿತ=ಕೂಡಿದ್ದ, ಉಳ್ಳದ್ದ 155
ಖಡುಗ=ಖಡ್ಗ, ಕತ್ತಿ 58, 92
ಖಣಿ-ಕಟಿಲ=ಖಣಿಖಣಿ ಎನ್ನುವ ಕಬ್ಬಿಣದ ಮತ್ತು ಕಟಕಟಿಲ ಎನ್ನುವ ಮರದ ಧ್ವನಿ 190
ಖಳ=ಕೆಟ್ಟವ 58
ಖತಿ=ಸಿಟ್ಟು, ಕೋಪ 224
ಖುರ=ಕುದುರೇ ಕೊಳಗ 207

## ಗ

ಗಂತು=ನಾಟ್ಯಾಟ 202
ಗಂಪು=ಕಂಪು, ವಾಸನೆ 199
ಗಂಬ=ಕಂಭ 151
ಗಗನ=ಆಕಾಶ 155, 188, 212
ಗಗನ-ಮಣಿ=ಸೂರ್ಯ 167
ಗಜ=ಆನೆ
ಗಜುಗ=ಒಂದು ತರದ ಕಣ್ಣುಬೇನೆ 95
ಗಟ್ಟುವದು=ಕಟ್ಟುವದು
ಗಡಣ=ಸಮೂಹ 166, 171
ಗಣ=ಸಮೂಹ 204
ಗಣಕ=ಶಾನಭೋಗ 117
ಗಣೆ=ಕಣೆ, ಅಂಬು 179
ಗತಿ=ನಡತೆ 72
ಗತ್ತಲೆ=ಕತ್ತಲೆ
ಗದ=ಕದ 151
ಗದ್ದಿಸುವದು=ಗದರಿಸುವದು 231
ಗಬ್ಬಿ=ಗರ್ವವುಳ್ಳ 177
ಗಮನ=ಹೋಗುವಿಕೆ, ಪ್ರಯಾಣ 236
ಗರಗೊಟ್ಟಗೆ=ಗರಗೊಟ್ಟೆನ್ನುವಿಕೆ 167
ಗರು=ಕರು
ಗರೆಯುವದು=ಕರೆಯುವದು, ಹಾಕುವದು, ಬಿಡುವದು 228, 233
ಗರ್ವು=ಕಬ್ಬು 244
ಗಲಿ=ಕಲಿ, ವೀರ, ಶೂರ 186
ಗವಸಣಿಗೆ=ಚೀಲ 11
ಗಹನ=ವನ, ಕಾಡು 161
ಗಳಿತ=ಬಿದ್ದ 229
ಗಾಢ=ಗಾಢ, ಬೇಗ 69
ಗಾಡು=ಕಾಡು
ಗಾಣಿಸುವದು=ಕಾಣಿಸುವದು
ಗಾತ್ರ=ಶರೀರ 180
ಗಾನ=ಗಾಯನ
ಗಾಯಕ=ಹಾಡುಗಾರ 214
ಗಾಯ್ಪು=ಕಿರಣ 229
ಗಾವಳಿ=ಶಬ್ದ 197
ಗಿಡಿ=ಕಿಡಿ
ಗಿರ್ವಾಣ=ದಿವ್ಯ, ಸಂಸ್ಕೃತ 11
ಗುಂದುವದು=ಕುಂದುವದು, ಕಡಿಮೆಯಾಗುವದು 23, 139
ಗುಡ=ಬೆಲ್ಲ 26, 153
ಗುಣಿಕೆ=ಗುಳಿಗೆ 15
ಗುದಿಯುವದು=ಕುದಿಯುವದು
ಗೂಡಾರ=ಗುಡಾರ
ಗೃಹ=ಮನೆ
ಗೆಂಡ=ಕೆಂಡ
ಗೆಂಪು, ಗೆಂಪ್=ಕೆಂಪು
ಗೆಡಿಸುವದು=ಕೆಡಿಸುವದು
ಗೆಣೆ=ಗೆಳೆಯ 99
ಗೆದರುವದು=ಗಲಿಬಿಲಿಯಾಗುವದು 86
ಗೆಲುವದು=ಗೆಲ್ಲುವದು 106
ಗೆಲವು=ಸಂತೋಷ 121
ಗೆಳಸುವದು=ಕೆಳಸುವದು
ಗೇಯುವದು=ಮಾಡುವದು
ಗೇಸರ=ಕೇಸರ, ಹೂವಿನಲ್ಲಿಯ ಹಳದಿ ಬಣ್ಣದ ಧೂಳಿ 200
ಗೈಯುವದು=ಮಾಡುವದು 66, 78, 107, 115, 121, 140, 141, 175, 206, 246, 248
ಗೊಂದಳ=ಗದ್ದಲ, ಸಮೂಹ 197

ಗೊಡವೆ=ಸಂಗತಿ 19
ಗೊಡ್ಡಿ=ತುಂಡು 141
ಗೊನರು=ಕೊನರು, ತುದಿ, ಹೂ 247
ಗೊನೆ=ಗೊಂಚಲು
ಗೋ=ಕಣ್ಣು, ಆಕಳು 241
ಗೋಗಿಲೆ=ಕೋಗಿಲೆ
ಗೋಚರಿಸುವದು=ತೋರುವದು 226
ಗ್ರಹ=ನಕ್ಷತ್ರಗಳ ರಾಶಿ 5
ಗ್ರಾಸ=ತಿನ್ನುವ ಪದಾರ್ಥ 13
ಗ್ರೀಷ್ಮ=ಬೇಸಿಗೆ 227

## ಘ

ಘಟ=ಹರಿವಿ, ಮೈ 86, 90
ಘಟಿ=ಗುಂಪು, ಹಿಂಡು 214, 234
ಘಡಾವಣಿ=ಬಾಹುಳ್ಯ, ಹೆಚ್ಚುವಿಕೆ 93
ಘನ=ಘಡತರ, ಬಹಳ, ಮಹಿಮೆ, ಮೋಡ
ಘಲ್ಲಿಸುವದು=ಹೊಡೆಯುವದು, ಬೆದರಿಸುವದು 227
ಘಳಿಲನೆ=ಬೇಗ, ಫಕ್ಕನೆ 7
ಘಾಟ=ಕುತ್ತಿಗೆ 197
ಘಾತಿ=ಕೊಲ್ಲುವಿಕೆ 192
ಘಾಸಿ=ಕಷ್ಟ, ಉಪದ್ರ 78
ಘೂಕ=ಗೂಗೆ 193
ಘೂರ್ಣಿಸುವದು=ದೊಡ್ಡ ಶಬ್ದ ಮಾಡುವದು 202, 204
ಘೃತ=ತುಪ್ಪ 153
ಘೋಟಕ=ಕುದುರೆ 90
ಘೋರ=ಭಯ 192
ಘೋರತರ=ಬಹಳ ಭಯಂಕರವಾದ 68
ಘೋಷಣ=ಘೋಷಿಸುವಿಕೆ, ಘೋಷ 205

## ಙ

ಙ್ಞತೆ=ವಿದ್ಯೆ 42
ಙ್ಞನು=ತಿಳಿಯುವಂಥವನು 4

## ಚ

ಚಂಡ=ಕ್ರೂರವಾದ, ಘಟ್ಟಿಯಾದ 21
ಚಂದನ=ಗಂಧ 222
ಚಂದಿರ=ಚಂದ್ರ 59
ಚಂದ್ರ-ಕಾಂತ=ಚಂದ್ರ-ಕಲ್ಲು, ಬೆಳಚುಕಲ್ಲು
ಚಂದ್ರಮ=ಚಂದ್ರ 167
ಚಂದ್ರೋಪಲ=ಚಂದ್ರ-ಉಪಲ, ಚಂದ್ರ-ಕಾಂತವೆಂಬ ಕಲ್ಲು 165
ಚಂಪಕ=ಸಂಪಿಗೆ 162
ಚಕೋರ=ಒಂದು ಜಾತೀ ಕೋಳಿ 164, 211
ಚಕ್ರ=ಕೆಂಪು ಹಂಸ 199
ಚಕ್ರ-ವಾಕ=ಕೆಂಪು ಹಂಸ 164
ಚಟುಳ=ಚಂದ 190 [189
ಚತುರ=ಬುದ್ಧಿಯುಳ್ಳವ, ಬುದ್ಧಿಯುಳ್ಳ 148,
ಚತುರ್-ಅಂಗ=ಚತುರ್-ಬಲ 229
ಚತುರ್-ಬಲ=ಆನೆ, ಕುದುರೆ, ತೇರು, ಕಾಲಾಳುಗಳಿರುವ ದಂಡು 184
ಚದುರು=ಚತುರ, ಚಂದವಾದ 105
ಚನ್ನಗೆ=ಚನ್ನಾಗಿ 77
ಚನ್ನು=ಚಂದ, ಸಂತೋಷ 64
ಚಮರಿ=ಚಾಮರ ಬರುವಂಥ ಮೃಗ 182
ಚಮೂ=ದಂಡು 184
ಚಮತ್ಕೃತಿ=ಚಮತ್ಕಾರ 91
ಚಮ್ಮ=ಚರ್ಮ 12
ಚಯ=ಸಮೂಹ 45, 169, 205, 233
ಚರ=ದೂತ 41
ಚರಣ=ಕಾಲು 92
ಚರಣಾಯುಧ=ಕೋಳಿ, ಹುಂಜ 206
ಚರಿಸುವದು=ತಿರಿಗಾಡುವದು 122
ಚಲಿಸುವದು=ಅಸ್ಥಿರವಾಗಿರುವದು, ಅಲ್ಲಾಡುವದು 61, 196
ಚಲ್ವು, ಚಲ್ವ=ಚಲೋದು, ಚಂದ 154
ಚಳ=ನಿಲ್ಲದ, ಬೇಗವಾದ 91
ಚಳಕ=ಯುಕ್ತಿ 189

ಚಕ್ಷು=ಕಣ್ಣು 231
ಚಾಟಿ=ಚಬುಕು 249
ಚಾಡಿಗ=ಚಾಡಿಗಾರ 101
ಚಾಣ=ಉಳಿ, ಹಾರೆಗೋಲು 124
ಚಾತಕ=ಒಂದು ಜಾತೀ ಕೋಗಿಲೆ 164, 230
ಚಾತುರ=ಗೋಚರವಾದ, ಕೀರ್ತಿಯುಳ್ಳ 214
ಚಾಪ=ಬಿಲ್ಲು 84, 173
ಚಾಪಲ=ಚಂಚಲವಾದ 173
ಚಾರಿ=ಗುರಿಯಿಡುವಿಕೆ 189
ಚಾರು=ಚಂದ 165
ಚಾಳೆ=ಪ್ರಯೋಗ, ಪಳಕಿಸಿದ ಕೆಲಸ 189
ಚಿತ್ಕಾರ=ಚಿತ್ ಚಿತ್ ಎನ್ನುವಿಕೆ 205
ಚಿತ್ತವಿಸುವದು=ಕಿವಿ ಕೊಡುವದು 210
ಚಿತ್ರ=ಆಶ್ಚರ್ಯ, ಬಣ್ಣ ಹಾಕಿ ಬರದ್ದು 179 219
ಚಿತ್ರತರ=ವಿಚಿತ್ರ 154
ಚಿತ್ರ-ಪತ್ರ=ಬಣ್ಣವುಳ್ಳ ರೂಪ 157
ಚಿತ್ರಾಂಗದೆ=ಬಭ್ರುವಾಹನನೆಂಬವನ ತಾಯಿ 186
ಚುಂಬಿಸುವದು=ಮುದ್ದಿಕ್ಕುವದು 160, 169
ಚುದ್ರತನ=ಕ್ಷುದ್ರತನ, ನೀಚತನ 65
ಚೂಣಿ=ಮುಂಭಾಗ, ಬಲ 169, 186, 234
ಚೂತ=ಮಾವು 162, 203
ಚೂತಾಂಕುರ=ಚೂತ-ಅಂಕುರ, ಮಾವಿನ ಎಳೇದಾದ ಎಲೆ, ಅದರ ತಳಿರು ಅಥವಾ ಮೊಗ್ಗೆ 226
ಚೆಂ=ಕೆಂಪು 242, 243
ಚೆಲ್ವು, ಚೆಲ್ವ=ಚಲುವು
ಚೆಲ್ವೆ=ಚಂದ 119
ಚೋರ=ಕಳ್ಳ
ಛವಿ=ಪ್ರಕಾಶ 59, 158, 171

## ಛ

ಛಟಿಸುವದು=ಛಟಛಟವೆನ್ನುವದು 161
ಛಿಟಿಸುವದು=ಛಿಟಿಛಿಟಿಯೆನ್ನುವದು 166
ಛಿದ್ರ-ಮಾನಸ=ಮನಸು ಒಡೆದವನು 61

## ಜ

ಜಂಘೆ=ಕಾಲು 177
ಜಂಬೀರ=ನಿಂಬೆ 203
ಜಂಬು=ಜಂಬುನೇರಲ 162
ಜಗ=ಜಗತ್ತು 56, 62, 157
ಜಗುಳುವದು=ಬಿಚ್ಚುವದು 84
ಜಡ=ಭಾರ, ರೋಗ 142
ಜಡಿಯುವದು=ಬಿಗಿ ಮಾಡುವದು 178
ಜನ-ಪ=ಅರಸು 49, 237
ಜನಪದ=ಜನರಿರುವ ಶೀಮೆ 237
ಜನಾವಲೋಕ=ಜನ-ಅವಲೋಕ, ಜನರ ದೃಷ್ಟಿ 212
ಜನಿತ=ಹುಟ್ಟಿದ 169
ಜನಿಸುವದು=ಹುಟ್ಟುವದು 56, 63
ಜರೆಯುವದು=ಹಾಸ್ಯ ಮಾಡುವದು 153
ಜಲ-ಚರ=ಮೀನು 24, 149
ಜಲಧಿ=ಸಮುದ್ರ 62
ಜವ=ಬೇಗ, ಶಕ್ತಿ
ಜವ-ಗೆಡಿಸುವದು=ಶಕ್ತಿ ಅಲ್ಪವಾಗುವದು 221
ಜವಾದಿ=ಒಂದು ಜಾತೀ ಪರಿಮಳ (ಬೆಕ್ಕಿನದು) 157, 159, 174
ಜಸ=ಕೀರ್ತಿ 224
ಜಳ=ಝಳ, ಕಾವು 228
ಜಾತ=ಜಾತಿಯವ, ಕುಲದವ, ಹುಟ್ಟಿದ 99, 233
ಜಾನು=ಮೊಣಗಾಲು 79
ಜಾರುವದು=ಚಲಿಸುವದು, ಓಡುವದು 45
ಜಾಲ=ಬಲೆ, ಗುಂಪು 94, 161
ಜಿನುಗು=ಜಡಿಮಳೆ 237
ಜೀಮೂತ=ಮಿಂಚು 235
ಜೀವನ=ಜೀವಿಸುವಿಕೆ, ಜೀವ, ಅನ್ನ 33, 236
ಜಿಹ್ವೆ=ನಾಲಿಗೆ 1
ಜೊತ್ತು=ಘುಟ್ಟಿ, ಹತ್ತರ 197

ಜೊನ್ನ=ಜ್ಯೋತ್ಸ್ನ, ಚಂದ್ರನ ಪ್ರಕಾಶ 157
ಜೋಧ=ಮಾವಟಿಗ 190
ಜ್ಯಾ=ಬಿಲ್ಲಿನ ಹಗ್ಗ 187
ಜ್ಯೋತಿ=ಬೆಳಕು, ಪ್ರಕಾಶ 2

## ಝ

ಝುಗೆ=ಪ್ರಕಾಶ 166
ಝುಳ=ಕಾವು, ಶೆಖೆ 165, 169
ಝುಳಪಿಸುವದು=ಕತ್ತಿಯನ್ನಾಡಿಸುವದು, ಹೊಳಿಸುವದು 215
ಝಾಡಿ=ಝಾಡುವಿಕೆ, ಬಹಳ ಬೀಳುವಿಕೆ 47
ಝೋಂಕಾರ=ಝೋಂಝೋ ಎಂಬ ಧ್ವನಿ 246

## ಠ

ಠಳತ್ಕಾರ=ಠಳಠಳವೆನ್ನುವಿಕೆ 168
ಠೀವಿ=ದೊಡ್ಡಸ್ತಿಕೆ 152

## ಡ

ಡಾವರಿಸುವದು=ಉಪದ್ರ ಪಡಿಸುವದು 140, 170
ಡೊಂಕಣಿ=ಉದ್ದವಾದ ಈಟಿ 189
ಡೊಣೆ=ಡೊಂಣಿ 52
ಡೊಳ್ಳಾಸ=ವಿಸ್ತಾರ 170

## ಢ

ಢಕ್ಕಾ=ಸಣ್ಣ ನಗಾರಿ 187
ಢಾಳ=ಪ್ರಕಾಶ

## ತ

ತಂಬೆ=ಬಕ 157
ತಂಬ್=ತಂಪ್, ತಂಪು 210, 245
ತಕಪಕನೆ=ಕುದಿಯುವ ಶಬ್ದ 149
ತಟ=ತೀರ 188, 203
ತಟಿನಿ=ಹೊಳೆ 131
ತಡವುವದು=ತಡಿಸುವದು 234
ತಡಿ=ತೀರ 150, 213
ತಡಿತ=ತಡೆಯುವಿಕೆ, ತಡೆ ಹಾಕುವಿಕೆ 167
ತಡೆಯುವದು=ತಡ ಮಾಡುವದು, ತಡೆ ಪಡುವದು, ತಡಿಸುವದು 45, 145
ತತ್ (ತದ್)=ಆ
ತತಿ=ಗುಂಪು 157, 196
ತತ್ತ್ವ=ತತ್ತ್ವ, ನಿಜವಾದದ್ದು 80
ತದನು=ತದ್-ಅನು, ಆ ವೇಳೆ, ಆಗ, ಆ ಮೇಲೆ 204
ತದೀಯ=ಆ 47
ತನಯ=ಮಗ 107, 108, 109, 110, 111
ತನಿ=ಬಹಳವಾಗಿ, ಬಹಳ, ಪಕ್ವವಾದ, ಪ್ರಕಾಶವುಳ್ಳ 86, 165, 199, 248, 249
ತನು=ಮೈ, ಹೊಟ್ಟೆ, ಚಿಕ್ಕ 34, 160, 174
ತನು-ಜ=ಮಗ 240, 248
ತನೂ-ಭವ=ಹೊಟ್ಟೆಯಿಂದ ಹುಟ್ಟಿದವ, ಮಗ 186
ತಪ್ಪಲು=ಪರ್ವತಗಳ ಅಡಿಯಲ್ಲಿರುವ ನೆಲ (ಬೈಲು) 172
ತಮ=ಕತ್ತಲೆ 221, 228
ತಮಾಲ=ಹೊಂಗೇ ಮರ 162
ತಮಿಸ್ರ=ಕತ್ತಲೆ 211
ತರ=ಪ್ರಕಾರ, ಸಾಲು 153, 154, 197
ತರಣಿ=ಸೂರ್ಯ 184, 208
ತರಿಸುವದು=ಎಲೆಗಳನ್ನು ಹಿರಿದು ಕೊಂಬೆಗಳನ್ನು ಬರೇದು ಮಾಡುವದು 87
ತರು=ಮರ 122, 137
ತರುಣ=ಎಳೇ, ಹೊಸ 243, 246
ತಲ=ಬುಡ 90
ತಲ್ಲಣಿಸುವದು=ಕಷ್ಟ ಪಡುವದು 227
ತವಿಸುವದು=ಕಡಿಮೆ ಮಾಡುವದು, ಶಾಂತಿ ಪಡಿಸುವದು 221, 230
ತವೆ=ಬಹಳ, ಬಹಳವಾಗಿ 188, 212, 221

ತಳ=ಬುಡ 200
ತಳಿತ=ತಳಿರಾದ (ತಳಿಯುವದು), ಚಿಗಿತ 215, 247
ತಳಿಯುವದು=ಅರುಳುವದು, ಹೊಳೆಯುವದು, ತಳಿರಾಗುವದು, ಚಿಗಿಯುವದು 62, 215, 225, 247
ತಳೆಯುವದು=ಪಡೆಕೊಳ್ಳುವದು, ಹೊಂದುವದು, ಸೇರುವದು, ತಳಿಯುವದು, ಅರುಳುವದು 180, 222, 230, 245
ತಳ್ಕು=ಪ್ರಕಾಶ 242
ತಳ್ಳಂಕ=ಭಯ 86
ತಾಗು=ತಾಗುವಂಥಾದು 36
ತಾಪ=ಉರಿ, ಕಷ್ಟ 217
ತಾಮರಸ=ತಾವರೆ 218
ತಾರಕೆ=ನಕ್ಷತ್ರ 86
ತಾರಾ (-ರೆ)=ನಕ್ಷತ್ರ
ತಿಂತ್ರಿಣಿ=ಹುಣಸೆ 203
ತಿಂಥಿಣಿ=ಹಿಂಡು 247
ತಿತ್ತಿರಿ=ವಿಚಿತ್ರಬಣ್ಣದ ಒಂದು ಹಕ್ಕಿ 182
ತಿಮಿ=ದೊಡ್ಡ ಮೀನು 149
ತಿಮಿಂಗಿಲ=ತಿಮಿಗಿಂತ ದೊಡ್ಡದಾದ ಮೀನು 149
ತಿಮಿರ=ಕತ್ತಲೆ 62
ತಿರ=ಸ್ಥಿರ 71
ತಿರುಗುವದು=ತಿರಿಗಾಡುವದು 239
ತಿರುಳಿನ ಹುಳು=ಕಾಯಿ ಹಣ್ಣುಗಳ ಒಳಗಿರುವ ಹುಳ 15
ತಿಲಕ=(ಎಣ್ಣೆಗಳಲ್ಲಿ ಶ್ರೇಷ್ಠವಾದ) ಎಳ್ಳು, ಹೊನ್ನೆ 39, 44, 47, 162
ತಿಳಿಯುವದು=ತಿಳಿ ಅಂದರೆ ನಿರ್ಮಲ ಆಗುವದು 238
ತಿಳುಹುವದು=ತಿಳಿಸುವದು 1
ತೀಡುವದು=ತಿಕ್ಕುವದು, ಬೀಸುವದು 225
ತೀವುವದು=ತುಂಬಿಸುವದು, ಒಳಹೊಗುವದು, ತುಂಬಾಗುವದು 122, 178, 187, 209
ತುಂತುರು=ಹನಿ 123
ತುಂಬಿ=ಭೃಂಗ, ಭ್ರಮರ 165
ತುಂಬುರು=ಕೊತುಂಬರಿ 162
ತುಕ್ಕುವದು=ಆಡುತ್ತಾ ಬರುವದು 174
ತುಡುಕುವದು=ಹಿಡಿಯುವದು 176, 177
ತುರಂಗ=ಕುದುರೆ 185
ತುರಗ=ಕುದುರೆ 43
ತುರುಗುವದು=ತುಂಬಾಗುವದು, ಬಹಳವಾಗುವದು 211, 249
ತುಷಾರ=ಜಡಿಮಳೆ, ಜಿನುಗುಮಳೆ 216, 246
ತುಹಿನ=ಹಿಮ 200
ತೂಣ=ಮರುಳು 249
ತೂಳುವದು=ಹೊಡೆಯುವದು, ಬಡೆಯುವದು 87, 92
ತೃಣ=ಹುಲ್ಲು 205
ತೆತ್ತು=ಕೊಟ್ಟು (ತೆರುವದು) 213
ತೆರ=ತರ, ರೀತಿ, ಪ್ರಕಾರ 13
ತೆರಳಿಚುವದು=ಓಡಿಸುವದು 167
ತೆರಳುವದು=ಹೊರಡುವದು 192
ತೆರುವದು=ಕೊಡುವದು 213
ತೆಳುವು=ಮೃದು, ಮಂದ 225
ತೇಜಿ=ಕುದುರೆ
ತೇಲುವದು=ಹೆಚ್ಚು ಕಡಿಮೆ ಆಗುವದು, ಬಿಡುವದು 158
ತೈಲ=ಎಣ್ಣೆ 153
ತೊಂಗುವದು=ತೂಗುವದು 203
ತೊಡಗುವದು=ಆರಂಭ ಮಾಡುವದು 20
ತೊಡರುವದು=ತೊಡರಾಗುವದು, ಸುತ್ತಿ ಕೊಳ್ಳುವದು 222
ತೊಪ್ಪನೆ=ಬೇಗವಾಗಿ 172
ತೊರೆ=ಹೊಳೆ 216, 227
ತೊರೆಯುವದು=ಬಿಟ್ಟು ಬಿಡುವದು 83, 125, 181
ತೊಲಗುವದು=ಅಗಲಿ ಹೋಗುವದು 25, 32
ತೊಳಪು=ಪ್ರಕಾಶ 156, 199

ತೊಳಲಿಕೆ=ತೊಳಲಾಟ, ಹಾರ್‍ಯಾಟ 167
ತೊಳಲಿಚುವದು=ಇತ್ತೂ ಅತ್ತೂ ಕಳುಹಿಸುವದು 40
ತೊಳಲುವದು=ಅಸಮಾಧಾನವಾಗಿರುವದು 126
ತೊಳೆಯುವದು=ತಳಿಯುವದು, ಹೊಳೆಯುವದು, ಚಿಗುರುವದು 156, 196, 243
ತೋಮರ=ಕಬ್ಬಿಣದ ಆಯುಧ, ಬೀಸುಗತ್ತಿ 189
ತೋರ=ಘುಡತರ, ಚಂದ 246
ತೋರುವದು=ಕಾಣುವದು, ಕಾಣಿಸುವದು 30, 147, 175
ತೋರ್ಪ=ತೋರುವ, ಹೊಳೆಯುವ 151

## ಥ

ಥರ=ಸಾಲು, ಗುಂಪು 231
ಥಳ-ಥಳಿಸುವದು=ಹೊಳೆಯುವದು 60

## ದ

ದ=ಕೊಡುವವ
ದಂತಾಂಕುರ=ದಂತದ ಅಂಕುರ, ಹಲ್ಲಿನ ತುದಿ 183
ದಂತಿ=ಆನೆ 175
ದಂಪತಿ-ವಕ್ಕಿ=ಜೋಡುಹಕ್ಕಿ 216
ದನಿ=ಧ್ವನಿ 82, 181
ದರ್ಪ=ಸೊಕ್ಕು, ಗರ್ವ 13
ದಹನ=ಸುಡುವಿಕೆ 168
ದಳ=ಕೂಟ, ದಂಡು, ಎಲೆ 50, 55, 187, 200, 201, 229
ದಳಿರು, ದಳಿರ್=ತಳಿರು 242
ದಳೆಯುವದು=ತಳೆಯುವದು, ತಳಿಯುವದು, ಹೊಳೆಯುವದು 243
ದಕ್ಷಿಣ=ದಾನ, ಪಡುವಲುದಿಕ್ಕು, ಎಡಗಡೆ 84, 226
ದಾತ=ದಾನ ಕೊಡುವವ 99, 122
ದಾನ-ದ=ದಾನ ಕೊಡುವವ 79
ದಾನಿ=ದಾನ ಕೊಡುವವ 2
ದಾಯಾದ್ಯ=ನೆಂಟ 116
ದಾಯಿಗ=ದಾಯಾದ್ಯ 49
ದಾರಿಗ=ದಾರಿಯವ
ದಿಗ್=ದಿಕ್ಕು 208
ದಿಗುಡು=ತಿಗುಡು, ಮರದ ತೊಗಟಿ 175
ದಿನ-ಪ=ಸೂರ್ಯ 56
ದಿನ-ಮಣಿ=ಸೂರ್ಯ 219, 227
ದಿವ=ಪರಲೋಕ, ಆಕಾಶ 5, 167
ದಿವಾ-ರಾತ್ರಿ=ಹಗಲಿರುಳು 158
ದಿಶಾ (-ಶೆ) ದಿಕ್ಕು 168
ದೀಧಿತಿ=ಹೊಳಪು, ಪ್ರಕಾಶ 200
ದೀನ=ಕೆಟ್ಟ, ಬಡ 2, 79
ದುಂಬಿ=ತುಂಬಿ 174
ದುಕ್ಕ=ದುಃಖ 10
ದುಃಖಾಸ್ತ್ರ=ದುಃಖದ ಅಸ್ತ್ರ, ದುಃಖವೆಂಬ ಆಯುಧ 181
ದುಪ್ಪ=ತುಪ್ಪ
ದುಮ್ಮತಿ=ದುರ್ಮತಿ, ಕೆಟ್ಟಬುದ್ಧಿಯುಳ್ಳವ 12
ದುಮ್ಮಿ-ಇಕ್ಕುವದು=ಕೆಳಗೆ ಹಾರುವದು 46
ದುರ್, ದುಃ, ದುಸ್=ಕೆಟ್ಟ
ದುರ್-ಧರ=ತಾಳ ಕೂಡದಂಥ 229
ದುರಿತ=ಕೆಟ್ಟ, ಪಾಪವುಳ್ಳ 68
ದುರುಳ=ಕೆಟ್ಟ 148
ದುವ್ವಾಳಿಸುವದು=ಹಾರಿಸುವದು 190
ದುಷ್ಕಮ್ಮ=ದುಷ್ಕರ್ಮ 12
ದುಸ್-ಸಂಗಿ=ಕೆಟ್ಟ ಆಶೆಯುಳ್ಳವ 99
ದೂಗುವದು=ತೂಗುವದು
ದೂರುವದು=ಗದರಿಸುವದು, ಬುದ್ಧಿ ಹೇಳುವದು, ಚಾಡಿ ಹೇಳುವದು 73
ದೃಡ=ದೃಢ, ಸ್ಥಿರ 23, 126
ದೆಗೆಯುವದು=ತೆಗೆಯುವದು
ದೆನೆ=ತೆನೆ
ದೆರೆಯುವದು=ತೆರೆಯುವದು

ದೆಸೆ=ದಿಕ್ಕು
ದೇರು=ತೇರು 44, 191
ದೇಹಿ=ದೇಹವುಳ್ಳವ 142
ದೊರಕುವದು=ಶಿಕ್ಕುವದು 15, 79
ದೊರೆ=ತೊರೆ, ಹೊಳೆ; ಸಮಾನ, ಸರಿ 144
ದೋರಣ=ತೋರಣ
ದೋರಿಸುವದು=ತೋರಿಸುವದು
ದೋರುವದು=ತೋರಿಸುವದು 135
ದ್ಯೂತ=ಜೂಜಾಟ 37
ದ್ರುಮ=ಮರ 162, 222
ದ್ವಿಪ=ಆನೆ 205, 231
ದ್ವಿರದ=ಆನೆ 183

## ಧ

ಧಗ-ಧಗಿಸುವದು=ಹೊಳೆಯುವದು 161
ಧಟ್ಟು=ದಂಡು 186
ಧಣಿ=ಒಡೆಯ 95
ಧನ=ಐಶ್ವರ್ಯ 7, 21
ಧನಿ=ಧ್ವನಿ 86
ಧನು=ಬಿಲ್ಲು 85
ಧರಣಿ=ಭೂಮಿ, ನೆಲ 184, 232
ಧರೆ=ಭೂಮಿ 46, 49, 122, 192
ಧವಳ=ಬಿಳೇದು 212
ಧಳ್ಳಿ=ದೊಡ್ಡ ಶಬ್ದದ ಉರಿ 160, 163
ಧಾರಿಣಿ=ಭೂಮಿ 63, 123, 163
ಧಾರೆ=ಖಡ್ಗದ ಹದನವಾದ ಭಾಗ 14
ಧಾರ್ಮಿಕ=ಧರ್ಮದ ಸಂಬಂಧವಾದ, ಧರ್ಮಿಷ್ಠ 143
ಧಾಳಿ=ಲೂಟಿ 34
ಧೀರ=ತಿಳಿದವ, ಬಲ್ಲವ, ಘಟ್ಟಿಗ 51, 193
ಧುರ=ಯುದ್ಧ 116
ಧೂತ=ಹಾರ್ಯಾಡುವ 170
ಧೂಮ=ಹೊಗೆ, ಬೆಂಕಿ 169, 170
ಧ್ವಜ=ಬಾವಟೆ 184

## ನ

ನಂದನ=ವನ, ತೋಟ; ಮಗ 22, 160, 232, 246
ನಂದನೆ=ಮಗಳು 48
ನಂದುವದು=ನೊಂದುವದು, ಶಾಂತಿಯಾಗುವದು 221
ನಕರ=ವ್ಯರ್ಥವಾದ ಕೆಲಸ 9
ನಕುಲ=ಮುಂಗಲಿ 205
ನಕ್ರ=ಮೊಸಳೆ 199
ನಗ-ಕುಲ=ಬೆಟ್ಟಗಳ ಸಮೂಹ 40, 86
ನಗದು=ನಕ್ಕ 98
ನಗರಿ=ನಗರ 48, 62
ನಚ್ಚುವದು=ನೆಚ್ಚುವದು, ನಂಬುವದು
ನಡೆ-ತರು=ನಡೆದು ಬರುವದು, ನಡೆಯುವದು 150
ನಭ=ಆಕಾಶ 188, 236, 244
ನಭಿ=ಗಾಲಿ 90
ನಯ=ಚಂದ, ಒಳ್ಳೇ 214
ನಯನ=ಕಣ್ಣು 180
ನರಕಿ=ನರಕದವ 75
ನರ-ನಾಥ=ಮನುಷ್ಯರ ಒಡೆಯ, ರಾಜ 48
ನರನೆ=ಅವಸರದ ಶಬ್ದ 91
ನರ್ತನ=ನಾಟ್ಯಾಟ 152
ನರ್ತಿಸುವದು=ನಾಟ್ಯವಾಡುವದು 247
ನಲುವು=ಸಂತೋಷ 84
ನಲ್ಲ=ಒಳ್ಳೇಯವ, ಸ್ನೇಹಿತ 221
ನವ=ಹೊಸ, ಚಂದ
ನವ-ನವಾಗಮ=ನವ-ನವ-ಆಗಮ, ತಿರಿಗಿ ತಿರಿಗಿ ಬರುವಂಥವ 212
ನವ್ಯ=ನವಿ, ಉತ್ತಮ 225
ನಸಿಯುವದು=ಕುಂದುವದು, ಕಡಿಮೆಯಾಗುವದು 218
ನಸು=ಕಡಿಮೆಯಾದ, ಚಿಕ್ಕ, ಎಳೇ 219
ನಳನಳಿಸುವದು=ಪ್ರಕಾಶಿಸುವದು 244

ನಳಿ=ಚಂದ, ಮೃದುವಾದ 180
ನಳಿನ=ತಾವರೆ 62, 199, 209
ನಳಿನ-ಮಿತ್ರ=ಸೂರ್ಯ 62
ನಾಕು=ನಾಲ್ಕು 42
ನಾಡ್-ನುಡಿ=ನಾಡ ನುಡಿ, ಗಾದೆ 42
ನಾಮಾವಳಿ=ನಾಮಗಳ ಆವಳಿ, ಹೆಸರುಗಳ ಸಾಲು (—ಸಮೂಹ) 1, 35
ನಾಯ=ನ್ಯಾಯ, ವ್ಯಾಜ್ಯ 9
ನಾಯಕ-ನರಕ=ಮುಖ್ಯವಾದ ನರಕ 9
ನಾರಂಗ=ಕಂಚಿ 203
ನಾರಿ=ಸ್ತ್ರೀ 63
ನಾವ=ಹಡಗು 204
ನಾವಿಕ=ಹಡಗಿನವ, 204
ನಿಂದ್ಯ=ನಿಂದೆ 113
ನಿಂದ್ಯೆ=ನಿಂದಿಸ ತಕ್ಕದ್ದು 42
ನಿಕರ=ಸಮೂಹ 90, 149, 206, 238
ನಿಕುರುಂಬ=ಗುಂಪು, ಹಿಂಡು 236, 245
ನಿಖಿಳ=ಎಲ್ಲ 229
ನಿಚಯ=ಸಮೂಹ 197
ನಿಟ್ಟಿಸುವದು=ದೃಷ್ಟಿಸುವದು 196
ನಿಡು, ನಿಡುವು=ದೊಡ್ಡ, ಉದ್ದ 92, 176, 192, 249
ನಿಧಾನ=ಸ್ಥಿರತ್ವ, ನಂಬಿಕೆ, ತಾಳ್ಮೆ 79
ನಿಧಿ=ಸಮೂಹ, ಸಮುದ್ರ 18, 188
ನಿಯೋಗ=ಅಪ್ಪಣೆ, ಸಂಗತಿ 116
ನಿರಾಶೆ=ಯಾತರ ಆಶೆಯೂ ಹುಟ್ಟ ಕೂಡದ ಮನಃಸ್ಥಿತಿ 78
ನಿರುತಂ=ನಿತ್ಯವು, ಯಾವಾಗಲೂ, ಅಡಿಗಡಿಗೆ 111, 122, 222
ನಿರ್ಭೀತ=ಭೀತಿ ಇಲ್ಲದವ 143
ನಿರ್ಮಲ=ಮಲವಿಲ್ಲದ, ಪಾಪವಿಲ್ಲದ 26
ನಿರ್ಮಿತ=ನಿರ್ಮಿಸಿದ್ದು 151
ನಿಲವು=ನಿಲುಗಡೆ 222
ನಿಲಿಸುವದು=ನಿಲ್ಲಿಸುವದು 50, 54, 72
ನಿಲುವದು=ನಿಲ್ಲುವದು 56
ನಿವಾಳಿಸುವದು=ಅಗಲಾಡಿಸುವದು 190
ನಿವೇಶ=ಪ್ರವೇಶ 95
ನಿಶೆ=ರಾತ್ರಿ 56
ನಿಷಧ=ನಳರಾಯ 41
ನಿಸ್ಸೀಮ=ಮೇರೆಯಿಲ್ಲದೆ 169
ನಿಳಯ=ಮನೆ 39, 62
ನಿಳಿನಿಟಲು=ಕಷ್ಟದ ಧ್ವನಿ 85
ನಿಳ್ದು=ನಿಂತು
ನೀಂಟುವದು=ಹೀರುವದು 225
ನೀಗುವದು=ಕಳೆಯುವದು, ಬಿಡುವದು 38
ನುಣ್=ನುಣುಪು
ನುಣ್ಪು=ನುಣ್ಣಗಾಗಿರುವಿಕೆ 215
ನುತಿ=ಸ್ತುತಿ 73
ನುತಿಸುವದು=ಸ್ತುತಿಸುವದು 69
ನುಸುಳುವದು=ಇಕ್ಕಟ್ಟಾಗಿ ಹೊಕ್ಕೊಳ್ಳುವದು 38, 94
ನೃ=ನರ
ನೃ-ಪ=ಅರಸು 39, 41, 44, 45, 48, 65
ನೃ-ಪಾಲ=ಅರಸು
ನೆಗಹು=ಎತ್ತಿ ಕೊಂಡಿರುವಿಕೆ 92
ನೆಗಳುವದು=ಸಿದ್ಧ ಮಾಡುವದು 229
ನೆಗಳ್ದ=ನೆಗಳಿದ
ನೆಚ್ಚುವದು=ನಂಬುವದು 35, 67
ನೆನೆಯುವದು=ಸ್ಮರಿಸುವದು, ನೆನಪು ಮಾಡುವದು 67
ನೆಮ್ಮುವದು=ನಂಬುವದು 12
ನೆರೆ=ಬಹಳ, ಬಹಳವಾಗಿ 34, 181, 220
ನೆರೆಯುವದು=ಕೂಡಿ ಬರುವದು
ನೆಲಸುವದು=ನಿಲ್ಲುವದು, ಮೆಚ್ಚುವದು 25
ನೆಳಲು=ನೆರಳು
ನೇಣು=ಹಗ್ಗ 178
ನೇರ=ಕ್ರಮ, ತಾಳ, ನೆಟ್ಟನೆತನ 246
ನೇವರಿಸುವದು=ಬೊಗ್ಗಿಸಿ ಸಿದ್ಧ ಮಾಡುವದು 86
ನೇಹ=ಸ್ನೇಹ 186
ನೈಷಧ=ನಳರಾಯನದಾದ 48

ನೋಯುವದು=ನೋವು ಕೊಡುವದು 9

ನ್ಯಗ್ರೋಧ=ಆಲದ ಮರ 139

## ಪ

ಪ=ಪತಿ, ಒಡೆಯ 41, 42

ಪಂಕ=ಕೆಸರು 26

ಪಂಚಾನನ=ಸಿಂಹ 157

ಪಂಥ=ಪಥ, ಮಾರ್ಗ, ಹಂಗಿಸುವಿಕೆ 189, 190

ಪಂದಿ=ಹಂದಿ

ಪಕ್ಕೆ=ಪಕ್ಷ, ಮಗ್ಗಲು, ಹತ್ತರ, ಮಂಚ 175

ಪಗಲು=ಹಗಲು

ಪಚ್ಚಳ=ಪಕ್ಷ, ಪಕ್ಕೆ 177

ಪಜ್ಜೆ=ಹೆಜ್ಜೆ

ಪಟಲ=ಸಮೂಹ 88

ಪಟಹ=ಹಲಗೇ ವಾದ್ಯ 187

ಪಟು=ಚಾತುರ್ಯವುಳ್ಳ 190, 197

ಪಠಿಸುವದು=ಪಾಠ ಮಾಡುವದು 73

ಪಡಿ-ತಳಿಸುವದು=ಧೈರ್ಯಗೊಳ್ಳುವದು 176

ಪಣ=ಹಣ 117

ಪಣ್ಣು=ಹಣ್ಣು

ಪತಾಕೆ=ಬಾವಟೆ 188

ಪತ್ತು=ಹತ್ತು

ಪಥ=ದಾರಿ 45

ಪದಪು=ಪ್ರಕಾಶ 150

ಪದವಿ=ಮಾರ್ಗ, ಸ್ಥಳ, ಗತಿ 29

ಪದಾತಿ=ಕಾಲಾಳು 185

ಪದಾಯುಧ=ಕಾಲಾಯುಧದ್ದು, ಕೋಳಿ 164

ಪದ್ಮಾಕರ=ಪದ್ಮ-ಆಕರ, ತಾವರೆಗಳ ಖಣಿ, ಕೆರೆ 198

ಪದ್ಯ=ಶ್ಲೋಕ 126

ಪನಸ=ಹಳಸು 203

ಪಯಣ=ಪ್ರಯಾಣ 240

ಪಯಣಸ್ಥ=ಪ್ರಯಾಣಸ್ಥ 204

ಪರ=ಬೇರೆಯಾದ, ಆಚೆಯದಾದ, ಲೌಕಿಕವಲ್ಲದ, ಅನ್ಯ, ನೆರೆಯ 15, 24, 65. 75

ಪರ-ತಾಪ=ಅನ್ಯರ ಪೀಡೆ 65

ಪರಮೆ=ಭ್ರಮರ 157

ಪರವಾದಿ=ಎದುರು ಮಾತಾಡುವವ, ನಿಂದಿಸುವವ 82

ಪರಶು=ಕೊಡ್ಲಿ 189

ಪರಿ=ಪ್ರಕಾರ, ವಿಧ 15, 154

ಪರಿಗತವಾಗುವದು=ಹೋಗುವದು 43

ಪರಿಚರ=ಮೇಲಾಳು 197

ಪರಿಚರ್ಯ=ಬಳಿಕೆ 245

ಪರಿಣತ=ಜೊಗ್ಗಿ ಕೊಂಡವ, ಮನಸು ಕೊಡುವವ, ಭಕ್ತ 1

ಪರಿದಳಿತ=ಪೂರಾಗಿ ಅರಳಿದ 215

ಪರಿಪಕ್ವ=ಪೂರ್ಣವಾದ ಹಣ್ಣು 246

ಪರಿಯುವದು=ಪರೆಯುವದು, ಹರಿಯುವದು ಇತ್ಯಾದಿ

ಪರಿವಾರ=ಮೇಲಾಳು 90, 93

ಪರಿವು=ನೀರಿನ ಹರಿಯುವಿಕೆ 202

ಪರಿವುವದು=ಹರಿಯುವದು, ಚಂಚಲವಾಗಿರುವದು 123

ಪರಿಶೋಭೆ=ಬಹಳ ಪ್ರಕಾಶ 232

ಪರಿಶೋಭಿಸುವದು=ಬಹಳವಾಗಿ ಪ್ರಕಾಶಿಸುವದು 198

ಪರಿಸ್ತರಣ=ಗೋಡೇ ಬುಡದಲ್ಲಿ ಹಚ್ಚುವ ಬಣ್ಣದ ಭೂಷಣ 159

ಪರೆಯುವದು=ಹರಿಯುವದು, ಇತ್ತು ಅತ್ತು ಹೋಗುವದು, ಹರಿದು ಹೋಗುವದು, ಕಾಣದೆ ಹೋಗುವದು 175, 206, 208

ಪರ್ಬುಗೆ=ಹಬ್ಬುವಿಕೆ 172

ಪರ್ಬುವದು=ಹಬ್ಬುವದು 185

ಪರ್ವುವದು=ಹಬ್ಬುವದು 244

ಪಲವು=ಹಲವು 4

ಪಲಾಶ=ಕೆಂಪು ಹೂವಿನ ಒಂದು ಮರ 162

ಪಲ್ಲವ=ಕುಡಿ, ತಳಿರು, ಹೊಸ ಎಲೆ 246

ಪವಡಿಸುವದು=ಮಲಗುವದು 224

ಪವನ=ಘಾಳಿ 215

ಪವಮಾನ=ಘಾಳಿ 45
ಪವಳ=ಹವಳ
ಪಸರಿಸುವದು=ವಿಸ್ತಾರವಾಗುವದು 206, 216
ಪಸುರು=ಹಸುರು
ಪಸುರು-ವೆಳಗು=ಹಸುರಾದ ಬೆಳಕು, ಚಂದ್ರ ಜ್ಯೋತೀ ಬೆಳಕು 224
ಪಳಂಚುವದು=ಒರಸುವದು 242
ಪಳಕು, ಪಳುಕು=ಸ್ಫಟಿಕ 151, 156, 224
ಪಳಿಯುವದು=ಹಾಸ್ಯ ಮಾಡುವದು 200
ಪಳ್ಳ=ಹಳ್ಳ
ಪಾಂಥರು=ಮಾರ್ಗಸ್ಥರು 227
ಪಾಠಕ=ಪಾಠ ಮಾಡುವವ 214
ಪಾಡು=ಹಾಡು; ಕೆಲಸ 189
ಪಾಡುವದು=ಹಾಡುವದು
ಪಾಣಿ=ಕೈ 189
ಪಾತ=ಬೀಳುವಿಕೆ 178
ಪಾತಕ=ಪಾಪ
ಪಾತಕತನ=ಪಾಪದ ಭಾವ 108
ಪಾತಿ-ವ್ರತ್ಯ=ಗಂಡನಿಗೆ ನಂಬಿಕೆಯಾಗಿರುವಂಥ ನಡತೆ 127
ಪಾಮರ=ನೀಚ 17
ಪಾಮರಿ=ಗದ್ದೆ ಕಾಯುವ ಚಾಕರಿಯವಳು 244
ಪಾಯುವದು=ಹಾಯುವದು, ದಾಟುವದು 249
ಪಾರುವದು=ಹಾರುವದು
ಪಾಲ=ಪಾಲಕ, ಪತಿ, ರಾಜ 39
ಪಾಲಕ=ಆಳುವವ, ರಾಜ 5, 137
ಪಾಲಿಸುವದು=ಆಳುವದು 143
ಪಾಲು, ಪಾಲ್=ಹಾಲು
ಪಾವು=ಹಾವು
ಪಾಶ=ಬಂಧ, ಹಗ್ಗ 78
ಪಾಷಾಣ=ಕಲ್ಲು 144
ಪಾಳೆಯ=ದಂಡಿಳಿದ ಸ್ಥಳ 62, 195, 197
ಪಿಂಗುವದು=ಹಿಂದಿರುಗುವದು, ಹಿಂದಕ್ಕೆ ತೆಗೆಯುವದು 145, 203
ಪಿಕ=ಕೋಗಿಲೆ 164, 246
ಪಿಡಿಯುವದು=ಹಿಡಿಯುವದು
ಪಿರಿದು=ಹಿರಿದು, ದೊಡ್ಡದು 141, 208
ಪುಟ=ಕುದುರೇ ಕೊಳಗದ ದುಂಡಾಕಾರ 207
ಪುಟವಿಡುವದು=ಬಲಗೊಳ್ಳುವದು 166
ಪುಟ್ಟುವದು=ಹುಟ್ಟುವದು
ಪುಣುಗು=ಒಂದು ಜಾತೀ ಪರಿಮಳ (ಒಂದು ಬೆಕ್ಕಿನದು) 174
ಪುಣ್ಯ-ಶ್ಲೋಕನು=ಪುಣ್ಯವರ್ತಿಸುವವನು 42
ಪುದುಗುವದು=ಅಡುಗುವದು, ಅಡಗಿಸುವದು, ಮುಚ್ಚುವದು 179, 220
ಪುದುವದು=ಹುಟ್ಟುವದು 187
ಪುನ್ನಾಗ=ಹೂವುಗಳಿಂದ ಹಳದಿ ಬಣ್ಣ ಬರುವದೊಂದು ಮರ; ಜಾಜಿಕಾಯಿಯ ಮರ 162
ಪುರಿ=ಪುರ 43
ಪುಲಿ=ಹುಲಿ
ಪುಲ್ಲು=ಹುಲ್ಲು
ಪುಲ್ಲೆ=ಜಿಂಕೆ 175, 181
ಪುಳಿಂದಿ=ಪುಳಿಂದನೆಂಬ ಕಾಡುಜನರಸ್ತ್ರೀ 173
ಪುಳಿನ=ಮಳಲು ಕೂಡಿದ ಸ್ಥಳ 199
ಪೂ=ಹೂ
ಪೂಗ=ಅಡಿಕೆ 162
ಪೂಡುವದು=ಹೂಡುವದು
ಪೂತು, ಪೂತ್=ಹೂವಾಗಿ 233
ಪೂಯುವದು=ಕೂಗುವದು 202
ಪೆಚ್ಚುಗೆ=ಹೆಚ್ಚುವಿಕೆ 211
ಪೇರ್=ದೊಡ್ಡ 139, 142, 150, 196, 241. 248
ಪೇರ್ಚಿಸುವದು=ಹೆಚ್ಚಿಸುವದು 223
ಪೇರ್ಚುವದು=ಹೆಚ್ಚುವದು 139, 219
ಪೇಳುವದು=ಹೇಳುವದು
ಪೊಂ=ಹೊನ್ನು 151, 191
ಪೊಂದು=ಒಪ್ಪು, ಪ್ರಕಾಶ 150
ಪೊಗಳುವದು=ಹೊಗಳುವದು
ಪೊಗುವದು ಹೊಗುವದು, ಮೇಲ್ಬೀಳುವದು 247

ಪೊಚ್ಚ=ಪಚ್ಚ, ಹೊಸ 224
ಪೊಡಮಡುವದು=ಹೊರಡುವದು 179, 204
ಪೊಡವಿ=ಭೂಮಿ 23
ಪೊಡೆ=ಎದೆ, ಧೈರ್ಯ 192
ಪೊಣೆ=ಹೊಣೆ
ಪೊದಕೆ=ಹೊದಿಕೆ
ಪೊದರು=ಹೊದರು 176, 178
ಪೊದಿಸುವದು=ಹೊದಗಿಸುವದು 220
ಪೊಯ್ಯುವದು=ಹೊಯ್ಯುವದು
ಪೊರಗೆ=ಹೊರಗೆ
ಪೊರಳುವದು=ಹೊರಳುವದು
ಪೊರುವದು=ಹೊರುವದು, ಹೊತ್ತು ಕೊಳ್ಳುವದು 113
ಪೊರೆಯುವದು=ಬೆರೆಯುವದು, ಮಿಶ್ರಿತವಾಗಿರುವದು 154
ಪೊಲ=ಹೊಲ
ಪೊಸ=ಹೊಸ, ಆಶ್ಚರ್ಯವಾದ, ಅದ್ಭುತ 152, 226
ಪೊಸತು=ಹೊಸದು 176
ಪೋಗುವದು=ಹೋಗುವದು
ಪೋಲುವದು=ಹೋಲುವದು 232
ಪೋಷಿಸುವದು=ಬೆಳಿಸುವದು, ಸಾಕುವದು 1
ಪ್ರಕಟ=ವಿಸ್ತಾರವಾದ 205
ಪ್ರಕಟತರ=ಬಹಳ ವಿಸ್ತಾರವಾದ 153
ಪ್ರಕರ=ಗುಂಪು 149, 153, 164
ಪ್ರಜ್ವಲಿಸುವದು=ಬಹಳ ಜ್ವಾಲೆಯಾಗುವದು 210
ಪ್ರತತಿ=ದೊಡ್ಡ ಸಮೂಹ 211, 220
ಪ್ರತಾಪ=ಬಹಳ ಶೆಖೆ,—ಜ್ವಾಲೆ 221
ಪ್ರತಿ-ದನಿ=ಪ್ರತಿಯಾಗಿ ಬರುವ ಧ್ವನಿ 82
ಪ್ರದೀಪ=ಹೊಳಪು, ಹೊಳೆಯುವಿಕೆ 159
ಪ್ರದೇಶ=ಸ್ಥಳ 188
ಪ್ರಬಂಧ=ಎಡೆ ಬಿಡದ ಕೆಲಸ 17
ಪ್ರಬಲ=ಬಹಳ ಬಲ 222
ಪ್ರಭೆ=ಪ್ರಕಾಶ 243
ಪ್ರವಾಳ=ಹವಳ 151
ಪ್ರಹಾರ=ಹೊಡದಾಟ, ಪೆಟ್ಟು 189
ಪ್ರಾಚೀನ=ಮೂಡಲ ದಿಕ್ಕಿನದಾದ 207
ಪ್ರೇಮ=ಪ್ರೀತಿ
ಪ್ರೇರಕ=ನಡಿಸುವವ 138
ಪ್ರೌಢ=ಕೀರ್ತಿಯುಳ್ಳವ 5, 185

## ಫ

ಫಣೆ=ಹಾವು 170
ಫಲಿತ=ಫಲವಾದ 215

## ಬ

ಬಂಟ=ಭಟ, ದಂಡುಗಾರ 98
ಬಂಡ=ನೀಚ 113
ಬಂಧಿಸುವದು=ಕಟ್ಟುವದು 22
ಬಂಧುರ=ಚಂದ 188, 214
ಬಂಭಾ (-ಭೆ)=ಕೂಗುವಿಕೆ 187
ಬಕುಳ=ಬೊಕುಳೆ ಮರ 162
ಬಗೆ=ಚಿಂತೆ, ರೀತಿ 83
ಬಗೆಯುವದು=ಚಿಂತಿಸುವದು 13
ಬಜ್ಜರ=ವಜ್ರ 156
ಬಟ್ಟು-ಬರಿದು=ಬೈಲಾಗಿ ಬರೇದು 7
ಬಡುವದು=ಪಡುವದು 14, 18
ಬದಿರ=ಕಿವುಡ 105
ಬನ=ವನ, ತೋಟ
ಬನ್ನ=ಭಗ್ನ, ಕಷ್ಟ 18
ಬಯಸುವದು=ಆಶಿಸುವದು 13, 36, 76
ಬರುಹಿ=ನವಿಲು 183
ಬರೆಯುವದು=ಬತ್ತುವದು 227
ಬಲರು=ಬಲವುಳ್ಳವರು 189
ಬಲಾಹಕ=ಮೋಡ 88
ಬಲಿಯುವದು=ಬಲವಾಗುವದು, ದೊಡ್ಡದಾಗುವದು, ಘಟ್ಟಿಯಾಗುವದು 33, 223
ಬಲಿಸುವದು=ಬಲ ಪಡಿಸುವದು 72

ಬಲು, ಬಲ್=ಬಹು, ಬಹಳ 33, 58, 90, 121, 124

ಬಲುಮೆ=ದೊಡ್ಡದು, ಹೆಚ್ಚುವಿಕೆ, ಬಲ 27, 115

ಬಲ್ಮೆ=ಬಲುಮೆ 115

ಬಲ್ಲರು=ತಿಳಿದವರು 121

ಬಲ್ಲವನು=ತಿಳಿದವನು 4

ಬಲ್ಲಿದನು=ದೊಡ್ಡವನು 139

ಬಲ್ಲುದು=ತಿಳಿಯುವದು, ಯುಕ್ತವಾಗಿರುವದು

ಬಳಗ=ಪರಿಚಿತೀ ಜನ, ಗುಂಪು 21, 174, 223, 247

ಬಳಲುವದು=ಆಯಾಸ ಪಡುವದು, ಬಾಡುವದು 122

ಬಳಸು=ಮಾರ್ಗ, ನಡತೆ 96

ಬಳಸುವದು=ಸುತ್ತುವದು, ಸುತ್ತಲ್ಪಟ್ಟಿರುವದು, ಸುತ್ತ್ಯಾಡುವದು 242, 246

ಬಳಿಯ=ಹತ್ತರ 180

ಬಳಿ-ವಿಡಿಯುವದು=ಬಳಿ ಹಿಡಿಯುವದು, ಹಿಂಬಾಲ ಮಾಡುವದು 173, 242

ಬಳಿಸುವದು=ಎಲ್ಲಿಯೂ ರೂಢಿ ಮಾಡುವದು 42

ಬಾಂದಳ=ಆಕಾಶ 244

ಬಾಗು=ತಾನು ಬಾಗಿ ಕೊಳ್ಳ ಬೇಕಾಗುವಂಥಾದು (ಕಷ್ಟ, ಅಪಮಾನ ಇತ್ಯಾದಿ) 36

ಬಾಚುವದು=ಲೋಭದಿಂದ ಕೂಡಿಸಿ ಕೊಳ್ಳುವದು 148

ಬಾಲ=ಚಿಕ್ಕ ಪ್ರಾಯದವ 123

ಬಾಲಾತಪ=ಬಾಲ-ಆತಪ, (ಚಂದ್ರನ) ಎಳೇ ಪ್ರಕಾಶ 158

ಬಾಷ್ಪ=ಕಣ್ಣೀರು 101

ಬಾಹಾ (-ಹೆ)=ತೋಳು, ಕೈ 187

ಬಾಹ್ಯ=ಹೊರಗಿನದು, ಹೊರಗಿರುವಂಥಾದು 26

ಬಾಳು=ಕತ್ತಿ; ಬಾಳಿಕೆ 92, 117, 146, 193

ಬಾಳ್ವೆ=ಬಾಳಿಕೆ 142

ಬಿಂನಾಣ=ಚಾತುರ್ಯ 189

ಬಿಂಬ=ರೂಪ, ಪ್ರಕಾಶ 212

ಬಿಂಬಿಸುವದು=ಪ್ರಕಾಶಿಸುವದು 207

ಬಿಗಿಯುವದು=ಬಿಗಿ ಮಾಡುವದು, ಬಿಗಿಯಾಗಿ ಕಟ್ಟುವದು 84

ಬಿಡಯ=ಗುಂಪು, ಹಿಂಡು 174, 242

ಬಿಡಿಯುವದು=ಹಿಡಿಯುವದು 152

ಬಿಣ್ಪು=ಘುಡತರ, ಭಾರ 215

ಬಿನದಿಸುವದು=ಧ್ವನಿ (ನಾದ) ಮಾಡುವದು [199

ಬಿನ್ನಣ=ಚಂದ 64

ಬಿರಿಯುವದು=ಬಿರಕಾಗುವದು, ಒಡೆಯುವದು 86

ಬಿರು=ಬೇಗ 181

ಬಿರುದು=ಬಳೆ, ಪೆಂಡೆ, ಘುಂಟಿ, ಕತ್ತಿ ಇತ್ಯಾದಿ ಬಹುಮಾನವಾಗಿ ಶಿಕ್ಕಿರುವ ಜಿನಸು

ಬಿರುಬು=ದೊಡ್ಡ ಶಬ್ದ 88

ಬಿಸ=ನೈದಿಲೇ ದಂಟು, ನೀರು 199

ಬಿಸು=ಬಿಸಿ, ಕಾವಾಗಿ 171, 204

ಬಿಸುಟು=ಬಿಟ್ಟು ಬಿಟ್ಟು (ಬಿಸುಡುವದು) 38

ಬಿಸುಟ್ಟು=ಬಿಸುಟು

ಬಿಸುಡುವದು=ಬಿಸಾಡುವದು, ಒಕ್ಕೊಡುವದು, ಬಿಟ್ಟು ಬಿಡುವದು

ಬಿಸು-ಸುಯ್ಯು (-ಸುಯ್ಯ್ಯ)=ಬಿಸಿಯಾದ ಉಸುರು 228

ಬೀಡು=ಬಿಡಾರ, ಗುಂಪು 32, 208

ಬೀಡುವದು=ಬೀಳುವದು 57

ಬೀರುವದು=ವಿಸ್ತಾರವಾಗುವದು 199

ಬುದ್ಬುದ=ನೀರುಗುಳ್ಳೆ 196

ಬುಳು=ಹುಳ 144

ಬೃಂಹಿತ=ಗುಡುಗುವಂಥ ಧ್ವನಿ 93

ಬೆಚ್ಚುವದು=ಭಯ ಪಡುವದು 206

ಬೆಡಗು=ಬೆರಗು, ಆಶ್ಚರ್ಯ 150

ಬೆಮೆ=ಭ್ರಮೆ 72

ಬೆರಸುವದು=ಒಳಗೂಡಿಸುವದು 14

ಬೆರೆಯುವದು=ಒಳಗೂಡುವದು, ಒಂದೇ ಗುಂಪಾಗಿರುವದು 74, 202

ಬೆಳಗುವದು=ಪ್ರಕಾಶಿಸುವದು 110, 206, 238
ಬೆಳತ=ಬೆಳೆದ
ಬೆಳಸು=ಬೆಳೆ 239
ಬೆಳು=ಬಿಳೇ, ಬಿಳೇದಾದ 84
ಬೆಳೆಯುವದು=ಬೆಳ್ಳಗಾಗುವದು, ಪ್ರಕಾಶವಾಗುವದು 238
ಬೆಳ್=ಬಿಳೇ 243
ಬೆಳ್ಪು, ಬೆಳ್ಪ್=ಬಿಳೇದು 239
ಬೆಳ್ಮಾರ-ವಲೆ=ಒಂದು ಜಾತೀ ದೊಡ್ಡ ಬಲೆ 163
ಬೇಗೆ=ಕಾಡ ಕಿಚ್ಚು 207
ಬೇಸತ್ತು=ಬೇಸರಾಗಿ (ಬೇಸರಿಯುವದು) 32
ಬೇಸರಿಯುವದು, ಬೇಸರುವದು=ಬೇಸರ ಪಡುವದು
ಬೇಹುಕಾರ=ಹೊಂಚುಗಾರ, ಕಾವಲಿಗಾರ 62
ಬೊಂಬಾಳ=ದೊಡ್ಡ ದೀವಟಿಗೆ 159
ಬೊಗರು=ವೊಗರು, ಪ್ರಕಾಶ 247
ಬೊಡ್ಡಿ=ಕೆಟ್ಟ 73
ಬೊಬ್ಬುಳಿ=ನೀರುಗುಳ್ಳೆ 202
ಬೊಬ್ಬೆ=ಕೂಗು
ಬೋದಿಗೆ=ಬೋದುಗೆ
ಬೋದುಗೆ=ಕಂಭದ ಮೇಲ್ಭಾಗ 151

## ಭ

ಭಂಗ=ನಷ್ಟ, ಸಮುದ್ರದ ತೆರೆ 83, 149
ಭಕುತಿ=ಭಕ್ತಿ 95
ಭಜಕ=ಭಜನೆ ಮಾಡುವವ 143
ಭಟ=ದಂಡುಗಾರ 51
ಭರ=ಹೆಚ್ಚುವಿಕೆ, ದೊಡ್ಡದಾದ, ಬೇಗ, ಆಶೆ ಮಾಡುವ 16, 87, 180, 207, 230, 231
ಭರದ್ವಾಜ=ಕೆಂಬೋತ 164
ಭರಿತ=ತುಂಬಿದ, ತುಂಬಿದ್ದು 201
ಭವಣೆ=ಕಷ್ಟ 221
ಭವನ=ಮನೆ 241
ಭಕ್ಷಣ=ಊಟ 13
ಭಾ, ಭೆ=ಪ್ರಭೆ, ಪ್ರಕಾಶ 118, 138
ಭಾಂಡ=ಮಣ್ಣಿನ ಪಾತ್ರೆ 153
ಭಾರ-ಹರ=ಭಾರಗಳನ್ನು ಪರಿಹರಿಸುವವ 68
ಭಾರಿ=ಬಾಹುಳ್ಯ, ಹೆಚ್ಚುವಿಕೆ 39
ಭಾವಿಸುವದು=ಆಲೋಚಿಸುವದು 24
ಭಿತ್ತಿ=ಗೋಡೆ 151, 154, 156
ಭಿನ್ನ=ತುಂಡು, ಭೇಧ 63
ಭೀಷಣ=ಭೀತಿ ಹುಟ್ಟಿಸುವ ಗುಣವುಳ್ಳ ಭೀಷ್ಮ 197, 230
ಭುಜ=ತೋಳು, ಕೈ 27, 106
ಭುವನ=ಲೋಕ 221
ಭೂ=ಭೂಮಿ 5
ಭೂ-ಚಕ್ರ=ಭೂಮಿ-ಮಂಡಲ
ಭೂ-ತಳ=ಭೂಮಿ 227, 233
ಭೂ-ನಾಥ=ಭೂ-ಪತಿ
ಭೂ-ಪತಿ=ಅರಸು 38, 41
ಭೂ-ಭುಜ=ಭೂಮಿಯನ್ನು ಉಣ್ಣುವವ, ರಾಜ 41, 230
ಭೂ-ಭೃತ್=ಪರ್ವತ, ರಾಜ 229
ಭೂಮಿ-ಪ=ಭೂ-ಪತಿ 42
ಭೂರಿ=ಬಹಳ 56
ಭೃಂಗ=ಭೃಂಗಹುಳ, ತುಂಬಿ 122
ಭೃತ್ಯ=ಚಾಕರಿಯವ 97, 116
ಭೋಗ=ಅನುಭವಿಸುವಿಕೆ 78
ಭ್ರಷ್ಟ=ಪುಣ್ಯಮಾರ್ಗ ಬಿಟ್ಟವ 74
ಭ್ರೂ=ಹುಬ್ಬು 173
ಭ್ರೂ-ಲತೆ=ಬಳ್ಳಿಯಂತಿರುವ ಹುಬ್ಬು 173

## ಮ

ಮಂಗಳ=ಪ್ರಕಾಶವುಳ್ಳ 83
ಮಂಜರಿ=ಗೊಂಚಲು 214
ಮಂಡೆ=ಸ್ಥಳ, ಮನೆ 21
ಮಂದಾಕಿನಿ=ಗಂಗಾನದಿ 204
ಮಕರ=ಸಮುದ್ರದ ಹುಲಿ 149
ಮಕರಂದ=ಜೇನುತುಪ್ಪ 216, 247 [126
ಮಗುಚುವದು=ತಲೆ ಕೆಳಗಾಗಿ ಹಾಕುವದು

ಮಗುಳುವದು=ತಿರುಗುವದು 244
ಮಜ್ಜನ=ಮಿಾಯುವಿಕೆ 152
ಮಡಯು=ಹೆಸ್ಗ 142
ಮಡದಿ=ಹೆಂಡತಿ 19, 20, 23
ಮಡಲು=ಉಸುರು ಹೋಗುವ ದಾರಿ; ಹಬ್ಬುವಿಕೆ 192, 218
ಮಡಿಯುವದು=ಸಾಯುವದು 181
ಮಣಿಯುವದು=ಬಾಗುವದು 120
ಮತಿ=ಬುದ್ಧಿ 1
ಮದ=ಸೊಕ್ಕು, ಭ್ರಮ, ಸಂತೋಷ 8
ಮದಗ=ಕೆರೆ 129
ಮದನ=ಕಾಮ 115
ಮದನಕೈ=ಕಂಭಗಳ ಭೂಷಣ 156
ಮದನ-ರಸ=ಜೇನು ತುಪ್ಪ 223
ಮದೇಭ=ಮದದ ಇಭ, ಮದದ ಆನೆ 90
ಮದೋತ್ಕರ=ಮದ-ಉತ್ಕರ, ಸಂತೋಷದ ಹೆಚ್ಚುವಿಕೆ 198
ಮದ್ದು-ಗುಣಿಕೆ=ಉನ್ಮತ್ತದ ಕಾಯಿ 15
ಮಧು=ಜೇನುತುಪ್ಪ 209
ಮಧುಕರ=ಜೇನುಹುಳ 198
ಮಧುರ=ಸವಿಯಾದ, ರಮ್ಯ, ಚೆಲೋ 105, 198
ಮಧು-ರಸ=ಜೇನುತುಪ್ಪ 14
ಮನೆವಾರ್ತೆ=ಮನೇ ಕೆಲಸ 7, 19, 23
ಮನೋ-ಹರ=ಸುಖ ಕೊಡುವಂಥಾದು 157
ಮಮಕಾರ=ಮಮತೆ 69
ಮಮತೆ=ಪ್ರೀತಿ 7, 20
ಮಯ=ವ್ಯಾಪಿಸಿದ, ಉಳ್ಳ, ಇರುವ, ಇರುವಿಕೆ 29, 155, 168
ಮಯೂರ=ನವಿಲು 164
ಮರದು=ಮರತು, ಮರೆತು
ಮರಮಟ್ಟು=ತೊಲೆ, ಕಂಭ ಮುಂತಾದ ಮರ ಜಿನಸುಗಳು 32
ಮರವಿಂದ=ತಾವರೆ 208
ಮರಳುವದು=ಹಿಂದಿರುಗುವದು 17, 217
ಮರಾಳ=ಒಂದು ಜಾತೀ ಹಂಸ 164
ಮರೀಚಿಕೆ=(ಮೋಸ ಮಾಡುವ) ಪ್ರಕಾಶ, ಹೊಳೆಯುವಿಕೆ 123, 200
ಮರು=ಮತ್ತು, ಎರಡನೇ 49
ಮರುಕ=ಮಮತೆ 220
ಮರುಗುವದು=ಚಿಂತೆ ಪಡುವದು, ದುಃಖ ಪಡುವದು, ಗುಣುಗುಟ್ಟುವದು 10, 107, 171, 186, 204
ಮರ್ಕಟ=ಮಂಗ 8, 14
ಮರ್ತ್ಯ=ಮರಣಕ್ಕೊಳಗಾಗುವವ, ನರ 138, 231
ಮರ್ಮ=ಗುಪ್ತ, ರಹಸ್ಯ 96, 101
ಮಲ=ಹೇಸಿಕೆ, ಪಾಪ 25
ಮಲಯಾಚಲ=ಮಲಯ-ಅಚಲ, ಮಲಯವೆಂಬ ಪರ್ವತ, ಮಲಯಾಳ ಘಟ್ಟಗಳು 222
ಮಸಗುವದು=ಶಿಟ್ಟಾಗುವದು, ಹೆಚ್ಚಾಗುವದು 85
ಮಸೆಯುವದು=ಒಂದಕ್ಕೊಂದು ತಿಕ್ಕಿ ಕೊಂಡು ಪ್ರಕಾಶಗೊಳ್ಳುವದು 224
ಮಸ್ತಕ=ತಲೆ 141
ಮಹಾದ್ಭುತ=ಮಹಾ ಅದ್ಭುತ 62
ಮಹಿ=ಭೂಮಿ 43
ಮಕ್ಷಿಕ=ನೊಣ 13
ಮಾ=ಮಾವು 214
ಮಾಂಗಲ್ಯ=ಮಂಗಳತ್ವ, ಪ್ರಕಾಶ 239
ಮಾಗಿ=ಛಳಿಗಾಲ, ಛಳಿ 218, 219, 223, 226
ಮಾಣುವದು=ಉಳಿಯುವದು, ಬಿಡುವದು, ಇರುವದು 141, 186, 221, 227
ಮಾತುಳಂಗ=ಮಾದಳ 203
ಮಾನವ=ಮನುಷ್ಯ 6, 13
ಮಾನಿತ=ಮಾನವುಳ್ಳವ 83
ಮಾನಿನಿ=ಸ್ತ್ರೀ 79
ಮಾನುಜ=ಮನುಜನ ಕುಲದವ, ನರಜಾತಿಯವ 143

ಮಾಯೆ=ಸುಳ್ಳು 76, 81
ಮಾರ=ಮರಣ ಪಡಿಸುವವ, ಕೊಲ್ಲುವವ 192
ಮಾರು, ಮಾರ್=ಎರಡನೇ ಎದುರಾದ 85, 89
ಮಾರುತ=ಘಾಳಿ 60, 161, 249
ಮಿಕ್ಕ=ಉಳಿದ, ಬೇರೆ (ಮಿಗುವದು)
ಮಿಗಿಲು=ಹೆಚ್ಚು 42, 49
ಮಿಗುವದು=ಹೆಚ್ಚಾಗುವದು 47
ಮಿಗೆ=ಹೆಚ್ಚು, ಬಹಳ, ಘಟ್ಟಿಯಾಗಿ 35, 84, 166
ಮಿಡಿ=ಚಿಕ್ಕ ಕಾಯಿ 139
ಮಿತ್ರ=ಸೂರ್ಯ, ಸ್ನೇಹಿತ 186
ಮಿನುಗುವದು=ಹೊಳೆಯುವದು 156, 196
ಮಿರುಗುವದು=ಪ್ರಕಾಶಿಸುವದು 223
ಮಿರುಪು=ಪ್ರಕಾಶ 156, 239
ಮಿಸುಪು=ಪ್ರಕಾಶ 152
ಮೀನ=ಮೀನು
ಮುಂಗುಡಿ=ಮುಂದಗಡೆ 235
ಮುಂಚುವದು=ಮುಂದೆ ಹೋಗುವದು 236
ಮುಂಡೆ=ತಲೆ ಕತ್ತರಿಸಿದ ಮೈ 193
ಮುಂ-ದಳೆಯುವದು=ಮುಂದಕ್ಕೆ ಹೋಗುವದು 204
ಮುಂ-ಬನಿ=ಮೊದಲಿನ ಹನಿ 237
ಮುಕುಟ=ಕಿರೀಟ 45
ಮುಕುತಿ=ಮುಕ್ತಿ
ಮುಕುರ=ಕನ್ನಡಿ 119
ಮುಕ್ತಾಫಲ=ಮುತ್ತು 183
ಮುಗಿವುವದು=ಮುಚ್ಚಿಕೊಳ್ಳುವದು 209
ಮುಗುರುವದು=ಮೇಲ್ಬೀಳುವದು 244
ಮುಗುಳು=ಮೊಗ್ಗೆ 249
ಮುಗ್ಗುವದು=ಮುಣುಗುವದು, ಒಳಬೀಳುವದು 171
ಮುತ್ತಿಗೆ=ಮೇಲ್ಬೀಳುವಿಕೆ 33
ಮುದ=ಸಂತೋಷ 231
ಮುದ್ಗರ=ಸುತ್ತಿಗೆ 88, 189
ಮುನಿಸು=ಶಿಟ್ಟು 221
ಮುನ್ನ=ಮುಂಚೆ 34, 64
ಮುಸಲ=ಒನಿಕೆ 88
ಮುಸುಂಡಿ=ಮೂರು ಧಾರೆಯ ಆಯುಧ 88
ಮುಸುಕುವದು=ಮೇಲ್ಬೀಳುವದು, ಮುಚ್ಚುವದು 94, 184, 188
ಮುಳಿಯುವದು=ಶಿಟ್ಟು ಪಡುವದು 180, 243
ಮೂ=ಮೂರು 142, 219
ಮೂಡಿಕೆ=ಬತ್ತಳಿಕೆ 84
ಮೂರುತಿ=ಮೂರ್ತಿ, ರೂಪ 2
ಮೂಷಕ=ಇಲಿ 205
ಮೃತಿ=ಮರಣ
ಮೃದು=ಮೆತ್ತಗಿ, ಪ್ರಿಯ 1
ಮೃದುತರ=ಬಹಳ ಮೃದುವಾದ 198
ಮೆರೆಯುವದು=ಡಂಭಾಚಾರವಾಗಿ ಶಿರಿಗಾಣುವದು, ಪ್ರಕಾಶಿಸುವದು 75, 153, 155, 191, 238, 239
ಮೇಗೆ=ಮೇಲೆ 155
ಮೇಘ=ಮೋಡ
ಮೇಣ್=ಮೇಲೆ, ಮತ್ತು 140, 170, 219
ಮೇದಿನಿ=ಭೂಮಿ 86
ಮೇರುವೆ=ದಂಡಿಳಿದ ಘಟ್ಟಿ ಮಾಡಿದ ಸ್ಥಳ 94
ಮೇಳ=ಗುಂಪು 183
ಮೊಗ=ಮುಖ, ಬಾಯಿ 228
ಮೊಗಸುವದು=ಸಿದ್ಧ ಮಾಡುವದು 176
ಮೊರಹು=ಸಮುದ್ರದ ತೆರೆಗಳ ಮೊರಮೊರ ಎನ್ನುವ ಶಬ್ದ 196
ಮೊರೆಯುವದು=ಗುಣುಗುಟ್ಟುವದು, ಮೊರಮೊರ ಎನ್ನುವದು 140, 202, 206, 211, 214
ಮೊಳಗುವದು=ಗುಡುಗುವದು 1, 231
ಮೋಟ=ಕೈಯಿಲ್ಲದವ 147
ಮೋದ=ಸುಖ 23
ಮೋಹ=ಮರುಳು, ದಡ್ಡತನ 19, 181
ಮೋಹಿಸುವದು=ಮರುಳುಗೊಳ್ಳುವದು, ಆಶೆಪಡುವದು 19, 85
ಮೌಳ್ಯ=ಕಿರೀಟ 146

# ಯ

ಯಾಗ=ಯಜ್ಞ 27
ಯಾಚಕ=ಭಿಕ್ಷೆಗಾರ 226
ಯಾತು=ಪಿಶಾಚ 193
ಯಾತ್ರೆ=ಹೋಗುವಿಕೆ 232
ಯಾನ=ವಾಹನ 116
ಯುಕುತಿ=ಯುಕ್ತಿ 95
ಯುಗ=ನಾಲ್ಕು ಮೊಳ ಉದ್ದ 84
ಯುತ=ಕೂಡಿದವ, ಉಳ್ಳವ, ಕೂಡಿದ್ದು 119, 201
ಯುವ=ಯೌವನ 180
ಯುವತಿ=ಯೌವನದ ಹೆಣ್ಣು 140

# ರ

ರಂಗ=(ಯುದ್ಧದ) ಸ್ಥಳ, ಆಟ 190, 238
ರಂಜನ=ಬಣ್ಣ, ಪ್ರಕಾಶ 152
ರಂಜಿಸುವದು=ಪ್ರಕಾಶಿಸುವದು 152, 156, 207
ರಂಧ್ರಿಸುವದು=ಬಿಳಹೊಗುವದು 170
ರಕುತ=ರಕ್ತ
ರಚಿತ=ಮಾಡಲ್ಪಟ್ಟ 165
ರಜನಿ=ರಾತ್ರಿ 127
ರಣ=ಯುದ್ಧ 103, 187
ರಣೆ=ಕವಣೆ 178
ರತುನ=ರತ್ನ
ರನ್ನ=ರತ್ನ 151
ರಭಸ=ದೊಡ್ಡ ಧ್ವನಿ 190
ರಮಣ=ಗಂಡ, ಒಡೆಯ 181, 240
ರಮಣೀಯ=ರಮ್ಯ, ಬಹಳ ಚಂದ 72
ರವ=ಧ್ವನಿ 93, 119, 168, 187, 190
ರವಿ=ಸೂರ್ಯ 5, 127, 207
ರಸ=ಸಾರ, ನೀರು 196
ರಸ್ಮಿ=ಕಿರಣ 158
ರಾಗ=ಬಣ್ಣ, ಕೆಂಪು, ವ್ಯಸನ 207, 209
ರಾಗ-ಲೋಭ=ವ್ಯಸನವುಳ್ಳ ಲೋಭ 36
ರಾಜಿ=ಸಾಲು, ಸಮೂಹ 60, 93, 193, 211, 233
ರಾಜಿಸುವದು=ಹೊಳೆಯುವದು 249
ರಾಪು=ಬಹಳ ತೀವ್ರವಾದ ಓಟ 181
ರಾವ್ತ=ರಾವುತ, ಕುದುರೆ ಹತ್ತಿದವ 92
ರಿಪು=ವೈರಿ
ರುಂಡ=ತಲೆಬುರುಡೆ 193
ರುಚಿ=ಕಿರಣ 219
ರುಚಿಸುವದು=ಪ್ರೀತಿ ಮಾಡುವದು 146
ರುರು=ಒಂದು ಜಾತೀ ಜಿಂಕೆ 205
ರೂಢಿಸುವದು=ಹುಟ್ಟುವದು, ಇರುವದು, ಪ್ರತ್ಯಕ್ಷವಾಗುವದು 57
ರೇಣು=ಧೂಳು 184
ರೋಚಿ=ಕಿರಣ, ಪ್ರಕಾಶ 150, 200, 243
ರೋಮ=ಕೂದಲು
ರೋಮ-ಕೂಪ=(ತೊಗಲಲ್ಲಿರುವ) ಕೂದಲಿನ ತೂತು 33
ರೋಲಂಬ=ಜೇನುಹುಳ 219

# ಲ

ಲಂಪಟ=ಕುಡಿಯುವವ, ಜಿಗಳಿ, ಆಶೆಗಾರ 11
ಲಂಬಿಸುವದು=ಕೆಳಗೆ ಬೀಳುವದು, ಜೋತಾಡುವದು 160, 235
ಲಡ್ಡುಗೆ=ಮಿಠಾಯಿ 234
ಲತೆ=ಬಳ್ಳಿ 153, 235
ಲಲಾಮ=ಶ್ರೇಷ್ಠ 230
ಲಲಿತ=ಪ್ರಿಯವಾದ, ಚಂದಾದ 3, 160
ಲಸತ್, ಲಸದ್=ಪ್ರಕಾಶಿಸುವ 199, 233
ಲಕ್ಷ್ಮಿ=ಐಶ್ವರ್ಯ 37
ಲಾಗು=ಹಾರ್ಯಾಟ 160
ಲಾಘುವ=ಲಘುತನ, ಬೇಗತನ 189
ಲಾಭಿಸುವದು=ಲಾಭ ಹೊಂದುವದು 230
ಲಾಲಿಸುವದು=ಕಿವಿ ಕೊಡುವದು 1
ಲೀಲೆ=ಆಟ 202
ಲುಬ್ಧ=ಲೋಭಿ, ಹೆಚ್ಚು ಆಶೆಯವ 9

ಲುಬ್ಧಕ=ಬೇಡ 179

ಲೇಪನ=ಲೇಪ

ಲೇಸು=ಒಳ್ಳೇದು 78

ಲೋಚನ=ಕಣ್ಣು, ದೃಷ್ಟಿ 226

ಲೋವೆ=ಮನೆಯ ಮೇಲಿನ ಭಾಗ 156

## ವ

ವಂಗಡ=ಸಮೂಹ 187

ವಕ್ಕಿ=ಹಕ್ಕಿ 157

ವಕ್ತ್ರ=ಬಾಯಿ 114

ವಜ್ಜರ=ವಜ್ರ 188

ವಜ್ರ-ಮುಷ್ಟಿ=ವಜ್ರದ ಮುಷ್ಟಿ, ಘಟ್ಟಿಯಾದ ಗುದ್ದು 249

ವಟ=ಆಲದ ಮರ 162

ವಟ್ಟೆ=ಬಟ್ಟೆ 84

ವಡಗು=ಹಡಗು 150

ವಡಬಾಗ್ನಿ=ವಡಬ-ಅಗ್ನಿ, ಸಮುದ್ರದ ಕೆಳಗದೆಂತ ಭಾವಿಸಿದ ಬೆಂಕಿ 149

ವಡೆಯುವದು=ಒಳಶಿಕ್ಕುವದು 15

ವಣ್, ವಣ್ಣು=ಹಣ್ಣು 248

ವತ್ಸರ=ವರುಷ 145

ವದನ=ಬಾಯಿ 13

ವಧು=ಸ್ತ್ರೀ 108

ವನ=ತೋಟ, ಕಾಡು

ವನಧಿ=ಸಮುದ್ರ 86

ವನ-ಮಹಿಷ=ಕಾಡುಕೋಣ 175

ವನಿ=ತೋಟ, ಮನೆ; ನೀರುಹನಿ 153, 239

ವನಿತೆ=ಸ್ತ್ರೀ 8, 41, 140

ವಪ್ಪ=ಒಪ್ಪ, ಚೆಲ್ವಿಕೆ, ಮರ್ಯಾದೆ 109

ವರ=ಶ್ರೇಷ್ಠ 5, 43, 159

ವರ-ದ=ವರಗಳನ್ನು ಕೊಡುವವ 68

ವರ-ಸಿಂಧು=ಗಂಗಾನದಿ 188

ವರುಷ=ಮಳೆ 88

ವರುಷಾಗಮ=ವರುಷ-ಆಗಮ, ಮಳೇ ಬರುವಿಕೆ 230

ವರೂಥ=ರಥ 43, 185

ವರ್ಗ=ಸಮೂಹ, ಕುಲ 72

ವಲೆ=ಬಲೆ 163, 164

ವಳಯ=ಬೇಲಿ, ಗತಿ 217

ವಹ್ನಿ=ಅಗ್ನಿ, ಬೆಂಕಿ 161, 162

ವಳ್ಳಿ=ಬಳ್ಳಿ

ವಾಜಿ=ಕುದುರೆ 43, 193, (227, 230, 238, 239ನೇ ಶ್ಲೋಕಗಳಲ್ಲಿಯ ಕುದುರೆಯು ಅಶ್ವಮೇಧಕ್ಕೆ ನೇಮಿಸಲ್ಪಟ್ಟದ್ದು)

ವಾನರ=ಮಂಗ 163

ವಾಯಸ=ಕಾಗೆ 164, 220

ವಾಯು=ಘಾಳಿ 226

ವಾಯುವದು=ಹಾಯುವದು 177

ವಾರಿ=ನೀರು

ವಾರಿ-ಧಿ=ಸಮುದ್ರ 68

ವಾರ್ಧಕ=ಮುಪ್ಪಾಗುವ ಕಾಲ 30

ವರ್ಧನ=ಹೆಚ್ಚಿಸುವಂಥಾದ್ದು (-ಥವನು) 212

ವಾಲ=ಬಾಲ 183

ವಾಸಿತ=ವಾಸನೆಯಾದ ಸ್ಥಿತಿ 159

ವಾಸ್ತು=ಮನೆ 152

ವಿಂಡು=ಹಿಂಡು

ವಿಕಟ=ಹಗೆ, ನೀಚತನ 113

ವಿಕಿರ=ಅಲ್ಲಲ್ಲಿ ಬಿದ್ದಿರುವಿಕೆ 205

ವಿಗಡ=ಕ್ರೂರ, ಕಠಿಣ 33

ವಿಚಿತ್ರ=ಬಹಳ ವರ್ಣನೆ 80

ವಿಜಾತಿ=ಕೆಟ್ಟ ಭಾವ 230

ವಿಡುವದು=ಬಿಡುವದು 176, 177, 223

ವಿಡು-ವಾಯಿ=ಬಿಟ್ಟಂಥ ಬಾಯಿ 177

ವಿತ್ತ=ಐಶ್ವರ್ಯ, ಬದುಕು 23, 220 (ಈ 220ನೇ ಶ್ಲೋಕದ 2ನೇ ಚರಣದಲ್ಲಿ 'ಲಾಭಮಂ' ಎಂಬದಕ್ಕೆ ಬದಲಾಗಿ 'ಲಾಭವೇ' ಎಂತ ಹಾಕ ತಕ್ಕದ್ದಾಗಿದೆ)

ವಿದರ್ಭನು=ವಿದರ್ಭದ ರಾಜನು, ಭೀಷ್ಮಕ 40

ವಿದ್ಯಾರ್ಥ=ವಿದ್ಯೆಯ ಅರ್ಥ 5

ವಿದ್ರುಮ=ಹವಳ 158

ವಿನಿಯೋಗ=ನಡಿಸುವಿಕೆ, ಪಾರುಪತ್ಯ 153
ವಿಪಿನ=ಕಾಡು 38
ವಿಪ್ಲುತ=ದೊಡ್ಡದಾಗಿ ತೆರೆದ 227
ವಿಭಾಸೆ=ಪ್ರಕಾಶ 79
ವಿಭು=ರಾಜ 122
ವಿಮಲ=ಮಲವಿಲ್ಲದ 201
ವಿಮಲತರ=ಬಹಳ ತಿಳಿಯಾದ 82
ವಿಮೋಚನ=ಬಿಟ್ಟು ಹೋಗುವಿಕೆ 226
ವಿರಚಿತ=(ಚಂದಾಗಿ) ಕಟ್ಟಲ್ಪಟ್ಟ 241
ವಿರಹಿ=ಇಲ್ಲದ 236
ವಿರಾಜಿತ=ಬಹಳವಾಗಿ ಪ್ರಕಾಶಿಸುವ, ಗೋಚರ, ಪ್ರಕಟ 198, 212
ವಿಲಾಸ=ಸುಖ 78
ವಿವಿಧ=ಬಹಳ ವಿಧ 205
ವಿವೇಕ-ಶೂನ್ಯ=ವಿವೇಕ ಅಥವಾ ಬುದ್ಧಿಯಿಲ್ಲದ 17
ವಿಶಾಲ=ವಿಸ್ತಾರ 155
ವಿಶೋಕ=ಚಿಂತೆಯಿಲ್ಲದ ಸ್ಥಿತಿ 80
ವಿಷಮ=ಸಮವಲ್ಲದ್ದು, ತಗ್ಗುಮುಗ್ಗು, ಕಷ್ಟ 205, 237
ವಿಸರ=ಹೆಚ್ಚು, ಗುಂಪು 209
ವಿಸ್ತರ=ವಿಸ್ತಾರ, ಬಹಳ, ಹೆಚ್ಚುವಿಕೆ 141, 159, 240
ವಿಹಾರಿಸುವದು=ತಿರಿಗಾಡುವದು 213
ವೀಚಿ=ಸಮುದ್ರದ ತೆರೆ 118, 150
ವೀಥಿ=ದಾರಿ 237
ವೀಧಿ=ಬೀದಿ, ಮಾರ್ಗ 217
ವೀರ=ಶೂರ
ವೀರ್ಯ=ಶೂರತನ 180
ವೃಂದ=ಹಿಂಡು 222
ವೃಕ=ತೋಳ 205
ವೃತ್ತ=ದುಂಡಾಕಾರವುಳ್ಳದ್ದು 212
ವೃಶ್ಚಿಕ=ಚೇಳು 8
ವೃಷಧ್ವಜ=ಕರ್ಣನ ಮಗ 240
ವೃಷ್ಟಿ=ಮಳೆ 88, 128
ವೆಕ್ಕಸ=ಬಹಳ 10
ವೆಗ್ಗಳ=ಹೆಚ್ಚು, ಶ್ರೇಷ್ಠ 5
ವೆಗ್ಗಳಿಕೆ=ಹೆಚ್ಚುವಿಕೆ, ಬಾಹುಳ್ಯ 215
ವೆಗ್ಗಳಿಸುವದು=ಹೆಚ್ಚಾಗುವದು 239
ವೆಥೆ=ವ್ಯಥೆ, ವ್ಯಸನ 8
ವೆರ್ಥ=ವ್ಯರ್ಥ 6, 66
ವೆವಹಾರ=ವ್ಯವಹಾರ, ವ್ಯಾಪಾರ 65
ವೆಳಗು=ಬೆಳಕು 224
ವೇಗ=ಬೇಗ 45
ವೇದನೆ=ಬೇನೆ, ನೋವು 16
ವೇಳುವದು=ಹೇಳುವದು 172
ವೊಗರು=ಪ್ರಕಾಶ 244
ವೊಡ=ವೊಡಕು ಆದ 96
ವೊನಲು=ಹೊಳೆ 239
ವೊಯ್ಯುವದು=ವೈಯ್ಯುವದು, ತಕ್ಕೊಂಡು ಹೋಗುವದು 82
ವೋಲ್, ವೋಲು=ಹಾಗೆ 29, 244
ವ್ಯಾಘ್ರ=ಹುಲಿ 179
ವ್ಯಾಧ=ಬೇಡ 180
ವ್ರಜ=ಸಮೂಹ, ಹಿಂಡು 184, 241
ವ್ರಾತ=ಗುಂಪು 178

## ಶ

ಶಕುನಿ=ಚಾಷ, ಒಂದು ಜಾತೀ ನೀಲ ವರ್ಣದ ಪಕ್ಷಿ 205
ಶಕ್ತಿ=ಕಬ್ಬಿಣದ ಕೋಲು 88, 189
ಶಬರ=ಒಂದು ಜಾತೀ ಕಾಡುಜನ 172
ಶಬರಿ=ಶಬರರ ಸ್ತ್ರೀ 180
ಶಯನ=ಮಲಗುವಿಕೆ 152
ಶರ=ಅಂಬು 94, 172
ಶರಧಿ=ಸಮುದ್ರ 16, 68
ಶರಭ=ಎಂಟು ಕಾಲಿನ ಮೃಗ 163
ಶರಾಸನ=ಶರ ಆಸನ, ಬಿಲ್ಲು 89
ಶರ್ಮ=ಸಂತೋಷ, ಸಮಾಧಾನ 96

ಶಲಭ=ರೆಕ್ಕೆ ಬಂದ ಗೆದ್ದಲೆ 18
ಶಲ-ಮೃಗ=ಮುಳ್ಳುಹಂದಿ 163
ಶಲ್ಯಹ=ಶಲ್ಲೆಹ 189
ಶಲ್ಲೆಹ=ಹಾರಿಸುವ ಕೋಲು 88
ಶಶ=ಮೊಲ 94, 205, 212
ಶಶಿ=ಚಂದ್ರ 58, 219
ಶಶಿ-ಕಾಂತ=ಚಂದ್ರ-ಕಾಂತ 239
ಶಸ್ತ=ಶ್ರೇಷ್ಠ 159
ಶಸ್ತ್ರ=ಹೊಡೆಯುವ, ತಿವಿಯುವ ಆಯುಧ 87, 249
ಶಾಖೆ=ಮರದ ಕೊಂಬೆ 166
ಶಾಡ್ವಲ=ಹುಲ್ಲು 233
ಶಾದ=ಕೆಸರು 82
ಶಾನೆ=ಬಹಳ 79
ಶಾಪ-ಹರ=ಶಾಪ ಪರಿಹರಿಸುವವ 73
ಶಾರ್ದೂಲ=ಹೆಬ್ಬುಲಿ 163
ಶಾಲಿ=ಭತ್ತದ ಪೈರು 244
ಶಾಲೂರ=ಕಪ್ಪೆ 149
ಶಿಂಗರ=ಶೃಂಗಾರ 83
ಶಿಕ್ಕ=ತೊಡಕು 69
ಶಿಕ್ಕ-ಒಡೆಯುವದು=ತೊಡಕು ಹೊಂದುವದು, ತೊಡಕಾಗುವದು 69
ಶಿಖರಿ=ಪರ್ವತ 88
ಶಿಖಿ=ಬೆಂಕಿ, ನವಿಲು 166 182, 231
ಶಿರ=ತಲೆ 171
ಶಿರಿ=ಶ್ರೀ, ಐಶ್ವರ್ಯ 63, 68, 123
ಶಿಲುಕುವದು=ಶಿಕ್ಕುವದು 62
ಶೀತಳ=ತಂಪು, ಛಳಿ 219, 225
ಶೀರ್ಣ=ಚಿಕ್ಕ, ಹಾಳು 205
ಶುಕ=ಗಿಳಿ 119, 164, 231
ಶುನಕ=ನಾಯಿ 12
ಶೆಗಳಿಕೆ=ಆವಿ 213
ಶೈತ್ಯ=ಛಳಿ
ಶೈಲ=ಪರ್ವತ, ಬೆಟ್ಟ 228, 241
ಶೈಶಿರ=ಶಿಶಿರದ ಸಂಬಂಧವಾದ ಕಾಲ, ಛಳೀಕಾಲದ ಎರಡನೇ ಭಾಗ 218
ಶೋಕ=ಚಿಂತೆ, ದುಃಖ 19, 66
ಶೋಣ=ಕೆಂಪು 188, 207 [188
ಶೋಣಾಚಲ=ಶೋಣ-ಅಚಲ, ಕೆಂಪು ಪರ್ವತ
ಶೋಭಿತ=ಪ್ರಕಾಶಿಸುವ 106, 186
ಶೌರ್ಯ=ಶೂರತನ 103, 169
ಶ್ರವ=ಕಿವಿ, ಕೇಳುವಿಕೆ 5
ಶ್ರೀ=ಐಶ್ವರ್ಯ 97, 212
ಶ್ರೀಕರ=ಚಂದಾದ 198
ಶ್ರೇಣಿ=ಸಾಲು 150
ಶ್ರುತಿ=ಕಿವಿ 109
ಶ್ವಾನ=ನಾಯಿ 6, 79, 102

## ಷ

ಷಡ್, ಷಟ್=ಆರು 72, 125

## ಸ

ಸಂಕುಲ=ಗುಂಪು 201, 205
ಸಂಕುಳ=ಸಂಕುಲ 168
ಸಂಗ=ಬಳಿಕೆ, ಸಮೂಹ 4, 74, 199
ಸಂಗಡಿಸುವದು=ಆಗುವದು 187
ಸಂಗತನು=ಕೂಡಿದವನು 83
ಸಂಗ್ರಹ=ಕೂಟ, ಸಮೂಹ 16
ಸಂಘ=ಕೂಟ, ಸಮೂಹ 113
ಸಂಚೈಯಿಸುವದು=ಸಂಪಾದಿಸಿ ಕೊಳ್ಳುವದು 81
ಸಂಣಿಗೆ=ಮಳಲು 199
ಸಂತತಂ=ಯಾವಾಗಲೂ 200
ಸಂತಸ=ಸಂತೋಷ 247
ಸಂದಣಿ=ಗುಂಪು 197
ಸಂದಣಿಸುವದು=ಗುಂಪಾಗಿ ಕೂಡುವದು 186, 188
ಸಂಧಿಸುವದು=ಕಲತು ಕೊಳ್ಳುವದು, ಶೇರುವದು 38

ಸಂಧ್ಯಾ (-ಧ್ಯೆ)=ಸಂಜೀ ಹೊತ್ತು 207
ಸಂಪತ್ತು=ಬದುಕು 8, 68
ಸಂಪದ=ಸಂಪತ್ತು 48
ಸಂಭಾವಿಸುವದು=ಮಾನ ತೋರಿಸುವದು 140
ಸಂಭ್ರಮ=ಬಹಳ ಭ್ರಮ, ಬಹಳ ಮರುಳು 7
ಸಂಸಾರ=ಲೋಕದ ಕೆಲಸ, ಲೋಕ 15, 68
ಸಂಸೃತಿ=ಸಂಸಾರ 7, 16
ಸಂಹೃತಿ=ಸಂಹಾರ 169
ಸಗ್ಗ=ಸ್ವರ್ಗ 9
ಸಜ್-ಜನ=ಸತ್ಯವುಳ್ಳ ಜನ 4
ಸಡಿಲುವದು=ಸಡ್ಲಾಗುವದು 20, 193
ಸತಿ=ಹೆಂಗತಿ 37, 63, 113, 127
ಸತ್ (ಸದ್, ಸಜ್)=ನಿಜ, ಸತ್ಯವಾದ
ಸತ್ತಿಗೆ=ಛತ್ರ, ಕೊಡೆ 214
ಸತ್ವ (ಸತ್ತ್ವ)=ಶ್ರಾಣ 124
ಸದಾ=ಯಾವಾಗಲೂ 114
ಸದ್-ಧಾರ್ಮಿಕ=ನಿಜ ಧರ್ಮವುಳ್ಳ 112
ಸನ್ನಾಹ=ಸೌರಣೆ, ಸಿದ್ಧ ಮಾಡುವಿಕೆ 185
ಸನ್ನೆ=ಸನ್ನೆಗೋಲು 124
ಸಬಳ=ಈಟಿ 196
ಸಮರ=ಯುದ್ಧ 93, 186
ಸಮರ್ಪಿಸುವದು=ಕೊಡುವದು 248
ಸಮಾಗಮ=ಐಕ್ಯ, ಬರುವಿಕೆ 36
ಸಮಾನನು=ಸರಿಯಾದವನು 2
ಸಮುನ್ಮಿಳಿತ=ತುಂಬಿದ್ದಾದ 196
ಸರ=ಸ್ವರ; ಕೆರೆ 214, 241, 249
ಸರಣಿ=ಮಾರ್ಗ 184
ಸರಸ=ಚಂದ, ಬೇಗ 207
ಸರಸಿ=ಕೆರೆ 127, 201
ಸರಸಿಜ=ತಾವರೆ 222
ಸರಳು=ಅಂಬು 88, 89, 176, 192
ಸರಿ=ಜಡಿಮಳೆ 88
ಸರಿಸ=ಹತ್ತರ 179
ಸರೀಸೃಪ=ಹಾವು 205
ಸರ್ಬ=ಸರ್ವ 185
ಸರ್ವ-ಜ್ಞ=ಎಲ್ಲಾ ತಿಳಿದವ 4
ಸರ್ವಥಾ=ಎಲ್ಲಾ ವಿಷಯದಲ್ಲಿ 5
ಸರ್ವೋತ್ತಮ=ಸರ್ವ-ಉತ್ತಮ, ಸರ್ವರಲ್ಲಿಯೂ ಸರ್ವದಲ್ಲಿಯೂ ಉತ್ತಮನಾದ 70
ಸಲೆ=ಬಹಳ, ಬಹಳವಾಗಿ 121, 156, 248
ಸಲ್ಲಲಿತ=ಚಂದ 227
ಸಲ್ಲಾಪ=ಸಂಭಾಷಣೆ 173, 246
ಸವ=ಸಮ, ನುಣುಪು 151
ಸವಿಯುವದು=ಉಣ್ಣುವದು 105
ಸವ್ವಳಿ=ಉಬ್ಬುವಿಕೆ 149
ಸಹಕಾರ=ಪರಿಮಳವುಳ್ಳ ಮಾವು 246
ಸಾಕಾರ=ಆಕಾರವುಳ್ಳದ್ದು 66
ಸಾಧನ=ಬದುಕು, ಉಪಾಯ 40, 82
ಸಾಧಿಸುವದು=ಉಂಟು ಮಾಡುವದು, ಪಡಕೊಳ್ಳುವದು, ಉಪಾಯಮಾಡುವದು, ಮನಗೊಟ್ಟು ನಡಿಸುವದು 13, 118, 141
ಸಾಮ್ರಾಜ್ಯ=ದೊಡ್ಡ ರಾಜ್ಯ 37
ಸಾರ=ಬಲ, ಸಮೂಹ 192
ಸಾರಸ=ಬಕಪಕ್ಷಿ 164, 216
ಸಾರಿಸುವದು=ಶಬ್ದ ಮಾಡಿಸುವದು 223
ಸಾರುವದು=ಶೇರುವದು, ಹತ್ತರ ಹೋಗುವದು, ಕೂಗುವದು, ಪ್ರಸಂಗ ಮಾಡುವದು 38, 39, 40, 47, 56, 73, 225
ಸಾರ್ಚುವದು=ಶೇರುವದು, ಹತ್ತರ ಹೋಗುವದು 176
ಸಾಲ=ತೇಗುಮರ 162
ಸಾವು=ಮರಣ 140
ಸಿಂಗ=ಸಿಂಹ 175, 180
ಸಿಂಗರಿಸುವದು=ಶೃಂಗರಿಸುವದು 84
ಸಿಂಜಿನಿ=ಬಿಲ್ಲಿನ ಹಗ್ಗ 86
ಸಿಂಧ=ಒಂದು ತರದ ಬಾವಟಿ 188
ಸಿಗುರಿ=ಸಿಗುರು, ಕಬ್ಬಿನ ಹೊರಗಡೆ 3
ಸಿಮಿಸುವದು=ಸಿಮಿಸಿಮಿ ಎಂದು ಬೀಳುವದು 161

ಸಿರಿ=ಶ್ರೀ, ಐಶ್ವರ್ಯ 75, 224
ಸೀಕರ=ಶಿಡಿಯುವಿಕೆ 202
ಸೀಗುರಿ=ಒಂದು ತರದ ಛತ್ರ,—ಕೊಡೆ 188
ಸೀಯುವದು=ಕಮರುವದು 165
ಸೀವರಿಸುವದು=ಸೀಸೀ ಎಂದು ಮೈಯ ಮೇಲೆ ಬೀಳುವದು 140
ಸು=ಒಳ್ಳೇ
ಸುಕ=ಸುಖ
ಸುಕರ=ಒಳ್ಳೇ 153
ಸು-ಕೃತ=ಒಳ್ಳೇದಾದ 140
ಸು-ಜ್ಞಾನ=ಒಳ್ಳೇ ಜ್ಞಾನ 2, 4
ಸುತ=ಮಗ
ಸು-ನಿವೇಶ=ಹಗುರಾದ ಪ್ರವೇಶ 95
ಸುಪ್ತ=ನಿದ್ರೆಯುಳ್ಳವ 57
ಸು-ಪ್ರಖ್ಯಾತ=ಒಳ್ಳೇ ಕೀರ್ತಿ ಪಟ್ಟ 37
ಸು-ಭಾ-ಗತಿ=ಒಳ್ಳೇ ಪ್ರಕಾಶದ ಗತಿ 118
ಸು-ಭಾನು=ಬಹಳ ಚೆಲ್ವಿಕೆ 79
ಸುಮನಸ್ಸು=ಪುಷ್ಪ 88
ಸುಯ್ಯುವದು=ನಿಟ್ಟುಸುರು ಕಳೆಯುವದು, ಉಸುರು ಕಳೆಯುವದು 42, 171, 204
ಸು-ರಂಚಿ=ಚಂದಾಗಿ ರಚಿಸಿದವನು (ದೇವರು) 157
ಸುರಗಿ=ಕಠಾರಿ 189
ಸುರ-ಚಾಪ=ಮಳೇ ಬಿಲ್ಲು 123
ಸುರಕ್ಷಿಸುವದು=ಚಂದಾಗಿ ರಕ್ಷಿಸುವದು 137
ಸು-ಲಭ=ಚಂದಾಗಿ ಲಾಭಿಸುವ (ಲಾಭವಾಗುವ), ಹಗುರಾದ 3
ಸುಲಲಿತ=ಚಂದ 209
ಸುಲಿಯುವದು=ಸಿಪ್ಪೆ ತೆಗೆಯುವದು 3
ಸುವಾರಿ=ವರ್ತಿ, ಒರ್ತಿ, ನೀರುಬುಗ್ಗೆ 233
ಸುವಿಧಾನ=ಕಾಪಾಡುವಿಕೆ 220
ಸು-ಹೃದಯ=ಒಳ್ಳೇ ಹೃದಯದವ, ಸ್ನೇಹಿತ 68
ಸುಳಿ=ಸುಳಿದಾಟ, ತಿರಿಗಾಟ 196, 202
ಸುಳಿವು=ತಿರಿಗಾಟ, ಚಂಚಲವಾದ ಪ್ರಕಾಶ 62
ಸೂಕರ=ಹಂದಿ 6, 163
ಸೂತ=ರಥ ನಡಿಸುವವ 43
ಸೂಪ=ಅಡಿಗೆ 152
ಸೂಯಮಾನ=ಹೆಚ್ಚಿನವ, ಮುಖ್ಯವಾದವ 9
ಸೂರೆ=ಲೂಟಿ 223
ಸೂಸಕ=ಹೂವುಳ್ಳ ಶೃಂಗಾರ 156
ಸೃಜಿಸುವದು=ಸೃಷ್ಟಿಸುವದು 41
ಸೆಡೆ=ಸೊಟ್ಟಾಗಿರುವಂಥಾದ್ದು 145
ಸೆಳೆದ=ಸೊಟ್ಟಾಗಿ ಹಿಡಿದ (ಅಥವಾ ಉದ್ದಕ್ಕೆ ಹಿಡಿದ) 177
ಸೇವಿಸುವದು=ತಿನ್ನುವದು 78
ಸೈರಿಸುವದು=ಹೊರುವದು, ತಾಳುವದು 230
ಸೊಂಪಗೆ=ಚಂದಾಗಿ 82
ಸೊಂಪು=ಚಂದ, ಚೆಲ್ವಿಕೆ 156, 215, 233
ಸೊಗಡು=ವಾಸನೆ, ನಾತ 174, 219
ಸೊಗಯಿಸುವದು=ಸೊಗಸುವದು, ರಮ್ಯವಾಗುವದು 247
ಸೊಗಸು=ಚೆಲೋ, ರಮ್ಯ, ಪಸಂದು 44
ಸೊಗಸುವದು=ಒಪ್ಪುವದು, ಚೆಲೋದಾಗುವದು 79, 80, 83, 213
ಸೊಡರು=ದೀಪ 62, 123
ಸೊಸ್ಥ=ಸ್ವಸ್ಥ 67
ಸೊಯಂವರ=ಸ್ವಯಂವರ, ಮದುವೆಗೆ ಒಬ್ಬ ಪುರುಷನನ್ನು ಆದು ಕೊಳ್ಳುವದು 41
ಸೋಕುವದು=ಸೊಂಕುವದು, ಹತ್ತುವದು 42
ಸೋಗೆ=ಉದ್ದ ಎಲೆ, ನಾಲು 244, 247
ಸೋದು, ಸೋದ್=ಸವಿ 102
ಸೋನೆ=ಒಂದು ತರದ ಮಳೆ 88
ಸೋಪಾನ=ಮೆಟ್ಟುಗಳು 165, 199
ಸೋವುವದು=ಓಡಿಸುವದು, ಬಡಿದು ನೋಡುವದು 172, 178, 228, 245
ಸೋಸುವದು=ಶೋಧಿಸುವದು 118
ಸೌಕ್ಯ=ಸೌಖ್ಯ
ಸ್ತೋಮ=ಗುಂಪು 159, 169
ಸ್ವಚ್ಛ=ಶುದ್ಧತೆ, ಶುದ್ಧವಾಗಿರುವಿಕೆ 114

ಸ್ವನ=ಶಬ್ದ 198, 243
ಸ್ವರ=ಧ್ವನಿ
ಸ್ವಾದಿಸುವದು=ಸವಿಯಾಗುವದು 26
ಸ್ವೈರ=ಸ್ವೇಚ್ಛೆ, ಸಂತೋಷ 246

# ಹ

ಹಂಗಿಗನು=ಹಂಗಿನವನು 35
ಹತ=ಹೊಡೆಯಲ್ಪಟ್ಟ 184
ಹತಿ=ಪೆಟ್ಟು 248
ಹಬ್ಬುಗೆ=ಹಬ್ಬುವಿಕೆ, ದೊಡ್ಡ ಭಾವ 167, 177
ಹಮ್ಮು=ಗರ್ವ 12
ಹಯ=ಕುದುರೆ 42, 44, 45, 93, 187
ಹಯ-ಜ್ಞತೆ=ಕುದುರೆಗಳ ವಿಷಯವಾದ ವಿದ್ಯೆ 42
ಹರಣ=ತೆಗೆಯುವಿಕೆ 232
ಹರದು=ಹರಿದು, ಹರೆದು (ಹರಿಯುವದು)
ಹರಿ=ಸಿಂಹ 173
ಹರಿಗೆ=ಹಲಿಗೆ, ಡಾಲು 92
ಹರಿಣ=ಜಿಂಕೆ, ಎರಳೆ 173
ಹರಿಣಿ=ಹೆಣ್ಣು ಹರಿಣ 101
ಹರಿದ್ರಾ=ಅರಿಸಿನ 239
ಹರಿಯುವದು=ಅಗಲಿ ಹೋಗುವದು, ಹರಿದು (=ಕೆಟ್ಟು) ಹೋಗುವದು 48, 213
ಹರೆ=ಗಿಡಗಳ ಟೊಂಗಿ,—ಕೊಂಬೆ 87
ಹಲವು=ಅನೇಕ 27, 89
ಹವಣು=ಉಪಾಯ, ತಕ್ಕ ರೀತಿ 46
ಹವಿ=ತುಪ್ಪ 127
ಹಳಚುವದು=ಕಡಿಯುವದು, ಹೊಡೆಯುವದು 91
ಹಳುವ=ವನ, ಕಾಡು 40, 180, 204
ಹಾನಿ=ನಾಶನ, ಕೇಡು 17, 128
ಹಾರ=ಹಿಡುಕೊಳ್ಳುವವ 192
ಹಾಸು=ಕೊರಳಿನ ಕಟ್ಟು, ಕೊರಳಿನ ಹಗ್ಗ 172, 177
ಹಿಂಗುವದು=ಬಿಟ್ಟು ಬಿಡುವದು 83
ಹಿಂಡಿ=ಪಿಂಡಿ, ದೇಹ 32
ಹಿಮಕರ=ಥಳಿ ಮಾಡುವವ, ಚಂದ್ರ 199
ಹಿರಿದು=ದೊಡ್ಡದು, ದೊಡ್ಡದಾಗಿ, ಬಹಳವಾಗಿ 15
ಹಿಳಿಯುವದು=ರಸ ಕಾದು ಒಡೆಯುವದು 165, 168
ಹೀನತೆ=ಇಲ್ಲದ ಭಾವ 96, 97
ಹುಲ್ಲೆ=ಫುಲ್ಲೆ, ಜಿಂಕೆ 182
ಹುಳು=ಹುಳ 15
ಹೂಂಕೃತಿ=ಹೂಂಹೂಂ ಎನ್ನುವಿಕೆ 85
ಹೂಡುವದು=ಸಿದ್ಧ ಮಾಡುವದು 85
ಹೂಳುವದು=ಹೂಣುವದು, ಒಳ ಹೊಗುವದು 87
ಹೆಂ=ದೊಡ್ಡ
ಹೆಬ್=ಹೆಂ 168, 177
ಹೆಬ್ಬಲ್ಲು=ಹೆಬ್-ಹಲ್ಲು, ದೊಡ್ಡ ಹಲ್ಲು 177
ಹೆಮ್ಮಾರಿ=ಬಹಳ ಕ್ರೂರವಾದವಳು 98
ಹೇತಿ=ಆಯುಧ
ಹೇಮ=ಭಂಗಾರ 155
ಹೇಮಂತ=ಛಳೀ ಕಾಲದ ಮೊದಲಿನ ಭಾಗ 218
ಹೇವ=ನಾಚಿಕೆ 95
ಹೇಷಿತ=ಹೇಷಿಸಿದ (ಕುದುರೆಯ ಶಬ್ದದ್ದು) 93
ಹೊಂ=ಹೊನ್ನು 44
ಹೊಡ-ಕರಿಸುವದು=ಹೊಡೆಯಲಿಕ್ಕೆ (ಹೊಡೆಯುವ ಹಾಗೆ) ಕರಿಸುವದು (ಸುರಿಸುವದು) 135
ಹೊದರು=ಪೊದೆ, ಗಿಡಗಳ ಗುಂಪು 161, 166
ಹೊಯ್ಲು=ಹೊಯಿದಾಟ, ಹೊಡದಾಟ 87, 235
ಹೊರ=ಹೊರಗೆ, ಹೊರಗಿನ
ಹೊರವಡುವದು=ಹೊರಡುವದು 69

ಹೊರಳಿ=ಹೊರಳುವಿಕೆ, ಗುಂಪು 166, 170
ಹೊರಿಗೆ=ಮಾರ್ಗ 87
ಹೊರೆಯುವದು=ಕಾಪಾಡುವದು, ಸಾಕುವದು 6, 217
ಹೊಲಬು=ಸುದ್ದಿ, ರೀತಿ, ಎಡೆ, ಸ್ಥಳ 44, 174
ಹೊಳಲು=ಪಟ್ಟಣ 40
ಹೋರಟೆ=ಹೋರಾಟ, ಜಗಳ 190
ಹೋಳು=ತುಂಡು 90

## ಕ್ಷ

ಕ್ಷಯ=ಪರಿಹಾರ 226
ಕ್ಷಿತಿ=ಭೂಮಿ 39, 109, 118
ಕ್ಷೋಣಿ=ಭೂಮಿ 104
ಕ್ಷೋಭ=ಸುಖ ದುಃಖಗಳ ಸ್ಥಿತಿ, ವ್ಯಸನ, ಹಾರ್‍ಯಾಟ 115, 230

FINIS

# Minor
# CANARESE POETICAL
# Anthology

**SECOND EDITION**

ಸಣ್ಣ ಕರ್ನಾಟಕ

# ಕಾವ್ಯಮಾಲೆ






MANGALORE

PRINTED BY PLEBST & STOLZ, BASEL MISSION PRESS
1868





ಹೊಳಕುವಂತಸ್ತ್ರಪದಲಿ ಮೂ
ಗಳೆದ ಮಾನಿನಿ ಸಹಿತ ತನ್ನೊಳ
ನಿಳಯವನು ಹೊಕ್ಕನುಜೆಯನು ಬೆಸಗೊಂಡನಾಹವನಾ .

1. ಚಂದ್ರಹಾಸ=ರಾವಣನ ಕತ್ತಿಯ ಹೆಸರು.

"Who has thus dishonoured you."

403. ಏನಿದೇನೀಮಾನಭಂಗವಿ
ಧಾನವಾರಿಂದಾಯ್ತು ? ಹೇಳಭಿ
ಮಾನಗತವಿದು ತನ್ನದೈಸಲೆ ! ಹೇಳು ಬೇಗೆನಲೂ,
ಹಾನಿ ತನ್ನಿಂ ತನಗೆ ಬಂದುದ
ನೇನುವನು ಪಸರಿಸದೆ, ತನ್ನನು
ಮಾನಮಾರ್ಗದ ಮತವನೇ ಬಲಿದೆಂದಳೀಹದನಾ

Her answer: "You loved Síte, but she became the wife of Ráma,

404. ವಾಸಿ ತೋರಿತು ಮನಕೆ ಜನಕಮ
ಹೀಶಸುತೆ ನಿನಗೆಂದು ಭವಬಾ[2]
ಣಾಸನದ ಭಾರಣೆಯು ಬಿಗುಹಿನ ಜಗುಳದಲೆಯಿಂದಾ
ದಾಶರಥಿಗಾರಮಣಿ ರಾಣೀ
ವಾಸವಾದಳು ; ತನ್ನೃ[3]ಪಗೆ ವನ
ವಾಸಘಟಿಸಿತು ಬಳಿಕ ಪಂಚವಟೀಪ್ರದೇಶದಲೀ.

1. ಈಶ್ವರನ ಬಿಲ್ಲನ್ನು ಇಟ್ಟು ಇದನ್ನು ಎತ್ತಿದವರಿಗೆ ತನ್ನ ಮಗಳಾದ ಸೀತೆಯನ್ನು ಮದುವೆ ಮಾಡಿ ಕೊಡುತ್ತೇನೆಂದು ಜನಕರಾಯ ಪಣ ಮಾಡಿದ್ದನು. ಇದಕ್ಕೆ ಬಂದಿದ್ದ ರಾವಣನ ಕೈಲಿ ಆಗದ ಕಾರಣ ಸೀತೆ ಅವನನ್ನು ಹಾಸ್ಯ ಮಾಡಿದ್ದಳು. 2. ದಶರಥರಾಯನ ಮಗನು=ರಾಮಚಂದ್ರ. 3. ಆ ನೃಪಗೆ.

when I tried to carry her off for you, Ráma's

405. ನಿನಗೆ ಕಾಣಿಕೆಯಾಗಿ ತಹೆನಾ
ವನಿತೆಯನು ತನಗೆಂಬ ಮತಿ ಸಂ
ಜನಿಸಿ ಕೈ ಯಿಕ್ಕಿದೆನು ಕಪಟದಲಾನಿತಂಬಿನಿಗೇ ;

brother thus maimed me."

ಜನಪನನುಜನು ಕಂಡು ಕಿವಿಮೂ
ಗಿನಲಿ ಕಂಡನು ಹರುವನೆನ್ನಲಿ
ಹನನ ಬಳಿಕಾಯ್ತುದರಿನೀ ಖರದೂಷಣಾದಿಗಳಾ.

406\. ನಾಟುವವು ಸ್ಮರಶರಗಳಂಗದೊ
ಳಾಟವೀ ಜಾನಕಿ[1]ಯನೆನಹಿಗೆ ;
ನಾಟುವದು ಸತ್ಕ್ರೋಧಹುತವಹವನುಜರಳುವಿಂಗೇ ;
ಕೋಟಲೆಯನೀಯರಡರೊಳಗವ
ಬೇಟವನೆ ಬಲುವಿಡಿದು ಹೂಡಿದ
ಘೋಟಕದ ಹೊಂದೇರಿನಲಿ ಹೊರವಂಟನರಮನೆಯಾ.

Love and anger excite Rávana.

He sets out:

1\. ಜನಕನ ಮಗಳು=ಸೀತೆ.

407\. ಅಳಿಬಲರು ನರರೆಂದು ಸಂಮುಖ
ದಲಿ ಸಮೀಕವನೆಸಗದಿರು ! ಕೈ
ಕೊಳಿಸು ಕೈತವದಿಂದ ! ಕಮಲಾನನೆಯ ಕಳವಿನಲೀ
ಶ್ಳವುದೀಯಸುಹುತವ ನಿಜವಾ
ತುಳನಲರಿವುದು ! ಹೋಗೆನುತ ದಶ
ಗಳನ ಗಳಿತಘ್ರಾಣಮುಖಿ ಕಳುಹಿದಳು ಶೂರ್ಪನಖೀ.

Súrpanakhi advises him, not to carry Síte with open force.

408\. ಬಂದು ವಿದ್ಯುಜ್ಜಿಹ್ವ[1] ಬಳಿಕಾ
ಸ್ಯಂದನದ ಘೋಟಕಸಹಸ್ರದ
ಕಂಧರವ ಬೋಳೈಸಿ ಪಕ್ಕದ ಪಾರುವಳ್ಳಿಗಳಾ
ಮುಂದು ವರಿಸಿದನಭ್ರದಲಿ ನಡೆ
ತಂದುದಾರಥ, ಕಳದು ಕಾನನ
ವೃಂದವನು, ಮಾಯಾವಿಮಾರೀಚನ ನಿಜಾಶ್ರಮಕೇ.

Arrival at the hermitage of Marícha.

1\. ರಾವಣನ ಸಾರಥಿ.

409. ಜಪಸಮಾಧಿಧ್ಯಾನಮೌನದ

This sorcerer asks the cause of his coming.

ತಪದಲಾಮಾರೀಚನಿರೆ, ದಶ
ಲಪನನೆ ರಗಿದನಂಘ್ರಿಗಾಮಾರೀಚರಕ್ಕಸನಾ
ವಿಪುಳಮಾಯಾಕುಶಲವಿದ್ಯಾ
ಚಪಳನೊಯ್ಯನೆ ಕಂಡೆರದು ಕೋ
ಣಪ ಕುಲೇಂದ್ರನನೆತ್ತಿ ಹರಸಿದು ಬರವ ಬೆಸಗೊಂಡಾ.

410. ಹೇಳಿದನು ಬಳಿಕವಗೆ ತಾ ತಂ

Rávana's explanations. Marícha is astonished at his plan,

ದೂಳಿಗವ ಪೂರ್ವಾಪರವನದ
ಕೇಳಿದನು ಕಿವುಡಿಕಿಯ ಕೊಸರಿನ ಕೊನರ್ವ ಕೋಪದಲೀ ;
ಕಾಳನೆನದನೆ ಪಾಪಿ ! ಯಕಟ ! ನೃ
ಪಾಲನೇ ರಘುನಾಥನಾತನ
ಬಾಲೆ ಮನುಜಾಂಗನೆಯೇ ! ಮಾರಿಯ ತಂದನಿವನೆಂದಾ.

1. ಮೊಬಲು ಕಡೆ=ಎಲ್ಲಾ.

411. ಏನು ನಿಂನಂಘವಣೆ ? ನೀ ಪೇ

and tells him, that the execution of it will be very difficult.

ಳ್ದೀನಿರೋಧಸ್ಥಿತಿಗೆ ಸೊಗಸೆಮ
ಗೇನು ತೋರದು ; ತೋರುತಿದೆ ಬಲುಚಿಂತೆ ಚಿತ್ತದಲೀ ;
ಹಾನಿ ನಿನಗುಪಕರಿಸದಿರದೆಂ
ಬೀನಿಪತ್ತಿಗೆ ನಿನ್ನ ಮನದನು
ಮಾನವಾವುದು ? ಹೇಳು ! ಕೇಳುವೆನೆಂದನಸುರಮುನೀ.

412. ಕೊಲೆಗೆ ಕೊಲೆಗೊಂಡಲ್ಲದೋಜಿಗೆ

Rávana's reply: "I cannot find rest, I must have revenge."

ನಿಲಲರಿಯದೀಮನವು ; ತಂಗಿಯ
ಚಲುವಿಕೆಯ ಚೈತನ್ಯವಳಿದುದಕಹಿತನಂಗನೆಯಾ

ಚಲುನನಂಗೀಕರಿಸಿದಲ್ಲದೆ
ತೊಲಗಲರಿಯದು ಚಿತ್ತ; ನಿಮ್ಮಡಿ
ಗಳ ಕಟಾಕ್ಷದ ಕೃಪೆ ಯದೇನದ ಬೆಸಸಿ ತನಗೆಂದಾ

413. ಬೇಡ! ಮಗನೇ! ಹರಿವಿರೋಧದ
Marícha tries to dissuade him,
ಲಾಡಿ ಕೆಟ್ಟರು ಕೆಲರುವದರೊಳ
ಗಾಡದುಳಿದರು ಕೆಲರು; ನಿನಗಿಂದಮರಸಂದೋಹಾ
ಖೇಡರಾಗಿಹುದಧಿಕಶಿರಿಯ ಸು
ರಾಡವನು ಕೊಂಡಯರ ನುಡಿಗೀ
ಡಾಡದಿರು! ತನುಗುರಿಯ ಕೂಡದಿರಪಜಯಗಾಂಗನೆಯಾ!

414. ಅಂದು ನಾಸಿರಲಳಿವರೇ ನೀ
Rávana threatens to kill him, if he does not come.
ನೆಂದ ವೀರರು ಸಾಕದಾವಾ
ತಿಂದು ನೀ ಬಹುದುಂಟೋ? ಬಾರೆಯೊ? ಹೇಳು ನಿಶ್ಚಯವಾ!
ಬಂದರುಳುಹುವೆ, ಬಾರದಿರ್ದಡೆ,
ಕೊಂದು ಬಿಸುಡುವೆ ನಿನ್ನನೀಗೆನು
ತಿಂದುಹಾಸವನುಗಿದು ನೆಗಹಿದನಧಿಕರೋಷದಲೀ.

415. ಅಸುರನಿವನಾಸುರವಿಕರ್ಮವ
Marícha, seeing the giant's stubbornness, complies.
ನೆಸಗಿದಲ್ಲದೆ ಮಾಣನದರಿಂ
ದಸುವನಸುರಾರಿಗೆ ಸಮರ್ಪಿಸುವೆನು ಸಮಕ್ಷದಲೀ!
ನಸಿಯುದಿರದಿಂನಿವನ ವಂಶದ
ಸಸಿಯು ಬೆಳಸೆನುತೇರಿದನು ಬೇ
ವಸದ ಬೇಳಂಬದಲಿ ಬೇಸರುತವನು ಮಣಿರಥವಾ.

416. ಉಗಿದ ಖಡ್ಗವನೊರೆಯ ಬಸುರಿಲಿ

Rávana is satisfied, and entreats him not to mind his harsh words.

ಹೊಗಿಸಿದನು ದಶವದನ; ವದನದ
ನಗೆಯುಲೆಂದನು ! ಮಾವ ! ಕೇಳೆನ್ನಯ ದುರುಕ್ತಿಗಳಾ
ಬಗೆಯದಿರಿ ನೀವೆಂದು ಕೈಗಳ
ಮುಗಿದು ನಯದಲಿ ಬೇಡಿಕೊಂಡನು.

ಚಿಗಿದುದಂಬರಕಾಗಿ ರಥ ಸಾರಥಿಯ ಸನ್ನೆಯಲೀ ;

417. ಕುಶನೆ ! ಕೇಳ್ಮಾರೀಚ ಮನದಲಿ
ಘಸಣಿಗೊಳುತ್ತಿದ್ದನು ಕಣಾ ! ರಾ
ಕ್ಷಸಕುಲಾಧೀಶ್ವರನ ದುಶ್ಚರಿತದ ದುರಾಗ್ರಹಕೇ.
ಸ್ವಸನಗತಿಯಲಿ ಗಗನದಲಿ ಬಳಿ

Their cart arrives at Ráma's place.

ಕಸುರರಥ ಬರುತಿರ್ದುದಾಸಾ
ಹಸಿಪರಾಕ್ರಮರಾಮಚಂದ್ರನ ವರತಪೋವನಕೇ.

418. ಇಳಿದರಾವನಸನ್ನಿವೇಶಾ

Marícha checks Rávana's impatience to kill Ráma:

ಚಲದ ಶಿಖರದ ಮರೆಯಲೀನೃಪ
ರುಲುಹನಾಲಿಸಿ ಹಾಯ್ವೆವೇ ಕಗ್ಗೊಲೆಯನೆನಲವನೂ
ಎಲ ಯುಲವ್ರೋ ! ಬೇಡೆನುತಲಾದಶ
ಗಳನ ಧಟ್ಟಿಸಿ ಕೆಲವುದಿನ ನೀ
ನುಳಿವುಪಾಯ.ವ ಮಾಡುವೆನು ತಂದುದಕೆ ತಾನೆಂದಾ

419. ಮುಸುಡು ಗಂಡರೆ, ರಾಮಶರ ಖಂ

"Let us try the incantations of

ಡಿಸದೆ ಬಿಡುವುದೆ ನಮ್ಮನಕಟಾ !
ಮುಸುಕಿಕೊಂಡಿದೆ ನಿನ್ನನಸುರೋನ್ಮತ್ತದಾವೇಶಾ

magic art on the giants.

ಉಸರದಿರು ! ಸಾಕಿನ್ನು ! ಮಾಯಾ
ಮುಸಕವನು ಮರೆಗೊಂಡು ನೋಡುವ
ವಸುರಕರ್ಮದ ಕಣಿಯು ಕಾಣಿಸಲರಿಯದೀಗೆಂನಾ.

420. ಕಳೆದರಿಬ್ಬರು ಕತ್ತಲೆಯ ತಡೆ

Rávana : "Save thy life by procuring me this woman."

ವೆಳಗಿನಲಿ ; ಕಾಮಾತುರದ ಕಳ
ವಳಿಗನಾಮಾರೀಚಗೆಂದನು ಮಧುರವಚನದಲೀ !
ನಳಿನಮುಖಿ ಕೈಸಾರುವೀಮತ
ದೊಲಹನೇ ಸಿಶ್ಚೈಸಿ ಹರಣವ
ನುಳುಹಿಕೋ ! ನೀನೆನುತಲೆರಗಿದ ಮಾವನಂಘ್ರಿಯಲೀ.

421. ಆದಡೆಲೆ ! ನೀ ಕೇಳು ! ತೋರ್ಪೀ

Marícha: "conceal thy form, put on the disguise of an ascetic, and go! I am innocent of this sin."

ರೈದುತಲೆಗಳ ಬೈಲೆರಿಸು ! ಬಲು
ಗೈದುಗಳ ಬಿಸುಟಡಗಿಸೀರಾಕ್ಷಸಕಳೇವರವಾ !
ಐದು ತಾಪಸವೇಷವನು ! ಬಳಿ
ಕೈದು ! ಪರವನಿತಾವ್ಯಸನಿಗಳಿ
ಗಾದ ಗತಿಯನು ಹೊರುವ ಪಾಪಕೆ ಹೊರಗು ತಾನೆಂದಾ.

422. ತೋರಿದನು ತಾ ಬಳಿಕವಗೆ ಹದಿ

Márícha appears as a golden calf and excites much wonder.

ನಾರು ಬಂಣದ, ಪುಟದ ಚಿನ್ನಕೆ
ನೂರುಮಡಿ ಯನೆ, ಹೊಳಹೊಳವ ಹೊಂಮರಿಯ ರೂಪಕವಾ ;
ಬೀರಿಹೆಚ್ಚಿನ ಕಾಯತಾಣವ
ಮೀರಿತಳಪಟದೊಳಗೆ ಹಾತಕ
ವಾರುವಭಿನವ ಭಾವಭಂಗಿಯ ಬಹಳಕೌತುಕವಾ.

1. ಕೌತುಕವ ಬೀರಿ ಎಂದು ಅನ್ವಯಿಸಬೇಕು.

423. ಎಲೆ ದಶಾನನ ! ಕೇಳಧೋಗತಿ

"You go down to perdition, I go to happiness", so saying Márícha goes to Ráma's house.

ಗಿಳಿವವನು ನೀನಿನ್ನು ಸುಗತಿಯು
ಸುಳಿವು ತನ್ನದು ! ಭಾಗೆ ಯಿದು ನಿನಗೆನಗೆ ! ನೋಡೆನುತಾ
ಸುಳಿದನವ ಸೂಚನೆಯ ಮುಖದಲಿ
ಖಳಪತಿಗೆ ಚಿಂತಿಸುತ ರಾಮನ
ನಿಳಯವನು ಸಾರಿದನು ಸೂರ್ಯೋದಯದ ಸಮಯದಲೀ.

424. ವಸುಮತಿ[1]ಸುತಾಸೂನು ! ಕೇಳ್ನ

In the morning Síte goes to the tank,

ಮ್ಮಸುರವೈರಿಯ ಶಯನಸಂಗದ
ಶಶಿವದನೆ ಸುಪ್ರಾತರೋಚಿತನೇಮನಿರ್ಣಯಕೇ
ಮಿಸುಪ ಚಂದ್ರಸುಕಾಂತಶಿಲೆ ಸಂ
ಧಿಸಿದ ಘನಸೋಪಾನಪಂಕ್ತಿಯ
ಬಿಸರುಹಾಕರಕಿಳಿದಳಾವೃಗ ಸುಳಿವ ಸಮಯದಲೀ.

1. ಜನಕರಾಯ ನೇಗಿಲು ಹೊಡಿಸಿ ಒಂದು ಯಜ್ಞಕುಂಡಕ್ಕೆ ತಕ್ಕ ಸ್ಥಳವನ್ನು ಶೋಧಿಸುತ್ತಿರುವಾಗ್ಯೆ, ಆ ನೇಗಲಿನ ಮೊನೆಗೆ ಬಹಳ ದಿವಸ ಹುಗಿದಿದ್ದ ಸರೋವರ ಹೊರಟಿತು. ಅದರಲ್ಲಿದ್ದ ಕಮಲಗಳಲ್ಲಿ ಒಂದರ ಕರ್ಣಿಕೆಯೊಳಗೆ ಒಂದು ಹೆಂಣು ಕೂಸು ಇತ್ತು. ಅರಸನು ಅದನ್ನ ಮಗಳಂತೆ ಇಟ್ಟುಕೊಂಡು ಸೀರಕ್ಕೆ ಶಿಕ್ಕಿದರಿಂದ ಸೀತೆ ಎಂಬ ಹೆಸರಿಟ್ಟನು. ಭೂಮಿಯಲ್ಲಿ ದೊರದರಿಂದ ಭೂಸುತೆ ಎಂದು ಅನ್ನಿಸಿಕೊಂಡಳು. ಆಕೆ ಮಗನು ಕುಶ ಮತ್ತು ಲವ.

425. ಈಕೆ ಕರಚರಣಾನನಾಬ್ಜಾ

washes her hands, feet and face,

ನೀಕವನು ತೊಳದಂತರಂಗದ
ಲಾಕಕು[1]ಸ್ಥಾನ್ವಯನ ಪಾದಸರೋಜವನು ನೆನದೂ.
ಲೋಕನಯನಂಗೆರಗಿ ನೊಸಲಲಿ
ಕೋಕನದ ಕರ್ಣಿಕೆಯನಿಟ್ಟು ನಿ
ರಾಕುಳದಿ ನೋಡಿದಳು ನೆಳಲನು ನೇವರಿಸಿ ಮುಡಿಯಾ.

1. ರಾಮನ ಪೂರ್ವಿಜರಲ್ಲಿ ಒಬ್ಬನು. 2. ಲೋಕಕ್ಕೆ ಕಣ್ಣಾದಂಥಾವನು—ಸೂರ್ಯ.

426 ಕಂಡಳುದಕದ ನೆಳಲಿನಲಿ ಕೈ
and sees in the water that magic calf. ಕೊಂಡ ಮಾಯಾಮೃಗದ ಮೂರ್ತಿಯ ;
ದಂಡಿಸರದಭಿನವದ ಶಿಶುಲೀಲಾಕಳಾಪಕದಾ
ಮಂಡೆಯನು ಮುರಿದೆತ್ತಿ ಸರಸಿಯ
ದಂಡೆಯಲಿ ನೋಡಿದಳು ಕಾಣದೆ
ಮಂಡಿಸಿದವಕ್ಷಿಗಳು ತಿಳಿಗೊಳದಲಿ ತಳೋದರಿಯಾ.

427. ತೋರುವದು ನೀರಿನಲಿ ; ನೋಡಲು,
It appears simultaneously in the water and on the banks of the tank, and disappears again. ಜಾರುವದು ತೀರದಲಿ ; ಮಿಗೆ ಮೈ
ದೋರುವದು ನೀರಿನಲಿ ತೀರದಲುಭಯಸಂಗದಲೀ ;
ಏರಿಳಿವವಕ್ಷಿಗಳು ಬಳಲಿದು
ಬೇರೆಬುದ್ಧಿಯ ಕಂಡು ಗಂಡಗೆ
ದೂರಬೇಕೆನುತಡರಿದಳು ಸೋಪಾನಪಂಕ್ತಿಗಳಾ.

428. ಇದ್ದನರಸ ಚಮೂರಚರ್ಮದ
She returns home, that young antelope following her ; ಗದ್ದುಗೆಯ ಗರುವಾಯಿಯಲಿ ; ಸತಿ
ಹೊದ್ದಿದಳು ಹೊಂಮರಿಯು ನೋಟದ ಸೊರದ ಹರುಷದಲೀ
ಹೊದ್ದಿತಿದು ಬೆಂಬಳಿಯಲಾನೃಪ
ನಿದ್ದ ಮಂದಿರದಗ್ರಭಾಗವ ;
ಕದ್ದುದರಸನ ಮನವ ದರುಶನದಲಿ ಧರಾಧಿಪನಾ

429. ದೇವ ಚಿತ್ತೈಸಿದಿರಿನಲಿ ಸಂ
and asks her husband, to go and bring it for her. ಭಾವಿಸಿದರೇ ಕನಕರುಚಿಯ ಕ
ಳೇವರದ ಕಮನೀಯಕಲಿತಕುರಂಗಶಾಬಕವಾ

ತೀವಿಕೊಂಡಿದೆ ವಿವಿಧರುಚಿ ವಿಪಿ
ನಾವಳಿಯನಿದ ತಂದು ಕೊಡ ಬೇ
ಕಾವಪರಿಯಿಂದಾದಡೆಯು, ತನಗೆಂದಳಿಂದುಮುಖೀ

430. ಸಲಹುವೆನು ನಾನಿಲ್ಲಿ ನಿಮ್ಮಯ
ಹೊಳಲಿಗೊಯ್ವೆವರಣ್ಯವಾಸವ
ಕಳೆದುದದರಿಂಮೇಲೆ; ಬಯಕೆಯ ಸಲಿಸ ಬೇಕೆಂದೂ
ಹಲವು ಪರಿಯಲಿ ಲಲ್ಲೆವಾತಿನ
ಲಲದು ರಾಮನ ಕೋಮಲಾಂಘ್ರಿಯೊ
ಳಿಳುಹಿದಳು ಮೂರ್ಧ್ನಿಯನು ಮುಗ್ಧಾಭಾವಭಾರದಲೀ.

"When we leave the forest we shall take it to our city." But Síte insists on his bringing it now.

431. ಐಸಲೇ ! ವೈದೇಹಿ ! ನೀನಿಂ
ತೀಸು ನಿರ್ಬಂಧದಲಿ ಧಿಟ ಬಿಂ
ನೈಸಲೇನಿದು ದೊಡ್ಡಿತೇ ತನಗೆನುತಲೆಕ್ಕಡವಾ
ಬಾಸಣಿಸಿ ಪದತಳಕೆ ಪೀತಸು
ವಾಸವನು ಬಿಗಿದುಟ್ಟು ಶರಬಾ
ಣಾಸನವ ಕೊಳುತೆಲೆವನೆಯ ಹೊರಹೊಂಟನಾರಾಮಾ.

He sets out from his hut.

1. ವಿದೇಹರಾಯ = ಜನಕರಾಯ. ವೈದೇಹಿ ಸೀತೆ.

432. ಅರಸಿ ಇಚ್ಛೆಯ ಸಲಿಸಲಿನಕುಲ
ದರಸ ಹೊರವಡಲೂರ್ಮಿಳಾಸತಿ
ಯರಸ ಕಂಡನು ತನ್ನ ಭವನದಲಿದ್ದು ರಘುಪತಿಯಾ ;
ಸರಸರಸಿ ಶರಚಾಪವನು ಸಂ
ವರಿಸಿಕೊಳುತೆಲೆವನೆಯ ಹೊರವಂ
ಟರಿದಿಶಾಪಟಮಲ್ಲನಗ್ರಜನೆಡೆಗೆ ನಡೆತಂದಾ.

Lakshmana, seeing him, follows,

1. ವೈರಿಗಳ ದಿಕ್ಕಾಪಾಲ ಮಾಡುವವನು = ಲಕ್ಷ್ಮಣನು

433. ತಿರುಗಿನೋಡಿದನೇನ್ಗೆ ಶಿಯನಹಿ

and asks him, why he had taken bow and arrow ?

ತರಳಿ ಭರವನು ಕಾಣದಣ್ಣನ
ಭರವಸಿಕೆ ತಾನೆಲ್ಲಿಗಂದನುಮಾನಮಾರ್ಗದಲೀ
ಹರವುಗಾಣದೆ ಕೈಮುಗಿದು ಭಯ
ಭರಿತಭಕ್ತಿಯಲೊಪ್ಪುನೀಬಿಲು
ಸರಳಸಂಹರಣೆಯ ಸಗಾಡವೇನು ? ಬೆಸಸೆಂದಾ.

434. ತಮ್ಮ ! ನೋಡೀಮೃಗನನಬುಜಜ

Ráma tells him the reason, and instructs him to protect his wife.

ನಿರ್ಮಿಸಿದ ಸೃಷ್ಟಿಗೆ ವಿನೂತನ
ವೆಂಮರಸಿ ಬೇಡಿದಳು ; ಬಯಕೆಯ ಸಲಿಸ ಬೇಕೆಂದಾ
ಹೆಂಮೆ ವೆಮಗಾಯ್ತಿಂದು ನಾವೀ
ಹೊಂಮರಿಯ ತರುವನ್ನಬರ ನೀ
ನೆಮ್ಮ ಸತಿಯನು ಕಾದು ಕೊಂಡಿರು ನೇಮ ನಿನಗೆಂದಾ.

435. ರಾಯನಾಡಿದ ನುಡಿಗೆ ನೋಡಿದ

Lakshmana: "this is not a real antelope; this business will cause much fatigue to us."

ನಾಯತಾಕ್ಷನು ಹೊಂಮರಿಯನಿದು
ಮಾಯಿಯಲಿ ರೂಪಾದುದೆಂಬುದನರಿದು ನಿಶ್ಚೈಸೀ
ಜೀಯ ! ಬಿನ್ನಹ ! ಕಪಟವಿದು ! ಕಮ
ಲಾಯತಾಕ್ಷಿಯ ಕಾಮ್ಯವಾಕ್ಯಕೆ
ವಾಯುವಹುದಿದರಿಂದ ಬಳಲಿಕೆ ಬಹುದು ನಮಗೆಂದಾ.

436. ತೊಳಲದಡವಿಗಳಲ್ಲ, ತೋಹಿಗೆ

"This is only an illusion. Come home!"

ಸಿಲುಕದಿಹ ಮೃಗವಿಲ್ಲ, ಬೇಟೆಯೊ
ಳಲಗುಗಾಣಿಸದಿರ್ದ ಮೃಗವಿಲ್ಲಿಂದು ಪರಿಯಂತಾ

ಬಳಕೆಗಿದು ಬಯಲೆಂದು ಬಗೆ ನೆರೆ
ನಿಲುಕುತಿದೆ ಮನಸಿನಲಿ, ನೀವಿದ
ನಿಳಕೆಗಾಣದೆ ಮನೆಗೆ ಬಿಜಯಂಗೈಯ್ಯಿ ! ನೀವೆಂದಾ.

Síte, hearing his remonstrances comes out and blames him.

437. ಎನಲು ಕೇಳದು ಬಂದು ಸೀತಾ
ವನಿತೆ ನುಡಿದಳು ಜರಿದು ನಿಜಮೈ
ದುನನ ; ಬಯಸಿದು ಬೇಡಲೀಗೊಂಮರಿಯಲವಗುಣವಾ.
ಅನುಕರಿಸಿ ಮಾತಾಡುವದು ನಿನ
ಗನುನಯವೆ ? ಸಾರತ್ತಲೆನೆ, ಮಾ
ನಿನಿಯ ಝೊಂಕಿಸಿ ಕಳುಹಿ ಲಕ್ಷ್ಮಣದೇವಗಿಂತೆಂದಾ.

Ráma to Lakshmana: "I shall not break the promise given to her."

438. ಕೇಳದೈ ! ಸಾಮಿತ್ರಿ ! ನಂಮಯ
ಲೋಲಲೋಚನೆಗಾಡಿದುತ್ತರ
ನಾಲಿಗೆಗೆ ಪುನರುಕ್ತಿಯಾಗೆ, ಪುರಂಧ್ರಿ ನಗುವಳೆಲೇ !
ಮೇಲೆ ನಾನ್ನುಡಿದೆಡಹೆವೆಂಬುದು
ಮೇಲು ಮಾತಾಗಿಹುದು ; ನಿನ್ನಯ
ಮೇಲುದಾಗಿನ ನುಡಿಗೆ ನುಡಿಯನು ಕೇಳು ! ನೀನೆಂದಾ

1. ಮುಂದೆ ತಾಗುವಂಥಾದ್ದು. ಬರುವಂಥಾದ್ದು.

"Whatever it may be, I shall take this antelope.
Take care of my wife!"

439. ದಿಟಕಹೊಂಮರಿ ಯಾದಡಿದ ಕರ
ಪುಟದೊಳಡಗಿಸಿ ತಹೆನು ; ಮೇಣಿದು
ಕುಟಿಲಕರ್ಬುರನಾದಡಿಳುಹುವೆನಿದರ ಮಸ್ತಕವಾ ;
ನಿಟಿಲದಲಿ ವಿಧಿ ಬರದ ಬರಹವ
ನಟಮಟಿಸಲಾರಳವು ? ಕಾದಿರು
ಕುಟಿಲಕುಂತಳದಬಲೆ ! ಯೆನುತಡಿ ಯಿಟ್ಟನಾರಾಮಾ.

*The antelope seeing Ráma's intentions, runs off far into the forest.*

440. ಕಂಡುದಾಮಾಯಾವಿಮೃಗ ಕೋ
ದಂಡರಾಮನ ಮನದ ನೆನಹಿನ
ದಂಡಿ ಇರವನು ; ದಾರಿ ದೆಗದುದು ಘೋರಕಾನನಕೇ
ಕೊಂಡುಹೋಹ ಕುಬುದ್ಧಿಯುಲಿ ; ನಡೆ
ಗೊಂಡು ಬಳಿಕರಸನನು ಕಪಟಕ
ರಂಡ[1]ಮೃಗ ಕಡು ಚಿತ್ರಗತಿಯುಲಿ ಚಿಂಮಿತಿದಿರಿನಲೀ.

1. ಕಪಟಕೆ ಭರಣಿ ಆಗಿದ್ದಂಥ=ಕಪಟ ತುಂಬಿದಂಥ ಮೃಗ.

*The pursuit of Ráma.*

441. ದಾರಿ ಇದು, ದರಿ ಇದು, ಗುಹಾಕಾಂ
ತಾರವಿದು, ಕಲು ಮುಳುವಿದ್ಝು ತ
ಘೋರದುರ್ಗವಿದುಗ್ರಕಂಟಕಕಠಿಣಪಥವೆಂದಾ
ಆರಯಿಕೆಯಿಲ್ಲದೆ ಮೃಗವ್ಯಾ
ಪಾರಚಿತ್ತನುದಾರಗುಣಗಂ
ಭೀರವಿಕ್ರಮನ್ಯೈದಿದನು ಮಾಯಾಕುರಂಗಮವಾ.

*He is tired and prepares for shooting.*

442. ಬಳಲಿದನು ಬಲುಹಾಗಿ ಸಾಕಿಂ
ನೆಳತಟವು ತನಗೆಂಬ ಮತಿ ಕುಂ
ಕೊಳಿಸಿದದು; ಮುಂಬರಿದುದುಗ್ರಾಟೋಪರೌದ್ರಶಿಖೀ ;
ಶಳದನಿಷಧಿಯುಲಂಬ, ತಿರುವಿಂ
ಗೊಳಿಸಿ ಕೋಲನು ಕೋಡಕ್ಕೈಯಿಂ
ದಳವಿಗೊಯ್ಯನೆ ಸಿಲುಕಿ ನಿಗುಚಿದನಾಗ ರಘುರಾಮಾ.

*"The pleasure of a giant's life is drawing to a close," thus say-*

443. ಸಾರೆ ತನಗಿಂನಸುರಕುಲಸಂ
ಸಾರಸುಖತರವೆನುತ ಜನ್ಮೋ
ತ್ತಾರಕದ ರಮಣೀಯತರರಾಮಾಭಿಧಾನಕವಾ

ing Márícha was struck by an arrow,

ಸಾರತರ ಜಿಂಹ್ವಾಗ್ರದಿಂದು
ಚ್ಚಾರಿಸುವ ಸಮಯದಲಿ ರಾಮನ
ಕೂರಲಗು ಕಡಿದಿಳುಹಿತಾವಮಾರೀಚಮಸ್ತಕವಾ.

1. ಅಭಿಧಾನಕದ ಸಾರತರವನ್ನು ಉಚ್ಚರಿಸುವ=ಎಂದನ್ವಯಿಸ ಬೇಕು.

and crying "O Síte" which was the sign for Rávana, he fell down. Hearing it Síte fainted,

444. ಹಾ ಸುಮಿತ್ರಾಸೂನು ! ಹಾ ಸೀ
ತಾಸರೋರುಹವದನೆ ! ಹಾ ! ಯೆಂ
ಬೀಸಗಾಡಧ್ವನಿಯಲಿಳೆಗೊರಗಿದನು ಮಾರೀಚಾ ;
ಆಸುರಾರಿಗೆ ಸನ್ನೆ ಇದು, ಬಳಿ
ಕೀಸರೋಜಾಂಬಕನ ರಾಣೀ
ವಾಸ ಕೇಳಿದು ಹಾ ಯೆನುತ ಹಂಮ್ಮೈಸಿದಳು ಧರೆಗೇ.

because that voice was like Ráma's voice, so her lamentation about Ráma occupies her mind.

445. ಕೇಳು ! ಕುಶ ! ಲವ ! ಕೇಳು ! ಕುಶಲದ
ಕೌಳಿಕದ ಮಾರೀಚನವನಿಗೆ
ಬೀಳುತೊರಲಿದ ಬೆದರುಧ್ವನಿ ರಘುಪತಿಯ ಧ್ವನಿಯಂತೇ
ಮೇಲುನುಡಿ ಕೇಳಿಸಿತು ಜನಕನೃ
ಪಾಲಕನ ಕನ್ನಿಕೆಯ ಕರ್ಣದೊ
ಳೋಲಗಿಸಿದುದು ಮನವನಪಗತರಾಘವಾಳಾಪಾ.

"Why did I send my husband, to bring the golden antelope. I am undone."

446. ಯಾಕೆ ಬೇಡಿದೆನಕಟ ! ಮೃಗವನ
ದ್ಯಾಕೆ ಬಲುಹಿಂದೆನ್ನ ಗಂಡನ
ನೂಕಿದೆನು ಹೊಂಮರಿಯ ಬೆನ್ನಿಲಿ ಬಹಳ ಕಾನನಕೇ ?
ಯಾಕೆ ಮೈದುನನೆಂದ ಮಾತ ನಿ
ರಾಕರಿಸಿದೆನು ! ಕೆಟ್ಟೆನೈ ! ವಿಧಿ
ಯಾಕರಣಿಗೊಳಗಾದೆನೇ ! ಹಾ ! ಯೆಂದಳಂದುಮುಖೀ.

447. ಕೇಳದೈ! ಸೌಮಿತ್ರಿ! ಮಿತ್ರವಿ
ಶಾಲವಂಶೋದ್ಭವನ[2] ವಚನವ
ಹಾಳೆಯನು ಹಾ ಸೀತೆ ಹಾ ಸೌಮಿತ್ರಿಯೆಂಬುದನೂ;
ವಾಲಿ[1]ಗಸ್ಥಿರವಾಗದೆಲೆ! ಭೂ
ಪಾಲನೇನಾದನೋ? ಮಹಾಗ್ನಿ
ಜ್ವಾಲೆ ಜಠರದೊಳೇಳುತಿದೆ ತನಗೆಂದಳಾಸೀತೆ.

She speaks to Lakshmana: "What has become of Ráma?"

1. ಮದಿವೆಯ ಗುರುತಿಗಾಗಿ ಇಟ್ಟುಕೊಳ್ಳುವಂಥಾದ್ದು ಗಂಡನು ಸತ್ತರೆ ಅದನ್ನು ತೆಗೆಯುತ್ತಾರೆ. 2. ಸೂರ್ಯನ ವಿಶಾಲವಂಶದಲ್ಲಿ ಹುಟ್ಟಿದವನ

448. ಏನ ಹೇಳುವೆನೆನ್ನ ಬುದ್ಧಿಯ
ಹಾನಿಯನು! ಮೃಗವ್ಯಸನ ಬಲಿದಾ
ಕಾನನಕೆ ಕಳುಹಿದೆನು ತನ್ನಯ ಪತಿಯ ಬಲುಹಿಂದಾ;
ನೀ ನುಡಿದ ನುಡಿಗಳನು ತಾನನು
ಮಾನಿಸದೆ ಕಡುಗೇಡ ಕೆಟ್ಟೆನು;
ಮಾನ[1]ನಿಧಿಯಿರವೆಂತುಟೋ? ಹಾ! ಯೆಂದಳಾಸೀತೆ.

"What shall I say. I did not listen to what you said."

1. ರಾಮಾ.

449. ಕೌಳಿಕದ ಹೊಂಮರಿಯ ಕದನದಿ
ಕೋಳುವಾದನೋ ರಾಮ? ಮಿಗೆ ತಾ
ಬೀಳುಗೆಡಹಿದನೋ ಮೃಗವನದನಾರು ಬಲ್ಲವರೂ!
ಯೇಳುತಿದೆ ಶೋಕಾಗ್ನಿ ವಿಲಯದ
ಕೌಳುಗಿಚ್ಚಂದದಲಿ; ನೆರೆ ತಾ
ಕೋಳುವಾದೆನು ಶೋಕವಹ್ನಿಗೆ ಯೆಂದಳಾಸೀತೆ.

"Is Ráma dead, or has he killed the antelope? Grief rises like fire."

450. ನಡುಗಿದನು ಸೌಮಿತ್ರಿ; ತಾನಾ
ನುಡಿಯ ಕೇಳದು ಚಿತ್ತದಲಿ ಯಿ
ತ್ತಡಕೆ ಬಿದ್ದುದು ಬುದ್ಧಿ ಬುದ್ಧಿಗೆ; ಸಂಶಯಾಳಾಪಾ

Lakshmana's confusion, and grief;

ತೊಡಚಿಕೊಂಡುದು ಮನವನುತ್ತರ
ಗೊಡಲರಿಯದವನಿಜೆಗೆ, ಕಂಗಳು
ಘುಡಿಘುಡಿಸುವಶ್ರುಗಳೊಳವನಿಗೆ ಬಾಗಿದನು ಶಿರವಾ.

451. ನೊಂದು ಮನದಲಿ ಮರುಗಿ ಲೋಚನ
ಬಿಂದುಗಳನಂಬರದಲೊರಸುತ
ನೊಂದು ದೈವವ ನೆನದು ಬೈದನು ಬಹಳ ದುಷ್ಕೃತವಾ;
ಹಿಂದೆ ತಾನಾರಾರನಳಲಿಸಿ
ಬಂದ ಭವ ಕೈಗೂಡಿತೇ ? ತನ
ಗಿಂದೆನುತಲವನಿಜೆಗೆ ಬಿಂನೈಸಿದನು ನಿಜಮತವಾ.

"Whom have we distressed, that this curse should fall on us?"

452. ಇನಕುಲೇಶ್ವರಗಪಜಯಶ್ರೀ
ವನಿತೆ ಹೊದ್ದಿದಡೀಗಲೀಭೂ
ವನಿಲವಾಕಾಶಾದಿ ಬ್ರಹ್ಮಮಹೇಶ್ವರಾದಿಗಳೂ
ತನತನಗೆ ಕಂಗೆಡದೆ ನಿಜನೆಲೆ
ವನಿಯೊಳಹರೇ ? ತಾಯೆ ! ಬಯಲಿಗೆ
ತನುವ ಬಳಲಿಸ ಬೇಡ ! ರಾಮನು ಮನುಜನಲ್ಲೆಂದಾ.

Lakshmana tries to comfort her: "Even the gods are subject to the vicissitudes of fortune."

453. ಅಕಟ ! ಲಕ್ಷ್ಮಣದೇವ ! ಪ್ರತ್ಯ
ಕ್ಷಕೆಪ್ರಮಾಣವದೇಕೆ ? ಪರಮಾ
ತ್ಮಕಪರಾತ್ಪರನೆಂದು ನೆರೆ ಬಾಯಾರಲೇಕೀಗಾ ?
ಯುಕುತಿಯಿದು ! ಮರೆಯಲ್ಲವೇ ? ಕೌ
ಳಿಕದ ಮಾತೇಕೆನ್ನೊಡನೆ ? ಸಾ
ಕಕಟ ! ರಾಮನ ಕೊಂಡುಬಾ ! ಹೋಗೆಂದಳಂದುಮುಖೀ.

Síte: "You lie, saying that Ráma is god; bring him, go!"

454. ತಾಯೆ ! ಚಿತ್ತೈಸಕಟ ! ರಾಘವ

Lakshmana: "That was not the voice of Ráma! It was an illusion."

ರಾಯನಾರೆಂದರಿಯಲಾ ! ವಾ
ತಾಯುವಿನ ಮಾತ್ರೈಸೆ ! ಮಾತಲ್ಲಿದು ಮಹೀಪತಿಯಾ !
ಮಾಯೆಯನು ಮಿಕ್ಷ್ವಾಕ್ವಾದಿಪುರುಷನೆ
ಕಾಯುವೆಂದರಿವುದೆ ವಿವೇಕ
ಸ್ಥಾಯಿ ತಾಮಸಬುದ್ಧಿ ನಿಮಗೇಕೆಂದನವನಿಜೆಗೇ.

455. ಕೃತಕಮೃಗವಿದು ! ದೇವಿ ! ನೋಡಾ

"Ráma gave the fire of his arrow to the artificial calf. It cried. Ráma is not dead! Believe me!"

ಹುತಿಯ ಕೊಟ್ಟನು ನಿಶಿತತೋಮರ
ಹುತವಹಂಗದು ಬೀಳುತೊದರಿದುದಾಸುರಾಂಗದಲೀ ;
ಹತರಘುಕ್ಷಿತಿನಾಥನಲ್ಲೀ
ಕ್ಷಿತಿಗೆ ನಂಬೋದೆನ್ನ ಭುವನ
ಸ್ತುತನನಮಳಾಚ್ಯುತನ ರಾಮನ ತೋರಿಸುವೆನೆಂದಾ

1. ರಾಮನ ಬಾಣ=ಜಿಂಕೆ. ಆಕೃತದ ಮೃಗ ಆಹುತಿ ಯೆಂಬ ಉಪಮ.

456. ವಿಷವ ಕೊಂಬೆನು, ತಾರದಿದ್ದರೆ

Síte: "If you do not bring him, I shall set fire to the house, drown myself in a well, and pluck out my tongue!"

ವಸಿಗೆಗುರಿಯನು ಚಾಚಿ ಜೀವವ
ಬಿಸುಡುವೆನು ; ಬೀಳುವೆನು ಘೋತೋಕದ ಕೂಪದಲೀ ;
ರಸನೆಯನು ಕಿತ್ತುವ ನಿನಗ
ರ್ಪಿಸುವೆನೆಂದಾಕೋಪಮುಖದು
ಬ್ಬಸದ ರೋಷಾವೇಶದಲಿ ಗಜರಿದಳು ಲಕ್ಷ್ಮಣನಾ.

457. ಬಗೆಯನರಿವೆನು ; ನಿನ್ನ ಚಿತ್ತವ

Síte imputes to Lakshmana improper reasons.

ಬಗೆವವಳು ತಾನಲ್ಲವನ್ಯರ
ಬಗೆಗೆ ಶಿಲುಕುವಳೆಂದು ಬಗೆದೆಯಲಾ ಮನಸ್ಸಿನಲೀ !

ಸೊಗಸುವವಳಹುದಲ್ಲವೆಂಬು
ಜ್ಜುಗವ ನೀನೇ ಬಲ್ಲೆ ! ಯನೆ ಕರ
ಯುಗಳದಲಿ ಮುಚ್ಚಿದನು ಕರ್ಣವ ರಾಮರಾಮೆನುತಾ.

His reply: "Is not Ráma my father? you are my mother! He ordered me to remain here."

458. ಮಾತ ಹೋಗಾಡುವರೆ ? ರಾಮನು
ತಾತನಲ್ಲಾ ತನಗೆ ? ನಿಮ್ಮನು
ಮಾತೆಯೆಂದೇ ತಿಳಿದಿಹೆನು ; ತದ್ಭಾವಶುದ್ಧಿಯಲೀ
ಭೂತಳಾಧಿಪ ನುಡಿದ ನುಡಿಗಾ
ನಾತು ಸ್ಥೈರಿಸಿ ನಿಂದೆ ; ನಿಮ್ಮಯ
ಮಾತು ಮೀರುವನಲ್ಲ ; ರಾಮನ ತಹೆನು ತಾನೆಂದಾ.

"I shall bring him. There are giants in this forest; be on your guard!"

459. ತಾಯೆ ! ಕೇಳರೆಘಳಿಗೆ ಮಾತ್ರಕೆ
ರಾಯನನು ತಹೆ; ತಾರದಿದ್ದರೆ,
ರಾಯನಂಘ್ರಿಗಳಾಣೆ ! ಪುಸಿದರೆ, ನಿಮ್ಮ ಮೇಲಾಣೇ !
ಈಯಟವಿಯಲಿ ತೊಳಲುವಸುರರು
ಮಾಯೆಯಲಿ ಬಲ್ಲಿದರು; ಬಹಳೋ
ಪಾಯಕುಶಲದ ಬುದ್ಧಿವಂತಿಕೆ ನಿಮ್ಮೊಳಿರಲೆಂದಾ !

Commanding Síte to the care of the elements, Lakshmana sets out in the evening.

460. ಕಾದು ಕೊಂಡಿರಿ ! ಸತಿಯನೆಂದಭಿ
ವಾದನಂ ಗೈದನು ಮಹಾಬಲ
ವಾದ ಭೂತಂಗಳಿಗೆ, ದಿಕ್ಕಿನ ದೇವಸಂತತಿಗೇ,
ಮೇದಿನೀ ಬಾಹನ್ನಬರ, ನಿನ
ಗೈದುವದು ಭರಭಾರವೆಂದತಿ
ಖೇದದಲಿ ಕಾಲಿಕ್ಕಿದನು ಕಾನನಕೆ ಸಂಜೆಯಲೀ.

461. ಮನದ ಬಹಳಾಂದೋಳದಲಿ ಭಾ
ಮಿನಿಯು ಬಿಡಬೇಸರಕೆ ನಡೆತಂ
ದನು ಮಹಾರಣ್ಯದಲಿ ಮಾಯಾಮೃಗದ ಪಥವಿಡಿದೂ.—
ತನುಜ ! ಕೇಳೀಚೆಯಲಿ ಖಳನಾ
ತನಲಿ ಸಂದುದು ಬೇಹು ನಿಕಷಾ[1]
ತನುಜನವ ಯತಿ ಯಾದನಾಕ್ಷಣ ಕಪಟ ರೂಪದಲೀ.

Rávana in the disguise of a mendicant,

1. ರಾಕ್ಷಸರನ್ನು ಹಡೆದವಳಲ್ಲಿ ಒಬ್ಬಾಕೆ.

462. ಶಿರದ ಮುಂಡನದಕ್ಷಮಾಲೆಯ
ಕರದ, ದಂಡಕಮಂಡಲದ, ಬಂ
ಧುರದ ಕಾಷಾಂಬರದ, ಕೌಪೀನದ ಕಳೇವರದಾ,
ಜರೆಯು ಜರುಗಿದ ಬೆನ್ನಿನಲುಗುವ
ಶಿರದ, ಶೂಲಿಯು ಸಕೆಯು ನಾಮ
ಸ್ಮರಣೆಯಲಿ ವೈದೋರಿದನು ಖಳನಾಮಹೀಸುತೆಗೇ.—

approaches the cottage of Síte.

463. ಇದೆ ದಿಳೀಪಾನ್ವಯನ ವಿಶ್ರುತ
ಸದನ ವಿಪ್ರಪ್ರಿಯನಗೃಹವಿಂ
ತಿದೆ ! ಮಹಾಧಾರ್ಮಿಕನ ಪುಣ್ಯಾಶ್ರಮವಿದೇ ! ಯನುತಾ
ಮೃದುತರದ ನುಡಿಗಳಲಿ ತೋರುತ
ಲಧಿಕತಪಸಿಯ ವೋಲು, ತಾನಘ
ಹೃದಯನೈದಿದನಮಲಸಂಧ್ಯಾಸಮಯದಗ್ರದಲೀ —

saying: "is this the house of the pious Ráma."

1. ರಾಮನ ಪೂರ್ವಜರಲ್ಲಿ ಒಬ್ಬನು.

464. ಮಾತಿದೆಲ್ಲಿ ಯದೆನುತ, ಬಾಗಿಲ
ಲಾತಪೋಧನವೇಷದಾಕಾ
ಮಾತುರನ, ಕಪಟಾನ್ವಿತನ, ಕಡು ನರಕಭಾಜನನಾ,

Síte, not knowing his real intentions comes to the door and speaks to him :

ಪಾತಕನ, ಪರಿಯರಿಯದಾಭೂ
ಜಾತಿ ಯತಿ ಯೆಂದೀ ಬಗದು, ಸಂ
ಪ್ರೀತಿವಚನದ ಲಸುರಮುನಿಗಿಂತೆಂದಳೊಲವಿನಲೀ ;

465. ಅಹುದಿದೀಗ ಮಹೀಸುರಪ್ರಿಯ

"Yes! this is the house of the pious Ráma! come in!" "Your husband is not at home. Give me only a place to rest!"

ಗೃಹವು ! ಧಾರ್ಮಿಕನಿಳಯವಿದು ತಾ
ನಹುದು ! ನೀವೆಲ್ಲಿಂದ? ಬಂದಿರಿ ಬಿಜಯ ಮಾಡೆನಲೂ
ಮಹಿಳೆ ! ಕೇಳೆಜಮಾನರಿಲ್ಲದ
ಗೃಹವು ನಮಗಸ್ವಾಮ್ಯ ಸಂಧ್ಯಾ
ವಿಹಿತಕೃತ್ಯಕೆ ಠಾವು ಸಾಕೆಮಗಿದುವೆ ಸಾಕೆಂದಾ !

466. ಬಿಜಯಮಾಡಿ ಗೃಹಾಂತರಾಳಕೆ !

"Come in! We are your worshippers. Your lotus foot is sunlight to the night of my sorrow!"

ಭಜಕರಾವ್ನಿ ಮುಗ್ಯೈಸೆ ! ಭವದಾ
ತ್ಮಜೆಯಲಾ ! ಭಾವಿಸಲು,-ಕುಳ್ಳಿರೆ ! ಲೇಸುಮಾಡಿದಿರೀ !
ವಿಜಯರಾಮನನಗಲ್ದ ಚಿಂತಾ
ರಜನಿಗಾದುದು ನಿಮ್ಮ ಪದಪಂ
ಕಜಪತಂಗೋದಯದ ಬೆಳಗೆಂದಳು ಸರೋಜಮುಖೀ.

467. ಮನದೊಳವನೀವನಿತೆ ತನಗಹ

He enters the hut of Ráma.

ನೆನವು ನೆಲೆಗೊಳದೆಂಬ ಧೃಡಯೋ
ಚನೆಯನೇ ನಿಶ್ಚೈಸುತೊಳಹೊಕ್ಕನು ದಳಾಲಯವಾ.
ಜನಕಸುತೆ ಭಕ್ತಿಯಲಿ ದರ್ಭಾ
ಸನವನಿತ್ತುಪಚರಿಸಿ ನಂಮಯ
ಜನಕ ಬಂದೋಲಾಯಿತೆಂದಳು, ಮುಗಿದು ಕರಯುಗವಾ.

468. ಆವಕಡೆ? ನಿಜವಾವದೇಶವ

Síte kindly inquires after his place, &c.

ದಾವುದಮಳಕ್ಷೇತ್ರತೀರ್ಥದ
ಠಾವು ತಾ ನಿಮಗೆಲ್ಲಿ? ನಂಮಾಶ್ರಮಕೆ ಬರವೇನೂ. ?
ನೀವು ವೃದ್ಧರು ; ನಿಮಗೆ ಶಿಷ್ಯ
ಷಾವಲಂಬನವಿಲ್ಲವೆಂದುರೆ
ಭಾವಭಕ್ತಿಯಲುಪಚರಿಸಿದಳು ಕಪಟತಾಪಸಿಯಾ.

469. ವಾಸವೆಮಗೇನಿದ್ದುದುತ್ತಮ

Rávana's answer.

ವಾಸಭಾಜನದುಪಚರಿಯದಿಂ
ದೀಶರೀರವ ಸಲಹುವೆವು; ಪ್ರಾರಬ್ಧಫಲವಿಡಿದೂ,
ದೇಶದೇಶವ ತೊಳಲಿದೆವು ಹಿಂ
ದೀಸು ದಿನವಿಂನೊಂದು ಲಂಕಾ
ದೇಶವಿದೆ, ಸಂಕಲ್ಪ[1]ಶೀಮೆಗೆ ಕಾಂತೆ! ಕೇಳೆಂದಾ.

1. ಲಂಕಾದೇಶದ ತನಕ ಹೋಗಬೇಕೆಂಬ ಸಂಕಲ್ಪವದೆಂಬರ್ಥ.

470. ಗಮನವಲ್ಲಿಗೆ ಘಟಿಸಿದರೆ, ನಾವು
ಸುಮನಸರಿಗಿಂದಧಿಕ, ಕೇಳೆಲೆ
ಕಮಲಮುಖಿ! ಕಾರ್ಯ್ಯಾರ್ಥವಿದು ಸಮನಿಸೆ, ಕೃತಾರ್ಥರೆಲೇ!
ಶ್ರಮವಳಿದುದಿಂದಿನಲಿ ನಿಂಮಾ
ಶ್ರಮಕೆ ಬಂದುದರಿಂದ, ನೀನು
ತ್ತಮೆಯೆಲಾ! ಪ್ರಿಯವಿದ್ದುದೆಂಮಯ ಮೇಲೆ ನಿನಗೆಂದಾ.

471. ಅಡಗಿತಾಕ್ಷಣ ದಂಡ; ಮಾಯದ

He assumes a different form,

ಲಡಗಿ ಹೋಯಿತು ಕರಕಮಂಡಲ
ಮಿಡಕು ನಿಂದವು ಬೆರಳನಾಮಸ್ಮರಣೆಗಳು ಹರನಾ;

ಶಿಡಿದು ಹಾರಿತು ಜರೆಯ ಜಾಡ್ಯದ
ತೊಡಹವರ್ಧವಯೋವಿಲಾಸದ
ಜಡೆಯ ತಾಪಸಿ ಯಾಗೆ ಮನದಲಿ ಹೆದರಿದಳು ಸೀತೇ.

472. ಎಲೆ ಪಯೋಧರಭಾರೆ ! ಶಶಿಮಂ
and tells her that Ráma is dead,
ಡಲನಿಭಾನನೆ ! ಪೀನಜಘನ
ಸ್ಥಳೆ! ಸರೋರುಹನಯನೆ ! ಸಿಂಧುರಗಮನೆ ಶುಕವಚನೇ !
ಲಲಿತಚಂದನಗಂಧಿ ! ಕೇಳೀ
ಗಲು ! ಮಹಾಮಾರೀಚನೆಂಬ
ಗ್ಗಳದ ಮಾಯಾಮೃಗದಲಳಿದನು ರಾಮನೆಂಬ ನೃಪಾ.

473. ಆತ ನಿನಗೇನಹನೊ ? ನೀನೇ
reproves her for having sent away Ráma,
ನಾತಗಹೆಯೊ ? ಹೊಲಬಿನಂದದ
ಮಾತಿನಿಂದವೆ ದಂಪತಿಗಳೆಂಬಂತೆ ತೋರುತಿದೇ;
ಯಾತಕಕಟಾ ! ಕಳುಹಿ ಕೊಲಿಸಿದೆ ?
ಶಾತಕುಂಭಕುರಂಗದೆಡೆಯಿಂ
ನೇತಕವ ಮರಳಾಗಲದುತಾ ವಿಧಿಯ ಲಿಖಿ! ಯೆಂದಾ.

474. ಹೋಗುತಾತನ ಬಳಿಯಲೊಬ್ಬನು
and laments her misfortune.
ನೀಗಿದನು ನಿಜತನುವ ; ನಿನ್ನೃಪ
ಭೋಗವಿನ್ನೇನಿದ್ದುದೋ ! ಶಿವಶಿವಮಹಾದೇವಾ !
ಹೋಗಿ ಬರುವೆವು ನಾವೆನುತ್ತನು
ರಾಗದಲಿ ನಿಂದಿರಲು, ಕಾಮುಕ
ನಾಗದಿರನಿವನೆನುತ ಕಳವಳಿಸಿದಳು ಕಮಲಾಕ್ಷೀ.

475. ಯೋಗಿಯುತವ ಸನ್ಯಾಸವೇಷವ
He throws off the disguise of an ascetic, ಬೀಳು ಕೊಟ್ಟನು; ತೋರಿದನು ದಶ
ಮೌಳಿಗಳ, ಮದದುಬ್ಬಿನಗ್ಗದ ಬಾಹುದಂಡಗಳಾ,
ನೀಲಮೇಘನಿಭಾಂಗದುರು ದಂ
ಷ್ಟ್ರಾಳಿಗಳ, ಮಣಿಕಾಂಚನದ ಮಕು
ಟಾಳಿಗಳ ವಿವಿಧಾಭರಣದಭಿನವದ ರೂಪಕವಾ.

476. ನಳಿನಮುಖಿ ! ಕೇಳಖಿಳಭುವನಾ
and extols his great power. ವಳಿಗಳೆನ್ನವು ; ಸಕಲದಿವಿಜಾ
ವಳಿಗಳೆನ್ನಯ ಬಂಟರೂರ್ವಸಿಮುಖ್ಯಸುರಕುಲದಾ
ಲಲನೆಯರು ತೊತ್ತಿರು ; ಸುರೇಂದ್ರನ
ಹೊಳಲ ಸುರತರು ಕಾಮಧೇನಾ
ವಳಿಗಳಿಹವೆನ್ನಲ್ಲಿ ; ತನ್ನಯ ಹೆಸರ ಕೇಳೆಂದಾ !

477. ಚಂಡವಿಕ್ರಮನುರು ತ್ರಿಲೋಕದ
ಗಂಡ, ರಾವಣನೆಂಬ ಜಗದು
ದ್ದಂಡಹೆಸರೆಂನ್ನೈ ಶಿರಿಯಕಜಹರರು ಪಾಡಲ್ಲಾ ;
ಕಂಡೆನೆನ್ನದೆ, ಕಾಣೆನೆನ್ನದ
ಖಂಡಶೌರ್ಯನ ನೋಡು ! ನಿನಗಾ
ದಂಡಿಯುಳ್ಳವನಹೆ ; ವಿವೇಕದಿ ನೋಡು ನೀನೆಂದಾ !

478. ಪುರುಷರೊಳಗುತ್ತಮನು ತಾ ; ವರ
He bids her go with him. ತರುಣಿಯರೊಳುತ್ತುಮೆ ಕಣಾ ನೀ ;
ಸುರನರೋರುಗನಿಕರದೊಳು ತಾ ಸುಪ್ರಸಿದ್ಧ ಕಣಾ !

ಸ್ಮರ ಕಣಾ ತಾ ರತಿ ಕಣಾ ನೀ
ಮರಳೆ ಮಾತೇಕಿನ್ನು ? ನಡೆ ! ಸಂ
ಚರದ ಸಂಶಯವೇನಿದಕೆ ? ಲಲಿತಾಂಗಿ ! ನಡೆ ! ಯೆಂದಾ.

479. ಚೆಲುವೆ ನೀನೆಂದರಿದು ಬೀಸಿದ
ಬಲೆ ಯಿದೀಗಿಟ್ಟೋಲೆ[1] ಸುಸ್ಥಿರ ;
ಎಲೆ ಮಹೀಸುತೆ ! ಕೇಳು ! ತಂನಿಂದಾವಭಯಬೇಡಾ !
ತಳಿರಡಿಗಳಿಂದಿತ್ತ ಮೆಲ್ಲನೆ
ಚಲಿಸುವದೆ ಸುಪ್ರಾಥಿ ! ಯನೆ, ನಿ
ರ್ಮಲಪತಿವ್ರತತಾಯಿ ಕೆಡೆನುಡಿದಳು ನಿಶಾಚರನಾ;

"I have caught you in a snare your husband is not dead."

1. ನಿಂನ ಗಂಡನು ಸತ್ತಿಲ್ಲ.

480. ಎಲವೊ ಪಾತಕಿ ! ಹೊಲೆಯ ಹೊರವಡು !
ತಲೆಗಳಿವು ನಿನಗುಳಿವವೇ ? ವೆ
ಗ್ಗಳದ ದೈವವ ಕೆಣಕಿ ನೀರಲಿ ನೆರದೆ ! ಹೋಗೆನುತಾ
ನಳಿನಮುಖಿ ಹಲವಂಗದಲಿ ಬೈ
ದೊಳಗುಗೊಡದಿರೆ, ಕೋಪದಲಿ ಕಳ
ವಳಗ ಕಾಂತೆಯ ಕಬರಿಯನು ಹಿಡಿದೆಳದನಂಗಳಕೇ.

Síte chides him.

Rávana drags her out.

481. ಬೇಡ ; ಬೇಡೆಂಬಂತೆ ಮರನ
ಲ್ಲಾಡಿದವು ; ಖಗಕುಲವಿಹಂಗಗ
ಳೀಡಿರಿದು ನೆರದರಚಿ ಹೊಯ್ದವು ಖಳನಮಸ್ತಕವಾ ;
ನೋಡದವನಷ್ಠಶಕುನವನು, ಯೆ
ದ್ದೋಡುತೈದೇರಿಸಿದ ರಥವನು ;
ಹೊಡೆ ಹಾ ಹಾಕ್ರಂದನಧ್ವನಿ ತುಂಬಿತಂಬರವಾ!

Bad omens.

Síte carried away. Lamentations fill the air.

482. ಬಾಯ ಹೊಯ್ಲಿನಲಬಲೆ ಗಿರಿಸಮು
ದಾಯ ಮಾರ್ಧನಿ ದೋರಲೊದರಿದ
ಳಾಯತಾಕ್ಷನ ದುಷ್ಟಶೀಕ್ಷನ ಸುಜನರಕ್ಷಕನಾ
ರಾಯರಾಮನ ವೈರಿಗಿರಿವ
ಜ್ರಾಯುಧ[1]ನನುದ್ದಂಡತೊರವಿಯ
ರಾ[2]ಮನನು ಕರಕರದು ಮೊರೆಯಿಡುತ್ತೈದಿವಳು ಸೀತೇ.

The mountains echo with her crying for help to Ráma.

1. ವೈರಿಯಾದ ಗುಡ್ಡಗಳಿಗೆ ವಜ್ರಾಯುಧ ವುಳ್ಳ ಇಂದ್ರನಾದಂಥವನು = ರಾಮ. 2. ತೊರವಿಯೆಂಬ ಗ್ರಾಮದಲ್ಲಿಯ ರಾಮನ ವಿಗ್ರಹ.

483. ಪುರವ ಹೊ[1]ಗಲಾಕ್ಷಣದಲಿಳೆ ಬಾಯಿ
ದೆರದುದಭ್ರಶಿಲಾಪ್ರತಿಮೆ ಬೊ
ಬ್ಬಿರಿದವಂಬರ ಕಾರಿತರುಣಾಂಬುವಿನ ಧಾರೆಗಳಾ ;
ಮುರಿದು ಬಿದ್ದವು ಸಾಧ ; ಬೀಸಿತು
ಬಿರಿಸಿನಲಿ ಬಿರುಘಾಳಿ ; ಬಾಗಿಲ
ಲೊರಲಿದವು ನರಿಹದ್ದುಕಾಗಿಗಳಾಮಹಾಪುರದಾ.

Rávana arrives in Ceylon; bad omens.

1. ದಶರಥರಾಯನ ಬಂಧು ಜಟಾಯುವನ್ನು ರಾವಣನು ಗೆದ್ದು ಮುಂದೆ ಸೀತೆ ಸಹಿತ ವಾಗಿ ಹೋಗಿ ಲಂಕಾಪುರವನ್ನು ಹೊಕ್ಕನು.

484. ಅಸುರನವನಾಸುರವಿಕರ್ಮದ
ಸಸಿನವನೆ ಬಲುವಿಡಿದವಳು ಕೈ
ವಶಕೆ ಶಿಕ್ಕಿದಳೆಂಬ ಸಂತೋಷದ ಸಗಾಢದಲೀ
ವಸಗೆ ಮಿಗಲೈತಂದು ಹೊಕ್ಕನು
ವಸತೆಯನು, ವಸುಮತಿಯ ಸುತೆ ರಾ
ಕ್ಷಸರ ವಂಶಕೆ ಮೃತ್ಯುವೆಂಬುದನರಿಯದಸುರೇಂದ್ರಾ.

Rávana's joy; Síte entered his house as death to the generation of the giants.

485. ಶಾಪ ತನಗುಂಟಾಗಿ ಮನ್ಮಥ
ತಾಪಕಂಗವನಿತ್ತು ಬಳಿಕವ
ನಾಪತಿವ್ರತೆಯನು ನಿಶಾಚರಗುರು[1]ವಚನದಿಂದಾ
ತಾಪವನು ಹಿಂಗಿಸುವಶೋಕಾ
ತೋಪಿನಲಿ ಶರಮಿತ್ರಿಜಟೆಯರ[2]
ಕಾಪಿನಿಂದಿರಿಸಿದನು ತೊರವಿಯ ರಾಯನಂಗನೆಯಾ.

Site placed under the guardianship of trustworthy persons in a grove.

1. ಶುಕ್ರಾಚಾರ್ಯನ. 2. ಇವರು ರಾವಣನ ತಮ್ಮನಾದ ವಿಭೀಷಣನ ಹೆಂಡತಿ ಮಕ್ಕಳು.

---

## BHAGAVATA A SHORT ACCOUNT OF THE INCARNATION OF KRISHNA.

### (4. ಭಾಗವತ. ತ್ರಿತಯ್ಯಸ್ಕಂದ. ಸಂಧಿ. 2.)

### ಕೃಷ್ಣಾವತಾರಸಾರ. (ಭಾಮಿನಿ ಷಟ್ಪದಿ)

### ಪೀಠಿಕೆ.

ಇದು ೧೮ ಪುರಾಣಗಳಲ್ಲಿ ಒಂದು. ಅದು ಮೊದಲು ದ್ವಾದಶಸ್ಕಂಧಗಳಾಗಿ ಸಂಸ್ಕೃತದಲ್ಲಿ ರಚಿತವಾಗಿದ್ದಂಥಾದ್ದು. ಆ ಮೇಲೆ ಬ್ರಾಹ್ಮಣನಾದ ಒಬ್ಬ ಕವಿ ಅದನ್ನು ಕನ್ನಡಿಸಿದನು. ಅದರಲ್ಲಿ ವಿಷ್ಣು ಮಾಡಿದ ೨೪ ಅವತಾರಗಳು ವಿವರಿಸಿ ಯುವೆ. ಈ ೨೪ ಅವತಾರಗಳಲ್ಲಿ ಮುಂದೆ ಬರೆದಿರುವ ದಶಾವತಾರಗಳು ಪ್ರಸಿದ್ಧ:

1. ಮತ್ಸ್ಯಾವತಾರ: ಬ್ರಹ್ಮನು ದಣಿವಿನಿಂದ ಮಲಗಿರಲಿಕ್ಕೆ ತಮಾಸುರನು ಬಂದು ಅವನಲಿದ್ದ ವೇದಗಳನ್ನು ಕದ್ದು ಕೊಂಡು ಹೋಗಿ ಸಮುದ್ರದಲ್ಲಿ ಬಚ್ಚಿಟ್ಟು ಕೊಂಡನು. ಇದಕ್ಕೆ ವಿಷ್ಣು ಮತ್ಸ್ಯರೂಪ ತಕ್ಕೊಂಡು ಸಮುದ್ರ ಹೊಕ್ಕು ಅವನ ಸಂಗಡ ಯುದ್ಧ ಮಾಡಿ ಅವನನ್ನು ಕೊಂದು ವೇದಗಳನ್ನು ತಂದು ತಿರಿಗಿ ಬ್ರಹ್ಮನಿಗೆ ಒಪ್ಪಿಸಿ ಕೊಟ್ಟನು. (ಭಾಗವ. ೮. ಸ್ಕಂದ.)

2. ಕೂರ್ಮಾವತಾರ. ದೇವದಾನವರು ಅಮೃತ ಸಿಕ್ಕುವ ಹಾಗೆ ಮಂದರಾಚಲವನ್ನು ಕಡಗೋಲಾಗಿಯೂ ಆದಿಶೇಷನನ್ನು ಹಗ್ಗವಾಗಿಯೂ ಮಾಡಿ ಕೊಂಡು ಸಮುದ್ರವನ್ನು ಕಡೆಯುವ ಸಮಯದಲ್ಲಿ, ಆ ಗುಡ್ಡ ಸಮುದ್ರದಲ್ಲಿ ಮುಳಗಲಾಯಿತು. ಆಗ್ಯೆ ಅವರು ಭಯಸ್ತರಾಗಿ ಪ್ರಾರ್ಥನೆ ಮಾಡಿದ್ದಕ್ಕೆ, ವಿಡ್ಣು ಕೂರ್ಮಾವತಾರ ತಾಳಿ ಸಮುದ್ರವ ಹೊ

ಕ್ಕು, ಮುಣುಗುತ್ತಿದ್ದ ಗಿರಿಗೆ ಬೆನ್ನು ಕೊಟ್ಟು ನಿಂತು ಸಮುದ್ರ ಮಥಿಸುವ ಕೆಲಸವನ್ನು ಪೂರ್ಣ ಮಾಡಿ ಕೊಟ್ಟನು. (ಭಾಗವ. ೮. ಸ್ಕಂದ)

3. ವರಾಹಾವತಾರ: ಹಿರಣ್ಯಾಕ್ಷನೆಂಬ ದೈತ್ಯನು ಭೂದೇವಿಯನ್ನು ತಕ್ಕೊಂಡ್ರು ಹೋಗಿ ಪಾತಾಳವಲ್ಲಿ ಸೆರೆ ಇಟ್ಟು ಕೊಳ್ಳಲಾಗಿ, ಸಕಲ ಸೃಷ್ಟಿ ನಾಶವಾಯಿತು. ಆಗ ವಿಷ್ಣು ವರಾಹಾವತಾರ ತಕ್ಕೊಂಡು ಕೋರೆಗಳಿಂದ ಭೂಮಿಯನ್ನು ಬಗೆದು ಕೊಂಡು ಹೊಕ್ಕು ಪಾತಾಳಕ್ಕೆ ಹೋಗಿ ಆ ದೈತ್ಯನನ್ನು ಸಂಹರಿಸಿ ಭೂಮಿಯನ್ನು ಬಿಡಿಸಿ ತಂದು ಪೂರ್ವದಂತೆ ಸ್ಥಾಪನೆ ಮಾಡಿದನು. (ಭಾಗವ. 3. ಸ್ಕಂದ.)

4. ನರಸಿಂಹಾವತಾರ: ಹಿರಣ್ಯಕಶ್ಯಪನು ತನ್ನ ತಮ್ಮ ಹಿರಣ್ಯಾಕ್ಷನ ವಧೆಯ ನಿಮಿತ್ತ ವಿಷ್ಣು ದ್ವೇಷ ಮಾಡಿ, ಬ್ರಹ್ಮನಿಂದ, ತನಗೆ ದೇವ ದಾನವ ಮನುಷ್ಯ ಪಕ್ಷಿ ಪಶು ಮೃಗ ಕ್ರಿಮಿ ಕೀಟ ಮೊದಲಾದ ಜೀವರಾಶಿಗಳಿಂದ ಮರಣವಾಗದಂತೆ, ವರವ ಪಡಕೊಂಡು, ತನ್ನ ಹೊರ್ತು ಬೇರೆ ದೇವರ ಇಲ್ಲವೆಂತ ಗರ್ವನಡಿಸಿ, ತನ್ನ ಮಗ ಪ್ರಹ್ಲಾದನು ವಿಷ್ಣು ಭಕ್ತನಾಗಿದ್ದ ಕಾರಣ, ಕೊಲ್ಲಲಿಕ್ಕೆ ಪ್ರಯತ್ನ ಮಾಡಲಾಗಿ, ವಿಷ್ಣು ತನ್ನ ಭಕ್ತನಿಗೆ ಸಹಾಯವಾಗಿರಲಿಕ್ಕೆ ಅವನ ಮನೆಯ ಚಾವಡಿಯ ಕಂಬದೊಳಗಿಂದ ಅರ್ಧ ನರ ಅರ್ಧ ಸಿಂಹವಾದಂಥಾ ರೂಪದಿಂದ ಹುಟ್ಟಿದನು. ಆ ಮೇಲೆ ಈ ನರಸಿಂಹನು ಹಿರಣ್ಯಕಶ್ಯಪನನ್ನು ತೊಡೆಯಲ್ಲಿ ಇರಿಸಿ ಕೊಂಡು, ಉಗುರುಗಳಿಂದ ಅವನ ಹೊಟ್ಟೆಯ ಬಗೆದು, ರಕ್ತವನ್ನು ಕುಡಿದು, ಕರುಳನ್ನು ಕಂಠಮಾಲೆಯಾಗಿ ಕೊರಳಿಗೆ ಹಾಕಿಕೊಂಡನು. ಇದರಿಂದ ಲೋಕೋಪದ್ರ ಪರಿಹಾರವಾಯಿತು. (ಭಾಗವ. 7. ಸ್ಕಂದ)

5. ಪ್ರಹ್ಲಾದನ ಮೊಂಮಗ ಬಲಿಚಕ್ರವರ್ತಿ ಎಂಬ ಅರಸನು ಸಕಲ ರಾಜ್ಯ ತನ್ನದು ಮಾಡಿಕೊಂಡನು. ಸ್ವರ್ಗಲೋಕವನ್ನು ತಕ್ಕೊಳ್ಳುವದು ತನಗೆ ಸಾಧ್ಯವಾಗುವದಕ್ಕೆ ನೂರು ಅಶ್ವಮೇಧ ಮಾಡ ಪ್ರಾರಂಭಿಸಿದನು. ಆಗ ಇಂದ್ರನ ತಾಯಾದ ಅದಿತಿ ತನ್ನ ಮಗನ ಪದವಿ ಹೋಗುತ್ತದೆಂದು ಚಿಂತೆ ಮಾಡಿ ವಿಷ್ಣುವಿಗೆ ಪ್ರಾರ್ಥನೆ ಮಾಡಲಾಗಿ, ಅವನು ಆಕೆಯಿಂದ ಗಿಡ್ಡನಾಗಿ ಹುಟ್ಟಿದನು. ಬಲಿ ಯಜ್ಞ ಮಾಡುವಲ್ಲಿಗೆ ಈ ವಾಮನನು ಬಂದು ತನಗೆ ಪಾದತ್ರಯ ಭೂಮಿದಾನ ಇಸಕೊಂಡವನಾದನು, ಅಳೆದು ಕೊಡುವಾಗ್ಯೆ, ಒಂದು ಪಾದವೆ ಭೂಮಿ ಯಾಯಿತು. ಒಂದು ಪಾದವೆ ಆಕಾಶವಾಯಿತು. ಇನ್ನೊಂದು ಪಾದವ ಇಡುವದಕ್ಕೆ ಠಾವು ಇಲ್ಲದೆ ಇರುವದನ್ನು ಕಂಡು, ಬಲಿಯ ತಲೆಯ ಮೇಲೆ ಪಾದವನ್ನು ಇಟ್ಟು, ಅವನನ್ನು ಪಾತಾಳಲೋಕಕ್ಕೆ ಹೋಗ ತುಳಿದನು. ಇದೇ ವಾಮನಾವತಾರ. (ಭಾಗವ. 8. ಸ್ಕಂದ)

6. ಪರಶುರಾಮಾವತಾರ: ಕಾರ್ತವೀರ್ಯಾರ್ಜುನನೆಂಬ ಕ್ಷತ್ರಿಯರಾಜನು ಜಮದಗ್ನಿ ಎಂಬ ಋಷಿಯಲ್ಲಿದ್ದ ಕಾಮಧೇನುವನ್ನು ಕದ್ದುಕೊಂಡು ಹೋದನು. ಇದಕ್ಕೆ ವಿಷ್ಣು ಆ ಋಷಿಯಲ್ಲಿ ಅವತರಿಸಿ ಪರಶುರಾಮ ಎಂಬ ಹೆಸರನ್ನು ಧರಿಸಿಕೊಂಡು ಆ ಆಕಳ ಗಳ್ಳನ ಸಂಗಡ ಯುದ್ಧ ಮಾಡಿ ಅವನನ್ನು ಸಂಹರಿಸಿ ಆಕಳ ತಂದೆಗೆ ತಂದು ಕೊಟ್ಟನು. ಆ ಅರಸಿನ ಕುಮಾರರು ವೈರ ತೀರಿಸಲಿಕ್ಕೆ ಬಂದು ಜಮದಗ್ನಿಯ ತಲೆಯನ್ನು ಹೊಡೆದ್ದ

ಕ್ಕೆ, ಪರಶುರಾಮನು ಈ ಕ್ಷತ್ರಿಯರು ರಾಜನೀತಿ ತಪ್ಪಿ ನಡೆಯುವರು ಇವರನ್ನು ಉಳಿಸಬಾರದೆಂದು ತಿಳಿದು, ಅವರು ಹುಟ್ಟಿ ಹುಟ್ಟಿದ ಹಾಗೆ, ಇಪ್ಪತ್ತೊಂದಾವರ್ತಿ ಸಂಹರಿಸಿ ನಿರ್ವಂಶ ಮಾಡಿ ಬಿಟ್ಟನು. ಅವರ ಭೂಮಿಯನ್ನು ಬ್ರಾಹ್ಮಣರಿಗೆ ದಾನವಾಗಿ ಕೊಟ್ಟನು, (ಪರಶುರಾಮ ಕೈಲಿ ಕೊಡ್ಲಿ ಹಿಡಕೊಂಡರಾಮ.) ಅವನು, ಕೆಟ್ಟ ಕೆಲಸ ಮಾಡಿದ ತನ್ನ ತಾಯಿ ರೇಣುಕೆಯನ್ನು ತನ್ನ ಅಣ್ಣಂದಿರನ್ನು, ತಂದೆಯ ಆಜ್ಞೆಯ ಪ್ರಕಾರ, ಕೊಂದವನಾದನು. (ಭಾಗವ. 9. ಸ್ಕಂದ.)

7. ರಾಮಚಂದ್ರನ ಅವತಾರ: (ರಾಮಾಯಣದ ಪೀಠಿಕೆಯಲ್ಲಿ ವಿವರಿಸಿ ಅದೆ) (ಭಾಗವ. 9. ಸ್ಕಂದ)

8. ಕೃಷ್ಣಾವತಾರ: (ನೋಡು ಭಾಗವತ ತ್ರಿತಿಯಸ್ಕಂದ ಸಂಧಿ. 2.) ಭಾಗವತ. 10. ಸ್ಕಂದ)

9. ತಾರಕಾಸುರನ ಮಕ್ಕಳಾದ ವಿದ್ಯುನ್ಮತಿ ವಿದ್ಯುಜ್ಜಿಹ್ವ ಸುಮಾಲಿ ಈ ಮೂವರು ಬ್ರಹ್ಮನಿಂದ ವರವ ಪಡಕೊಂಡ ಪ್ರಕಾರಕ್ಕೆ, ಆಕಾಶದಲ್ಲಿ ನಿಲ್ಲುವಂಥಾ ಯಾರಿಗೂ ವಶವಾಗದಂಥಾ ತ್ರಿಪುರ ರಚಿಸಿ ಕೊಂಡ ಮೇಲೆ, ಲೋಕವನ್ನೆಲ್ಲಾ ಗೆದ್ದು ಜನರಿಗೆ ಉಪದ್ರ ಮಾಡುತ್ತಿದ್ದರು. ಅವರ ಸಂಹಾರಾರ್ಥವಾಗಿ ಶಿವನು ಅವರ ಸಂಗಡ ಯುದ್ಧ ಮಾಡಿದನು. ಆದರೆ ತ್ರಿಪುರದ ಸ್ತ್ರೀಯರು ಪತಿವ್ರತೆಯರು, ಉಳಿದ ಜನರು ಧರ್ಮದಿಂದ ನಡೆಯುವವರು ಆದಕಾರಣ, ಅವರು ಸೋಲದಕ್ಕೆ, ವಿಷ್ಣು ಬಹಳ ಸುಂದರತ್ವದಿಂದ ಅವರ ಯಜ್ಞಕುಂಡದಲ್ಲಿ ಉತ್ಪನ್ನವಾಗಿ ನಗ್ನಾವಸ್ಥೆಯಿಂದ ನಿಂತು ಆ ಸ್ತ್ರೀಯರ ಪತಿವ್ರತವನ್ನು ಕೆಡಿಸಿವನು. ಮತ್ತು ಅಲ್ಲಿಯ ಜನರಿಗೆಲ್ಲ ಯಜ್ಞ ಮಾಡಬಾರದು, ವೇದವಾಕ್ಯ ಸುಳ್ಳು, ಜೀವಹಿಂಸೆ ಪಾಪ ಎಂಬಂತೆ, ದುರ್ಬೋಧ ಮಾಡಿ ಅವರ ಧರ್ಮ ಕೆಡಿಸಿದನು. ಈ ಪ್ರಕಾರವಾಗಿ ತ್ರಿಪುರದವರು ಬಲಹೀನರಾಗಿ ಶಿವನಿಂದ ಅಪಜಯ ಹೊಂದಿ ನಾಶವಾದರು. ತ್ರಿಪುರ ಸುಟ್ಟು ಹೋಯಿತು. ವಿಷ್ಣು ಮೋಸಮಾಡಿ ಬೌದ್ಧಮತ ದುರ್ಭೋಧ ಮಾಡಿದದರಿಂದ ಇದಕ್ಕೆ ಬೌದ್ಧಾವತಾರವೆಂಬ ಹೆಸರಾಯಿತು. ಭಾಗವ. ೭. ಸ್ಕಂಧ)

10. ಕಲಿಯುಗದ ಅಂತ್ಯಕ್ಕೆ ಸಕಲಜಾತಿ ಸಂಕರವಾಗಿ ಮ್ಲೇಂಛರು ಪ್ರಬಲವಾಗಿ ಮಳೆಬೆಳೆ ಇಲ್ಲದೆ ಕ್ಷಾಮ ಬಿದ್ದು ಬ್ರಾಹ್ಮಣರು ಶೂದ್ರರಂತೆ ಆಚಾರ ಮಾಡುವವರಾಗುವಾಗ್ಯೆ, ವಿಷ್ಣುಶರ್ಮನೆಂಬ ಒಬ್ಬ ಬ್ರಾಹ್ಮಣನು ತನ್ನ ಕುಟುಂಬದ ಸಹಿತವಾಗಿ ತಾಂಬ್ರಪರ್ಣಿ ಎಂಬ ನದೀತೀರದಲ್ಲಿ ಒಂದು ಆಶ್ರಮ ಮಾಡಿಕೊಂಡು ಗುಪ್ತದಿಂದ ತನ್ನ ಆಚರಣೆ ಮಾಡುತ್ತಿರುವನು. ಅವನಿಂದ ವಿಷ್ಣು ಒಂದು ಬಿಳಿಕುದರೆ ಹತ್ತಿಕೊಂಡು ಕತ್ತಿಯನ್ನು ಕೈಲಿ ಹಿಡುಕೊಂಡು ಇರುವಂಥಾ ಕೂಸಿನಂತೆ ಹುಟ್ಟುವನು. ಆಕ್ಷಣವೆ ಅದು ದೊಡ್ಡ ರಾಹುತನಾಗಿ ಮ್ಲೇಂಛರನ್ನು ನಿರ್ಮೂಲ ಮಾಡಿ ಕೃತಯುಗದ ಧರ್ಮವನ್ನು ಸ್ಥಾಪನೆ ಮಾಡುವನು ಇದಕ್ಕೆ ಕಲ್ಕಿಯ ವತಾರವೆಂಬ ಹೆಸರು. (ಭಾಗವ. ೧೦ ಸ್ಕಂದ.

---

486. ರೂಢಿ ಪಾತಾಳಕ್ಕಿ[1]ಳಿಯಲನು
ಮಾಡಿ ಮಿಗೆ ಭಾವವನು ಬಿನ್ನಹ
ಮಾಡಲಜನಿಂಗಡಲಬ[2]ಲ್ಲಿಹನಲ್ಲಿಗೈತಂದೂ
ಬೇಡಿಕೊಂಡಡೆ, ಬಹಳ ಕೃಪೆಯನು
ಮಾಡಿದನಲಾ ಧರೆಗೆ ; ಮಾಯಾ
ಗೂಢಮಾನುಷನಾಗಿ ಮೆರೆದನು ಗೋಕುಲದಲೆಂದಾ.

When Brahma prayed to Vishnoo, he had mercy on the world.

1. ದುಷ್ಟ ಕ್ಷತ್ರಿಯರು ಬಹಳವಾದದರಿಂದ ಭೂಮಿ ತಾಳಲಾರದೆ ಕುಸಿಯಿತು. 2. ವಿಷ್ಣು ಹಾಲಿನ ಸಮುದ್ರವನ್ನು ತನಗೆ ಸಂಸ್ಥಾನ ಮಾಡಿಕೊಂಡನಾದಕಾರಣ ಈ ನಾಮ ಅವನಿಗೆ ಬಂದದೆ. 3. ಭಾಗವತದ ತೃತಯಸ್ಕಂದವನ್ನು ಕೃಷ್ಣನ ಪ್ರಧಾನಿಯಾದ ಉದ್ಧವನು ತನ್ನಲ್ಲಿ ಬಂದ ವಿದುರನಿಗೆ ಹೇಳಿದನು.

487. ಅಜ[1]ನಲಾ ತಾನೆಂತು ಮತ್ತಾ
ಕುಜನರಲಿ ಜನಿ[2]ಸಿದನು ! ಮನಕ
ಕ್ಕಜವಲಾ ! ವಸುದೇವದೇವಕಿಯರಿಗೆ ಶಿಶುವಾಗೀ

Birth of Krishna.

1. ಜನನವಿಲ್ಲದವನು=ವಿಷ್ಣು. 2. ಯಾದವನಾದ ವಸುದೇವನು ಕಂಸಾಸುರನಿಗೆ ಪ್ರಧಾನಿಯಾಗಿದ್ದನು. ತನ್ನ ತಂಗಿಯಾದ ದೇವಕಿಗೆ ಗಂಡನು ಸಿಕ್ಕಲಿಲ್ಲಾದಕಾರಣ, ಕಂಸಾಸುರನು ಆಕೆಯನ್ನು ತನ್ನ ಪ್ರಧಾನಿಗೆ ಮದಿವೆಮಾಡಿಕೊಟ್ಟನು. ಅವರು ಪೂರೊಳಗೆ ಮದಿವೆಯ ಮೆರವಣಿಗೆ ಮಾಡುತ್ತಿರಲಾಗಿ, ನಿನ್ನ ತಂಗಿಯ ಎಂಟನೇ ಗರ್ಭದಲ್ಲಿ ಹುಟ್ಟುವ ಮಗನು ನಿಂನನ್ನು ಕೊಲ್ಲುವನೆಂಬ ಆಕಾಶವಾಣಿ ಯಾಯಿತು. ಅದನ್ನು ಕೇಳಿ ಕಂಸಾಸುರನು ಆಗಲೇ ತಂಗಿಯನ್ನು ಕೊಲ್ಲ ಬಂದನು. ಆದರೆ ವಸುದೇವನು ಈಕೆ ನಿನ್ನ ಕೊಲ್ಲುವದಿಲ್ಲಲ್ಲ, ಈಕೆ ಹಡದ ಮಕ್ಕಳನ್ನೆಲ್ಲಾ ನಿನ್ನ ವಶಕ್ಕೆ ಕೊಡುತ್ತೇನೆ ಬಿಡು ಎಂದು ಹೇಳಿಕೊಂಡದ್ದಕ್ಕೆ; ಅವನು ಒಪ್ಪಿಕೊಂಡು ಅವರನ್ನು ಸೆರೆಯಲ್ಲಿ ಹಾಕಿಸಿದನು. ಆಕೆ ಹಡೆದು ಹಡೆದ ಹಾಗೆ, ವಸುದೇವನು ಕೊಟ್ಟ ಆರು ಮಂದಿ ಮಕ್ಕಳನ್ನು ಕಂಸಾಸುರನು ಕೊಂದನು. ಏಳನೇ ಗರ್ಭ ಹಲವಿಳಿದು ನಾಶವಾಯಿತು. ಎಂಟನೇ ಗರ್ಭದಲ್ಲಿ ಕೃಷ್ಣ ಆರು ತಾಸು ರಾತ್ರಿ ಹುಟ್ಟಿದಾಕ್ಷಣಕ್ಕೆ ನಿನ್ನ ತಂಮ ನಂದಗೋಪನಿರುವ ಗೋಕುಲದಲ್ಲಿ ನನ್ನನ್ನು ಇಟ್ಟು ಅದೇ ತಾಸಿಗೆ ಅವನ ಹೆಂಡತಿ ಹಡೆದಂಥಾ ಹೆಂಣು ಕೂಸು ತಂದು, ಕಂಸಾಸುರನಿಗೆ ಕೊಡಿಸಿ ಎಂದು ತಂದೆಗೆ ಹೇಳಿದನು. ಈ ಪ್ರಕಾರ ಮಾಡಿ ಹೆಂಣು ಕೂಸು ಹುಟ್ಟಿ ಅದೆ ಅಂತ ಕಂಸಾಸುರನಿಗೆ ಕೊಟ್ಟನು. ಇವನು ಅದನ್ನು ಕೊಲ್ಲಲಿಕ್ಕಿರುವಾಗ, ಆಕೆ ನಿನ್ನನ್ನು ಕೊಲ್ಲುವ ವೈರಿ ಗೋಕುಲದಲ್ಲಿ ಬೆಳೆಯುತ್ತಾನೆ, ನಾನು ದುರ್ಗಿಯವತಾರವೆಂದು ಮೇಲಕ್ಕೆ ಹಾರಿ ಹೋದಳು. ನಂದಗೋಪನು ಕಂಸಾಸುರನ ಕಡೆಯಿಂದ ಅಡವಿಯನ್ನು ಗುತ್ತಿಗೆ ಹಿಡಿದು ಗೊಲ್ಲರನ್ನು ಕೂಡಿ ಕೊಂಡು ಅವರಿಗೆ ಹಿರಿಯನಾಗಿ ಗೌಳಿಗನಾಗಿದ್ದನು. ಗೋಕುಲ = ಆಕಳ ಹಿಂಡು.

ವ್ರಜನಿವಾಸವನಹಿತಭಯದಲಿ
ತ್ರಿಜಗದೀಶ್ವರನೈದಿದನು, ಗಡ !
ಭಜಕರಿಗೆ ನಿರ್ಭಯವ ಮಾಳ್ಪರದಾರು ? ಹೇಳೆಂದಾ.

488. ಯಾತರತಿಶಯವೋ ! ದಶಾರ್ಹದ

The attempt to kill Krishna fruitless.

ಜಾತಿ ಶಿಶು ಕೊಲಬಂದಡಿತ್ತನು
ಪೂತನಿಗೆ[1] ಸದುಗತಿಯ, ಸಾಯುಜ್ಯೈಕ್ಯಸಂಪದವಾ !
ಮಾತೆಮಗನಾಕಳಿಸೆ ಭುವನ
ವ್ರಾತವನು ಬಾಯೊಳಗೆ ಕಂಡಳು ;
ಕೌತುಕವನದನೇನನೆಂಬೆನು ! ವಿದುರ ಕೇಳೆಂದಾ!

1. ಕೃಷ್ಣನನ್ನು ಕೊಲ್ಲುವದಕ್ಕೆ ಕಂಸನು ಈ ರಾಕ್ಷಸಿಯನ್ನು ಕಳುಹಿಸಿದನು. ಈಕೆ ಮೊಲೆಗೆ ವಿಷ ಹಚ್ಚಿಕೊಂಡು ಅವನ ತಾಯಂತೆ ಮಾಯಾವೇಷ ಹಾಕಿ ಬಂದು ಕೂಸಿಗೆ ಮೊಲೆ ಕೊಡುತ್ತಿರಲಿಕ್ಕೆ, ಅವನು ರಕ್ತವನ್ನೆಲ್ಲಾ ಹೀರಿಕೊಂಡು ಆಕೆಯ ಜೀವ ಹೋಗುವ ಹಾಗೆ, ಮಾಡಿದನು.

489. ಉರುವಶಿಶುವಿನ ಮೆಲ್ಲಡಿಯ ಕಡೆ

Other attempts to destroy him, also in vain.

ಶರಗು ಸೋಂಕಿದಡಕಟ ! ಬಿದ್ದುದು,
ಮುರಿದು, ತೀವಿದ ಭಂಡಿ, ತಳ ಮೇಲಾಗಿ ಧರಣಿಯಲೀ;
ಗರಿಯ ಪೋಲಂಬರಕೆ ವಾತಾ
ಸುರನು ಕೊಂಡೊಯಿವಾಗಳಹಿತನ
ನೊರಗಿಸಿದನಚ್ಚರಿಯದಂತಿರೆ, ಬಾಲಕೇಳಿಯಲೀ;

1. ಬಾಣತಿ ತನ್ನ ಕೂಸಾದ ಕೃಷ್ಣನ ಸಹಿತ ಕೂತು ಹೋಗುವ ಬಂಡಿಯಲ್ಲಿ ಶಕಟಾಸುರನು ಕಂಸನ ಆಜ್ಞೆಯಿಂದ ಕೃಷ್ಣನನ್ನ ಕೊಲ್ಲಲಿಕ್ಕೆ ಅಡಗಿ ಕೊಂಡಿದ್ದನು. ಅದನ್ನು ಆ ಕೂಸು ತಿಳಿದು ಕಾಲಿಲಿ ಒದ್ದಕ್ಷಣಕ್ಕೆ, ಬಂಡಿ ಮುರಿದು ಶಕಟಾಸುರನು ಸತ್ತನು.

490\. ಕಟ್ಟಿದಳು[1] ಗಡ ! ಮುನಿಮನಂಗಳು
ಮುಟ್ಟಲರಿಯದ ಮಹಿಮನನು ; ಮೈ
ಗೊಟ್ಟು ಸುಳಿದಾಡುತ್ತಿರಲು, ಮರದೊರಳು[2] ಸೋಂಕಿದಡೇ,

ಬೆಟ್ಟದಂದದ ಬಲುಮರಂಗಳು
ಘಟ್ಟುಗೆಡದವು ಧರೆಗೆ ; ವಿಸ್ಮಯ
ಬಟ್ಟುದೀಮೂಲೋಕವದುಭುತ[3]ಶಿಶುಪರಾಕ್ರಮಕೇ !

He drags a wooden mortar to which his mother had bound him.

1\. ಕೃಷ್ಣನು ಬಾಲತ್ವದಿಂದ ಬೆಳೆಯುವಾಗ್ಯೆ, ಮನೆಯೊಳಗೆ ಹಾವಳಿ ಮಾಡಿದರಿಂದ ಸಾಕ ತಾಯಿ ಯಶೋದೆ ಅವನನ್ನು ಮರದ ಒರಳಿಗೆ ಕಟ್ಟಿ ಹಾಕಿದಳು. ಆದರೆ ಅವನು ಅದನ್ನು ಎಳ ಕೊಂಡು ಹೋಗುತ್ತಿದ್ದನು. ಆಗ್ಯೆ ನಾರದನ ಶಾಪದಿಂದ ಕುಬೇರನ ಮಕ್ಕಳಾದ ನಳಕೂಬರರು ಅಲ್ಲಿ ಎರಡು ಮರವಾಗಿ ಹುಟ್ಟಿರುವದರ ಸಂದಿಯಲ್ಲಿ ಆ ಒರಳು ಶಿಕ್ಕು ಎಳದ ಭರಕ್ಕೆ ಆ ಎರಡು ಮರಗಳು ಬಿದ್ದವು. 2. ಪಟ್ಟುದು. 3. ಅದ್ಭುತ.

491\. ಕರುಗಳನು ಕಾವಂದು ಮಿಗೆ ಬಾ
ಯ್ದರದು ನುಂಗಿದಡಹಿಯ[1] ವದನವ
ಹರಿದು ತಜ್ಜಠರಾಂತರಿತಶಿಶುಪಶುಗಳಸುಗಳನೂ

ನೆರೆ ನಿಜಾಪಾಂಗಾಮೃತದ ಮಳೆ
ಗರೆದು ಸಂಜೀವಿಸಿದ ಜಗಧೀ
ಶ್ವರನ ಮಹಿಮೆಯನರಿವರಾರೆಲೆ ವಿದುರ ಕೇಳೆಂದಾ

Krishna saves his fellow-herdsmen from a devouring snake.

1\. ಕೃಷ್ಣ ಆಕಳ ಕಾದುಕೊಳ್ಳುತ್ತಾ ಗೊಲ್ಲರ ಹುಡುಗರ ಸಂಗಡ ಯಮುನಾನದೀ ತೀರದಲ್ಲಿ ಇರುವಾಗ್ಯೆ, ಒಬ್ಬ ರಾಕ್ಷಸನು ಕಂಸನ ಅಪ್ಪಣೆಯಿಂದ ಸರ್ಪರೂಪಾಗಿ ಬಂದು, ತಂನನ್ನು ಆ ಹುಡುಗರನ್ನು ಆಕಳಗಳನ್ನು ನುಂಗಲಾಗಿ, ಅವನನ್ನು ಶೀಳಿ ಆ ವಿಷದಿಂದ ಸತ್ತಿದ್ದವರನ್ನು ಬದುಕಿಸಿದನು. 2. ಕಟಾಕ್ಷ ಎಂಬ ಅಮೃತ.

492. ಬಾಲಕೇಳಿಯಲಾಡುತಿರಲಾ
ಲೀಲೆಯನು ನೆರೆ ನೋಡಲೆಂದು, ಮ
ರಾಳವಾಹನನಡ[1]ಗಿಸಿದಡಾಕರುಗಳನು ಕಾವಾ
ಬಾಲರನು ನಿಜಮಾಯೆಯಲಿ ತ
ಚ್ಛೀಲಗುಣರೂಪಾದಿನಿಜಸಂ
ಮೇಳದಲಿ ಮೋಹಿಸಿದನಜನನು ತತ್ಸ್ವರೂಪದಲೀ.

Brahma tries Krishna.

1. ಯಮುನಾತೀರದಲ್ಲಿ ಒಂದು ದಿವಸ ಕೃಷ್ಣನು ಗೊಲ್ಲರ ಹುಡಗರನ್ನು ಕೂಡಿಕೊಂಡು ಉಣ್ಣುತ್ತಾ ಕೂತು ಅವುಗಳನ್ನು ಮೇಯಲಿಕ್ಕೆ ಬಿಟ್ಟಾಗ್ಯೆ, ಬ್ರಹ್ಮನು ಬಂದು ಅವನ ಲೀಲೆ ಶೋಧಿಸಿ ನೋಡುವದಕ್ಕೆ ಆಕಳ ಹಿಂಡನ್ನು ಅಡಗಿಸಿದನು. ಕೃಷ್ಣ ಹುಡಕಲಿಕ್ಕೆ ಹೋಗುತ್ತಲೆ, ಇತ್ತ ಕಡೆ ಕುಳಿತ ಹುಡಗರನ್ನು ತಪ್ಪಿಸಿದನು. ಆಗ ಇದು ಬ್ರಹ್ಮಕೃತ್ಯವೆಂದು ತಿಳಿದು, ಕೃಷ್ಣನು ಹುಡಗರು ಅವುಗಳು ಇದ್ದಷ್ಟು ರೂಪು ತಾನೆ ಆಗಿ, ಗೋಕುಲಕ್ಕೆ ಹೋಗಿ ಅವರವರ ಮನೆಗಳಲ್ಲಿ ಇದ್ದದ್ದನ್ನು ಬ್ರಹ್ಮ ನೋಡಿ ತಾನು ಅಡಗಿಸಿದ ಹುಡಗರನ್ನು ಆವುಗಳನ್ನು ತಿರಿಗಿ ತಂದು ಕೊಟ್ಟನು.

493. ಬಕ[1]ನ ಬಾಯನು ಸೀಳಿದನು; ವ
ತ್ಸ[2]ಕನನೊರಸಿದನಿಕ್ಕಿದನು ಧೇ
ನು[3]ಕನನಾವೃಷಭ[4]ನನು ವಧಿಸಿದನಾಪ್ರಲಂ[5]ಬಕನಾ
ಸುಕೃತಿಗತಿ ಗೈದಿಸಿದನಮರ
ಪ್ರಕರನುತನಾಕಂಸಭೃತ್ಯ
ಪ್ರಕರವನು ಪರಲೋಕಯಾತ್ರೆಗೆ ಬೀಳುಕೊಡುತಿರ್ದಾ!

Krishna kills different giants, sent by Kansa, to take his life.

1. ಬಕಪಕ್ಷಿಯ ರೂಪದಿಂದ ಕೃಷ್ಣನನ್ನು ಕೊಲ್ಲ ಬಂದ ಒಬ್ಬ ರಾಕ್ಷಸನು. 2. ಕರುವಿನ ರೂಪ ಧರಿಸಿಕೊಂಡು ಆಕಳ ಹಿಂಡಿನಲ್ಲಿ ಕೂಡಿ ಕೃಷ್ಣನನ್ನು ಕೊಲ್ಲಲಿಕ್ಕೆ ಸಮಯ ಸಾಧಿಸುತ್ತಿದ್ದ ಒಬ್ಬ ರಾಕ್ಷಸ. 3. ಕತ್ತೆಯ ರೂಪಾಗಿ ಬಂದು ಕೃಷ್ಣ ಆಕಳ ಮೇಯಿಸುತ್ತಿದ್ದ ಅಡಿವಿಯ ಗಿಡಗಳಲ್ಲಿ ಅಡಗಿಕೊಂಡಿದ್ದು ಅವನನ್ನು ಕೊಲ್ಲಲಿಕ್ಕೆ ಬಂದ ಒಬ್ಬ ರಾಕ್ಷಸ 4. ಗೋಕುಲದ ಜನರನ್ನೆಲ್ಲಾ ಸಂಹರಿಸಲಿಕ್ಕೆ ಎತ್ತಿನ ರೂಪ ತಾಳಿ ಕೊಂಡು ಬಂದ ಒಬ್ಬ ರಾಕ್ಷಸ. 5. ದನ ಕಾಯುವ ಹುಡುಗನ ರೂಪ ಧರಿಸಿಕೊಂಡು ಬಂದು ಕೃಷ್ಣನನ್ನು ತನ್ನ ಬೆನ್ನ ಮೇಲೆ ಹತ್ತಿಸಿ ಕೊಂಡು ಕಂಸಾಸುರನ ಕಡೆಗೆ ವೈಯುತ್ತಿದ್ದ ಒಬ್ಬ ರಾಕ್ಷಸ—ಇವರೆಲ್ಲರೂ ಕಂಸಾಸುರನ ಆಜ್ಞೆಯಂತೆ ಬಂದವರು.

494. ವಿಷದ ಮಡುವನು[1] ಕಲಕಿ, ತಗುಳಿದು

He makes water fit for drinking; quenches a fire in Gókula.

ವಿಷಧರನನಾನದಿಯ ಸಲಿಲವ

ಶಿಶುಪಶುಗಳಿಗೆ ಪಾನಯೋಗ್ಯವ ಮಾಡಿದನು ; ಮಗುಳೇ

ಶ್ವಶನಸಖನಾ[2]ಗೋಕುಲವ ವೇ

ಷ್ಟಿಸಿಯೆ, ಸುಡುತ್ತೈತಂದಡಾಕರು

ಷಿಸಿದನಂಗೈತಳಕೆ ಕುಡಿವನು ಕವಿವ ಕಾಡುರಿಯಾ!

1. ಯಮುನಾನದಿಯ ಒಂದು ಮಡುವಿನಲ್ಲಿ ಕಾಳಿಂಗ ನೆಂಬ ಸರ್ಪ ಮನೆ ಮಾಡಿ ಕೊಂಡು ಇದ್ದದ್ದರಿಂದ ಅದರ ನೀರು ವಿಷವ್ಯಾಪ್ತವಾಯಿತು. ಅದನ್ನು ಕುಡಿದವರು ಸಾಯುತ್ತಿದ್ದರು ಅದಕ್ಕೆ. ಕೃಷ್ಣ ಆ ಮಡುವಿನಲ್ಲಿ ಹೊಕ್ಕು ಆ ಸರ್ಪವನ್ನು ಹಿಡಿದು ಸಮುದ್ರಕ್ಕೆ ಅಟ್ಟಿಸಿ ಆ ನೀರು ಪಾನ ಯೋಗ್ಯ ಮಾಡಿದನು. 2. ಕಾಡಗಿಚ್ಚಿನ ರೂಪಾಗಿ ಕಂಸನ ಕಡೆಯಿಂದ ಬಂದ ಒಬ್ಬ ರಾಕ್ಷಸ.

495. ವಾಸವನವರುಷೋಪಭೋಗದ

He saves Gókula from being flooded away.

ಮೀಸಲನು ತಾನುಂಡು, ಪರ್ವತ

ವೇಷದಲಿ ಕಲ್ಪಾಂತಮೇಘದ ಘಾಳಿಮಳೆಗಳಲೀ

ಘಾಸಿಯಹ ಗೋಕುಲವ ಕರುಣಾ

ರಾಶಿ ಶೈಲಛತ್ರವನು ಹಿಡಿ

ದೇಸುಧನ್ಯರೋ ! ರಕ್ಷೆಯನು ರಚಿಸಿ[1]ದನು ಗೋಕುಲವಾ!

1. ಕೃಷ್ಣ ಪರ್ವತ ರೂಪವಾಗಿ ತನ್ನ ಮೀಸಲನ್ನು ಉಂಡನೆಂದು ಇಂದ್ರನು ಸಿಟ್ಟು ಮಾಡಿ ಗೋಕುಲ ನಾಶನ ಮಾಡಲಿಕ್ಕೆ ದೊಡ್ಡ ಮಳೆ ಕಳುಹಿಸಲಾಗಿ, ಅವನು ಗೋವರ್ಧನ ಎಂಬ ಗುಡ್ಡ ಎತ್ತಿ ಕೊಡೆಯ ಹಾಗೆ ಏಳು ದಿವಸ ಒಂದೇ ಕೈಯಿಂದ ಹಿಡಿದು ಆ ಮಳೆ ಗೋಕುಲದ ಮೇಲೆ ಬೀಳದಂತೆ, ಮಾಡಿದನು.

496. ಕೇಶಿ[1]ಪೆಸರಲಿ ಬಂದದಾತುರ

The giant Késhi killed. Krishna lived 11 years in the house of Nandagópa.

ಗಾಸುರನ ಬಾಯೊಳಗೆ ಭುಜವನು

ಹಾಸಿ ಹರಣದ ಹರುವ ಕಂಡನು ಬಾಲಕೇಳಿಯಲೀ ;

1. ಕುದುರೆಯ ರೂಪಿನಿಂದ ಬಂದ ಒಬ್ಬ ರಾಕ್ಷಸ. 2. ಇಂದ್ರನ ವೈರಿ=ರಾಕ್ಷಸ.

ವಾಸವಾರಿಗಳೈದಿದರು ಕೀ
ನಾಶನಗರವ ಹಲರು ; ನಂದಾ
ವಾಸದಲಿ ಹರಿ ನೂಕಿದನು ಹಂನೊಂದು ವತ್ಸರವಾ.

Krishna, working many miracles, arrives at the palace of Kansa.

497. ಬಳಿಕ ಬಂದಕ್ರೂರನೊಡನಾ
ಜಲಜನಾಭನು ಮಥುರೆಯಲಿ ಮಡಿ
ವಳನ[1] ಮಲಗಿಸಿ ನಿಗುಚಿವನು ಕುಬುಜೆಯ[2] ಕಳೇವರವಾ ;
ಸಲೆ ಸುಧಾಮನ[3] ಕೈಯೊಳಾಪೂ
ಗಳನು ಕೊಂಡಾತಂಗಭೀಷ್ಟವ
ಸಲಿಸಿ ಮುರಿದನು[4] ಭಾರಿಧನುವನು ; ವಿದುರ ! ಕೇಳೆಂದಾ

1. ಕೃಷ್ಣ ವಸುದೇವನಲ್ಲಿ ಹುಟ್ಟಿ ಗೋಕುಲದಲ್ಲಿ ಬೆಳೆಯುತ್ತಾನೆಂಬದನ್ನು ಕಂಸನು ತಿಳಿದು ಅವನನ್ನು ತನ್ನ ಊರಿಗೆ ಕರಸಿಕೊಂಡು ಕೊಲ್ಲಬೇಕೆಂತ ತಂನ ಪ್ರಧಾನಿಯಾದ ಅಕ್ರೂರನನ್ನು ಕಳುಹಿಸಿ ಬಿಲ್ಲ ಹಬ್ಬಕ್ಕೆ ಅಂದರೆ ಮಹರ್ನವಮಿಗೆ ಕರಸಿದನು. ಕೃಷ್ಣ ಮಥುರಾಪಟ್ಟಣಕ್ಕೆ ಬಂದು ಕಂಸಾಸುರನ ಅಗಸನನ್ನು ಕಂಡು ಅರಿವಿ ಬೇಡಿದ್ದಕ್ಕೆ ಅರಸಿಗೆ ವೈಯ ತಕ್ಕಂಥಾವು ನಿನಗೆ ಕೊಡುವದಿಲ್ಲ ಅಂದದರಿಂದ, ಅವನನ್ನು ಸಂಹಾರ ಮಾಡಿ ವಸ್ತ್ರ ತೆಗದು ಹಾಕಿ ಕೊಂಡನು. 2. ಈಕೆ ಗಿಡ್ಡ ಬಹಳ ಕುರೂಪಿ. ಮಥುರೆಯಲ್ಲಿ ಗಂಧ ಮಾರುತ್ತಿದ್ದಳು. ಕೃಷ್ಣ ಬೇಡಿದ್ದಕ್ಕೆ, ಗಂಧ ಕೊಟ್ಟು ಹಚ್ಚಿದದರಿಂದ, ಆಕೆಯನ್ನು ರೂಪವಂತಿ ಮಾಡಿದನು. 3. ಬಬ್ಬ ಹೂಗಾರ ಮೊಕ್ಷವನ್ನು ಬಯಸಿದನು. 4. ಹೀಗೆ ದಾರಿಯಲ್ಲಿ ಮಾಡುತ್ತಾ ಅರಮನೆಗೆ ಹೋಗುವಾಗ್ಯೆ, ಅದರ ಬಾಗಿಲಲ್ಲಿ ಕಂಸನು ಬಿಲ್ಲು ಬಿಡಿಸಿ ಇದು ಎತ್ತಿ ಬಳಗೆ ಬರುವಂತೆ, ಕೃಷ್ಣನಿಗೆ ತಿಳಿಸಿರಿ, ಎತ್ತುವ ಕಾಲಕ್ಕೆ, ಅವನ ಮೈಮೇಲೆ ಹೋಗಿ ಕೊಲ್ಲಿರಿ ಎಂದು ಅಪ್ಪಣೆ ಮಾಡಿ ತನ್ನ ಆಪ್ತರನ್ನು ಅಲ್ಲಿ ಇಟ್ಟಿದ್ದನು. ಆದರೆ ಕೃಷ್ಣನು ಈ ಜನರನ್ನು ಸಂಹರಿಸಿ ಆ ಬಿಲ್ಲನ್ನು ಮುರಿದು ಹಾಕಿದನು.

He kills Kansa; liberates his parents.

498. ಕೊಡಹಿ ಬಿಸುಟು ಮದೇಭದಸುವನು
ಮಡುಹಿದನು ; ಮಲ್ಲರನು[1] ಮಾವನ
ಕೆಡಹಿ ತುಳಿದನು[2] ಗತಶರೀರವನೆಳದು ಕಳನೊಳಗೇ ;

1. ಮದದಾನೆಯನ್ನು ಮಲ್ಲರನ್ನು ಕಂಸಾಸುರನು ಕೃಷ್ಣನನ್ನು ಕೊಲ್ಲ ಕಳುಹಿಸಿದ್ದನು. 2. ಆ ಮೇಲೆ ಅರಮನೆಯೊಳಗೆ ಹೊಕ್ಕು ಉಪ್ಪರಿಗೆಯ ಮೇಲೆ ಕುಳಿತಂಥಾ ಕಂಸನನ್ನು ಕೆಳಗೆ ಎಳೆದು ಕೊಂದು ಅವನ ಹೆಣ ಎಲ್ಲಾ ಜನರು ನೋಡುವಂತೆ, ರಣಭೂಮಿಯಲ್ಲಿ ಎಳದಾಡಿದನು.

ಕಡಿಸಿದನು ಸಂಕಲೆಯನಂದಾ
ಕಡು ನಿರೋಧದ ತಾಯಿತಂದೆಯ
ರಡಿಗೆ ಬಂದೆರಗಿದನು ಭುವನಾಧೀಶನೊಲವಿನಲೀ

499. ಕಾಶಿಸಾಂದೀಪನಲಿ ವಿದ್ಯಾ
Krishna's studies in Benares. ಭ್ಯಾಸದಲಿ ಗುರುದಕ್ಷಣೆಯ ಕೊಡ
ಲೋಸುಗಂತಕಪುರಕೆ ಬಿಜಯಂಗೈದು ಗುರುಸುತನಾ
ಈಶಿ ತಂದಿತ್ತನುದ್ವಿಜೋತ್ತಮ
ನಾಸರನು ಮಾಣಿಸಿದ ; ಕರುಣಾ
ರಾಶಿಯೊಲಮೆಯನರಿವರಾರೆಲೆ ! ವಿದುರ ! ಕೇಳೆಂದಾ !

1. ಆ ಮಥುರ ಪಟ್ಟಣದಲ್ಲಿ ತನ್ನ ತಾಯಿ ತಂದೆಯನ್ನು ಸಕಲ ಯಾದವರನ್ನು ಇಟ್ಟು, ತಾನು ವಿದ್ಯಾಭ್ಯಾಸ ಮಾಡಲಿಕ್ಕೆ ಕಾಸಿಗೆ ಹೋದನು. ಅಲ್ಲಿ ಸಾಂದೀಪನೆಂಬ ಬ್ರಾಹ್ಮಣನಲ್ಲಿ ಸಕಲ ವಿದ್ಯ ಕಲಿತು ಬರುವಾಗ್ಯೆ, ಆ ಬ್ರಾಹ್ಮಣನು ತನ್ನ ಸತ್ತ ಮಗನನ್ನು ಗುರು ದಕ್ಷಣೆಯಾಗಿ ತಂದು ಕೊಡು ಎಂದು ಹೇಳಿದ ಪ್ರಕಾರಕ್ಕೆ, ಮಾಡಿ ತಿರಿಗಿ ಮಥುರೆಗೆ ಬಂದನು.

500. ಬಲುಮಗಧಯವನೇಶ್ವರರ ಬಲ
He vanquishes a great many giants. ಜಲಧಿಯನು ಬಹಳಾಸ್ತ್ರವಡಬಾ
ನಳನ ಮುಖದಲಿ ಹೋಮಿಸಿದನೀಭೂಮಿ ಭಾರವನೂ
ಕಳೆಯಲೋಸುಗ, ಮುರನ ನರಕನ
ತಲೆಯ ನೆರೆ ಚೆಂಡಾಡಿ ಕಾಲನ
ನಿಳಯವನು ಕಾಣಿಸಿದನಗಣಿತದೈತ್ಯದಾನವರಾ.

1. ಕಂಸಾಸುರನ ಇಬ್ಬರು ಹೆಂಡರು ಮಗಧ ದೇಶದ ಅರಸನ ಮಕ್ಕಳು. ಅವರು ತಮ್ಮ ಗಂಡನನ್ನು ಕೃಷ್ಣನು ಕೊಂದು ತಮ್ಮ ರಾಜ್ಯವಾಳುತ್ತಾನೆಂದು ತಂದೆಯ ಮುಂದೆ ದೂರು ಹೇಳಿದರು. ಅವನು ಯವನರ ಬಲ ಸಹಾಯ ಮಾಡಿ ಕೊಂಡು ಬಂದು ಮಥುರೆಗೆ ಮುತ್ತಿಗೆ ಹಾಕಿದನು. ಕೃಷ್ಣನು ಅವರ ಸೈನ್ಯವನ್ನು ಸಂಹರಿಸಿ ಜಡಿಸಿದಾಗ್ಯೂ, ಅವರು ಬಿಡದೆ, ಮೇಲೆ ಮೇಲೆ ಹದಿನೆಂಟು ಸಾರಿ ಬಂದು ಊರ ಹಾಳ ಮಾಡಿ ಉಪದ್ರ ಕೊಡುತ್ತಿದ್ದದರಿಂದ, ಅವನು ಸಮುದ್ರದಲ್ಲಿ ದ್ವಾರಕಾ ಪಟ್ಟಣವನ್ನು ನಿರ್ಮಾಣ ಮಾಡಿ ಅಲ್ಲಿಗೆ ತನ್ನ ಯಾದವರ ಸಂಗಡ ಹೋಗಿ ನಿಂತನು. ಆಯುಧವೆಂಬ ಬೆಂಕಿ ಮುಚ್ಚಿ ಬಲವೆಂಬ ಸಮುದ್ರವನ್ನು ಸುಟ್ಟನು.

501. ಸಮರಮುಖದಲಿ ಹಂಸಡಿಭಿಕರ[1]
Krishna marries Rugmini. ಸಮರಲೋಕವನೈದಿಸಿದನಾ
ರಮಣಿರುಕ್ಮಿಣಿದೇವಿಯರ[2] ವೈವಾಹಕದಲಂದೂ

ಕುಮತಿಚೈದ್ಯಜರಾಸುತಾದಿಗ
ಳಮಿತಚಾತುರ್ಬಲವನೊಡದಾ
ಕ್ರಮಿಸಿ ತಂದನು ಪುರಕೆ ಪರಮೋತ್ಸವದ ವಿಭವದಲೀ.

1. ಈ ಇಬ್ಬರು ರಾಕ್ಷಸರಾಜರು ತಾವು ಯಜ್ಞ ಮಾಡುತ್ತೇವೆ, ತಮಗೆ ಬೇಕಾದಷ್ಟು ದ್ರವ್ಯ ಕೊಡು! ಇಲ್ಲದಿದ್ದರೆ, ನಮ್ಮ ಸಂಗಡ ಯುದ್ಧ ಮಾಡು! ಎಂದು ಹೇಳಿ ಕಳುಹಿಸಿದ್ದಕ್ಕೆ ಕೃಷ್ಣ ತಾನು ಹೋಗಿ ಅವರನ್ನು ಸಂಹರಿಸಿ ಬಂದನು. 2. ವಿದರ್ಭ ದೇಶದ ಅರಸನು ತನ್ನ ಮಗಳಾದ ರುಕ್ಮಿಣಿಯನ್ನು ಕೃಷ್ಣನಿಗೆ ಮದಿವೆ ಮಾಡಿ ಕೊಡುತ್ತೇನಂದರೆ, ಇವನ ಮಗನಾದ ರುಕುಮನು ಅದಕ್ಕೆ ಅಡ್ಡಿ ಮಾಡಿ ಚೈದ್ಯ ದೇಶದ ಅರಸ ಶಿಶುಪಾಲನಿಗೆ ಕೊಡುತ್ತೇನೆಂದು ಅವನನ್ನು ಕರಿಸಿ ಕೊಂಡು ಲಗ್ನ ಮಾಡುವಷ್ಟರಲ್ಲಿ, ರುಕ್ಮಿಣಿ ಅವನನ್ನು ವಲ್ಲೆನೆಂದು ಗುಪ್ತದಿಂದ ಕೃಷ್ಣನಿಗೆ ಹೇಳಿ ಕಳುಹಿಸಿದ ಕಾರಣ, ಅವನು ಅಲ್ಲಿಗೆ ಹೋಗಿ ಅವರನ್ನು ಗೆದ್ದು ಆಕೆಯನ್ನು ತನ್ನ ಪಟ್ಟಣಕ್ಕೆ ತಕ್ಕೊಂಡು ಬಂದನು.

502. ಸುರರ ಜನನಿಗೆ ಕುಂಡಲವನಿ[1]
Krishna gives his wife the Párigáta tree. ತ್ತರಿಸಿಗಾಸುರಲೋಕಲಕ್ಷ್ಮಿಯ
ಪರಮವಿಭವವ ತೋರುತಾ ನಂದನವನಾಂತರದಾ

ಸುರತರುವನಾಸತಿಯ ಕೈಯಲಿ
ಸುರಪನನು ಸುರಲೋಕಪಾಲರ
ಪರಿಭವಿಸಿ ಸುರಲೋಕವಂದ್ಯನು ತಂದನೀಧರೆಗೇ[2].

1. ಅದನ್ನು ಕದ್ದು ತಂದಿದ್ದ ನರಕಾಸುರನಿಂದ ಕಸಕೊಂಡು ಕೃಷ್ಣನು ತಿರಿಗಿ ಕೊಟ್ಟನು. 2. ತನ್ನ ಹೆಂಡತಿ ಸತ್ಯಭಾಮೆ ಪಾರಿಜಾತವೆಂಬ ಸುರತರುವನ್ನು ಸುರಲೋಕದಲ್ಲಿ ಕಂಡು ತನ್ನ ವೂರಿಗೆ ವೈಯ ಬೇಕೆಂದು ಬೇಡಿಕೊಂಡದಕ್ಕೆ.

503. ಅಸುರನರಮನೆಯೊಳಗೆ ಶೆರೆಯಲಿ
ಬಸವಳಿವ ವಾಮಾಕ್ಷಿಯರ ಷೋ
ಡಶಸಹಸ್ರದ ಪಾಣಿಗಳನೊಂದೇ ಮುಹೂರ್ತದಲೀ
ವಸದು ಸಂಗ್ರಹಿಸಿದನು[1] ಬಹುವಿಧ
ಹೊಸಪರಿಯ ತಾವತ್ಸ್ವರೂಪವ[2]
ನಸುರಮರ್ದನನಾಂತು ಮೆರೆದನು ಧರೆಗೆ ಕೌತುಕವಾ.

He liberates and marries 16,000 women.

1. ಕೈಗಳನ್ನು ಹಿಡಿದನು=ಮದುವೆಯಾದನು. ಈ ಸ್ತ್ರೀಯರನ್ನು ನರಕಾಸುರನು ತಾನು ಮದುವೆ ಮಾಡಿಕೊಳ್ಳ ಬೇಕೆಂದು ಹಿಡತರಿಸಿ ಹಾಕಿದ್ದನು. 2. ಒಬ್ಬಾಕೆಗೆ ಒಬ್ಬನಂತೆ ಆಗಿದ್ದನು.

504. ಬಳಿಕ ನಿನ್ನೊಡ ಹುಟ್ಟಿದರ ಮ
ಕ್ಕಳ ಮಹಾಹವದೆರಡು ಪಕ್ಷವ
ಬಲಿದು ಕಾದಲು ಬಂದ ರಾಯರ ಸಾಗರೋಪಮದಾ
ಬಲದ ಪದಘಟ್ಟಣೆಗೆ ನೆಗ್ಗಿದು
ದಿಳೆ, ಕುರುಕ್ಷೇತ್ರದಲಿ ಸೇನಾ
ಜಲಧಿ ಬಿಟ್ಟುದು ಭೀಷ್ಮಕರ್ನದ್ರೋಣಸೈಂಧವರಾ.

He saves the Pandavas by destroying the Kauravas" (vide Mahabhar.)

505. ಬಿಟ್ಟು ದೀಚೆಯುಳಿವರ ಬಲವಾ
ದೃಷ್ಟದ್ಯುಮ್ನಸೃಂಜಯಾದ್ಯ
ಸೃಷ್ಟಿಪಾಲರ ಸನ್ನೆಯಲಿ ಕೈಮಾಡಿ ಬಲವೆರಡೂ
ಘಟ್ಟುಗೆಡದುದು, ಕೆಡದುದಗಣಿತ
ಪಟ್ಟಬದ್ಧರು ಭೂಮಿಭಾರವ
ಕುಟ್ಟಿಕಳಚಿದನಿಂತು ಪರಹಸ್ತದಲಿ ಕೇಳೆಂದಾ !

506. ತೀದುದದು ಹದಿನೆಂಟುದಿನದೊಳ
ಗಾದುರಾತ್ಮರ ಸಮರ ; ಕೌರವ
ಮೇದಿನೀಶನ ಕಂಡು ಪರಿಣಾಮಿಸಿದನಸುರಾರೀ ;
ತೀದುದೆರಡರ ಭಾರ[1]ವಿನ್ನೀ
ಯಾದವಾನ್ವಯಜಲಧಿ ಮೇರೆಯ
ಮೋದುತಿದೆ ಮುಝುಭಾಪೆನುತ ಮನದೊಳಗೆ ಚಿಂತಿಸಿದಾ

1. ಕಂಸನನ್ನು ಕೊಲ್ಲುವದೊಂದು, ಕೌರವರನ್ನು ಸಂಹರಿಸಿ ಪಾಂಡವರನ್ನು ಪಾಲಿಸುವದೊಂದು, ಕೆಟ್ಟು ಹೋಗಿದ್ದ ಯಾದವ ವಂಶ ನಿರ್ಮೂಲ ಮಾಡುವದೊಂದು, ಈ ಮೂರು ಕಾರ್ಯಗಳು ಕೃಷ್ಣಾವತಾರದಲ್ಲಿ ನಡೆಯು ತಕ್ಕದ್ದು.

507. ಗೆಲಲರಿದು ಲೋಗರಿಗೆ ತನ್ನಯ
He sets the fire of the curse of the brahmans to the hay of the Yadavas.
ಕುಲವಿದನು ಪರಮೇಷ್ಟ್ಯಗಂತಃ
ಕಲಹದಲಿ ನಿರ್ಣಯಿಸ ಬೇಕಿದನೆಂದು ನಿಶ್ಚೈಸೀ,
ಜಲಜನಾಭನು ವಿಪ್ರಶಾಪಾ
ನಳನನಿಟ್ಟನು ಕುಲದ ಕರಡದ
ಬಳಬೆಯಲಿ, ಬಳಿಕೇನನೆಂಜಿನು ? ವಿದುರ ! ಕೇಳೆಂದಾ !

508. ತುರಗಮೇಧತ್ರಯವ ಪಾಂಡವ
His joy at the prosperity of the Pándavas.
ಧರಣಿಪನ ಕೈಯಿಂದ ಮಾಡಿಸಿ,
ಶರಣಜನಸಂಸಾರಿಕನು ನಿಜಭೃತ್ಯವರ್ಗದಲೀ
ಮೆರದುನಿಜಕಾರುಣ್ಯವನು ಪತಿ
ಕರಿಸಿ ಕುಂತೀಸುತರ ರಾಜ್ಯದ
ಸಿರಿಯ ಸಂಪನ್ನತೆಗೆ ಸಂತೋಷಿಸಿದ ನಸುರಾರೀ.

509. ರವಿಸುತಿರಲಿಂತಾ[1]ತ್ಮತಂತ್ರನ

The gods request Krishna, to return.

ನಮರಲೋಕಾಧೀಶರೆನಿಪಾ
ಕಮಲಭವಭವಮುಖ್ಯರೈತಂದರ್ಥಿಸಿದಡೊಲಿದೂ
ಮಮತೆ ಜಾರಿದುದೇನನೆಂಬೆನು ?
ಕುಮತಿ ತಾನೆಂತರಿವೆನೆಂತಪ
ಗಮಿತವಾದುದು ಕರುಣಿಗಳ ದಾತಾ[2]ರನೊಲವಿನಲೀ.

1. ಯಾರ ಹಂಗಿಲ್ಲದವನು=ಕೃಷ್ಣ. ಬ್ರಹ್ಮ ಶಿವ ಮೊದಲಾದವರು ಬಂದು ನೀನು ನಮ್ಮಲ್ಲಿ ತಿರಿಗಿ ಬರಬೇಕು, ನಿನ್ನ ಕಾರ್ಯ ತೀರಿತು ಎಂದು ಕೃಷ್ಣನಿಗೆ ಬೇಡಿಕೊಂಡರು.
2. ಅನ್ವಯು; ದಾತಾರನ ಒಲವಿನಲ್ಲಿ ಕುಮತಿ ಅಪರಿಮಿತವಾದದ್ದು.

510. ವಿಪ್ರಶಾಪವಿಮೋಹಿತರು ಬಳಿ

The destruction of the Yadavas. (vide Mahábhárata.)

ಕಾಪ್ರಪಾತಕಕೈದಿದರು ವೃ
ಷ್ಣಿಪ್ರವೀರರುಶಾಪಮೋಕ್ಷಾರ್ಥಿಗಳು ರಥಗಳಲೀ ;
ವಿಪ್ರರಿಷಿಪಿತೃದೇವರಿಷಿಗಳು
ಸುಪ್ರಸನ್ನರೆನಲ್ಕೆ, ದಣಿದುದು
ಗೋಪ್ರದಾನಸುವರ್ನ ಕನ್ಯಾ ಭೂಮಿ ದಾನದಲೀ.

511. ಬಳಿಕ ಮದಿರಾಪಾನಮದದಿಂ
ಪಲರು ದುರುವಚನಂಗಳಲಿ ತಂ
ಮೊಳಗೆ ಬೈದಾಡಿದರು, ಹೊಯಿದಾಡಿದರು ಮುಷ್ಟಿಯಲೀ ;
ಬಲಭುಜರು ಕರಿತುರಗರಥಸಂ
ಕುಲವನೇರಿದರರಿದರಸ್ತ್ರಾ
ವಳಿ ಸವೆಯಲೆರಕಿಗಳಲಿಟ್ಟಾಡಿದರು, ಕೈದಣಿಯೇ.

512. ಜಗದುದ[1]ರನಾಯಾದವರ ಕಾ
ಳಗವನೀಕ್ಷಿಸಿ ಮನದೊಳಗೆ ನಸು
ನಗುತ ತನ್ನಯ ಯೋಗಮಾಯಿಗೆ ಮೆಚ್ಚಿ ತಲೆದೂಗೀ

ಬಗೆದು ಕುಲಸಂಹಾರವನು ಮಾ
ಯಿಗಳ ದೇ[2]ವನು ಕುಳ್ಳಿದನು ಕಾ
ಲ್ಮೊಗವ ತೊಳದಶ್ವತ್ಥಮೂಲನಿವೇಶನಸ್ಥಿತಿಯಾ.

1. ಲೋಕವನ್ನು ಹೊಟ್ಟೆಯಲ್ಲಿ ಇಟ್ಟುಕೊಂಡವನು=ಕೃಷ್ಣನು. 2. ಕೃಷ್ಣ ಅವುಗಳಿಗೆ ಅಧಿಪತಿ.

513. ಆ ಸರಸ್ವತಿ ಯೆಂಬ ನದಿಯ ವಿ
ದೇಶವಿಮಲಸ್ಥಳದೊಳಗೆ ಪದು
ಮಾಸನವನಳವಡಿಸಿ ಬಾಲಾಶ್ವತ್ಥಮೂಲದಲೀ
ಭಾಸುರಾರ್ಕಸಹಸ್ರ ಕೋಟಿಗೆ
ಮೀಸಲಳಿಯದ ಬಹಳ ತೇಜದ
ವಾಸುದೇವನ ದಿವ್ಯಮೂರ್ತಿಯ ಕಂಡೆ ತಾನೆಂದಾ.

514. ಇಂತಿರುತ್ತಿರೆ, ಬಂದನಲ್ಲಿಗೆ
ಪಿಂತೆ ಮುನಿಶಾಪೋಕ್ತಿಸೂಚಿತ
ದಿಂ ತನಗೆ ದೊರಕೊಂಡ ಮುಸಲದ ಶಕಲದಿಷುಗೈದೂ
ಸಂತತಾರಣ್ಯವನು ಚರಿಪ ದು
ರಂತವಿಕ್ರಮವ್ಯಾಧನಾಹರಿ
ಯಂತಿಕಕೆ ಮೃಗಯಾವ್ಯಸನದಲಿ ; ವಿದುರ ! ಕೇಳೆಂದಾ !

515. ತೋರಿದುದು ಹರಿಪಾದ ಮೊಲನಾ
Death of Krishna ಕಾರದಲಿ ; ಯವನೆಚ್ಚನಾನಿಶಿ
ತೋರುಬಾಣದಲಾನೆವದಲಂದೈದೆ ನಿಜಗತಿಗೇ
ಶ್ರೀರಮಣನೈದಿದನು ಮನುಜ ಶ
ರೀರವನು ಬಿಸುಟಿಂತು ಹರಿಯವ
ತಾರಲೀಲಾಮಾತ್ರವಿದು ಯೆಲೆ ವಿದುರ ! ಕೇಳೆಂದಾ !

## VÉDANTA.

## ಅನುಭವಾಮೃತ.

(ಭಾಮಿನಿಷಟ್ಪದಿ.)

### ಪೀಠಿಕೆ.

ವೇದಾಂತ ಅಂದರೆ ವೇದಗಳ ಅಂತವನ್ನು, ಅಥವಾ ಅವುಗಳ ಮುಖ್ಯಾಭಿಪ್ರಾಯವನ್ನು ತಿಳಿಸುವಂಥಾ ಬೋಧನೆ. ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣ ವೇದ ಎಂಬೀ ನಾಲ್ಕು ವೇದಗಳ ಒಂದೊಂದಕ್ಕೆ ಸಂಹಿತೆ, ಬ್ರಾಹ್ಮಣ (ಶೃತಿ), ಸೂತ್ರ ಎಂಬೀ ಮೂರು ಭಾಗಗಳು ಅವೆ.

ಸಂಹಿತೆಗಳಲ್ಲಿ ವಿಶೇಷವಾಗಿ ನಾನಾವಿಧದ ಬಲಿಗಳನ್ನು ಅರ್ಪಿಸುವಾಗ, ಹಾಡತಕ್ಕ ಗೀತಗಳು ಅವೆ. ಅವು ಮೊದಲು ಹುಟ್ಟಿದವು. ಕಾಲಾಂತರದ ಮೇಲೆ, ಅವು ನೆಟ್ಟಗೆ ತಿಳಿಯಲಿಲ್ಲದ ಕಾರಣ, ಅವೆನ್ನ ವಿವರಿಸಲಿಕ್ಕೆ ವ್ಯಾಖ್ಯಾನಗಳು ಬೇಕಾಗಿದ್ದವು. ಅವನ್ನು ರಚಿಸಿ ಬ್ರಾಹ್ಮಣ ಎಂಬ ಹೆಸರನ್ನು ಅವಕ್ಕೆ ಕೊಟ್ಟರು. ಬ್ರಾಹ್ಮಣಗಳೊಳಗಣ ಉಪನಿಷದ ಎಂಬ ಭಾಗಗಳಲ್ಲಿ ಆರು ದರ್ಶನಗಳ ಬೋಧನೆ ಸಾರಾಂಶವಾಗಿ ಬಂದದೆ. ಈ ಪ್ರಕಾರ ಗ್ರಂಥಗಳು ಬಹಳವಾಗಿ ಎಲ್ಲಾ ಓದಿ ತಿಳಿಯಲಿಕ್ಕೆ ಕಠಿಣವಾದದರಿಂದ, ಅಷ್ಟು ಗ್ರಂಥಗಳ ಸಾರವನ್ನು ಸಂಕ್ಷೇಪವಾಗಿ ತಿಳಿಸುವಂಥಾ ಸೂತ್ರಗಳನ್ನು ಮಾಡಿದರು.

1. ರುಗ್ವೇದದ ಸಂಹಿತೆಯಲ್ಲಿರುವ ಗೀತಗಳಲ್ಲಿ ವಿಶೇಷವಾಗಿ ಅಗ್ನಿಯ ಇಂದ್ರನ ಅಥವಾ ಸೂರ್ಯನ ಮತ್ತು ವರುಣನ ಸ್ತೋತ್ರಗಳಿವೆ, ಇವರೇ ವೇದಗಳಲ್ಲಿ ಮುಖ್ಯ ದೇವತೆಗಳೆಂಬಂತೆ ತೋರುತ್ತದೆ. ಇದಲ್ಲದೆ ಸೋಮ ಬಲಿಯ ವಿವರವು ಈ ವೇದದಲ್ಲಿ ಅದೆ. ಸೋಮನ ಬಳ್ಳಿ ತಂದು ಅಪೂಟವಾಗಿ ಕುಟ್ಟಿ ರಸ ತೆಗದು ಬೆಂಕಿಯಲ್ಲಿ ಹಾಕುವದು, ಉಳಿದದ್ದು ಪಾನಮಾಡುವದು. ಇದೆ ಸೋಮ ಬಲಿ. ಈ ರಸ ಕುಡಿದರೆ, ಅಮಲಾಗುವದು.

2. ಯಜುರ್ವೇದದಲ್ಲಿ ಸರ್ವ ಬಲಿಗಳ ವಿವರಗಳಿವೆ. ಆದರೆ ಅದರ ಪ್ರಥಮ ಭಾಗವಾದ ಕೃಷ್ಣಯಜುರ್ವೇದದಲ್ಲಿ ಆ ವಿವರಗಳು ಕ್ರಮವಿಲ್ಲದೆ ಹೇಳಿಯುವೆ; ದ್ವಿತಿಯ ಭಾಗವಾದ ಶುಕ್ಲಯಜುರ್ವೇದದಲ್ಲಿ ಅವು ಕ್ರಮವಾಗಿ ಹೇಳಿಯುವೆ. ಹ್ಯಾಗಂದರೆ ಅಮಾಸೆಗೆ ಹುಣ್ಣಿವಿಗೆ ಮಾಡತಕ್ಕ ಬಲಿಯು, ದಿನದಿನಕ್ಕೆ ಪ್ರಾತಃಕಾಲದಲ್ಲಿ ಸಾಯಂಕಾಲದಲ್ಲಿ ಮಾಡತಕ್ಕ ಅಗ್ನಿ ಬಲಿಯು, ಅಶ್ವಮೇಧ, ಪುರುಷಮೇಧ ಪಿತೃಮೇಧ ಮುಂತಾದ ಬಲಿಗಳ ವಿವರಗಳು ಅದರಲ್ಲಿ ಬಂದವೆ.

3. ಸಾಮವೇದದ ಸಂಹಿತೆಯಲ್ಲಿ ಸೋಮ ಬಲಿಯನ್ನು ಅರ್ಪಿಸುವಾಗ, ಹಾಡತಕ್ಕ ಗೀತಗಳು ಮಾತ್ರ ಅವೆ. ಅವನ್ನು ರುಗ್ವೇದದ ಸಂಹಿತೆಯಿಂದ ಆರಸಿಕೊಂಡು ಇದರಲ್ಲಿ ಶೇರಿಸಿದರು.

4. ಅಥರ್ವಣವೇದದ ಸಂಹಿತೆಯಲ್ಲಿರುವ ಗೀತಗಳ ಸಾರಾಂಶ ಯಾವದಂದರೆ: ವೈರಿಗಳನ್ನು ಶಪಿಸುವದು; ದೆವ್ವಗಳನ್ನೂ ಭೂತಗಳನ್ನೂ ಬಿಡಿಸುವದು ರೋಗಾದಿಗಳು ಬಾರದಂತೆ

ಮಂತ್ರ ಮಾಡುವದು ಮುಂತಾದ್ದು. ಆ ಮೊದಲನೇ ಮೂರು ವೇದಗಳು ಮುಖ್ಯ. ಈ ಕಡೇ ವೇದ ಪೂರ್ವದಲ್ಲಿ ವೇದದ ಲೆಖ್ಖದೊಳಗೆ ಇರಲಿಲ್ಲ.

ಇಂದ್ರನು (ಅಂದರೆ ತೇಜೋಮಯವಾದ ಆಕಾಶ,) ಸೂರ್ಯ, ವರುಣನು (ಅಂದರೆ ನೀರು, ಗಾಳಿ,) ಅಗ್ನಿ (ಅಂದರೆ ಎಲ್ಲಾ ಲಯ ಮಾಡುವ ಬೆಂಕಿ,) ಇವರು ವೇದಗಳಲ್ಲಿ ಮುಖ್ಯ ದೇವತೆಗಳೆಂದು ತೋರುತ್ತಾರೆ. ಕಾಲಾಂತರದಲ್ಲಿ ಈ ಮೂವರು ಸೃಷ್ಟಿ ಸ್ಥಿತಿ ಲಯಕ್ಕೆ ನೇಮಕವಾಗಿರುವ ಬ್ರಹ್ಮ ವಿಷ್ಣು ಶಿವಗಳಾದರು. ಹೀಗಿರಲಾಗಿ ಈ ದೇಶದವರು ನಿರ್ಮಾಣಕನಾದ ದೇವರಿಗಲ್ಲ, ನಿರ್ಮಾಣವಾದ ಪಂಚ ಭೂತಗಳಿಗೆ ನಡಕೊಳ್ಳುವವರು ಆಗಿರುತ್ತಾರೆ.

ಈ ವೇದಗಳನ್ನು ಆಧಾರ ಮಾಡಿಕೊಳ್ಳುವ ಆರು ದರ್ಶನಗಳು ಯಾವವಂದರೆ. ೧. ಕಪಿಲಮುನಿ ಬೋಧಿಸಿದ ಸಾಂಖ್ಯ. ೨. ಪತಂಜಲಿಮುನಿ ರಚಿಸಿದ ಯೋಗದರ್ಶನ. ೩. ಗೌತಮ ಮುನಿ ರಚಿಸಿದ ನ್ಯಾಯ. ೪. ಕಣಾದಮುನಿ ಹೇಳಿದ ವೈಶೇಷಿಕ. ೫. ಪುಣ್ಯ ಬರುವ ಕರ್ಮಗಳನ್ನು ವಿವರಿಸುವಂಥಾ ಪೂರ್ವ ಮೀಮಾಂಸೆ ಅಥವಾ ಕರ್ಮ ಮೀಮಾಂಸೆ. ಇದು ಜೈಮಿನಿಮುನಿಯಿಂದ ರಚಿತವಾಯಿತು. ೬. ಉತ್ತರ ಮೀಮಾಂಸೆ ಅಥವಾ ಬ್ರಹ್ಮ ಮೀಮಾಂಸೆ ಅಥವಾ ವೇದಾಂತ ಇದನ್ನು ಬಾದರಾಯಣನು (ವ್ಯಾಸ) ಬೋಧಿಸಿದನು. ಈ ಆರು ದರ್ಶನಗಳಲ್ಲಿ ಯೋಗದರ್ಶನವು ಸಾಂಖ್ಯವನ್ನು, ವೈಶೇಷಿಕವು ನ್ಯಾಯವನ್ನು, ಕರ್ಮ ಮೀಮಾಂಸೆಯು ವೇದಾಂತವನ್ನು ಅನುಸರಿಸುವದರಿಂದ, ಮೂರು ಮುಖ್ಯ ದರ್ಶನಗಳು ಉಳಿಯುತ್ತವೆ.

## A. ಸಾಂಖ್ಯ ಲಕ್ಷಣ.

ವಿಶ್ವದಲ್ಲಿ ಅನಾದಿಯಿಂದ ಇದ್ದಂಥಾ ಎರಡು ಮೂಲ ಕರ್ತೃಗಳು ಉಂಟು. ವಿಶ್ವಕ್ಕೆ ಸಮವಾಯ ಕಾರಣವಾಗಿರುವಂಥಾ, ಕಾರ್ಯಗಳಿಂದ ಮಾತ್ರ ತಿಳಿಯ ಬರುವಂಥಾ, ಲಯವಿಲ್ಲದಂಥಾ ಪ್ರಕೃತಿ ಇದು ಒಂದು. ಸೂಕ್ಷ್ಮವಾದಂಥಾ, ತನ್ನಷ್ಟಕ್ಕೆ ಯೇನೂ ಹುಟ್ಟಿಸಲಾರದಂಥಾ, ದೃಷ್ಟಿಸುವಂಥಾ, ಭೋಗಿಸುವಂಥಾ, ಆತ್ಮ, ಅಥವಾ ಪುರುಷ ಇದು ಒಂದು. ಈ ಪುರುಷ ವೇದಾಂತ ಬೋಧಿಸುವಂತೆ, ಏಕವಾಗಿದ್ದರೆ ಒಬ್ಬನಲ್ಲಿ ಇದ್ದ ದುಖ್ಖ ಸರ್ವರಲ್ಲಿ ಇರುತ್ತಿತ್ತು. ಅದಕ್ಕೆ ಆತ್ಮವು ನಾನಾ ವಿಧ ವಾಗಿದೆ. ಈ ಎರಡು ಕರ್ತೃಗಳು ಅನಂತಕಾಲ ಬೇರ ಬೇರೆ ಇದ್ದವು. ಆ ಮೇಲೆ ಆತ್ಮಕ್ಕೂ ಪ್ರಕೃತಿಗೂ ಯೋಗವಾಯಿತು ಈ ಯೋಗವೇ ಪಾಪ ಈ ಯೋಗ ಮೂಲದಿಂದ ಮುಂದೆ ಬರೆದಿರುವ ೨೩ ತತ್ವಗಳು ಒಂದರಿಂದ ಒಂದು ಹುಟ್ಟಿದವು.

1. ಇದು ಆಕಳ, ಕುದರೆ ಅಲ್ಲ ಎಂಬಂತೆ ನಿರ್ಣಯಿಸುವಂಥಾ ಬುದ್ಧಿ. 2. ನಾನು ಕೇಳುತ್ತೇನೆಂಬ ಅಹಂಕಾರ ; 3 ಐದು ತನ್ಮಾತ್ರಗಳು ; ಇವು ಪರಮಾಣು ರೂಪವಾದಂಥಾವು ; ಶಬ್ದ ತನ್ಮಾತ್ರ, ಸ್ಪರ್ಶತನ್ಮಾತ್ರ, ರೂಪತನ್ಮಾತ್ರ, ರಸತನ್ಮಾತ್ರ, ಗಂಧತನ್ಮಾತ್ರ, ಇವೈದು ತತ್ವಗಳು. ಅವ್ಯಕ್ತವಾದ ಮೂಲ ಪ್ರಕೃತಿ, ಬುದ್ಧಿ, ಅಹಂಕಾರ, ಶಬ್ದಾದಿ ಐದು ತನ್ಮಾತ್ರಗಳು, ಎಂಬೀ ಎಂಟು ತತ್ವಗಳು ಉತ್ಪತ್ತಿ ಮಾಡುವದರಿಂದ, ಪ್ರಕೃತಿಗಳು ಎಂದೆ

ನಿಸಿಕೊಳ್ಳುವವು. 4. ಈ ಎಂಟು ಪ್ರಕೃತಿಗಳಿಂದ ೧೬ ವಿಕಾರಗಳು ಹುಟ್ಟುತ್ತವೆ. ಅವು ಯಾವವೆಂದರೆ: ಅ. ಶ್ರೋತ್ರ, ತ್ವಕ್, ಚಕ್ಷು, ಜಿಹ್ವೆ, ಘ್ರಾಣ ಎಂಬೀ ಐದು ಬುದ್ಧೀಂದ್ರಿಯುಗಳು. ಶ್ರೋತ್ರ ಶಬ್ಧವಿಷಯುವನ್ನು, ತ್ವಕು ಸ್ಪರ್ಶವಿಷಯುವನ್ನು, ಚಕ್ಷು ರೂಪವಿಷಯುವನ್ನು, ರಸನೆ ರಸವಿಷಯುವನ್ನು, ಘ್ರಾಣ ಗಂಧವಿಷಯುವನ್ನು ಗ್ರಹಿಸುತ್ತವೆ— ಬ. ವಾಕ್, ಪಾಣಿ, ಪಾದ, ಪಾಯು, ಉಪಸ್ಥ ಎಂಬೀ ಐದು ಕರ್ಮೇಂದ್ರಿಯುಗಳು. ಕ. ಮನ ಜ್ಞಾನೇಂದ್ರಿಯುಗಳಿಗೂ ಕರ್ಮೇಂದ್ರಿಯುಗಳಿಗೂ ಸಮ್ಮಂಧವಾಗಿಧೆ. ಸಂಕಲ್ಪ ವಿಕಲ್ಪಗಳನ್ನು ಮಾಡುತ್ತದೆ. ದ. ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ ಎಂಬೀ ಐದು ಮಹಾ ಭೂತಗಳು. ಈ ಪ್ರಕಾರವಾಗಿ ಪ್ರಕೃತಿ ಪುರುಷ ಕೂಡಿ ೨೫ ತತ್ವಗಳು ಆದವು. ಈ ೨೫ ತತ್ವಗಳು ಒಂದರಿಂದ ಒಂದು ಹುಟ್ಟಿದ್ದಕ್ಕೆ ಸಂಚರವೆಂದನ್ನುತ್ತಾರೆ. ಈ ಸಂಚರ ದಿಂದಲೋಕವೆಲ್ಲಾ ಉತ್ಪತ್ತಿ ಆಯಿತು. ಆದಕಾರಣ ಪುರುಷನು, ಶರೀರದಲ್ಲಿ ಅಥವಾ ಮನಸ್ಸಿನಲ್ಲಿ ಹುಟ್ಟುವಂಥಾ ಆಧ್ಯಾತ್ಮಿಕ ದುಃಖಕ್ಕೂ, ಹೊರಗಿನಿಂದ ಮಾನುಷ ಪಶು ಮೃಗ ಸರೀಸೃಪ ಸ್ಥಾವರಗಳಿಂದ ಬರುವಂಥಾ ಆಧಿ ಭೌತಿಕ ದುಃಖಕ್ಕೂ, ಶಿತೋಷ್ಣ ಮುಂತಾದದರಿಂದ ಆಗುವಂಥಾ ಆಧಿ ದೈವಿಕ ದುಃಖಕ್ಕೂ ಒಳಗಾದನು. ಮೊದಲು ಸತ್ವ ರಜ ತಮ ಈ ಮೂರು ಗುಣಗಳು ಪ್ರಕೃತಿಯುಲ್ಲಿ ಸಮವಾಗಿದ್ದವು. ಈ ತ್ರೈಗುಣ್ಯ ಸಮವಾಗಿದ್ದದ್ದೇ ಮೂಲ ಪ್ರಕೃತಿ ಪ್ರಕೃತಿಯನ್ನು ಕೂಡಿದದರಿಂದ ಆತ್ಮವು ಈ ಗುಣಗಳೆಂಬ ಹಗ್ಗದಿಂದ ಕಟ್ಟಿಸಿಕೊಂಡಂಥಾದ್ದಾಯಿತು ಈ ಮಹಾ ದುಃಖದಿಂದ ಜಪ ತಪದ ಮುಖಾಂತರ ಬಿಡುಗಡೆ ಯಾಗುವಹಾಗಿಲ್ಲ ಪ್ರಕೃತಿ ಆತ್ಮ ಮುಂತಾದ ೨೫ ತತ್ವಗಳನ್ನು ತಿಳುಕೊಳ್ಳುವ ಜ್ಞಾನವೇ ಮಾತ್ರ ಆ ದುಃಖವನ್ನು ಪರಿಹರಿಸಿ ಮೋಕ್ಷ ಹೊಂದಿಸುವದು. ಈ ವಿಶ್ವ ಅಹಂಕಾರವು ಕಲ್ಪಿಸಿದ ಮಾಯಾಕೃತ್ಯವಲ್ಲದೆ ನಿಜ ಯಿರುವದಿಲ್ಲ. ಆ ಅವ್ಯಕ ಪ್ರಕೃತಿ ತ್ರೈಗುಣ್ಯದ ಸಂಗ್ರಹವಲ್ಲದೆ ಮತ್ತೇನಿಲ್ಲವೆಂದು ತಿಳಿದ ಮೇಲೆ, ಆತ್ಮ ಮೋಕ್ಷ ಹೊಂದಲಾಗುವದು. ಆದರೆ ಜ್ಞಾನವುಳ್ಳವನ ಆತ್ಮ ಮರಣದಲ್ಲಿ ಈ ದೇಹ ಬಿಡುವಾಗ, ಪ್ರಕೃತಿಯು ಯೋಗದಿಂದ ಸಂಪೂರ್ಣವಾಗಿ ಬಿಡುಗಡೆ ಯಾಗುವದು. ಆಗ್ಯೆ ಪ್ರಕೃತಿ ಆತ್ಮ ಮುಂಚಿನಂತೆ ತಿರಿಗಿ ಬೇರೆ ಬೇರೆ ಇರುವವು. ಭೂತಗಳು ತನ್ಮಾತ್ರಗಳಲ್ಲಿ, ತನ್ಮಾತ್ರಗಳೂ ಇಂದ್ರಿಯುಗಳೂ ಅಹಂಕಾರದಲ್ಲಿ ಅಹಂಕಾರವು ಅವ್ಯಕ್ತ ಪ್ರಕೃತಿಯುಲ್ಲಿ ಲಯವಾಗಿ ಹೋಗುವವು, ಇದೇ ಪ್ರತಿಸಂಚರ. ಇದೇ ಮೋಕ್ಷ. ಇದು ಪ್ರಳಯ ಕಾಲದಲ್ಲಿ ಆಗುವಂಥಾದ್ದು.

ಮೂಲ ಪ್ರಕೃತಿ ಬೇರೆ, ಆತ್ಮ ಬೇರೆ ; ಇವು ಒಂದಕ್ಕೊಂದು ಯೋಗವಾಗಬಾರದೆಂದು ತಿಳುಕೊಳ್ಳುವ ಜ್ಞಾನವೇ ಆ ಮಹಾ ದುಃಖವನ್ನು ಪರಿಹರಿಸಲಿಕ್ಕೆ ಸಾಹಿತ್ಯವೇ ಸರಿ. ಈ ಜ್ಞಾನವನ್ನು ಸಂಪಾದಿಸಲಿಕ್ಕೆ ತ್ರಿವಿಧವಾದ ಪ್ರಮಾಣ ಉಂಟು. 1. ಪಂಚೇಂದ್ರಿಯುಗಳಿಂದ ಗ್ರಹಿಸುವದು, ಇದು ದೃಷ್ಟಿ ಅಥವಾ ಪ್ರತ್ಯಕ್ಷ. 2. ಒಂದು ಲಿಂಗ ಅಥವಾ ಗುರ್ತು ನೋಡಿ ತಿಳಿಯುವದು ಇದು ಅನುಮಾನ. ಇದು ಹ್ಯಾಗಂದರೆ, ಒಂದರ ಕಾರಣವನ್ನು ನೋಡಿ ಅದರ ಕಾರ್ಯವನ್ನು ಅನುಮಾನಿಸುವದು. ಉದಾ. ಮೋಡ ಯೇರುವದರಿಂದ ಮಳೆ ಬರುವದು. ಅಥವಾ ಅದರ ಕಾರ್ಯಗಳನ್ನು ನೋಡಿ ಒಂದು ಕಾರಣವನ್ನು ಅನು

ಮಾನಿಸುವದು. ಉದಾ. ಗುಡ್ಡದ ಮೇಲೆ ಹೊಗೆ ಕಾಣುವದರಿಂದ ಅಲ್ಲಿ ಬೆಂಕಿ ಯಿರುವದು; ಅಥವಾ ವಲಾಕ ಮೊದಲಾದ ನೀರಿನ ಹತ್ತರ ಬದುಕುವ ಪಕ್ಷಿಗಳು ಒಂದು ಸ್ಥಳದಲ್ಲಿ ತೋರುವದರಿಂದ, ಅಲ್ಲಿ ನೀರು ಇರುವದು. 3. ಪ್ರತ್ಯಕ್ಷದಿಂದಾಗಲಿ ಅನುಮಾನದಿಂದಾಗಲಿ ತಿಳಿಯ ಬಾರದಂಥಾದ್ದನ್ನು ಆಪ್ತ ವಚನದಿಂದ ಗ್ರಹಿಸಬೇಕು. ಉದಾ. ಕೌರವರು ಇದ್ದರು ಎಂಬದನ್ನು ಶಾಸ್ತ್ರವಾಕ್ಯದಿಂದ ಅಥವಾ ಗುರು ವಾಕ್ಯದಿಂದ ತಿಳಿಯಬೇಕಲ್ಲದೆ, ಪ್ರತ್ಯಕ್ಷದಿಂದ ಅಥವಾ ಅನುಮಾನದಿಂದ ತಿಳಿಯಲಾಗದು.

ಯೋಗದರ್ಶನವು ಮೋಕ್ಷ ಜ್ಞಾನದಿಂದಲ್ಲ ಯೋಗಾಭ್ಯಾಸದಿಂದ ಆಗುವದೆಂದು ಭೋಧಿಸಿ ಯೋಗಾಭ್ಯಾಸವನ್ನು ವಿಸ್ತಾರವಾಗಿ ವಿವರಿಸುತ್ತದೆ. ಆದರೆ ದೇವರಿದ್ಧಾನೆಂದು ಈ ದರ್ಶನ ಹೇಳುವದರಿಂದ ಇದಕ್ಕೆ "ಸೇಶ್ವರಸಾಂಖ್ಯ" ಎಂಬ ಹೆಸರು ಬಂದದೆ.

---

## CATEGORIES.

### B. ನ್ಯಾಯಲಕ್ಷಣ.

### ಏಳು ಪದಾರ್ಥಗಳು.

ಒಂದೊಂದು ಪದದ ಮೂಲಾರ್ಥವನ್ನು ತಿಳಿಸುವಂಥಾವು. ಈ ಲೋಕದಲ್ಲಿ ಇರುವ ಒಂದೊಂದು ವಸ್ತುವಿನ ನಿರ್ಣಯ ಇವುಗಳೊಳಗೆ ಬಂದ ಹಾಗಾಯಿತು.

I. ದ್ರವ್ಯ (SUBSTANCE;) ಒಂಭತ್ತು ದ್ರವ್ಯಗಳು ಅವೆ. ಅವು ೨೪ ಗುಣಗಳಿಗೆ ವಾಹನಗಳಾಗಿವೆ.

*a.* ಪೃಥುವಿ; ಗಂಧ ವುಳ್ಳದ್ದು. ಇದು ದ್ವಿವಿಧ:

*a a.* ನಿತ್ಯವಾದ ಪರಮಾಣುರೂಪ (eternal, as atoms.)

*b b.* ಅನಿತ್ಯವಾದ ಕಾರ್ಯರೂಪ (uneternal, as products)

ಅ—ಶರೀರ; ಮನುಷ್ಯರ ಶರೀರ; ಸತ್ತರೆ ಅದು ಇಲ್ಲದೇ ಹೋಗುವದು. ಆದರೂ ಅದು ಹುಟ್ಟಿದ ಮಣ್ಣು ಇನ್ನೂ ಅದೆ.

ಬ—ಇಂದ್ರಿಯ; ಗಂಧ ಗ್ರಹಿಸುವ ಘ್ರಾಣೇಂದ್ರಿಯವು. (ಅದು ಪೃಥ್ವಿ ಸಂಮಂಧ) ಮೂಗಿನೊಳಗೆ ಅದೆ.

ಚ—ವಿಷಯ, ಹೆಂಟೆ, ಕಲ್ಲು ಮುಂತಾದದ್ದು.

*b.* ಅಪ; ಶೀತಸ್ಪರ್ಶ ವುಳ್ಳದ್ದು. ಇದು ದ್ವಿವಿಧ.

*a a.* ನಿತ್ಯವಾದ ಪರಮಾಣು ರೂಪ.

*b b* ಅನಿತ್ಯವಾದ ಕಾರ್ಯ ರೂಪ ; ಇದು ತ್ರಿವಿಧ :

ಅ—ಶರೀರ (organisms) ವರುಣ ಲೋಕದಲ್ಲಿ ಅದೆ.

ಬ—ಇಂದ್ರಿಯ.: ರಸ ಗ್ರಹಿಸುವ ರಸನ ; ಇದು ಜಿಂಹ್ವಾಗ್ರದಲ್ಲಿದೆ

ಚ—ವಿಷಯ ; ಹೊಳೆ, ಸಮುದ್ರ ಮುಂತಾದದ್ದು.

*c.* ತೇಜ. ಉಷ್ಣ ಸ್ಪರ್ಶ ವುಳ್ಳದ್ದು. ಇದು ದ್ವಿವಿಧ :

*a a.* ನಿತ್ಯವಾದ ಪರಮಾಣು ರೂಪ ;

*b b.* ಅನಿತ್ಯವಾದ ಕಾರ್ಯರೂಪ ; ಇದು ತ್ರಿವಿಧ :

ಅ—ಶರೀರ, ಆದಿತ್ಯಲೋಕದಲ್ಲಿ ಅದೆ. (organisms ;)

ಬ—ಇಂದ್ರಿಯ: (organ ;) ರೂಪಗ್ರಹಿಸುವ ಚಕ್ಷು, ಇದು ಕೃಷ್ಣ ತಾರಾಗ್ರದಲ್ಲಿ ಅದೆ.

ಚ—ವಿಷಯ ; (inorganic objects) ಇದು ಚತುರ್ವಿಧ ;

ಅಅ—ಭೌಮ ; ಭೂಮಿಯಲ್ಲಿರುವಂತಾದ್ದು. ಬೆಂಕಿ ಮುಂತಾದ್ದು.

ಬಬ—ದಿವ್ಯ ; ಆಕಾಶದಲ್ಲಿಯದು ಮಿಂಚು ಮುಂತಾದ್ದು.

ಚಚ—ಔದರ್ಯ ; ತಿಂದದ್ದನು ಹೊಟ್ಟೆಯಲ್ಲಿ ಜೀರ್ಣ ಮಾಡುವಂಥಾದ್ದು

ದದ—ಆಕರಜ ; ಆಕರಗಳಲ್ಲಿ ಹುಟ್ಟುವ ಸುವರ್ಣಾದಿ.

*d.* ವಾಯು : ರೂಪರಹಿತ, ಸ್ಪರ್ಶವುಳ್ಳದ್ದು ; ಇದು ದ್ವಿವಿಧ :

*a a.* ನಿತ್ಯವಾದ ಪರಮಾಣು ರೂಪ.

*b b.* ಅನಿತ್ಯವಾದ ಕಾರ್ಯರೂಪ ; ಇದು ತ್ರಿವಿಧ :

ಅ—ಶರೀರ ; ಅದು ವಾಯುಲೋಕದಲ್ಲಿ ಅದೆ.

ಬ—ಇಂದ್ರಿಯ ; ಸ್ಪರ್ಶಗ್ರಹಿಸುವ ತ್ವಕ್. (ಚರ್ಮ) ಸರ್ವಶರೀರದಲ್ಲಿ ಅದೆ.

ಚ—ವಿಷಯ ; ವೃಕ್ಷಮುಂತಾದ್ದನ್ನು ಅಲ್ಲಾಡಿಸುವಂಥಾದ್ದು.

*e.* ಆಕಾಶ. ಶಬ್ದ ಗುಣಕವಾದದ್ದು. ಇದುಏಕ, ನಿತ್ಯ.

*f.* ಕಾಲ; ಇದು ಭೂತಕಾಲ ಮುಂತಾದದ್ದು, ನಿತ್ಯ ಎಲ್ಲಾ ವ್ಯಾಪಿಸುವಂಥಾದ್ದು.

*g.* ದಿಗ್: ಇದು ಪೂರ್ವ ಮುಂತಾದದ್ದು, ಏಕ ನಿತ್ಯ ಎಲ್ಲಾ ವ್ಯಾಪಿಸುವಂಥಾದ್ದು

*h.* ಆತ್ಮ: ಜ್ಞಾನಾಧಿಕರಣ; ಇದು ದ್ವಿವಿಧ;

*a a.* ಜೀವಾತ್ಮ; ಇದು ಬೇರೆ ಬೇರೆ ಶರೀರಗಳಲ್ಲಿ ಹಂಚಿರುವಂಥಾದ್ದು; ನಿತ್ಯ ಸರ್ವವ್ಯಾಪಕ ವಾಗಿದೆ.

*b b.* ಪರಮಾತ್ಮ, ಎಲ್ಲವನ್ನು ತಿಳುಕೊಳ್ಳುವ ದೇವರು.

I. ಮನಸ್ಸು: ಸುಖಾದಿ ಉಪಲಬ್ಧಿ ಸಾಧಿಸುವಂಥಾದ್ದು.

*a a.* ಇದು ಪ್ರತಿಯಾತ್ಮದಲ್ಲಿರುವದರಿಂದ ಅನಂತವಾಗಿದೆ.

*b b.* ಪರಮಾಣು ರೂಪವಾಗಿ ನಿತ್ಯವಾಗಿದೆ.

II. ೨೪ ಗುಣಗಳು: (QUALITY;)

1. ರೂಪ (colour): ಕಣ್ಣು ಮಾತ್ರ ಗ್ರಹಿಸುವಂಥಾದ್ದು. ಪೃಥ್ವಿ ಜಲ ತೇಜಗಳಲ್ಲಿ ಅದೆ.

2. ರಸ (savour); ರಸನ ಗ್ರಹಿಸುವಂಥಾದ್ದು; ಪೃಥಿವಿ ಜಲಗಳಲ್ಲಿ ಅದೆ.

3. ಗಂಧ (odour); ಘ್ರಾಣಗ್ರಹಿಸುವಂಥಾದ್ದು; ಪೃಥಿವಿಯಲ್ಲಿಮಾತ್ರವದೆ

4. ಸ್ಪರ್ಶ (tangibility;) ತ್ವಕ್ ಮಾತ್ರ ಗ್ರಹಿಸುವಂಥಾದ್ದು; ಪೃಥಿವಿ, ನೀರು, ತೇಜ, ವಾಯುಗಳಲ್ಲಿ ಅದೆ. ಈ ನಾಲ್ಕು ಗುಣಗಳು ಪರಮಾಣು ರೂಪವಾದವುಗಳಲ್ಲಿ ಇದ್ದರೆ, ನಿತ್ಯವಾಗಿವೆ. ಕಾರ್ಯ ರೂಪವಾದವುಗಳಲ್ಲಿ ಇದ್ದರೆ ಅನಿತ್ಯವಾಗಿವೆ.

5. ಸಂಖ್ಯಾ (number); ಏಕತ್ವಾದಿ ವ್ಯವಹಾರಕ್ಕೆ ಕಾರಣ; ನವದ್ರವ್ಯಗಳಲ್ಲಿ ಅದೆ. ಏಕತ್ವ ಆ ಮೊದಲು ೪ ಗುಣಗಳಂತೆ ನಿತ್ಯ ಅಥವಾ ಅನಿತ್ಯ. ಆದರೆ ದ್ವಿತ್ವ ಮುಂತಾದ್ದು ಯಾವಾಗಲೂ

ಅನಿತ್ಯ. ಉದ: ಎರಡು ತಟಕುಗಳು ಕೂಡಿ ಬಂದಾಗ ಬಹುದು.

6. ಪರಿಪೂರ್ಣ (measure;) ನವದ್ರವ್ಯಗಳಲ್ಲಿ ಅದೆ. ಅದು ಅಣು ಮಹದ್ ದೀರ್ಘ ಹ್ರಸ್ವ ಎಂದು ಚತುರ್ವಿಧ.

7. ಪೃಥಕ್ಕು (severalty;) ಸರ್ವದ್ರವ್ಯಗಳೊಳಗಣದು; ಬೇರೆ ಬೇರೆ ಇರುವಂಥಾದ್ದು.

8. ಸಂಯೋಗ (conjunction;) ಸರ್ವದ್ರವ್ಯಗಳಲ್ಲಿ ಅದೆ.

9. ವಿಭಾಗ (disjunction:) ಸರ್ವದ್ರವ್ಯಗಳಲ್ಲಿ ಅದೆ; ಅಗಲಿರುವಂಥಾದ್ದು.

10. ಪರತ್ವ (priority;)
11. ಅಪರತ್ವ (posteriority;) } ಆ ನಾಲ್ಕು ಮೊದಲಿನ ಗುಣಗಳಲ್ಲಿಯೂ ಮನಸಿನಲ್ಲಿಯೂ ಅವೆ.

12. ಗುರುತ್ವ (weight;) ಬೀಳೋದಕ್ಕೆ ಅಸಮವಾಯಿ ಕಾರಣವಾಗಿದೆ. ಪೃಥಿವಿ ಜಲಗಳಲ್ಲಿ ಅದೆ.

13. ದ್ರವತ್ವ (fluidity;) ಪೃಥಿವಿ ನೀರು ತೇಜಗಳಲ್ಲಿ ಅವೆ; ಅದು ದ್ವಿವಿಧ:

*a.* ಸಾಂಸಿದ್ಧಿತ (ನೀರಿನಲ್ಲಿ) (natural;)

*b.* ನೈಮಿತ್ತಿಕ (adscititious;) ಮಣ್ಣು ಬೆಂಣೆ ಮುಂತಾದ್ದಕ್ಕೆ ಅಗ್ನಿಸಂಯೋಗದಿಂದ ದ್ರವತ್ವ ಬರುತ್ತದೆ.

14. ಸ್ನೇಹ (viscidity;) ಚೂರ್ಣಾದಿ ಪಿಂಡವಾಗುವಂಥಾದ್ದು; ನೀರಿನಲ್ಲಿದೆ.

15. ಶಬ್ದ (sound;) ಶ್ರೋತ್ರಗ್ರಹಿಸುವಂಥಾದ್ದು; ಆಕಾಶದಲ್ಲಿ ಮಾತ್ರವದೆ. ಅದು ದ್ವಿವಿಧ:

*a.* ಧ್ವನ್ಯಾತ್ಮಕ inarticulate;) ಭೇರಿಯ ಧ್ವನಿ ಮೊದಲಾದದ್ದು.

*b.* ವರ್ಣಾತ್ಮಕ (articulate :) ಭಾಷಾರೂಪವಾದದ್ದು.

16. ಬುದ್ಧಿ (understanding) ಸರ್ವವ್ಯವಹಾರಕ್ಕೆ ಕಾರಣವಾದ ಜ್ಞಾನ; ದೇವರಲ್ಲಿ ನಿತ್ಯ, ಜೀವದಲ್ಲಿ ಅನಿತ್ಯ. ಇದು ದ್ವಿವಿಧ:

*a.* ಅನುಭವ (notion ;) ಇದು ದ್ವಿವಿಧ :

*a a.* ಯಥಾರ್ಥ ಅನುಭವ (right notion ;) (ಬೆಳ್ಳಿಗೆ ಬೆಳ್ಳಿಯೆಂದರೆ.)

ಅ–ಕಾರಣ ನಿರ್ಣಯ.

ಅ ಅ–ಕಾರ್ಯ. (effect ;) (ಮುಂಚೆ ಇಲ್ಲದ್ದು ಆದರೆ)

ಬ ಬ–ಕರಣ (instrumental cause) ಅಸಾಧಾರಣ ಕಾರಣ.

ಚ ಚ–ಕಾರಣ (cause ;) ಇದು ತ್ರಿವಿಧ:

1. ಸಮವಾಯಿಕಾರಣ (material, substantial cause ;) ಎಳೆಗಳು ಅರಿವೆಯ ಸಮವಾಯಿ ಕಾರಣ.
2. ಅಸಮವಾಯಿಕಾರಣ : (efficient, non substantial cause) ಎಳೆಗಳನ್ನು ಕೂಡಿಸಿ ನೇಯುವದು.
3. ನಿಮಿತ್ತಕಾರಣ : (instrumental cause) ಮಗ್ಗ ಅರಿವೆಯ ನಿಮಿತ್ತಕಾರಣ.

ಈ ಮೂರು ಕಾರಣಗಳು ಅಸಾಧಾರಣವಾದರೆ ಕರಣಸಹಾವೆಂದನ್ನ ಬಹುದು. ಆದರೆ ದೇವರು ಕಾಲ ಮುಂತಾದದ್ದು ಕರಣವಲ್ಲ ಸಾಧಾರಣ ಕಾರಣಗಳೇ.

ಬ–ಯಥಾರ್ಥ ಅನುಭವ ಚತುರ್ವಿಧ:

ಅ ಅ–ಪ್ರತ್ಯಕ್ಷ: (perception) ಪ್ರತ್ಯಕ್ಷವೆಂಬ ಕರಣದಿಂದ ತಿಳಿಯುವಂಥಾದ್ದು ಇದು ದ್ವಿವಿಧ :

1. ನಿರ್ವಿಕಲ್ಪಕ (knowledge of a generic character, logical individual) ಉದ್ದ: ಇದು ಏನಾದರೂ ಒಂದು ಗುಣಹೇಳಲಿಕ್ಕೆ ಆಗದು,

2. ಸವಿಕಲ್ಪಕ (special knowledge;) ಉದ: ಇವನು ಬ್ರಾಹ್ಮಣ; ಇದು ಮರ್ತ್ಯರಿಗೆ ಸಂಬಂಧವಾದ ಜ್ಞಾನ.

೨ ೨—ಅನುಮತಿ: (inference) ಇದರ ಕರಣ ಅನುಮಾನ, (induction) ಅನುಮತಿಗೆ ೫ ಅವಯವಗಳು:

1. ಪ್ರತಿಜ್ಞೆ: (proposition) ಗುಡ್ಡ ಸುಡುತ್ತದೆ.
2. ಹೇತು: (reason) ಯಾಕಂದರೆ ಅದರಿಂದ ಹೊಗೆ ಬರುತ್ತದೆ.
3. ಉದಾಹರಣ: (example) ಒಲೆಯಲ್ಲಿರುವಂತೆ ಹೊಗೆ ಇರುವಲ್ಲಿ ಬೆಂಕಿ ಅದೆ.
4. ಉಪನಯ: (application) ಗುಡ್ಡದಿಂದ ಹೊಗೆ ಬರುತ್ತದೆ.
5. ನಿಗಮನ: (conclusion) ಅದರಿಂದ ಗುಡ್ಡ ಸುಡುತ್ತದೆ.

ಒಲೆಯಲ್ಲಿರುವಂತೆ ಹೊಗೆ ಇರುವಲ್ಲಿ ಬೆಂಕಿ ಅದೆ ಎಂಬಂತೆ ಉದಾಹರಣ ಮಾಡಿದರೆ, ಸುಡುವ ಗುಡ್ಡ ಎಂಬ ಪಕ್ಷ ಹಿಡಿದಿರುವದರಿಂದ, ಉದಾಹರಣ ಸಪಕ್ಷವೆಂದೆನಿಸುವದು, ಕೆರೆಯಲ್ಲಿರುವಂತೆ. ಬೆಂಕಿ ಇಲ್ಲದಲ್ಲಿ ಹೊಗೆ ಇಲ್ಲ ಎಂಬಂತೆ ಉದಾಹರಣ ಮಾಡಿದರೆ, ಸುಡುವ ಗುಡ್ಡ ಎಂಬ ಪಕ್ಷಕ್ಕೆ ವಿರುದ್ಧವಾಗಿರುವದರಿಂದ, ಅದು ವಿಪಕ್ಷವೆಂದೆನಿಸುವದು ಒಂದು ಲಿಂಗ ಪರಾಮರ್ಶಿಸುವದೆ ಅನುಮಾನ.

ಅನುಮತಿಯಲ್ಲಿಯು ಎರಡನೆ ಅವಯವವಾದ ಹೇತು ನೆಟ್ಟಗೆ ಇಲ್ಲದಿದ್ದರೆ ಅದು ಹೇತ್ವಾಭಾಸವೆಂದೆನಿಸುವದು. (semblance of a reason) ಇದು ಪಂಚವಿಧ:

1. ತಪ್ಪಿ ಹೋಗುವಂಥಾ ಹೇತು: ಸವ್ಯಭಿಚಾರ (which goes astray) ಗುಡ್ಡ ಸುಡುತ್ತದೆ ಯಾಕಂದರೆ ಗುಡ್ಡ ತೋರಬರುತ್ತದೆ—ಕೆರೆ ಸುದಾ ತೋರ ಬರುತ್ತದೆ.
2. ವಿರುದ್ಧವಾದ ಹೇತು (the reverse) ಶಬ್ದ ನಿರ್ಮಾಣವಾದ ಕಾರಣ ಅದು ನಿತ್ಯ ನಿರ್ಮಾಣವಾದದ್ದೇ ಅನಿತ್ಯ.
3. ಸತ್ಪ್ರತಿಪಕ್ಷವಾದ ಹೇತು (counter balanced reason:) ಶಬ್ದನಿತ್ಯ, ಯಾಕಂದರೆ ಅದು ಕೇಳಿಸುತ್ತದೆ. ಈ ಹೇತು ಶಬ್ದ ಅನಿತ್ಯ

ವೆಂದು ಸಹಾ ತೋರಿಸುವದು: ಯಾಕಂದರೆ ಅದು ಕೇಳಿಸು ವದರಿಂದ, ಒಂದು ಕಾರ್ಯವಾಗಿರುವದು.

4. ಅಸಿದ್ಧ ಹೇತು (unreal reason) ಗಗನಾರವಿಂದ ಸುರಭಿಯುಳ್ಳದ್ದು ಯಾಕಂದರೆ ಅದು ಸರೋವರದ ಅರವಿಂದದಂತೆ ಅದೆ—ಆದರೆ ಗಗನವಲ್ಲಿ ಅರವಿಂದ ಇಲ್ಲವೆ ಇಲ್ಲ.

5. ಬಾಧಿತಹೇತ್ವಾಭಾಸ (futile) ದ್ರವ್ಯವಾಗಿರುವದರಿಂದ ಬೆಂಕಿ ಅನುಷ್ಣ—ಆದರೆ ಸ್ಪರ್ಶದಿಂದ ಬೆಂಕಿ ಉಷ್ಣವೆಂದು ತೋರುತ್ತದೆ.

ಚ ಚ—ಉಪಮಿತಿ (inference from similarity;) ಇದರ ಕರಣ ಉಪಮಾನ. ಕಾಡ ಕೋಣನನ್ನು ಕಾಣದ ಒಬ್ಬನು ಅದು ಕೋಣನಂತೆ ಅದೆ ಎಂದು ಕೇಳಿದ ಮೇಲೆ, ಅಡವಿಯಲ್ಲಿ ಸಂಚರಿಸುತ್ತಿರುವಾಗ್ಯೆ ಕೋಣನಂಥಾ ಮೃಗವನ್ನು ನೋಡಿ, ಮುಂಚೆ ಕೇಳಿದ್ದನ್ನು ನೆನಪಿಗೆ ತಂದು, ಇದು ಕಾಡಕೋಣನೆಂದು ನಿರ್ಣಯಿಸುತ್ತಾನೆ.

ದ ದ—ಶಾಬ್ದ : (authoritative assertion , testimony;) ಉದ; ದೇವರು ಲೋಕ ನಿರ್ಮಿಸಿದನು: ಇದಕ್ಕೆ ಶಬ್ದ ಕರಣ ; ವಾಕ್ಯಾರ್ಥ ತಿಳಿಯ ಬೇಕಾದರೆ, ಮೂರು ಇರಬೇಕು.

1. ಆಕಾಂಕ್ಷೆ (expectancy) ಉದ! ಆಕಳ ಕುದುರೆ ಮನುಷ್ಯರು ಆನೆ ಎಂಬ ವಾಕ್ಯ ತಿಳಿಯಲಾಗದು: ಯಾಕಂದರೆ ಪದಗಳು ಒಂದಕ್ಕೊಂದು ಅನುಸಾರವಾಗಿರುವದಿಲ್ಲ.

ಉದ : ದೇವದತ್ತ ಗ್ರಾಮಕ್ಕೆ ಹೋಗುತ್ತಾನೆಂಬ ವಾಕ್ಯಕ್ಕೆ ಆಕಾಂಕ್ಷೆ ಉಂಟು.

2. ಯೋಗ್ಯತೆ : (compatibility) ಬೆಂಕೆಯಿಂದ ತಳ್ಳಿ ಹಾಕು ಎಂಬ ವಾಕ್ಯಕ್ಕೆ ಆಕಾಂಕ್ಷೆ ಇದ್ದರೂ, ಯೋಗ್ಯತೆ ಇಲ್ಲದ ಕಾರಣ, ಪ್ರಮಾಣ ವಾಕ್ಯವಲ್ಲ. (ನೀರಿನಿಂದ ತಳ್ಳಿ ಹಾಕು.)

3. ಸನ್ನಿಧಿ: (juxtaposition) ತಡವಿಲ್ಲದೆ ಪದಗಳನ್ನು ಉಚ್ಚರಿಸುವದು: ವಾಕ್ಯ ಎರಡು ಪ್ರಕಾರ ವಾಗೆದೆ.

1. ವೈದಿಕ: ದೇವರು ನುಡಿದದ್ದು.

2. ಲೌಕಿಕ: ಆಪ್ತೋಕ್ತವಾದರೆ, ಪ್ರಮಾಣ.

*b b.* ಅಯಥಾರ್ಥಾನುಭವ: (incorrect notions) ಇದು ತ್ರಿವಿಧ:

ಅ—ಸಂಶಯ: ಕಂಬವ್ರೋ ಪುರುಷನೋ? (doubt)

ಬ—ವಿಪರ್ಯಯ: ಶುಕ್ತಿಯಲ್ಲಿ ಬೆಳ್ಳಿ ಎಂಬುವದು? (mistake)

ಚ—ತರ್ಕ: (reductio ad absurdum) ಗುಡ್ಡ ಸುಡುತ್ತದೆಂಬದಕ್ಕೆ ಅಲ್ಲ ಅನ್ನುವವನಿಗೆ ಬೆಂಕಿಇಲ್ಲದಿದ್ದರೆ,ಹೊಗೆ ಅಲ್ಲವೆಂದು ಹೇಳುವದು

*b.* ಸ್ಮೃತಿ: (memory)

17. ಸುಖ: (pleasure)

18. ದುಃಖ: (pain)

19. ಇಚ್ಛೆ, ದೇವರಲ್ಲಿ ನಿತ್ಯ, ಜೀವದಲ್ಲಿ ಅನಿತ್ಯ. (desire)

20. ದ್ವೇಷ. (aversion)

21. ಪ್ರಯತ್ನ: (effort) ದೇವರಲ್ಲಿ ನಿತ್ಯ, ಜೀವದಲ್ಲಿ ಅನಿತ್ಯ.

22. ಧರ್ಮ: (merit)

23. ಅಧರ್ಮ (demerit)

ಬುದ್ಧಿ ವೊದಲಾದ ಈ ೮ ಗುಣಗಳು ಆತ್ಮಮಾತ್ರದ ವಿಶೇಷ ಗುಣಗಳು;

24. ಸಂಸ್ಕಾರ: (self-reproductive quality) ಇದು ತ್ರಿವಿಧ:

*a.* ವೇಗ: (momentum) ಪೃಥುವ್ಯಾದಿ ಚತುಷ್ಟಯದಲ್ಲಿಯೂ ಮನದಲ್ಲಿಯೂ ಅದೆ.

*b.* ಭಾವನೆ: (imagination) ಆತ್ಮಮಾತ್ರದಲ್ಲಿ ಅದೆ.

*c.* ಸ್ಥಿತಿಸ್ಥಾಪಕ: (elasticity)

III. ಕರ್ಮ: (action) ಪೃಥಿವ್ಯಾದಿ ಚತುಷ್ಟಯದಲ್ಲಿಯು ಮನದಲ್ಲಿಯುಅದೆ.

1. ಉತ್ಕ್ಷೇಪಣ : (casting upward)
2. ಅಪಕ್ಷೇಪಣ : (casting downward)
3. ಆಕುಂಚನ : (contraction)
4. ಪ್ರಸಾರಣ : (dilatation)
5. ಗಮನ : (going)

IV. ಸಾಮಾನ್ಯ : (community, genus) ದ್ರವ್ಯಗುಣಕರ್ಮಗಳಲ್ಲಿ ಅದೆ. ಇದು ದ್ವಿವಿಧ.

1. ಪರ : (higher, genus) ಇರುವಿಕೆ ಇದು ಪರ
2. ಅಪರ (lower, species) ಜಾತಿ ದ್ರವ್ಯತ್ವಾದಿ

V. ವಿಶೇಷ : (difference) ನಿತ್ಯದ್ರವ್ಯಗಳಲ್ಲಿ (ಮನಸು ಕಾಲ ಸ್ಥಾನಾದಿಗಳಲ್ಲಿ) ವಿಶೇಷಿಸುತ್ತದೆ.

VI. ಸಮುಯ : (intimate relation, co-inherence) ನಿತ್ಯಸಂಬಂಧ. ನೂಲಿಗೂ ಅದರಿಂದ ಹುಟ್ಟಿದ ಅರಿವಿಗೂ ದೇಹಕ್ಕೂ ಅದರ ಅವಯವಗಳಿಗೂ ಸಮವಾಯ ಉಂಟು.

VII. ಅಭಾವ : (non-existence) ಇದು ಚತುರ್ವಿಧ :

1. ಪ್ರಾಗಭಾವ : (antecedent non-existence) ಉದ: ಕೊಡ ಹುಟ್ಟದೆ ಇದ್ದದ್ದು.
2. ಪ್ರಧ್ವಂಸ : ( destruction) ಉದ: ಕೊಡ ಹುಟ್ಟಿ ಕೆಟ್ಟದ್ದು.
3. ಅತ್ಯಂತಾಭಾವ: (absolute non-existence ಉದ: ಕೊಡನೆಲದಲ್ಲಿಲ್ಲ.
4. ಅನ್ಯೋನ್ಯಭಾವ: (mutual non-existence) ಉದ: ಕೊಡ ಅರಿವಿ ಆಗುವದಿಲ್ಲ. ಘಟಕ್ಕೂ ಪಟಕ್ಕೂ ಅನ್ಯೋನ್ಯಭಾವ: (difference)

ಕಣಾದಮುನಿ ವಿಶೇಷವನ್ನು ಒಂದು ಪದಾರ್ಥ ಮಾಡಿದದರಿಂದ, ಅವನು ರಚಿಸಿದ ದರ್ಶನಕ್ಕೆ "ವೈಶೇಷಿಕ : ಎಂಬ ಹೆಸರು ಬಂತು.

ಈಗ ಇರುವಂಥಾ ವಿಶ್ವ ಹುಟ್ಟುವ ಮುಂಚೆ, ನವದ್ರವ್ಯಗಳ ಪರಮಾಣುಗಳು ಮಾತ್ರ ಇದ್ದವು. ಜೀವಾತ್ಮಗಳು ತಮ್ಮನ್ನು ತಾವೆ ಅರಿಯದೆ ಇದ್ದವು. ಪರಮಾತ್ಮ ನಿತ್ಯವಾದ ಪರಮಾಣುಗಳನ್ನು, ಈಗಿನ ವಿಶ್ವ ಹುಟ್ಟುವಂತೆ, ರೂಪಿಸಿದನು. ಪರಮಾಣು ರೂಪದಿಂದಿದ್ದ ಮನವನ್ನು ಜೀವಾತ್ಮಗಳಿಗೆ ಕೂಡಿಸಿ, ಈಗ ಇರುವಂತೆ, ಮಾಡಿದನು. ಕುಂಬಾರ ಮಣ್ಣಿನಿಂದ ಗಡಿಗೆ ಮಾಡುವ ಪ್ರಕಾರ, ಪರಮಾತ್ಮ ಈ ವಿಶ್ವ ಪರಮಾಣುಗಳ ಸಾಹಿತ್ಯದಿಂದ ನಿರ್ಮಿಸಿದನು. ಈ ದರ್ಶನದಲ್ಲಿ ವಿವರಿಸಿದ್ದನ್ನು ವಿಚಾರಿಸಿ ತಿಳಿದರೆ, ಆಪ್ರವೃತ್ತಿ ಹೋಗಿ ಅಪವರ್ಗವಾಗುವದು.

## C. ವೇದಾಂತ ಲಕ್ಷಣ.

1. ಈ ದರ್ಶನದ ಬೋಧನೆ ಮೊದಲು ವೇದಗಳ ಬ್ರಾಹ್ಮಣಗಳಲ್ಲಿಯೂ ಉಪನಿಷದಗಳಲ್ಲಿಯೂ ಇಲ್ಲಿ ಅಲ್ಲಿ ಸ್ವಲ್ಪ ಅದೆ. ಆದರೆ ವೇದವ್ಯಾಸ ತಾನು ಬರೆದ ಸೂತ್ರಗಳಲ್ಲಿ ಅದನ್ನು ವಿಸ್ತಾರವಾಗಿ ಕ್ರಮದಿಂದ ವಿವರಿಸಿದನು. ಕಡೆಗೆ ೧೧೨೦ ವರುಷಗಳ ಹಿಂದೆ ಇದ್ದ ಶಂಕರಾಚಾರ್ಯನು ಬೇರೆ ಬೇರೆ ವ್ಯಾಖ್ಯಾನಗಳನ್ನು ಬರೆದು ಅದನ್ನು ಸಂಪೂರ್ಣ ಮಾಡಿದನು.

2. ದೇವರು ಮಾತ್ರ ಇದ್ದಾನೆ; ಉಳಿದದ್ದೆಲ್ಲಾ ಮಾಯಾಕೃತ; ಆತನು ಜ್ಞಾನ ಸ್ವರೂಪ, ಅಥವಾ ಆನಂದ ಸ್ವರೂಪ, ಅಥವಾ ಬರೆ ತೇಜ. ತಾನು ಬೇರೆ ಇರುತ್ತಾನೆಂಬ ಮಾಯಾಭಾವ ಅವನಲ್ಲಿ ಹುಟ್ಟಿದದರಿಂದ, ಈ ವಿಶ್ವ ಉತ್ಪತ್ತಿಯಾಯಿತು. ಹೀಗೆ ತಾನು ಬೇರೆ, ಲೋಕ ಬೇರೆ ಎಂಬಂತೆ, ದ್ವೈತಭಾವವಾದದ್ದೇ ಪಾಪ. ದೇವರೆ ಮಾತ್ರ ವಸ್ತು ಉಳಿದದ್ದೆಲ್ಲಾ ಅವಸ್ತು ಎಂಬುವಂತೆ ಈ ದರ್ಶನ ಹೇಳುವದರಿಂದ, ಅದಕ್ಕೆ ಅದ್ವೈತ ಮತ ಎಂಬ ಹೆಸರು ಸುಧಾ ಬಂತು. ವೇದಾಂತ ಬೋಧನೆಯ ಸಂಕ್ಷೇಪವನ್ನು ಮುಂದೆ ಬರೆದಿರುವ ಚಿತ್ರದಲ್ಲಿ ತೋರಿಸಿದ್ದೇವೆ.



1. ಸ್ಥೂಲ ಶರೀರ; ದೇವರು ಅದನ್ನು ಹೊತ್ತುಕೊಂಡದದರಿಂದ, ಹೀಗೆ ಅನ್ನಿಸುತ್ತದೆ. ಇದು ದೇವರನ್ನು ಕೋಶದ ಹಾಗೆ ಮರೆ ಮಾಡುವದರಿಂದ ಕೋಶವೆಂದೆನ್ನಿಸುತ್ತದೆ. ಈ ಸ್ಥೂಲ ಶರೀರ (ದೃಶ್ಯವಾದಲೋಕ) ಅನ್ನದಿಂದ ಪೋಷಣೆ ಆಗುವ ಕಾರಣ, ಅನ್ನಮಯಕೋಶವೆಂದೆನಿಸುವದು.

ಅ–ಇದಕ್ಕೆ ಜಾಗ್ರದವಸ್ಥೆ.

ಬ–ಇದರಲ್ಲಿ ಪ್ರಜ್ವಲಿಸಿರುವ ನಿತ್ಯತೇಜ ಸ್ವರೂಪವಾದ ಆತ್ಮ.

ಅಅ–ಸಮಷ್ಟಿಯಲ್ಲಿ ವಿಶ್ವನರನೆಂದು (ವಿಶ್ವದಲ್ಲಿ ವ್ಯಾಪಕನಾಗಿರುವ ಮನುಷ್ಯ)

ಬಬ–ವ್ಯಷ್ಟಿಯಲ್ಲಿ ವಿಶ್ವವೆಂದು ತೋರುತ್ತಾನೆ. ವಿಶ್ವದಲ್ಲಿಯ ಸ್ಥೂಲಶರೀರಗಳು ನಾಲ್ಕು ಪ್ರಕಾರವಾಗಿವೆ.

ಅಅಅ–ಪಿಂಡಜ, ಮನುಷ್ಯ ಪಶು ಮುಂತಾದದ್ದು.

ಬಬಬ–ಅಂಡಜ, ಪಕ್ಷಿಗಳು ಮುಂತಾದ್ದು.

ಚಚಚ–ಸ್ವೇದಜ, ಹೇನುಗಳು ಮುಂತಾದದ್ದು.

ದದದ–ಉದ್ಭಿಜ, ಮೊಳಕೆಯಿಂದ ಹುಟ್ಟುವ ಸಸಿಯಾದಿಗಳು.

ಸತ್ವರಜ ತಮ ಎಂಬ ತ್ರಿಗುಣವುಳ್ಳಂಥಾ ಭಾವರೂಪವಾದಂಥಾ ಅಜ್ಞಾನ ಎರಡು ಪ್ರಕಾರವಾಗಿದೆ: ಹ್ಯಾಗಂದರೆ: 1. ಸಮಷ್ಟಿ=ಅಜ್ಞಾನದ ಒಟ್ಟು 2. ವ್ಯಷ್ಟಿ=ಅಜ್ಞಾನದ ಪ್ರತ್ಯೇಕತ್ವ. ಗಿಡಗಳು ಎಂಬ ಬಹುವಚನಕ್ಕೆ (ವ್ಯಷ್ಟಿಗೆ) ವನವೆಂಬ ಏಕ ವಚನ ಬಂದರೆ ಸಮಷ್ಟಿಯಾಯಿತು. ವನಕ್ಕೂ ಅದರಲ್ಲಿಯ ಗಿಡಗಳಿಗೂ ಹೆಚ್ಚು ಕಡಮೆ ಇಲ್ಲ. ವನದಲ್ಲಿ ಸುಳಿಯುವ ಗಾಳಿಗೂ (ಪರಮಾತ್ಮನಿಗೂ) ಗಿಡಗಳಲ್ಲಿ ಸುಳಿಯುವ ಗಾಳಿಗೂ (ಮನುಷ್ಯರಲ್ಲಿರುವ ಆತ್ಮಕ್ಕೂ) ಹೆಚ್ಚು ಕಡಮೆ ಇಲ್ಲ. ವನದಲ್ಲಿ ಮಾತ್ರವಲ್ಲ, ಎಲ್ಲಾ ವ್ಯಾಪಿಸುವಂಥಾ ಎಲ್ಲೆಲ್ಲಿರುವಂಥಾ ಗಾಳಿ=ಆಧಾರ ಭೂತವಾದಂಥಾ ಅನುಪಹಿತವಾದಂಥಾ ಚೈತನ್ಯ. ಈ ಅಜ್ಞಾನಕ್ಕೆ ಎರಡು ಶಕ್ತಿಗಳುಂಟು: 1. ಆವರಣ ಶಕ್ತಿ; ಇನ್ನು ಒಂದು ಹಗ್ಗ, ಹಗ್ಗವೆಂದು ತಿಳಿಯದಂತೆ ಮರೆ ಮಾಡುವಂಥಾದ್ದು; 2. ವಿಕ್ಷೇಪಶಕ್ತಿ; ಇದು ಹಗ್ಗವೆಂದು ತಿಳಿಯಗೊಡದೆ, ಹಗ್ಗಕ್ಕೆ ಸರ್ಪ ಎಂಬ ಸಂಭಾವನವ ಹುಟ್ಟಿಸುವಂಥಾದ್ದು.

2. ದೇವರ ಸೂಕ್ಷ್ಮ ಶರೀರ ಇದು ಮುಂದೆ ಬರೆದಿರುವ ಮೂರು ಕೋಶಗಳು ಕೂಡಿ ವ್ಯವಹರಿಸುವಂಥಾದ್ದು.

ಅ—ಪ್ರಾಣಮಯ ಕೋಶ; ಇದು ಕ್ರಿಯಾಶಕ್ತಿಯುಳ್ಳದ್ದು ಅಥವಾ ಕ್ರಿಯಾತ್ಮಕ; ಕಾರ್ಯರೂಪವಾಗಿರುತ್ತದೆ.

ಅಅ—ಪಂಚವಾಯುಗಳು (vital airs)

ಅಅಅ—ಪ್ರಾಣವಾಯು, ಉಸುರು ಬಿಡುವದು. (respiration)

ಬಬಬ—ಅಪಾನವಾಯು, ಉಸುರು ತಕ್ಕೊಳ್ಳುವದು. (inspiration, flatulence)

ಚಚಚ—ಸಮಾನವಾಯು, ಜೀರ್ಣ ಮಾಡುವಂಥಾದ್ದು. (digestion)

ದದದ—ಉದಾನವಾಯು, ಧ್ವನಿ ಉತ್ಪನ್ನ ಮಾಡುವಂಥಾದ್ದು. (pulsation)

ಎಎಎ—ವ್ಯಾನವಾಯು, ದೇಹದಲ್ಲಿ ರಕ್ತ ತಿರಿಗಿಸುವಂಥಾದ್ದು. (circulation of the blood)

ಬಬ—ಪಂಚಕರ್ಮೇಂದ್ರಿಯಗಳು. (ನೋಡು ಸಾಂಖ್ಯಲಕ್ಷಣ.) ಈ ಹತ್ತು ಕೂಡಿ ಪ್ರಾಣಮಯಕೋಶವಾಯಿತು.

ಬ—ಮನೋಮಯಕೋಶ ಸಂಕಲ್ಪ ವಿಕಲ್ಪ ಮಾಡುವಂಥಾ ಅಂತಃಕರಣವೃತ್ತಿಯಾಗಿರುವ ಮನಸೂ ಪಂಚ ಕರ್ಮೇಂದ್ರಿಯಗಳೂ ಕೂಡಿಸುವದೇ. ಇದು ಇಛ್ಛಾಶಕ್ತಿಯುಳ್ಳದ್ದು; ಕರಣರೂಪವಾಗಿರುತ್ತದೆ.

ಚ—ವಿಜ್ಞಾನಮಯಕೋಶ ನಿಶ್ಚಯಮಾಡುವಂಥಾ ಅಂತಃಕರಣ ವೃತ್ತಿಯಾಗಿರುವ ಬುದ್ಧಿಯೂ ಪಂಚಜ್ಞಾನೇದ್ರಿಯಗಳೂ ಕೂಡಿ ವ್ಯವಹರಿಸುವದೆ. ಇದು ಜ್ಞಾನಶಕ್ತಿಯುಳ್ಳದು; ಕರ್ತೃರೂಪವಾಗಿರುತ್ತದೆ.

ಜ್ಞಾನೇಂದ್ರಿಯಗಳು ತಮ ತಮಗೆ ಸಂಬಂಧವಾದ ವಿಷಯಗಳನ್ನು ಗ್ರಹಿಸಿ ಇಚ್ಛಾದ್ವೇಷಗಳನ್ನು ಮನಸಿನಲ್ಲಿ ಹುಟ್ಟಿಸುವವು. ಇದು ವಿಜ್ಞಾನಮಯ ಕೋಶಕ್ಕೆ ಸಂಬಂಧವಾದ ವ್ಯವಹಾರ. ಆ ಮೇಲೆ ಮನಸಿನಲ್ಲಿ ಬೇಕು ಅಥವಾ ಬೇಡ ಎಂಬ ಹಾಗೆ ನಿರ್ಣಯವಾಗಿ ಕರ್ಮೇಂದ್ರಿಯಗಳಿಂದ ನಡಿಸುವದು, ಮನೋಮಯ ಕೋಶಕ್ಕೆ ಅನುಸಾರವಾದ ವ್ಯವಹಾರ. ಪ್ರಾಣಮಯ ಕೋಶಕ್ಕೆ ಸಂಬಂಧವಾದ ವ್ಯವಹಾರಗಳು ಮನಸಿನ ನಿರ್ಣಯದಿಂದಲ್ಲ, ತಮ್ಮಿಷ್ಟಕ್ಕೆ ಆಗುವಂಥಾವು.

ದ—ಈ ಮೂರು ಕೋಶಗಳಿಂದ ಪ್ರಜ್ವಲಿಸಿರುವ ಆತ್ಮ.

ಅಅ—ಸಮಷ್ಟಿಯಲ್ಲಿ ಸೂತ್ರಾತ್ಮವೆಂದು ಪ್ರಾಣವೆಂದು.

ಬಬ—ವ್ಯಷ್ಟಿಯಲ್ಲಿ ತೇಜಸ್ಸೆಂದು ತೋರುವದು.

ಎ—ಈ ಸೂಕ್ಷ್ಮದೇಹಕ್ಕೆ ಸ್ವಪ್ನಾವಸ್ಥೆ.

3. ಕಾರಣ ಶರೀರ ; ಇದರಲ್ಲಿ ದೇವರು ಆನಂದ ಅನುಭವಿಸುವದರಿಂದ, ಇದು ಆನಂದಮಯ ಕೋಶವೆಂದೆನ್ನಿಸುವದು.

ಅ—ಇದಕ್ಕೆ ಸುಷ್ತ್ಯವಸ್ಥೆ.

ಬ—ಇದರಲ್ಲಿ ಪ್ರಜ್ವಲಿಸಿರುವ ಆತ್ಮ :

ಅಅ—ಸಮಷ್ಟ್ಯಯಲ್ಲಿ ಈಶ್ವರನೆಂದು

ಬಬ—ವ್ಯಷ್ಟ್ಯಯಲ್ಲಿ ಪ್ರಾಜ್ಞನೆಂದು ತೋರುವದು.

4. ನಿಜತೇಜಸ್ವರೂಪವಾದ ಆತ್ಮ ; ಅದು ತುರ್ಯಾವಸ್ಥೆಯಲ್ಲಿ ಅಂದರೆ ಎಚ್ಚರಿಕೆ ಅರವು ಏನಿಲ್ಲಿದಂಥಾ ಸುಷುಪ್ತಿಯಲ್ಲಿರುವಂಥಾದ್ದು.

ಹೀಗಾದ ಮೇಲೆ ತತ್ವಂ ಅಸಿ (ಅದೇ ನೀನು) ಎಂಬ ಮಹಾ ವಾಕ್ಯವನ್ನು ತಿಳಿಯ ಬೇಕು. ತತ್ಪದದ (ಅಭಿಪ್ರಾಯವು=ಎಲ್ಲಾದರ ಸಮಷ್ಟಿ. ಇದರ ಲಕ್ಷ್ಯಾರ್ಥ ಯಾವದಂದರೆ : ಅಜ್ಞಾನದಲ್ಲಿ ಮುಳಿಗಿದ ಚೈತನ್ಯಕ್ಕೆ ಆಧಾರ ಭೂತವಾದ ಅನುಪಹಿತವಾದ ಚೈತನ್ಯವೇ. ತ್ವಂಪದದ ಅಭಿಪ್ರಾಯವು=ಎಲ್ಲಾದರ ವ್ಯಷ್ಟಿ, ಇದರ ಲಕ್ಷ್ಯಾರ್ಥ ಯಾವದಂವರೆ : ಅಜ್ಞಾನದ ವ್ಯಷ್ಟಿಯಲ್ಲಿ ಮುಳಿಗಿದ ಚೈತನ್ಯಕ್ಕೆ ಆಧಾರಭೂತವಾದ ಅನುಪಹಿತವಾದ ಚೈತನ್ಯವೇ. ಕಂಣಿಗೆ ಕಾಣುವಂಥಾದ್ದನ್ನು ವಿಚಾರಿಸಿ ನೋಡುವಾಗ, ಇದು ನಿತ್ಯವಲ್ಲ, ದೇವರನ್ನು ಮರೆಮಾಡುವ ಮುಸುಕಲ್ಲದೆ ಆತನ ನಿಜ ಸ್ವರೂಪವೇನಿಲ್ಲ ಎಂಬಂತೆ ತೋರುವದು. ಆದರೆ ಆ ಸ್ಥೂಲ ಶರೀರದ ವ್ಯವಹಾರಗಳಿಗಿಂತ ಸೂಕ್ಷ್ಮಶರೀರದ ವ್ಯವಹಾರಗಳು ಸೂಕ್ಷ್ಮವಾಗಿವೆ. ಅದಕಾರಣ ಇದೆ ವಸ್ತುವಾಗಿದ್ದೀತು ಎಂದು ನೆನಿಸಿ ವಿಚಾರ ಮಾ

ಡುತ್ತಾರೆ. ಹಾಡಲಾಗಿ ಇದೂ ನಿತ್ಯವಲ್ಲ, ಇದೂ ದೇವರನ್ನು ಮರೆಮಾಡುವ ಮುಸುಕೇ ಎಂಬ ಹಾಗೆ ಕಾಣುವದು. ಆಮೇಲೆ ಇಷ್ಟಕ್ಕೆ ಕಾರಣವಾಗಿರುವಂಥಾದ್ದು ವಸ್ತುವಾಗಿದ್ದೀತು ಎಂಬ ಆಲೋಚನೆ ಹುಟ್ಟುವದು. ಇದನ್ನು ವಿಚಾರಿಸಲಿಕ್ಕೆ ಹೋದರೆ, ಇದು ಒಂದು ಮುಸುಕಂತೆ ತೋರುತ್ತದಲ್ಲದೆ, ನಿತ್ಯವೇನು ತೋರುವದಿಲ್ಲ. ಯಾಕಂದರೆ ವಸ್ತುವಿನ ವಿಷಯು ಏನೇನು ಹೇಳಲಿಕ್ಕೆ ಬಾರದು. ಕಾರಣವಾದಲ್ಲಿ ದ್ವೈತ ಬಂದ ಹಾಗಾಯಿತು. ಗುಣ ಬಂದ ಹಾಗಾಯಿತು. ಹೀಗಿರಲಾಗಿ ನಿರ್ಗುಣವಾದ ನಿಜ ತೇಜ ಸ್ವರೂಪವೆ ಮಾತ್ರ ವಸ್ತುವೆಂದು ತೋರುವದು. ಪರಬ್ರಹ್ಮ, ಚಿತ್ತವೃತ್ತಿ ಎಂಬ ಕನ್ನಡಿಯಲ್ಲಿ, ನೋಡಿ ತನ್ನ ಮುಖದ ಪ್ರತಿ ಬಿಂಬವನ್ನು ಕಂಡು, ಇದು ತಾನು ಎಂದು ನೆನಸಿ ಪಂಚಕೋಶಗಳ ಮುಸುಕನ್ನು ಹಾಕಿಕೊಂಡ ಹಾಗಾಯಿತು. ಚಿತ್ತವೃತ್ತಿ ಎಂಬ ಕನ್ನಡಿ ತೆಗೆದರೆ, ಆ ಪ್ರತಿ ಬಿಂಬಕ್ಕೆ ಕಾರಣವಾದ ಪರಬ್ರಹ್ಮನ ಮುಖ ಮಾತ್ರ ಉಳಿಯುವದು.

ಈ ದರ್ಶನಗಳಲ್ಲಿ ತೋರುವ ದೋಷಗಳು.

1. ಸಾಧಾರಣವಾದ ದೋಷಗಳು.

ಅ—ಹದಿನಾಲ್ಕು ಲೋಕಗಳುಂಟು ; ಸೂರ್ಯ ಪೃಥಿವಿಗೆ ಚಂದ್ರನಿಗಿಂತೆ ಸಮೀಪ ; ಮಳೆ ಚಂದ್ರನಿಂದ ಬರುವದು, ಬಿದ್ದಮೇಲೆ ಅದು ತಿರಿಗಿ ಮಂಜಾಗಿ ಚಂದ್ರನ ಕಡೆಗೆ ಯೇರಿ ಹೋಗುವದು.

ಬ—ಮರಣದಲ್ಲಿ ಆತ್ಮ ಬ್ರಹ್ಮರಂಧ್ರದಿಂದ ಹೊರಟು ಹೋಗುವದು.

ಚ—ನಿದ್ರೆಯಲ್ಲಿ ಮನುಷ್ಯರ ಆತ್ಮ ಪರಬ್ರಹ್ಮನ ಕೂಡದು.

2. ದೊಡ್ಡ ದೋಷಗಳು.

ಅ—ದೇವರಿಲ್ಲವೆಂದು ಸಾಂಖ್ಯ ಬೋಧಿಸುವದು.

ಬ—ದೇವರೂ ವಿಶ್ವವೂ ಒಂದೇ ಎಂದು ವೇದಾಂತ ಬೋಧಿಸುವದು.

ಚ—ದೇವರೂ ಮನುಷ್ಯರ ಆತ್ಮವೂ ಒಂದೇ ಎಂದು ವೇದಾಂತ ಬೋಧಿಸುವದು.

ದ—ಮೂಲಪ್ರಕೃತಿ ನಿತ್ಯವೆಂದು ಸಾಂಖ್ಯ ಬೋಧಿಸುವದು.

ಎ—ದ್ರವ್ಯಪರಮಾಣು ರೂಪವಾಗಿ ನಿತ್ಯವೆಂದು ನ್ಯಾಯ ವೈಶೇಷಿಕ ಬೋಧಿಸುವದು.

ಪ–ಆತ್ಮ ಮನುಷ್ಯರದು ನಿತ್ಯವೆಂದು ನ್ಯಾಯಸಾಂಖ್ಯಾ ವೇದಾಂತ ಬೋಧಿಸುವದು.

ಗ–ಮೂರು ದರ್ಶನಗಳು ಬೋಧಿಸುವ ಜನ್ಮಾಂತರವು.

ಹ–ವೇದಾಂತ ಸಾಂಖ್ಯ ಬೋಧಿಸುವ ವಿಧಿ. ತಾವು ತಮಿಗೆ ಕಲ್ಪಿಸಿಕೊಂಡ ದೇವರುಗಳಾದರೂ ಬಂದು ಹೆಚ್ಚಿನ ಅಧಿಕಾರಕ್ಕೆ ಬಳಗಾಗಿದ್ಧಾರೆಂದು ನೋಡಿ ಆ ಅಧಿಕಾರ ನಿತ್ಯವಾದ ನಿಜವಾದ ದೇವರೇ ಎಂದು ತಿಳಿಯದೆ ಆತ್ಮನಿಗೆ ವಿಧಿ ಅಂದರು.

ಯ–ಮೂರು ದರ್ಶನಗಳಲ್ಲಿಯು ಪಾಪ ಪುಣ್ಯದ ವಿವರವು. ಈ ಸೂಕ್ಷ್ಮಸ್ಥೂಲ ದೇಹಗಳನ್ನು ಧರಿಸಿಕೊಂಡು ಹುಟ್ಟಿದ್ದೇ ಪಾಪ ದೇವರು ಮೊದಲು ಪಾಪದಲ್ಲಿ ಬಿದ್ದ ಹಾಗಾಯಿತು (ವೇದಾಂತ)

ಕ–ಅವು ವಿವರಿಸುವ ಪುರುಷಾರ್ಥ.

ಈ ದರ್ಶನಗಳನ್ನು ಮಾಡಿದವರು ಬಂದು ತರದ ರೋಗದಲ್ಲಿ ಬಿದ್ದಿದ್ದರು ಎಂದು ತೋರುತ್ತದೆ. ಆ ರೋಗಕ್ಕೆ ಬಳಗಾದವರು ಅಕಸ್ಮಾತ್ತಾಗಿ ಕರ್ಮೇಂದ್ರಿಯ ಜ್ಞಾನೇಂದ್ರಿಯಗಳ ವ್ಯವಹಾರಗಳು ನಿಂತ ಸ್ಥಿತಿಯಲ್ಲಿ ಶೇರುತ್ತಾರೆ. ಅವರನ್ನು ಹೊಡೆದರೂ, ಘಾಯ ಮಾಡಿದರೂ, ನೋವೇ ಇಲ್ಲ. ನಾಭಿ ಸ್ಥಾನದ ಮೇಲೆ ಬಂದು ಪುಸ್ತಕ ಇಟ್ಟರೆ, ಅದನ್ನು ಓದಿ ಹೇಳುವರು. ಯಾವದೊಂದರ ಗ್ರಹಿಕೆ ಅವರಿಂದ ಆಗ ಬೇಕಾದರೆ, ಅದನ್ನು ನಾಭಿ ಸ್ಥಾನದ ಮೇಲೆ ಇಡಬೇಕು. ಅವರು ತಮ್ಮಲ್ಲಿರುವ ಆತ್ಮದ ವಿಷಯಕ್ಕೆ ಹೇಳುವದೇನಂದರೆ ; ಅದು ಹೆಬ್ಬೆರಳಿನಷ್ಟು ದೊಡ್ಡದು, ಹೃದಯದ ಬಂದು ಗವಿಯೊಳಗೆ ಬಂದು ಕಮಲದ ಮಧ್ಯದಲ್ಲಿರುತ್ತದೆ. ಅಲ್ಲಿಂದ ತಮ್ಮ ಪರವಶ ಸ್ಥಿತಿಯಲ್ಲಿರುವಾಗ, ಮೇಲಕ್ಕೆ ಏರಿ ಹೋಗಿ, ಬ್ರಹ್ಮರಂಧ್ರದಿಂದ ಹೊರಟು, ಬೇಕಾದಲ್ಲಿ ಸಂಚಾರ ಮಾಡುವದು. ಸೂರ್ಯ ಚಂದ್ರಾದಿಗಳ ಕಡೆಗೆ ಹೋಗಿ, ಅಲ್ಲಿ ಇದ್ದದ್ದು ನೋಡಿ ಹೋದ ದಾರಿಯಲ್ಲಿ ತಿರಿಗಿ ಬರುವದು. ಅಂಥಾ ರೋಗದಲ್ಲಿ ಬಿದ್ದವರು ಹೇಳಿದ ಮಾತಿನ ಮೇಲೆ ಭರವಸ ಇಡಲಾಗದು. ಚಂದಾಗಿ ಶೋಧಿಸಿ ನೋಡತಕ್ಕದ್ದು. ಬಹಳವಾಗಿ ಅವರ ಮಾತು ವಿದ್ಯಕ್ಕೂ ಸರ್ವಾನುಭವಕ್ಕೂ ವಿರೋಧವಾಗುವದು. ಯೋಗಾಭ್ಯಾಸದಿಂದ ಆ ರೋಗ ಎಬ್ಬಿಸ ಬಹುದು. ಕಪಿಲ ಮುಂತಾದ ಮುನಿಗಳು ತಮ್ಮ ಪರವಶದಲ್ಲಿ ಕಂಡದ್ದನ್ನು ಹೇಳಿದ ಕಾರಣ, ಸಾಂಖ್ಯ ಮೊದಲಾದ ಭೋಧನೆಗಳಿಗೆ ದರ್ಶನ (ಕಂಡದ್ದು) ಎಂಬ ಹೆಸರಾಯಿರು.

---

## INTRODUCTION.

### ಪೀಠಿಕಾ ಪದಗಳು.

516. ಘನತರದ ಸಹವಾಸಿ[1] ವಂಶದ
ಲನುಪಮನು ಮಹಲಿಂಗದೇವನ
ತನಯನಹ ಶ್ರೀರಂಗ ಸಹಜಾನಂದಗುರುಪದವಾ
ನೆನೆದು ಸಮ್ಯಜ್ಞಾನವನು ಬ
ಲ್ಲನುಭವಿಗಳಹುದೆನಲು, ಪೇಳದ,
ವಿನುತರಾಸ್ವಾದಿಸುವು ದೊಲಿದೀ ಯನುಭವಾಮೃತವಾ

Name and tribe of the author.

3. ಒಬ್ಬ ಬ್ರಾಹ್ಮಣನು ಪೂರ್ವದಲ್ಲಿ ಒಬ್ಬ ಅಂತಿಜೆಯ ಸಹವಾಸ ಮಾಡಿ ತನ್ನ ಕುಲಕ್ಕೆ ಹೊರಗೆ ಆದನು. ಅವನ ವಂಶಕ್ಕೆ ಸಹವಾಸಿ ವಂಶವೆಂಬ ಹೆಸರಾಯಿತು. ಈ ವಂಶದಲ್ಲಿ ಮಹಲಿಂಗ ನೆಂಬವನಿಗೆ ಹುಟ್ಟಿದ ಮಗ ರಂಗನಾಥನು ಸಹಜಾನಂದ ನೆಂಬ ಗುರುವಿನ ಸಹಾಯದಿಂದ ಸುಮಾರು ೭೦೦ ವರುಷಗಳ ಹಿಂದೆ ಈ ಕೃತಿಯನ್ನು ರಚಿಸಿದನು.

517. ಕನ್ನಡದ ನುಡಿ ಯೆಂದುಪೇಕ್ಷಿಸ
ಲಿನ್ನು ಹಿರಿಯರಿಗುಚಿತವಲ್ಲಿದು ;
ಕನ್ನಡಿಯೆ ದರ್ಪಣವದಲ್ಲದೆ ಭೇದವೇನಿದಕೇ ?
ಮುನ್ನಲುಪನಿಷದರ್ಥವನು ಸಂ
ಪನ್ನಮತಿಗಳು ಪೇಳ್ದರದ ನಾ
ನಿರ್ಣಯಿಸಿದೆನು ; ಕೊರತೆ ಯಿದ್ದರೆ, ಮನ್ನಿಸುವದೊಲಿದೂ ;

It is not right to despise this book because it is written in Canarese.

518. ಸುಲಿದ ಬಾಳೆಯ ಹಣ್ಣಿನಂದದಿ
ಕಳೆದ ಸಿಬುರಿನ ಕಬ್ಬಿನಂದದಿ
ಯುಳಿದ ವೃಷ್ಣದಹಾಲಿನಂದದಿ ಸುಲಭವಾಗಿರ್ದಾ
ಲಲಿತವಹ ಕನ್ನಡದನುಡಿಯಲಿ
ತಿಳಿದು ತನ್ನೊಳು ತನ್ನ ಮೋಕ್ಷವ
ಘಳಿಸಿಕೊಂಡರೆ, ಸಾಲದೇ ? ಸಂಸ್ಕೃತದಲಿನ್ನೇನೂ ;

If one gets saving knowledge from a book, written in the beautiful Canarese language, is it not enough?

519. ಬಂದು ದಿನ ಶುಕಯೋಗಿ ವಿನಯದಿ

Shuka, the son of Vyasa, asks his father, to explain the Védánta to him.

ತಂದೆಯಡಿಗಳಿಗೆರಗಿ ಚಿತ್ತೈ

ಸೊಂದು ಬಿಂನಹ ! ಬ್ರಹ್ಮ ವೆಂದೊಡೆ, ಯೆಂತಿಹುದು ? ತಿಳಿವಾ

ಛಂದವಾವುದು ? ತಿಳಿಯೆ, ಫಲವೇ

ನೆಂದು ? ಕೇಳಲು, ವ್ಯಾಸಮುನಿಪತಿ

ಮಂದಹಾಸದಲಂದು ನುಡಿದನು ಕಂದಗುತ್ತರವಾ.

## 2. ಅಧಿಕಾರಿ ಲಕ್ಷಣ.

520. ಮಗನೆ ! ಬ್ರಹ್ಮವ ತಿಳಿವಡಧಿಕಾ

His reply. Description of those, who are able to comprehend this doctrine.

ರಿಗಳನರಿಯಲಿ[1] ಬೇಕು ಮೊದಲಲಿ ;

ಬಗೆದು ಸುಕ್ಷೇತ್ರದಲಿ ಬೀಜವ ಬಿತ್ತೆ, ಫಲವಹುದೂ ;

ನಗದಸಾರದ ಭೂಮಿಯಲಿ ತಾ

ನೊಗೆದು ಫಲವಹುದೇ ? ನಿರರ್ಥಕ !

ಸೊಗಸದಿದು ! ಕೇಳನಧಿಕಾರಿಗೆ ಯೋಗ್ಯವಲ್ಲೆಂದಾ.

1- ಅರಿಯೆ ಎಂಬ ರೂಪಕ್ಕೆ ಬದಲಾಗಿ ಈ ರೂಪ ಅವಧಾರಣಾರ್ಥವಾಗಿ ಬರುತ್ತದೆ.

521. ಮನವಚನಕಾಯದಲಿ ಪಾಪವ

They do not commit sin in thought, word, or action. They are indifferent to the abuse and to the praise of others.

ನೆನೆಯು, ನುಡಿಯುನು, ಮಾಡನನ್ಯರು

ತನಗೆ ಯುಪಕಾರವನು ಮಾಡಲು, ಪೂರ್ವಕೃತವೆಂಬಾ ;

ತನುಜರನುಜರುತಾಯಿತಂದೆಗ

ಳೆನಿತು ತನ್ನನು ದೂಷಿಸಲು, ಭೂ

ಷಣವ ಮಾಡಲು, ಹಿಗ್ಗಿ ತಗ್ಗನು ಮೋಕ್ಷಕಾಂಕ್ಷಿತನು !

522. ಬಂದು ಸುಖದುಃಖಗಳು ತನ್ನನು

He is not depressed by grief nor elated with joy.

ಮುಂದುಗೆಡಿಸಲು, ನೋಯದುಬ್ಬದೆ,

ಬಂದುದೆಲ್ಲವು ಈಶ್ವರಾಜ್ಞೆಯನುತ್ತ ಧೈರ್ಯವನೂ

ತಂದುಮನದಲಿ ದೃಢವಿರಕ್ತಿಯ
ಲೊಂದಿ ಭೋಗಭ್ರಾಂತಿ ತನಗಳಿ
ದಂದು ಮೋಕ್ಷಾಪೇಕ್ಷೆಯಾಗೆ, ಮುಮುಕ್ಷುವೆನಿಸುವನೂ.

523. ತರುಣಿಯರು ತನ್ನಿದಿರಿಲೆಸದಿರೆ

Like a blind, deaf, maimed man, he does not see women, nor hear abuse, nor touch the property of others.

ಕುರುಡನಂತಿಹ ; ಪರರನಿಂದೆಯ
ನೊರೆಯಲನ್ಯರು ಬಧಿರನಂದದಿ ಕೇಳನದನೊಲಿದೂ
ಕರವಿಕಳನಂದದಲಿ ಹಿರಿವಹ
ಪರ ಧನವನು ಹಿಡಿಯ ; ದುಷ್ಟರು
ಜರಿಯೆ ತನ್ನನು, ಮರಳಿ ಜರಿಯ, ಮುಮುಕ್ಷುನೋಡೆಂದಾ.

524. ಎಡರಿನಲಿ ಯುಬೆ ಗುಂದದುಬ್ಬದೆ

In poverty and wealth his mind is not disturbed.

ಪ್ರೌಢವಿಯಧಿಪತಿ ಯಾಗೆ, ಬಡತನ
ವಡಸಿದರೆ, ಕಂಗೆಡದೆ, ವಿತ್ತವಘಳಿಸಿ ಗರ್ವಿಸದೇ,
ಮಡದಿಮನೆಮನವಾರ್ತಿಮಕ್ಕಳ
ಗಡಣದಲಿ ಕಡುಮಮತೆ ಇಲ್ಲದೆ
ದೃಢವಿರಕ್ತಿಯಲಿರಲು, ಮೋಕ್ಷವ ಪಡೆವನವನೆಂದಾ.

525. ಕಾಯಸುಖವನು ಬಯಸಿ ಧನವನು

Description of those, who are unable to understand this system.

ಸಾಯಸದಲಾರ್ಜಿಸಿ ಮಧಾಂದರು
ಗಾಯಕರ ಪಾಠಕರ ಭಂಡರ ಬಯಕೆಗಳ ಬಯಸೀ
ಬಾಯಬಡಿಕರು ಬೊಗಳುವರು ನಿ
ಶ್ರೇಯಸಾಭ್ಯಾಸಿಗಳ ನಿಂದಿಪ
ನಾಯಿಗೇತಕೆ ನವರಸಾನ್ನವು ? ಮಗನೆ ! ಕೇಳೆಂದಾ.

526. ಕಾಲಸಂಕಲೆ ಯಿರಲು, ಕೊರಳಿಗೆ

He is fettered by family ties.

ಕೋಳವನು ಬಲುಹಾಗಿ ತೊಡಿಸುವ
ವೋಲು, ಬಹುವಿಧವಾದ ಸಂಸೃತಿಬಂಧ ಬಿಗಿದಿರಲೂ,
ಮೇಲೆ ವಿಷಯಾಸಕ್ತನಾದಗೆ
ಹೇಳಲೇನದ ? ಮೋಕ್ಷಶಾಸ್ತ್ರದ
ಗಾಳಿ ಯೆಂಬದು ಸೋಂಕೆದರೆ, ಸೈರಿಸನು ಕೇಳೆಂದಾ !

527. ಮೊದಲೆ ಮರ್ಕಟ, ಮೇಲೆ ಮದ್ಯದ

He is like a monkey, which, intoxicated and then bitten by a scorpion, is dancing.

ಮದವು ತಲೆ ಹಿಡಿದಿರಲು, ವೃಶ್ಚಿಕ
ತುದಿಯು ಕಾಲಿಗೆ ಕಚ್ಚಿದರೆ, ಕುಣಿದಾಡುವಂದದಲೀ,
ಅಧಿಕಧನಸಂಪತ್ತು ಯವ್ವನ
ವೊದಗಿರಲು, ವನಿತಾದಿವಿಷಯಾ
ಸ್ಪದವೆನಿಸಿ ವೊಡಲರಿಯದವಗಧ್ಯಾತ್ಮವೇಕೆಂದಾ.

528. ಮರುಳು ಹಿಡಿದವ ಮದ್ದುಗುಣಿಕೆಯ

He is forgetfu of himself.

ನರದು ಕುಡಿವಂದದಲಿ, ಮಾಯಾ
ವರಣದಲಿ ಮರದಿರ್ದು, ತನ್ನನು ಮೂಢಭಾವದಲೀ
ಪರಿಪರಿಯ ಸಂಸಾರ ಪಾಶದಿ
ಹಿರಿದು ಬಿಗಿವಡದಿರ್ದ ಮನುಜಗೆ
ದೊರಕುವದೆ ಪರತತ್ವ ? ತಿರುಳಿಯಹುಳುವಿನಂದದಲೀ

1. ಈ ಹುಳ ಯಾವಾಗಲೂ ನೀರಿನ ಮೇಲೆ ಚಕ್ರಾಕಾರವಾಗಿ ಹರಿದಾಡುತ್ತದೆ.

529. ಮರಳೊಳಗೆ ತಲೆ ಯಿಟ್ಟು ವನಕೆಯ

Who knows how to avoid being wounded, after having put his head into a mortar?

ಭರದ ಘಾಯವ ತಪ್ಪಿಸಲಕಾ
ರರಿವರ್‍ಯಾರೈ ? ಬಹುದುಃಖಸಂಗ್ರಹವಾದ ಸಂಸೃತಿಯಾ

ಶರಧಿಯೊಳು ಬಿದ್ದವಗದೆಂತೋ
ಪರಿಹರಿಸುವದು ? ಜನ್ಮಜರೆಗಳು
ಮರಣಮೊದಲಹವೆಲ್ಲ ತತ್ವವನರಿಯದವಗೆಂದಾ.

530. ಕೊರಳು ಸುತ್ತಿದ ಹಾವು ಕಚ್ಚದೆ
ಮರಳುವದೆ ? ಮಾಯಾಪ್ರಬಂಧದಿ
ಹೊರಳುತಿಹ ಜೀವರಿಗೆ ಪರಿಹರಿಸುವದೆ ಭವಬಂಧಾ?

The ignorant wander from birth to birth.

ಕುರುಡ ಕಾಣದೆ ಘಾತಕೂಪದೊ
ಳುರುಳುವಂತೆ, ವಿವೇಕಶೂನ್ಯರು
ತಿರುಗುವರು ಭವಮಾಲೆಯಲಿ ಮೋಕ್ಷವನಪೇಕ್ಷಿಸದೇ.

531. ಕಾಣದಗೆ ಕನ್ನಡಿ ಯದೇತಕೆ ?
ಗಾಣದೆತ್ತಿಗೆ ಗೆಜ್ಜೆ ಯೇತಕೆ ?
ಗೋಣಿಗೇತಕೆ ಗವಸಣಿಗೆ ? ನರಿಗೇಕೆ ಸುರಲೋಕಾ ?

Why to a blind man a mirror? why to a sensual man redemption?

ರಾಣಿ ಯಾಕೆ ನಪುಂಸಕಗೆ ? ಗೀ
ರ್ವಾಣಭಾಷೆಗಳೇಕೆ ಗೊರವಗೆ ?
ಕೇಣವಿಲ್ಲದ ವಿಷಯಲಂಪಟಗೇಕೆ ವೈರಾಗ್ಯ ?

532. ಎತ್ತು ತೆಂಗಿನಕಾಯಿ ಬಲ್ಲುದೆ ?
ಕತ್ತೆ ಯರಿವುದೆ ಕತ್ತುರಿಯ ? ಬಲು
ಬುತ್ತಿಗಳ್ಳರಿಗೇಕೆ ಸತ್ಯವ್ರತಸದಾಚಾರಾ ?

Does a bullock know a cocoa-nut? etc. why to men, addicted to women, knowledge?

ದತ್ತಪುತ್ರರಿಗೇತಕೈ ಪಿತೃ
ಭಕ್ತಿ ? ಮಾಲ್ಯಸುಗಂಧವನಿತಾ
ಸಕ್ತರಿಗೆ ಪರತತ್ವಚಿಂತೆ ಯದೇಕೆ ? ಹೇಳೆಂದಾ !

533\. ನರಿಗಳೂರನು ಸೇರುವವೆ ? ನೇ

Do the owls fly about in the light of the sun? why anxiety about heaven to a sinner?

ಸರನ ಬೆಳಗಿಗೆ ಗೂಗಿಗಳು ಸಂ
ಚರಿಸುವವ ? ಬೆಳದಿಂಗಳಿಷ್ಟವೆ ಜಾರಚೋರರಿಗೇ ?
ಸರಸಕವಿತಾಪ್ರೌಢಿ ಯಲ್ಲರಿ
ಗರಿಯಲಹುದೇ ? ದುರ್ವ್ಯಸನದಿಂ
ದಿರುವ ಪಾತಕಿಗೇತಕ್ಕೈ ನಿಶ್ರೇಯ ಸಾಭ್ಯಾಸಾ ?

534\. ಎತ್ತಿಗುತ್ತಮಲಿಂಗಮುದ್ರೆಯ

Does an ass become Basava by getting the impression of a linga? why inquiry to a bad man?

ನೊತ್ತಿದರೆ, ಯದು ಬಸವನೆಂಬರು
ಕತ್ತೆಯನು ಹಿಡಿತಂದು ಮುದ್ರೆಯನೊತ್ತಲಾಕತ್ತೇ
ಕತ್ತೆಯಲ್ಲದೆ ಬಸವನಪ್ಪುಡ ?
ಸತ್ಯಸಂದನೆ ಯೋಗ್ಯನಲ್ಲದೆ
ತೊತ್ತುಬಡಿಕಗದೇಕೆ ತತ್ವವಿಚಾರ ? ಹೇಳೆಂದಾ !

535\. ಚರ್ಮಖಂಡವ ಕಡಿವ ಶುನಕಗೆ

To a dog clarified butter is insipid; it prefers meat. Far from ignorant men is spiritual joy.

ಕಮ್ಮಗಿಹ ತುಪ್ಪದಲರೋಚಕ ;
ಕರ್ಮಕಿಂಕರರಾದ ಕಾಮ್ಯಫಲಾಭಿಲಾಷರಿಗೆ
ಬ್ರಹ್ಮವಿದ್ಯಾಭ್ಯಾಸದಲಿ ಮನ
ನೆಮ್ಮದದರಿಂದಾತ್ಮಸುಖವದು
ದುರ್ಮತಿಗಳಿಗೆ ದೂರವಾಗಿಹುದರಸಿ ನೋಡಿದರೇ

536\. ಮೀನ ನೀರೊಳಗಿರ್ದಡೇನೈ ?

What, if a fish is in the water? what, if a man, without know-

ಧ್ಯಾನವನು ಬಕ ಮಾಡಲೇನೈ ?
ಕಾನನವನಾಶ್ರೈಸಿ ಮರ್ಕಟವಿರ್ದಡೇನಲ್ಲೀ

edge, performs ablutions? &c.

ಮೌನದಲಿ ಕೋಗಿಲೆ ಯಿರಲ್ಕದ
ಕೇನು ಫಲ ? ಸುಜ್ಞಾನವಿಲ್ಲದೆ,
ಮೌನವೊದಲಾಗಿರ್ದರೇನೆಲೆ ಮಗನೆ ! ಕೇಳೆಂದಾ !

537. ಹುತ್ತ ಬಡಿದರೆ, ಹಾವು ಸಾವುದೆ ?

Is the serpent killed by men beating on its hole? is salvation obtained by castigating the body?

ವ್ಯರ್ಥವಾದುಪವಾಸವೊದಲಾ
ಗುತ್ತಲಿಹ ವ್ರತಗಳಲಿ ದೇಹವ ದಂಡಿಸಲು, ಬರಿದೇ,
ಮುಕ್ತಿ ದೊರಕುವದೇ ? ವಿವೇಕ ವಿ
ರಕ್ತಿ ಶಮೆ ದಮೆ ಗುರುಪದಾಂಬುಜ
ಭಕ್ತಿ ಯಿಲ್ಲದ ಕಾಮ್ಯಕರ್ಮಾಸಕ್ತರಿಂಗೆಂದಾ.

538. ವಿಷಯಲಂಪಟರಾಗಿ ಸಂಸೃತಿ

The ignorant just like cattle, or like a dancer, dancing as he is directed by his master.

ವ್ಯಸನದಲ್ಲಿಹ ಜೀವ ಕೋಟಲೆ
ಪಶುಗಳೆನಿಸುವರೀಶ್ವರಾಜ್ಞಾಪಾಶಪರಿಯುತರೂ
ಉಸುರಲೇನದನೊಡೆಯನೇ ಪ್ರೇ
ರಿಸೆ, ಕುಣಿವ ನಟನೋಲು, ನರಕವ
ನೆಸೆವ ಸ್ವರ್ಗವನೆರಡಕೆಡೆಯಾಡುತ್ತಲಿಹರೆಂದಾ.

THIS LIFE DISGUSTING. 3. ಸಂಸಾರಹೇಯ.

539. ಕೇಳು ! ಶುಕಯೋಗೀಂದ್ರ ! ಸಂಸೃತಿ

This life a vain talk! The things of this life a lamp exposed to the wind.

ಹಾಳುವಾದವಲಾ ವಿಚಾರಿಸೆ !
ಹೇಳಲೇನದು ಬಯಲ ಬಳಲಿಕೆಯಾದ ಸಾರಂಭಾ ;
ಕಾಳುಸತಿಸುತಧನಗೃಹಂಗಳು
ಗಾಳಗೊಡ್ಡಿದ ಸೊಡರಿನಂದದಿ
ಕಾಲವಶದಲಿ ಕೆಟ್ಟು ಹೋಹದು ನಿತ್ಯವಲ್ಲೆಂದಾ.

540\. ಆರು ಮೀರಲಿಕರಿದು ಕಾರಾ
ಗಾರದಂದದಿ ತೋರ್ಪ ಘೋರಾ
ಕಾರಸಂಸಾರವನು ಸಚರಾಚರದ ಜೀವರಲೀ
ಹಾರಿ-ಸ್ವರ್ಗವನೂರಿ ನರಕವ
ಸೇರಿ ಧರಣಿಯ ಸುಕೃತದುಷ್ಕೃತ
ಕಾರಿಯದ ಸುಖದುಃಖದೊಳು ಲೋಲಾಡುತಿಹರೆಂದಾ.

This life like a dungeon. Men moving from pleasure to pain and *vice versa.*

541\. ಕೆಲರು ಮನೆಮನವಾರ್ತೆಮಕ್ಕಳ
ಗೊಲಿದು ಮಮತೆಯ ಮಾಡಿ ಧನವನು
ಘಳಿಸಿ ಸಂಸೃತಿಸಂಭ್ರಮದೊಳಾಸಕ್ತರಾಗಿಹರೂ ;
ಫಲವ ಕಂಡರದೇನನಕಟೂ !
ಘಳಿಲನೆಲ್ಲವು ಬಟ್ಟಬಯಲಾ
ಗಳಿವವದರಿಂ ದುಃಖವಲ್ಲದೆ ಸುಖವದೆಲ್ಲಿಯದೂ ?

Those, who love this world, have nothing but grief from it.

542\. ತನ್ನ ಹಿತವರು ತಿಳಿಯಲರಿಯದ
ಕುನ್ನಿ ಬರಿದೇ ಬಯಸಿ ಬಯಲಿಗೆ
ಹೊನ್ನು ಹೆಂಣೆಂದೆಂಬ ಗಂಟಲಗಾಣದೊಳು ಸಿಲು-ಕೀ
ಬನ್ನಬಡುವನು ಭವಭವದಿ ಬಹು
ಜನ್ಮಜರೆಮರಣಾದಿದುಃಖದಿ
ಹಣ್ಣೆನುತ ಕಿಚ್ಚಿನಲಿ ಬೀಳುವ ಶಲಭನಂದದಲೀ

Money, women, the bait, with which men are caught, the fire, that appears like a ripe fruit and attracts grass-hoppers.

543\. ಸಾವವರ ನೋಡುತ್ತ ದುಃಖದಿ
ಬೇವವರ ಕಾಣುತ್ತ ಮನದಲಿ
ಸೇವರಿಸಿ ಸುಡಲೆಂದು ಬಿಡನವ ಮರವನಾಕ್ಷಣಕೇ

Though men see suffering and death, they will not forsake ignorance.

ಭಾವೆ ಯಳಿಯಲಿ ! ವಿತ್ತ ಹೋಗಲಿ !
ಠಾವು ತಪ್ಪಲಿ ! ದುರುಳನೆಲ್ಲವ
ನಾವಪರಿಯಲಿ ಕಷ್ಟಬಟ್ಟವ ಘಳಿಸಲನುಗೆಯ್ವಾ.

544. ಹೆಂಡರೇತಕೆ ? ಮಕ್ಕಳೇತಕೆ ?
ಭಂಡಿ ತುಂಬಿದ ಧನವದೇತಕೆ ?
ಮಂಡೆ ತುಂಬಿದ ಬಳಗವಿದ್ದೇನಕಟ ! ಯಮನವರೂ
ಚಂಡಪಾಶದಿ ಕಟ್ಟಿ ಕಳ್ಳನ
ಕೊಂಡು ಹೋಹಂದಲಿ ವೈವರು
ಕಂಡು ಬಿಡಿಸುವರುಂಟೆ? ಯಾರಿದ್ದೇನು ಫಲವೆಂದಾ ?

Why wife and children and wealth? The angels of death carry one away like thieves. There is no liberator.

545. ಯಾಕೆ ಮನೆ ಮನವಾರ್ತೆ ? ಮಕ್ಕಳ
ದೇಕೆ ? ಮಡದಿಯು ಗೊಡವೆ ಯೇತಕೆ ?
ಸಾಕಲಾ ಸಂಸಾರವಧ್ರುವದಾರು ನಂಬುವರೂ !
ಸಾಕು ! ಸಾಕದು ಬೇಡ ! ಬರಿದೇ
ಶೋಕಮೋಹಾಸ್ಪದವು ಯೆಂದದ
ನೋಕರಿಸಿ ಬಿಟ್ಟವನೆ ಧನ್ಯನು ಲೋಕದೊಳಗೆಂದಾ.

Why house and family? Enough! They are causes only of grief. He, who has given them up; is fortunate.

546. ಕಡು ನರಕವಹ ಜನ್ಮವೆಂದದ
ಬಿಡುವುಪಾಯದ ಬಟ್ಟೆಯನು ತಾ
ಪಡೆಯಲರಿಯದ ಮನುಜನೊಡಲನು ಪಡದ ಫಲವೇನೂ ?
ಸುಡಲವನ ಜನ್ಮವನು ! ದುಃಖದ
ಕಡಲೊಳಗೆ ಬಿದ್ದಾಳುತೇಳುತ
ತಡಿಯ ಕಾಣದೆ ಬಳಲುತಿಹನವಗವಧಿ ಯಿಲ್ಲೆಂದಾ.

Man, not knowing the way of liberation, burns his birth; struggling in the ocean of grief.

547. ಹುಟ್ಟುತಲಿ ತಾನೊಬ್ಬ ; ಕಡೆಯಲಿ
ಕೆಟ್ಟಳಿದು ಹೋಹಾಗಲೊಬ್ಬನೆ ;
ನಟ್ಟನಡುವೀಬಂಧುಬಳಗಗಳೆಂಬ ಬಹುತೊಡಕೂ
ಕಷ್ಟವಹ ದುಃಖವನು ಮಾಳ್ಪುದು
ನೆಟ್ಟನೆ ವಿವೇಕದಲಿ ತಿಳಿದದ
ಸುಟ್ಟು ಸುಖವಹ ಪದವ ಪಡೆವನೆ ಶಿಷ್ಟನೆನಿಸುವನೂ.

Man comes alone and goes alone, between this he gets entangled in the cares of this world.

548. ಊರ ದಾರಿಯ ನಡೆವ ಮನುಜರು
ನೀರಡಸಿ ಯರವಟ್ಟಿಗೆಯ ನೆರೆ
ಸಾರಿ ತೃಷೆಯನು ಕಳೆದು ಸುಖದಿಂದೆಲ್ಲರೊಡಗೂಡೀ
ಬೇರವನು ತಮತಮ್ಮ ದಾರಿಯ
ಸಾರಿ ಹೋಹಂದದಲಿ ಸತಿಸುತ
ರಾರಿಗಾರು ? ಋಣಾನುಬಂಧವು ತೀರಲವರಿರರೂ.

This life a cool shed, in which travellers are resting during the heat of the day, and then part.

549. ಒಂದು ವೃಕ್ಷದ ಮೇಲೆ ಪಕ್ಷಿಗ
ಳೊಂದು ನಿಮಿಷವು ಗಜಬಜೆನುತಲಿ
ಹೊಂದಿಕೊಂಡವ ಮುಗುಳೆ ಕಂಡೆಡೆಗೈದತೆರನಂತೇ,
ತಂದೆ ತಾಯ್ಗಳು ಬಂಧುಬಳಗಗ
ಳೊಂದು ನಿಮಿಷಕೆ ತಾವೆ ತಮತ
ಮ್ಮಂದದಲಿ ತೊಲಗುವರು, ಋಣಸಂಬಂಧ ತೀರಿದರೇ.

Men in this world like birds sitting on a tree only for a short time.

550. ಬುದ್ಧಿವಂತನು ಘಳಿಸಿದರ್ಥವು
ಬಿದ್ದು ಹೋಹುದು ಕಂಡ ಕಡೆಯುಲೀ,
ಗದ್ದೆಗಿಕ್ಕಿದ ನೀರ ತೆರದಲಿ ; ಮಡದಿಮಕ್ಕಳನೂ

Riches like water turned off into a rice-field.

ಉದ್ಧರಿಸಿ ಸಲಹಿದರೆ, ಬಾಯನು
ಪೊದ್ದು ಪೊಯ್ವರು ಯಮನವರು ; ತನು
ಹದ್ದುಕಾಗಿಯ ಪಾಲು, ದಾರಿಗೆ ನಿತ್ಯವಲ್ಲೆಂದಾ.

551. ವಿದ್ಯವನು ಕಲಿತೇನು ಫಲ ? ಬಹ
ಉದ್ಯಮಗಳನು ಮಾಡಿ ಧನವನು
ಬುದ್ಧಿಯಿಂದಾರ್ಜಿಸಿದೊಡದರಿಂದೇನು ಫಲ? ತನಗೇ
ಮುಗ್ಧೆಯನು ವರಿಸಿದ್ದೊಡೇನೆಲೆ !
ವುದ್ದುರುಳುವನಿತರೊಳು ತನುವಿದು
ಬಿದ್ದು ಹೋಹುದು ; ವಿದ್ಯವೊದಲಹವಾರ ಹೊದ್ದುವವೂ ?

What is the use of learning sciences, of acquiring wealth by trade?

552. ಕಂದ ! ಕೇಳ್ಳೈ ! ಬಾಲ್ಯದಲಿ ತಾ
ಯ್ತಂದೆಗಳು ರಕ್ಷಿಪರು ; ಯುವ್ವನ
ಬಂದಡಾಗ ಸ್ವತಂತ್ರನಾಗಿಹ ಸರ್ವಕೃತ್ಯದಲೀ ;
ಮುಂದೆ ವಾರ್ಧಿಕ್ಯದಲಿ ಮಕ್ಕಳು
ಬಂಧುಗಳು ಸಲಹುವರು; ಕಡೆಯಲಿ
ಬೆಂದು ಹೋಹದು ಕಿಚ್ಚಿನಲಿ ಹೇಳಾರದೀದೇಹಾ ?

Infancy, youth, old age and death

553. ನೀರ ಮೇಲಣ ಗುಳ್ಳೆ ಲಿಂಗಾ
ಕಾರದಂದದಿ ಹೊಳವುತಿರಲವಿ
ಚಾರಿಯಾದವ ಲೋಹದಲಿ ಬಂಧಿಸಿದ ತೆರನಂತೇ,
ತೋರಿಯುಡಗುವ ಮಿಂಚಿನಂತೆ, ಶ
ರೀರಧರ್ಮಗಳವನು ಹಿರದಾ
ಗಾರು ಸಲಹುವರವರೆ ಮರುಳರು; ಮಗನೆ ! ಕೇಳೆಂದಾ !

This life a water-bottle bound with iron by the foolish, like lightning appearing only for a moment.

**554.**

Death laughs at men's cases for their bodies.

ಮಗನ ಮುದ್ದಾಡಿದರೆ, ಗಂಡಗೆ
ನಗುವ ಜಾರೆಯ ತೆರದಿ, ದೇಹವ
ಬಗೆದು ತನ್ನದೆನುತ್ತ ಮಮತೆಯ ಮಾಡಿ ರಕ್ಷಿಸಲೂ,
ಮುಗುಳುನಗೆಯಲಿ ಮೃತ್ಯುದೇವತೆ
ನಗುವಳಾತನ ಮುಗ್ಧನೆಂದೇ
ತೆಗುವಳಸುವನು; ನಿತ್ಯವಾರಿಗೆ? ತನುಜ! ಕೇಳೆಂದಾ!

**555.**

The sheep, not knowing, that it will be slaughtered, eats the green leaves with which it is decorated: so men.

ಹರಕೆಗೆಂದೇ ತಂದ ಕುರಿ ತಾ
ನರಿಯದಕಟಾ! ಕೊಲುವರೆಂಬುದ,
ಹಿರಿದು ಹಸಿವಿಗೆ ತಳಿರುಗಳ ಮೆಲುತಿಹುದದಾಯ್ದಾಯ್ದು;
ನರಗುರಿಗಳದರಂತೆ ತಮಗಹ
ಮರಣವನು ತಾವರಿಯರೀಸಂ
ಸರಣದುಃಖದಿ ಮಗ್ನರಾಗಿಯೆ ಮೃತ್ಯುವಶವಹರೂ.

**556.**

All from Brahma down to the ant is perishing from conceit.

ಬ್ರಹ್ಮ ತೊಡಗೆ ಪಿಪೀಲಿಕಾಂತ್ಯವು
ಸುಮ್ಮನೇ ಹಮ್ಮಿನಲಿ ಕೆಡುವುದು;
ತಮ್ಮ ಬದುಕಿದನಿತ್ಯವೆಂಬುದನೊಮ್ಮೆ ಚಿಂತಿಸದೇ,
ಹೆಮ್ಮೆಯಲಿ ಹಿರಿದಾಗಿ ಸಂಸ್ಸೃತಿ
ಧರ್ಮದಲಿ ಮರದಿರಲು, ತಮ್ಮನು
ಗಮ್ಮನಾಗಳೆ ಮೃತ್ಯು ವೈವುದು ಕಾಣರವರೆಂದಾ.

**557.**

The fly, the poor man, is eaten by the frog, the mighty man and the frog by

ಸರ್ಪವದನಗ್ರಾಸವಾಗಿಹ
ಕಪ್ಪೆ ಮಕ್ಷಿಕಭಕ್ಷಣವ ಬಯ
ಸಿಪ್ಪ ತೆರದಲಿ, ಕಾಲವಶವಾಗಿರ್ದ ಮಾನವನೂ

the serpent death.

ದರ್ಪದಿಂದಲಿ ಕೇಡ ಬಗೆವನು
ತಪ್ಪು ಸಾಧಿಸಿ ಸಕಲರಿಗೆ ; ಯದು
ತಪ್ಪುವದೆ ತನಗಕಟ ! ನಗುವಳು ಹೆಡತಲೆಯ ಮೃತ್ಯು.

558. ಒಡವೆಯುಳ್ಳರೆ, ಮಡದಿಮಕ್ಕಳು
ಕಡು ಮಮತೆಯನು ಮಾಳ್ಪರಾತಗೆ ;
ಒಡತನಗಳಡಸಿದರೆ, ಮೆಲ್ಲನೆ ಸಡಲಿ ತೊಲಗುವರೂ ;
ಬಿಡದು ಕರು, ಹಾಲಿರಲು, ತಾಯನು ;
ಕಡಿಗೆ ಹೋಹುದು, ಬತ್ತಿದರೆ ; ತಾ
ಕೆಡುವ ಕಾಲಕ್ಕಾರಿಗಾರೆಲೆ ಮಗನೆ ! ಕೇಳೆಂದಾ !

The calf follows the cow only as long as it gets milk: so it is with the love of men.

559. ಒಂದರಲಿ ಕೊರತಿಲ್ಲದಂದದಿ,
ತಂದು ತಂದೀಡೇರಿಸಲು, ಸಲೆ
ಕುಂದು ಕೊರತೆಯು ಹಿಡಿದು ಹೆಂಡರು ಮಕ್ಕಳಾವಾಗಾ
ಇಂದು ತಮಗಿದು ಕೊರತೆ ಯಾಯಿ
ತ್ತೆಂದು ಪೋರುವರವರು ; ತನಗವ
ರಿಂದ ಸುಖವನು ಕಾಣ ; ಬರಿದೇ ಭ್ರಮೆಯ ಬಳಲಿಕೆಯೂ.

560. ತಂದೆತಾಯಿಗಳಟ್ಟ ಧನವನು
ನಂದನರು ತಮ್ಮೊಳಗೆ ಪಾಲಿಗೆ
ಕೊಂದು ಕೂಗ್ಯಾಡುತ್ತಲರಮನೆಗರಿಕೆಯನು ಮಾಡೇ,
ಹಿಂದುಮುಂದನು ನೋಡದವರನು
ಬಂಧಿಸೆಲ್ಲವ ಸೆಳದುಕೊಂಬರು ;
ಮುಂದೆ ಭಿಕ್ಷಾಪಾತ್ರೆಗಧಿಕಾರಿಗಳು ನೋಡೆಂದಾ.

The sons love the property, which they inherited from their parents, by quarrelling.

561. ತಾಯಿತಂದೆಯ ಬಿಟ್ಟು, ಹೆಂಡರ

The fate of the miser.

ಮಾಯೆಗಳಗೊಳಗಾಗಿ, ಸರ್ವರ
ಬಾಯಿ ಹೊಡೆದೆಲ್ಲವನು ಮಕ್ಕಳಗಿತ್ತು ಮಮತೆಯಲೀ
ನೋಯು ನುಡಿದರೆ, ಯೇನನೆಂದರೆ
ನ್ಯಾಯನಗರಕೆ ನಡವ ಲುಬ್ಧಗೆ
ನಾಯಕಮಹಾನರಕವಲ್ಲದೆ ಮುಕ್ತಿಯಿಲ್ಲೆಂದಾ.

562. ದುಃಖವೆಕ್ಕಸವಾಗಿ ಸರ್ವರು

In sorrow men despair, in joy they become proud.

ಸೊಕ್ಕಿ ಮನದಲಿ ಮರಗುವರು; ತಮ
ಗೆಕ್ಕಜದ ಸುಖವಾಗೆ, ಸೊಕ್ಕುವರೆಲ್ಲರನು ಮರೆದೂ
ಅಕ್ಕಟಕಟಾ! ಸುರನರೋರಗ
ಹಕ್ಕಿಹುಳವೊದಲಾಗಿ ಮಾಯಿಗೆ
ಸಿಕ್ಕಿ ಸುಖದುಃಖದಲಿ ಹೊರಳುತ ನರಳುತಿಹರೆಂದಾ.

563. ದುಖ್ಖ ಬೆರಸದೆ ಸುಖವು ದಾರಿಗೆ

No joy without grief: honey on the edge of a sword.

ಸಿಕ್ಕುವದು? ಶುಕಯೋಗಿ! ಮರ್ಕಟ
ಸೊಕ್ಕಿ ಕೀಲನು ಕಿತ್ತು ಬಿಸುಟಂದದಲಿ, ಮಧುರಸವಾ
ಇಕ್ಕಿ ನೆಕ್ಕಲು, ಖಡ್ಗಧಾರೆಗೆ
ಸಿಕ್ಕಿ ನಾಲಿಗೆ ಸೀಳುವಂದದ
ಲುಕ್ಕಿ ವಿಷಯಸುಖಕ್ಕೆಳಸಿ ಕಡು ದುಃಖ ಬಡುತಿಹರೂ;

564. ಕಾಯಸಿದ್ಧಿಯ ಪಡೆದ ಹಿರಿಯರು,

No men, however great and holy, exempt from death.

ಮಾಯೆ ಯಳಿದ ಮಹಾನುಭಾವರು,
ಸಾಯಸದಲಷ್ಟಾಂಗಯೋಗಾಭ್ಯಾಸವನು ಮಾಡೀ

ನೋಯದಸುವನು ಬಿಡುವ ಯೋಗಿಗ
ಳಾಯತಿಗಳಾವ್ರತಿಗಳೆಲ್ಲರು
ಸಾಯದುಳಿದವರಿಲ್ಲ, ಕಾಲಾಧೀನವಾಗಿಹರೂ.

565. ಬೇಸಗಿಯ ಬಿಸಲಲ್ಲಿ, ಬೆಟ್ಟದಿ
ಬೀಸುತಿಹ ಬಿರಘಾಳಿಯಲಿ! ಮಳೆ
ಸೂಸುತಿಹ ಸೋನೆಯಲಿ, ಮಂಜನು ಸುರಿವ ಮಬ್ಬಿನಲೀ,
ಘಾಸೆಯಾಗುತ ಘೋರದುಃಖಾ
ವಾಸದಲಿ ಪ್ರಕೃತಿಯನು ಮಾಡುವ
ನೈಸೆ! ಸುಖವೇನಿಲ್ಲ; ಕಾಲಾಧೀನವಾಗಿಹುದೂ.

566. ಗರ್ಭದೊಳಗಿನ ದುಃಖವಾಮೇ
The sorrow of infancy, youth, and old age.
ಲರ್ಭಕತ್ವದ ದುಃಖ; ಯವ್ವನ
ದುಬ್ಬು, ಕೊಬ್ಬಿನಲುಕ್ಕಿ ವನಿತಾವಿಷಯವಹ ದುಃಖಾ;
ಉಬ್ಬಸದ ರೋಗಗಳು ಮೊದಲಹ
ನಿಬ್ಬರದ ವಾರ್ಧಿಕ್ಯದುಃಖವು,
ಹಬ್ಬಿಕೊಂಡಿರೆ, ಸುಖವ ಕಾಣರು ಕಾಲವಶವಾಗೀ.

567. ಕಂಣುಗಳು ಕೆಂಪಾಗಿ ಮೋರೆಯ
Description of an angry man.
ಬಂಣವತಿರೌದ್ರವನು ತಳೆದಿರ
ಲನ್ನಪಾನದಲಿಚ್ಛೆಗೆಟ್ಟರೆ, ಕೋಪತಾಪದಲೀ
ಉಂಣದುರಿವು ತಗುರುಹಿರಿಯರನು
ಕಣ್ಣುಗಾಣದೆ, ಬರಿದೆ ಬೊಗಳುವ,
ಸನ್ನಿ ಹಿಡಿದವನಂತೆ, ನಡಗುವ, ಕುಣಿವ, ಕೂಗುವನೂ.

568. ಮೂರುಕಾಲದಿ ಮುಳುಗಿ ನೀರೊಳು
ನಾರಸೀರೆಯನುಟ್ಟು ಪರ್ಣಾ
ಹಾರವನು ಮಾಡುತ್ತ ಮಳೆ ಚಳಿ ಬಿಸಿಲ ಲೆಕ್ಕಿಸದೇ,
ಘೋರತಪವನು ಚರಿಸಿ ಯಡವಿಯ
ಸೇರಿಕೊಂಡಿಹ ಮುನಿಗಳೆಲ್ಲರು
ನಾರಿಯರ ವಶವಾಗಿ ಹೋದರು ಮಾರಗಿದಿರಾರೂ.

No man able, not even an ascetic, to overcome sensual temptations.

569. ಆರು ಇಲ್ಲದ ವಿಪಿನದಲಿ ಹಾ
ಳೂರ ಕೋಳಕೆ ಕಾಲ ಸೇರಿಸಿ
ದಾರಿಕಾರಿಗೆ ಹಲ್ಲಗಿಃವಂದವಲಿ ಸಂಸೃತಿಯೂ
ಘೋರತರದುಃಖಾಟವಿಗಳಲಿ
ಮಾರನೆಂಬ ಕಿರಾತನೊಡ್ಡಿದ
ನಾರಿ ಯೆಂಬಾಬಲೆಯ ಬಿದ್ದವಗಾರು ಗತಿ ಎಂದಾ.

This world a forest, Cupid the hunter, women the net, in which he catches men.

570. ಬಡಿಶಗತವಹ ಮತ್ಸ್ಯದಂದದಿ,
ಕೆಡದು ಬಡಿಗಲ್ಲಿನಲಿ ಹೆಗ್ಗಣ
ಮಿಡಕುವಂದದಿ, ಮದನಶರಮಾಯಾಪ್ರಬಂಧದಲೀ
ತೊಡರಿ ಮಡದಿಯ ನೋಟವೆಂಬೀ
ತಡಿಕೆವಲೆಯಲಿ ಸಿಕ್ಕಿ ರೆಕ್ಕೆಯ
ಕಡಿದ ಪಕ್ಷಿಯ ತೆರದಿ, ಯಡಿಯಿಡಲಾರನವನೆಂದಾ.

Man a fish caught with the hook, a bird allured into a cage he cannot move.

571. ಮಚ್ಛ ಜಿಂಹ್ವಾಲಂಪಟದಿ, ಗಜ
ಕಚ್ಛೆಯಲಿ ನೇತ್ರದಲಿ ಶುಲಭ, ಶೃ
ತೇಚ್ಛೆಯಲಿ ದರ್ವೀಕರನು, ಘ್ರಾಣದಲಿಷಟ್ಪದವ್ರಾ,

Each animal is caught by a peculiar object of sense, no wonder man also.

ಹೆಚ್ಚುಗೊಂಡೊಂದೊಂದು ವಿಷಯಕೆ
ಮಚ್ಚಿ ಕೆಟ್ಟವು ಪಂಚವಿಷಯದ
ಯಿಚ್ಛೆಯಲಿ, ತಗುಲಿರ್ದ ಮನುಜನು ಕೆಡುವುದೇನರಿದೂ !

572. ಅನ್ನಪಾನವ ಬಿಟ್ಟು ವನದಲಿ
ಪರ್ಣಶಾಲೆಯಲಿರ್ದು ಜಲದಲಿ
ತನ್ನದೇಹವ ತೊಳೆದು ಮಳೆಚಳಿಗಳಿಗೆ ಕಂಗೆಡದೇ
ಪುಣ್ಯಗಳನಾರ್ಜಿಸಿದ ಮನುಜನು
ಪುಣ್ಯಲೋಕವನೈದೆ ತೀರಲು,
ಕಣ್ಣನೀರಲಿ ಕೈಯ್ಯ ತೊಳೆವುತ ಕೆಡವ ಭೂಮಿಯಲೀ.

Even the blessedness of heaven only for a time.

Good works not sufficient to save

573. ಆಸನವ ಬಲಿದಾಸುಷುಮ್ನಾ
ನಾಸದಲಿ ನೆರೆ ನಡೆಸಿ ಮೆಲ್ಲನೆ
ಲೇಸೆನಿಪ ನಿಜಬ್ರಹ್ಮರಂಧ್ರವನೊಡೆದು ಸುರಪದವಾ
ಭಾಸಮಾನದಿ ಸತ್ಯಲೋಕಾ
ವಾಸಿಯಾಗಿಹ ಯೋಗಿ ಪುಣ್ಯದ
ರಾಸಿ ತೀರಲು, ಮರಳಿ ಭೂಮಿಯಲುರಳಿ ಬೀಳುವನೂ.

from the transmigration of the soul

---

## A COLLECTION OF 100 MORAL VERSES COMPOSED BY THE POET SOMESHVARA.

### ಸೋಮೇಶ್ವರ ಶತಕ.

ಮತ್ತೇಭವಿಕ್ರೀಡಿತವೃತ್ತ.

574. ಕೆಲವಂ ಬಲ್ಲವರಿಂದ ಕಲ್ತು
ಕೆಲವಂ ಶಾಸ್ತ್ರಂಗಳಂ ಕೇಳುತಾ,
ಕೆಲವಂ ಮಾಳ್ಪವರಿಂದ ಕಂಡು,
ಕೆಲವಂ ಸುಜ್ಞಾನದಿಂ ನೋಡುತಾ,

Sources from which the Author derived his knowledge of the world.

ಕೆಲವಂ ಸಜ್ಜನಸಂಗದಿಂದ
ಲರಿಯಲ್ಸರ್ವಜ್ಞನಪ್ಪಂತೆ, ಕೇ
ಳ್ಪಲವಂ ಪಳ್ಳ ಸಮುದ್ರವೈ.
ಹರಹರಾ ! ಶ್ರೀಚನ್ನಸೋಮೇಶ್ವರಾ !

ಈ ವೃತ್ತಗಳನ್ನು ಮಾಡಿದವನು ಯಾರಂದರೆ ಪಾಲ್ಕುರಿಕೆ ಎಂಬ ಗ್ರಾಮದಲ್ಲಿಯ ಆರಾಧ್ಯಬ್ರಾಹ್ಮಣನಾಗಿದ್ದ ಸೋಮೈಯನು.

575. ಮುಕುರಂ ಕೈಯೊಳಿರಲ್ಕೆ,

Nothing above good friends.

ನೀರ ನೆಳಲ್ಯಾಕೈ ? ಕಾಮಧೇನಿರ್ದರೂ
ಟಕೆ ಗೊಡ್ಡಾಕಳನಾಳ್ವರೇ?
ಗುಣಯುತರ್ಪಾಲುಂಡು ಮೇಲುಂಬರೇ ?
ಶುಕನೋದಿಂಗತಿಚಲ್ವ
ಕಾಕರವ ? ರಂಭಾನೃತ್ಯರೇಡ್ಡೊಂಬರೇ ?
ಸಖರಿಂದುನ್ನತವಸ್ತುವೇ ?
ಹರಹರಾ ! ಶ್ರೀಚನ್ನಸೋಮೇಶ್ವರಾ !

576. ಪಣವಿರ್ದೇನುಣಿಸಾಗದಾಗ

A blade of grass obtained in the right time, a mountain.

ಸತಿಯಿರ್ದೇನ್ಯವ್ವನಂ ಪೋದ ಮೇ
ಲೊಣಗಲ್ಪೈರಿಗೆ ಬಾರದಿಪ್ಪ
ಮಳೆ ತಾ ಬಂದೇನದಾಪತ್ತಿನೋ
ಳ್ಮುಣಿದುಂನೋಡದ ಬಂಧು
ವೇತಕೆಣಿಸಲ್ಕಾಲೋಚಿತಕ್ಕೈದಿದಾ
ತೃಣವೇ ಪರ್ವತವಲ್ಲವೇ ?
ಹರಹರಾ ! ಶ್ರೀಚನ್ನಸೋಮೇಶ್ವರಾ !

577. ಫಲವತ್ತಿಲ್ಲದ ರಾಜ್ಯದಲ್ಲಿ,

The wise must not remain at dangerous places.

ಪ್ರಭು ದಂಡಕ್ಕಾಕೆ ಗೈವಲ್ಲಿ, ಬ
ಲ್ಪುಲಿಗಳ್ಸಿಂಗಗಳಿಕ್ಕೆಯಲ್ಲಿ,
ಪರವೆಂಣಿರ್ದಲ್ಲಿ, ಕುಗ್ರಾಮದೋ
ಳ್ಗೆಲವಂ ತೋರದೆ ದುಃಖಮಪ್ಪ
ಯುಡೆಯೊಳ್ಭೂತಂಗಳಾವಾಸದೋ
ಳ್ಸಲೆ ಬಲ್ಲನಿರ್ಲ ಬಾರದೈ !
ಹರಹರಾ ! ಶ್ರೀಚನ್ನಸೋಮೇಶ್ವರಾ !

1. ಫಲವುಳ್ಳದ್ದು.

578. ಚರಿಪಾರಣ್ಯದ ಪಕ್ಷಿಗೊಂದು

One bad man among many good men of no consequence.

ತರು ಗೊಡ್ಡಾಗಲ್ಫಲಂ ತೀವಿದಾ
ಮರಗಳ್ಪುಟ್ಟವೆ ? ಪುಷ್ಪ
ಮಂದು ಬಳಲಲ್ಭೃಂಗಕ್ಕೆ ಪೂವಿಲ್ಲವೇ ?
ನಿರುತಂ ಸತ್ಕುಲವರ್ಗದಲ್ಲಿ
ಮುನಿದೋರ್ವಂ ಲೋಭಿಯಾಗಿರ್ದಡಂ,
ಧರೆಯೊಳ್ದಾತರು ಪುಟ್ಟರೇ ?
ಹರಹರಾ ! ಶ್ರೀಚನ್ನಸೋಮೇಶ್ವರಾ !

579. ತೆರನಂ ಕಾಣದ ಬಾಳ್ಕೆ,

These things like pouring out of an empty hand.

ಸ್ವಲ್ಪಮತಿ, ಕ್ಷುದ್ರಾರಂಭಮಲ್ಪಾಶ್ರಯಂ,
ಕಿರಿದೋಟಂ, ಕಡೆವಳ್ಳಿ,
ಬೀದಿಮನೆ ಮುಂಗೈಯಾರ್ಭಟಂ, ಸಾಲದಾ

ಧೊರೆಗಾರ್ಯಂ, ಘೃತವಿಲ್ಲದೂಟದ
ಸುಖಂ, ಮುಗ್ಧಾಂಗನಾಸಂಗಮಂ,
ಬರಿಗೈಯಂ ಸವಿದಂದವೈ !
ಹರಹರಾ ! ಶ್ರೀಚನ್ನಸೋಮೇಶ್ವರಾ !

580. ಅರೆಯಂ ಶೀಳುವಡಾನೆ
ಮೆಟ್ಟಲಹುದೆ ? ಜಾನಂಗಳಿಂದಲ್ಲದೇ ?
ಕಿರಿದಾಗಿರ್ದಡದೇನುಪಾಯ
ಪರನೋರ್ವಂ ಕೋಟಿಗೇಡಕ್ಕು ; ಹೆಂ
ಮರನಿರ್ದೇನದರಿಂದಲೆತ್ತಲಹುದೆ
ಬಲ್ಭಾರಮಂ ? ಸಂನೆ ಸಾ
ವಿರಕಾಲಾಳಿನ ಸತ್ವವೈ
ಹರಹರಾ ! ಶ್ರೀಚನ್ನಸೋಮೇಶ್ವರಾ !

*Contrivance superior to physical power.*

581. ಕ್ಷಿತಿಯಂ ಶೋಧಿಸಲಕ್ಕು ;
ತಾರೆಗಳ ಲೆಖ್ಖಂ ಮಾಡಲಕ್ಕಾಗಸೋಂ
ನತಿಯಂ ಕಾಣಲು ಬಕ್ಕು ;
ಸಾಗರಗಳೇಳುಂ ದಾಂಟಲಕ್ಕುಂ;
ನಭೋಗತಿಯಂ ಸಾಧಿಸಲಕ್ಕು;
ಬೆಟ್ಟಗಳ ಚೂರ್ಣಂ ಮಾಡಲಕ್ಕೀಕ್ಷಿಸ
ಲ್ಸತಿಯರ್ಚಿತ್ತವಭೇದ್ಯವೈ !
ಹರಹರಾ ಶ್ರೀಚನ್ನಸೋಮೇಶ್ವರಾ !

*The minds of women impenetrable.*

582. ಇರಿಯಲ್ಬಲ್ಲರೆ, ವೀರನಾಗು
ಧರೆಯೋಳ್ನಾನಾ ಚಮತ್ಕಾರಮಂ

*A man must do only that for*

which he has abilities.

ಮರಿಯಲ್ಬಲ್ಲರೆ, ಮಂತ್ರಿಯಾಗು !
ಪ್ರಭುವಾಗಾರಂದಡಂ, ಕೋಪಮಂ
ತೊರಿಯಲ್ಬಲ್ಲರೆ; ಯೋಗಿಯಾಗು
ಮರಿಷಡ್ವರ್ಗಂಗಳಂ ಬಾಧಿಸ
ತ್ತೆರಬಲ್ಲರೊಪ್ಪಣೆ ಯಪ್ಪುಳ್ಳೈ !
ಹರಹರಾ ! ಶ್ರೀಚನ್ನಸೋಮೇಶ್ವರಾ !

583. ರವಿ ಯಾಕಾಶಕೆ ಭೂಷಣಂ ;

The sun is to the sky an ornament, &c.

ರಜನಿಗಾಚಂದ್ರಂ ಮಹಾಭೂಷಣಂ ;
ಕುವರರ್ವಂಶಕೆ ಭೂಷಣಂ ;
ಸರಸಿಗಂಭೋಜಾತಗಳ್ಭೂಷಣಂ ;
ಹವಿ ಯಜ್ಞಾಳಿಗೆ ಭೂಷಣಂ ;
ಸತಿಗೆ ಪಾತಿವ್ರತ್ಯವೇ ಭೂಷಣಂ;
ಕವಿ ಯಾಸ್ಥಾನಕೆ ಭೂಷಣಂ;
ಹರಹರಾ ! ಶ್ರೀಚನ್ನಸೋಮೇಶ್ವರಾ !

584. ಧರೆಯೇ ಬೀಜವ ನುಂಗೆ, ಬೇಲಿ

Protection impossible, if the protectors injure.

ಹೊಲನೆಲ್ಲಂ ಮೆದ್ದಡಂ, ಗಂಡಹೆಂ
ಡರನತ್ಯುಗ್ರದಿ ಶೀಕ್ಷಿಸ
ಲ್ಪ್ರಜೆಗಳಂ ಭೂಪಾಲನೇ ಬಾಧಿಸ
ಲ್ತರುವೇ ಪಣ್ಗಳ ಮೆಲ್ಲೆ,
ಮಾತೆ ವಿಷಮಂ ಪೆತ್ತರ್ಭಕರ್ಗೂಡಲಾ
ಧೊರೆ ಕೊಲ್ಲಲ್ಪರ ಕಾಯ್ವನೇ?
ಹರಹರಾ! ಶ್ರೀಚನ್ನಸೋಮೇಶ್ವರಾ !

585. ಕುಲದೋಳ್ಕೂಡರು, ಕೂಸನೀಯರು

With a man of bad luck even the ground on which he treads will be angry.

ನೃಪರ್ನಿಷ್ಕಾರಣಂ ದಂಡಿಪ
ಪೊೞಲೊಳ್ಸೇರರು ;
ಪೋರಗೈದು ಸತಿ ತಾಂ ಪೋಗಟ್ಟುವಳ್ಸಾಲಿಗ
ಕರ್ಲುಗುಂಡಂ ಮಿಗೆ
ಪೇರುವತೊರ್ಲಗಿರಲ್ಲಕ್ಷ್ಮೀಕಟಾಕ್ಷೇಕ್ಷಣಂ
ನೆಲ ಮುಟ್ಟಲ್ಮುನಿದಿಪ್ಪುದೈ !
ಹರಹರಾ ! ಶ್ರೀಚನ್ನಸೋಮೇಶ್ವರಾ !

586. ಕೊಳನಂ, ತಾವರೆಯುಂ,

Good dreams enumerated.

ತಳಿರ್ತ ವನಮಂ, ಪೂದೋಟಮಂ, ವಾಜಿಯುಂ,
ಗಿಳಿಯಂ, ಬಾಲಮರಾಳನಂ,
ಬಸವನಂ, ಬೆಳ್ಳಕ್ಕಿಯುಂ, ಛತ್ರಮಂ,
ತಿಳಿನೀರ್ಪೂರ್ಣತಟಾಕಮಂ,
ಕುಮುದಮಂ, ದೇವರ್ಕಳಂ, ತುಂಬಿಯುಂ,
ತಿಳಿಯುಸ್ವಪ್ನದಿ ಲೇಸಲ್ತೈ !
ಹರಹರಾ ! ಶ್ರೀಚನ್ನಸೋಮೇಶ್ವರಾ !

587. ಹಣಮಂ, ನೆತ್ತರ, ನೆಳ್ಳು,

Bad dreams enumerated.

ಕೋಣ, ಕುರಿಯಂ, ಹಾರಾಯುಧಂ, ಬೀಳ್ವುದಂ,
ಕುಣಪಂ, ಕೊಲ್ಲುದನಂಗಹೀನ
ಪೊಸತಂ, ಮಿಂದಿರ್ಪುದಂ, ಯೇರುವಂ,
ದಣಮಂ, ಕೆಂಪಿನಪೂವನೆಂಣೆದೆಲೆ,
ಸೂತ್ನಾಗಾರ, ರಾಕ್ಷಸರಂ,

ಕನಸಂ ಕಾಣಲಿ ಬಾರದೈ !
ಹರಹರಾ ! ಶ್ರೀಚನ್ನಸೋಮೇಶ್ವರಾ !

588. ಕೊಡ ಬೇಕುತ್ತಮನಾದವಂಗೆ ಮಗಳಂ
ಸತ್ಪಾತ್ರಗಂ ದಾನಮಂ;
ಯಿಡ ಬೇಕೀಶ್ವರನಲ್ಲಿ ಭಕ್ತಿರಸಮಂ,
ವಿಶ್ವಾಸಮಂ ಸ್ವಾಮಿಯೋ
ಳ್ಬಿಡ ಬೇಕೈ ಧನಲೋಭ,
ಬಂಧುಜನರೋಳ್ದುಷ್ಟಾತ್ಮರೋಳ್ಗೋಷ್ಟಿಯಂ ;
ಯಿಡ ಬೇಕಿದ್ಗುಣ ಬೇಕಲ್ಯೈ !
ಹರಹರಾ ! ಶ್ರೀಚನ್ನಸೋಮೇಶ್ವರಾ !

Proper conduct in different circumstances.

589. ಪೊರ ಬೇಡಂಗಡಿಸಾಲ,
ದೂರ ಪೊಣೆಯಂ, ನಿಂದ್ಯಂಗಳಂ, ಪಾಪಮಂ
ಮರೆ ಬೇಡಾತ್ಮಜಮಿತ್ರನಂ,
ಸತಿಯುಳಂ, ನ್ಯಾಯಂಗಳೊಳ್ಸತ್ಯಮಂ !
ಶೆರೆ ಬೇಡಂಗನೆಪಕ್ಷಿವೃದ್ಧತರಳ
ಗೋರ್ವಿಪ್ರದಾರಿದ್ರರಂ !
ತೆರ ಬೇಡೊತ್ತೆಗೆ ಬಡ್ಡಿಯಂ !
ಹರಹರಾ ! ಶ್ರೀಚನ್ನಸೋಮೇಶ್ವರಾ !

Do not contract debts, &c.

590. ಸುರೆಯಂ ಸೇವಿಸಿದಾತ ಬಲ್ಲನೆ
ಮಹಾಯೋಗೀಂದ್ರರೆಂದೆಂಬುದಂ ?

A drunkard and a proud man

pay no regard to good men. ಧೊರೆಯೋಲ್ತೇಜವನಾಂತವಂ

ಬಡವರಂ ತಾ ನೋಳ್ಪನೇ ಕಂಗಳಿಂ ?

ಪಿರಿಯರ್ಮಾನ್ಯರು ಯೆಂದು

ಕಾಂಬನೆ ಮಹಾದುರ್ಮಾರ್ಗಿ ? ಯಂತಾದಡಂ.

ದುರುಳಂ ಬಲ್ಲನೆ ಬಾಳ್ವರಂ ?

ಹರಹರಾ ! ಶ್ರೀಚನ್ನಸೋಮೇಶ್ವರಾ !

591. ಶುಕ, ಶಂಖಂ, ಗಜ, ವಾಜಿ, ವೇಣು,

Good omens. ಪಶು, ತಾಳಂ, ಭೇರಿ, ಶೋಭಾನ ಪಾ

ಠಕ, ನೃತ್ಯಂ, ಗಣಿಕಾಂಗನಾದಿ,

ತಳಿರಂ, ಪೂವಂಣು, ವಿಪ್ರದ್ವಯಂ,

ಮುಕರಂ, ಮಾಂಸವು, ಮದ್ಯ

ತುಂಬಿದ ಕೊಡಂ, ಪೇರ್ಗಿಚ್ಚನಾರ್ಕಂಡಡಂ,

ಶಕುನಂ ಶೋಭನಕಾಸ್ಪದಂ ;

ಹರಹರಾ ! ಶ್ರೀಚನ್ನಸೋಮೇಶ್ವರಾ !

592. ಕಪಿಯಂ, ಗಾಣಿಗ, ಪಾವು,

Bad omens ಕಾಷ್ಟ ಜಿನ, ತಕ್ರಂ, ತಾವಿರಕ್ತಂ, ವಿರೋ

ಧಿಪನೋರ್ವಂ ದ್ವಿಜ, ಮುಕ್ತಕೇಶಿ,

ಜಟಿ, ರಕ್ತಂ, ರಿಕ್ತಕುಂಭಂ, ವಿರಾ

ಜಿಪ ಭಿನ್ನಾಂಗನ, ಕುಷ್ಟನಂ,

ವಿಧವೆಯುಂ, ಕೊಂದಾಟಮುಂ, ಧೂಮಮುಂ,

ಚಪಳರ್ಕಂಡರೆ, ಪೋಪರೇ?

ಹರಹರಾ! ಶ್ರೀಚನ್ನಸೋಮೇಶ್ವರಾ!

593. ಚಿಗುರೆಂದುಂ ಮಲೆ, ಬೇವು

An enemy not to be despised on account of his youth.

ಸ್ವಾದಮಹುದೇ? ಚೇಳುಂ ಮಹಾಸಣ್ಣದೆಂ

ದಗೆಯಲ್ಕಚ್ಚದೇ? ಪಾಲನೂಡಿ

ಪುಲಿಯಂ ಸಾಕಲ್ಕೆ, ವಿಶ್ವಾಸಿಯೇ?

ಖಗ ಸಾಕಲ್ಬಹುದೆಂದು

ಗೂಗೆಮರಿಯಾ ಶಬ್ದಕ್ಕೆ ತಂದಿಪ್ಪರೇ?

ಪಗೆಯಂ ಬಾಲಕನೆಂಬರೇ?

ಹರಹರಾ! ಶ್ರೀಚನ್ನಸೋಮೇಶ್ವರಾ!

594. ಗಿಡವೃಕ್ಷಂಗಳಿಗಾರು

God the preserver of the world.

ನೀರನೆರವರ್ನಿತ್ಯಂ ಮಹಾಬೆಟ್ಟಗ

ಳ್ಕಡು ಕಾರ್ಪಣ್ಯದಿ ಕೇಳ್ವವೇ?

ನೆಲಜಲಾಗ್ನಿರ್ವಾಯುವಾಕಾಶವಂ

ಪಡವಂಡಂ[1]ಗಳನಾವ ಸಾಕುವ!

ಜಗತ್ತುಪ್ರೇರಕಂ ನೀನಿರ

ಲ್ಕೊಡುವರ್ಕೊಂಬರು ಮರ್ತ್ಯರೇ;

ಹರಹರಾ! ಶ್ರೀಚನ್ನಸೋಮೇಶ್ವರಾ!

1. ಬ್ರಹ್ಮಾಂಡಗಳನ್ನು 2. ಮರ್ತ್ಯರನ್ನ ಸಹಾಯ ಮಾಡಬೇಕೆಂದು ಕೇಳುತ್ತಾವೆ?

595. ಉಡುರಾಜಂ ಕಳೆ ಗುಂದಿ

By the favor of God, a poor

ಪೆಚ್ಚದಿಹನೇ? ನ್ಯಗ್ರೋಧಬೀಜಂ ಕೆಲಂ

man may become rich.

ಶಿಡಿದುಂ ಪೇರ್ಮರನಾಗದೇ ?
ಯಳೆಗರಂ ತಾ ದೊಡ್ಡಯತ್ತಾಗದೇ ?
ಮಿಡಿ ಪಂಣಾಗದೆ ? ದೈವದೊಲ್ಮೆ
ಯಿರಲುಂ, ಕಾಲಾನುಕಾಲಕ್ಕೆ ತಾ
ಬಡವಂ ಬಲ್ಲಿದನಾಗನೇ ?
ಹರಹರಾ ! ಶ್ರೀಚನ್ನಸೋಮೇಶ್ವರಾ !

596. ಮಡೆಯುಂಗುತ್ತಮವಿದ್ಯ ಬೆಟ್ಟ ;

An atom a mountain to the miser.

ಕುರುಡಂಗಂ ಮಾರ್ಗವೇ ಬೆಟ್ಟ ; ಕೇ
ಳ್ಬಡವಂಗೆಲ್ಲರ ದ್ವೇಷ ಬೆಟ್ಟ ;
ಜಡದೇಹಿಂಗಂ ಜರಾ ಬೆಟ್ಟ ; ಮು
ಪ್ಪಡಿಸಿರ್ದಾತಗೆ ಪೆಣ್ಣು ಬೆಟ್ಟ ;
ರುಣವೇ ಪೇರ್ಬೆಟ್ಟ ಮೂಲೋಕದೊ
ಳ್ಕಡು ಲೋಭಿಂಗಣು ಬೆಟ್ಟವೈ !
ಹರಹರಾ ! ಶ್ರೀಚನ್ನಸೋಮೇಶ್ವರಾ !

597. ಪ್ರಜೆಗಳ್ಪಾಲಿಸ ಬಲ್ಲಡಾತನರಸಂ ;

The king who knows how to protect his subjects, &c.

ಕೈಯ್ಯಾಸೆಯುಂ ಮಾಡದಾ
ನಿಜಮಂತ್ರೇಶ್ವರ ; ತಂದೆತಾಯಿ
ಸಲಹಲ್ಬಲ್ಲಾತನೇ ಧಾರ್ಮಿಕಂ ;
ಭಜಕಂ ದೈವದಿ ಭಕ್ತಿಯುಳ್ಳಡೆ,
ಭಟಂ ನಿರ್ಭೀತ ತಾನಾದಡಂ ;

ದ್ವಿಜನಾಚಾರತಿಯುಳ್ಳವಂ
    ಹರಹರಾ ! ಶ್ರೀಚನ್ನಸೋಮೇಶ್ವರಾ !

598. ಪುರದುರ್ಗಂಗಳ ಬಲ್ಮೆ ಮಾಡದೆ,
    ಪ್ರಜಾಕ್ಷೋಭಂಗಳಂ ನೋಡದೆ

A bad king a male buffalo.

ಲ್ಲರು ವಿಶ್ವಾಸಿಗಳೆಂದು ನಂಬಿ
    ಬಹುದುಂಟಾದಪ್ಪುದಂ ಕಾಣದಾ
ತುರದಿಂದುಂಡತಿನಿದ್ರೆಗೈದು
    ಮದನಂಗಾಳಾಗಿಪಂ ಲೋಕದೋ
ಳ್ಧೊರೆಯೇ ? ಸೊಕ್ಕಿದ ಕೋಣನೈ !
    ಹರಹರಾ ! ಶ್ರೀಚನ್ನಸೋಮೇಶ್ವರಾ !

599. ಸರಿಯೇ ಸೂರ್ಯಗೆ ಕೋಟಿ
    ಮಿಂಚುಬುಳಗಳ್ನಕ್ಷತ್ರಮೊಪ್ಪಿರ್ದಡೇ

Millions of glow-worms not equal to the sun, &c.

ನೊರೆಯೇ ಚಂದ್ರಗೆ ? ಜೀವರತ್ನ
    ಕೇಣಿಯೇ ಮಿಕ್ಕಾದ ಪಾಷಾಣವೇ
ನುರುಗೇಂದ್ರಂಗೆ ಸಮಾನ ನೀರುಳಿ[1] ?
    ಸುಪರ್ಣಂಗೀಡೆ ಕಾಕಾಳಿ ? ಸ
ಕ್ಕರಿಗುಪ್ಪಂ ಸರಿ ಮಾಳ್ಪರೇ ?
    ಹರಹರಾ ! ಶ್ರೀಚನ್ನಸೋಮೇಶ್ವರಾ !

1. ಮಳೆ ಹುಳ.

600 ಪಿಡಿಯೊಳ್ತುಂಬಿರೆ ಪಂಕ, ಮೇಲು
    ದೊಂಳೆಯಲ್ತಾ ಶುದ್ಧಮೋ ? ಮಾಡುತ

Outward cleanliness not inward purity.

ಕಡು ಪಾಪಂಗಳ, ಮಾಯಲಾತ
ಶುಚಿಯೇ ? ಕಾಕಾದಿಗಳ್ಮೇಯುವೇ ?

ಗುಡ ಪಾನಂಗಳ ಮೈಗೆ
ಪೂಸಲದು ತಾ ಸ್ವಾದಪ್ಪುದೆ ? ಬಾಹ್ಯದೋ
ಳ್ಮಡಿಯೋ ನಿರ್ಮಲಚಿತ್ತಮೈ ?
ಹರಹರಾ ! ಶ್ರೀಚನ್ನಸೋಶ್ವರಾ !

601. ಕಡು ಮುಪ್ಪಾಗಿರೆ ; ಕುಂಟನಾಗೆ ;
ಕುರುಡಂ ತಾನಾಗೆ ; ಯೆತ್ತೇರಿದಾ
ಮುಡುಬಾ, ಮೂಕೊರೆ,
ಮೂಢ, ಮೂಕ, ಕಿವುಡಂ, ಚಂಡಾಲ ತಾನಾದಡಂ ;

ಸುಡುಮೈ, ಕುಷ್ಟಶರೀರ
ಯಾಗಲೋಲಿವ ಪೊರ್ನ್ನಿತ್ತರಾಪೆಣ್ಗಳುಂ ;
ಕೊಡುಗೈ ಸ್ತ್ರೀಜನವಶ್ಯಮೈ !
ಹರಹರಾ ! ಶ್ರೀಚನ್ನಸೋಮೇಶ್ವರಾ !

Money all powerful with women.

602. ಸುರಚಾಪಾಯುಧಮಿಂದ್ರಜಾಲದ ಬಲಂ
ಮೇಘಂಗಳಾಕಾರ, ಬಾ
ಲರು ಕಟ್ಟ್ಯಾಡುವ ಕಟ್ಟೆ
ಸ್ವಪ್ನದ ಧನಂ, ನೀರ್ಗುಳ್ಳಿ, ಘಾಳೀಸೊಡ

ರ್ಪರಿಯುತ್ತಿಪ್ಪ ಮರೀಚಿಕಾಜಲ,
ಜಲಾವರ್ತಾಕ್ಷರಂ, ಯಿಂತಿವಂ

Fortune uncertain; a drop of water on a blade of grass.

ಸಿರಿ ಪುಲ್ಲಾಗ್ರದ ತುಂತುರ್ಕೈ !

ಹರಹರಾ ! ಶ್ರೀಚನ್ನಸೋಮೇಶ್ವರಾ !

603. ಧನಕಂ, ಧಾನ್ಯಕೆ, ಭೂಷಣಾಂಬರ

There are no men, who are not desirous of wealth, &c.

ಸುಪುಷ್ಪಂಗಳ್ಗೆ, ಯಿಷ್ಟಾದಿಭೋ

ಜನಕಂ, ಪಣ್ಣಾಲ ಚಂದನಾದಿ

ಯನುಲೇಪಂಗಳ್ಗೆ, ಕಂಣ್ಗಿಂಪವಾ

ದೊನಿತಾಸಂಗಕೆ, ರಾಜ್ಯಭೋಗಕೆ

ಸುವಿದ್ಯಂಗಳ್ಗೆ, ಯಾರಾದಡಂ,

ಮನದೊಳ್ಕಾಮಿಸಿ ನೋಡರೇ ?

ಹರಹರಾ ಶ್ರೀಚನ್ನಸೋಮೇಶ್ವರಾ !

604. ಹೊಳೆಯಲ್ಲಿಕ್ಕಿದ ಜೇನು,

Honey put in the river, the miser's wealth.

ಶೂದ್ರ ಬೆಳದಾಕಾರಂಗಳಂ ಮಾಡಿದಾ

ಬಲುಸಂಣಾಗ್ರದ ಭತ್ತ

ಸರ್ಪ ಧನವಂ ಕಾದಿರ್ಪುದಾದೀನರಾ

ಹೊಲೆಪಾಟಂದಲಿ ಕೂಡಲಿಕ್ಕಿ

ಪರರಿಂಗೀಡಾಗಿ ತಾ ಮಾಳ್ಪರ್ಕೈ ;

ಫಳಸೇನುಂಣದೆ ಪೋಪರ್ಕೈ !

ಹರಹರಾ ! ಶ್ರೀಚನ್ನಸೋಮೇಶ್ವರಾ !

605. ಸತಿಯಮರ್ಾತಿಗೆ ಸೋಲ್ವ ಜೂಜಿಗೆ

The wise are not infatuated with doubtful things.

ಖಳಕೊರ್ಂಡಾಡುತಿರ್ಪಲ್ಲಿಗಂ,

ಮತಿಪಾಪಂ ಬಹ ಕಾರ್ಯಕಲ್ಪ
ವಿಷಯಕ್ಕಂ, ದಾಸೆಯಗೋರ್ಷ್ಟಿಗಂ
ಪ್ರತಿ ತಾನಿಲ್ಲದ ಮದ್ದು ಮಂತ್ರ
ಮಣಿಗಂ, ಸಂದೇಹಗೊಂಡಲ್ಲಿಗಂ,
ಮತಿವಂತರ್ಮರೞ್ಪರೇ ?
ಹರಹರಾ ! ಶ್ರೀಚನ್ನ ಸೋಮೇಶ್ವರಾ !

606. ಹಿಡಿಯಲ್ಪಿಂಗುಗೆ ಮತ್ಸರಂ

A mean man will not give up his meanness.

ಕವಿಯದೇ ? ದುರ್ಗಂಧಮಂ ಘೊಳಿಯೋ
ಳ್ತಡಯಲ್ಕಾರದೆ ? ನಾಯಿಬಾಲ
ಶಡೆಯಂ ಕಟ್ಟಲ್ಕೆ, ಚನ್ನಪ್ಪುದೇ ?
ಸುಡು ! ಚೇಳಂ ತೆಗೆಯಲ್ಕೆ,
ಸುಮ್ಮನಿಹುದೇ ? ಯೇನಂದಡೆಷ್ಟಾದಡಂ,
ಬಿಡ ತನ್ನಂಗವ ನೀಚ ತಾಂ
ಹರಹರಾ ! ಶ್ರೀಚನ್ನಸೋಮೇಶ್ವರಾ !

607. ಘನದೈನ್ಯಂ ಬಡುವರ್ಗರುತ್ವ

Though in reduced circumstances men are still arrogant.

ಗೆಡುವರ್ಗಾಸಕ್ಕೆ ; ಕುಗ್ರಾಮವಾ
ಗನು ಗೆಟ್ಟಿರ್ಪರು ; ಯಾಕ್ಷಣಕ್ಕೆ
ಕೆಲವರ್ಮಾತಾಡರುಂ, ಬೀಗಿಬಿ
ರ್ರನೆ ಬಾಗರ್ತ್ತಲೆಗೇರಿ ಸೊಕ್ಕು
ತೊನೆವರ್ತಾವೆಲ್ಲರಂ ನಿಂದಿಪಾ
ಮನುಜರ್ಗೆತ್ತಣನೀತಿಯೈ ?
ಹರಹರಾ ! ಶ್ರೀಚನ್ನಸೋಮೇಶ್ವರಾ !

608. ಸುಡು ಸೂಪಂಘೃತವಿಲ್ಲದೂಟವ !

Burn a meal without ghee, &c. Better nothing!

ಪರಾನ್ನಾಪೇಕ್ಷಿಪಾಜಿಂಹ್ವೆಯಂ !
ಸುಡು ದಾರಿದ್ರದ ಬಾಳ್ಕೆಯಂ,
ಕಪಟಕೋಪಂಮಾಳ್ಪಸಂಗಾತಿಯಂ !
ಸುಡು ತಾಂಬೂಲವಿಹೀನವಕ್ತ್ರ,
ಪರವೆಂಣಂ ನೋಡುವಾಕಂಗಳಂ,
ನುಡಿದಂ ತಪ್ಪುವರಾಜನಂ !
ಹರಹರಾ ! ಶ್ರೀಚನ್ನಸೋಮೇಶ್ವರಾ !

609. ಬಡೆಗೋಲಂ ಸಮ ಮಾಡಲ

A fool is past improvement.

ಕ್ಕರೆಯೊಳುಂ ಕೂಪಂಗಳಂ ತೋಡಲ
ಕ್ಕಿಡಿದುಕ್ಕಂ ಮೃದು ಮಾಡಲಕ್ಕು ;
ಮಳಲೊಳ್ತೈಲಂಗಳಂ, ತೋರಲ
ಕ್ಕಡವೀಸಿಂಗನ ತಿದ್ದಲಕ್ಕು ;
ಕರೆಯಲ್ಕಕ್ಕುಗ್ರವ್ಯಾಘ್ರಂಗಳಂ ;
ಕಡು ಮೂರ್ಖಂ ಮತಿ ಗೇಳನೈ !
ಹರಹರಾ ! ಶ್ರೀಚನ್ನಸೋಮೇಶ್ವರಾ !

610. ಅಣು ಮಾತ್ರಂ ನಜರಿಲ್ಲದಾಣ್ಮ

An accountant who takes bribes, a rat.

ನೆಡೆಗಂ ಲಂಚಕ್ಕೊಡಂಬಟ್ಟುವಾ
ಪಣಮಂ ಕೊಂಡತಿದ್ರವ್ಯಮಂ
ಕೆಡಿಸಿ ಭಾಡಂ ಗೇಳ ದ್ರೋಹಂಗಳಾ
ಯೆಣಿಸುತ್ತೆಲ್ಲರ ಬಾಳ್ಗೆ ನೀರನೆರೆದುಂ
ತಾ ಮಾಣದೇ ಭಕ್ಷಿಪಾ

ಗಣಿಕಂ ಹೆಗ್ಗಣಕಂ ಸಮಂ ;
ಹರಹರಾ ! ಶ್ರೀಚನ್ನಸೋಮೇಶ್ವರಾ !

611. ಇಳಿಯಾಣ್ಮಂ ತನಗಿಂದ ವೆಗ್ಗಳ
ನೆನುತ್ತಂ ಪಾರುಪತ್ಯಂಗಳಂ
ಖಳಗೀಯಲ್ಸುಲಿತಿಂದು
ರಾಜ್ಯವನಿತಂ ನೀವ್ಯಾಕೆ ತಾವ್ಯಾತಕೆಂ
ದುಳಿದರ್ಗೀಯದೆ ಜೀತಮಂ,
ಕಪಿಯ ಮುಷ್ಟಿಂ ಮಾಡಿ ಕೂಗುತ್ತಿಹಾ
ದಳವಾಯೇ ತಳವಾರನೈ !
ಹರಹರಾ ! ಶ್ರೀಚನ್ನಸೋಸೇಶ್ವರಾ !

A bad general only a beadle.

612. ಒಡೆಯಂಗುತ್ಸಹಮಾಗೆ,
ಸರ್ವಜನಮಾನಂದಂ ಬಡಲ್ರಾಜ್ಯಜೇಂ
ಗೊಡದೋಲ್ತುಂಬಿ ತುಳುಂಕಿ
ನಿಚ್ಚಫಲಪ್ಪೈರಿಂದೂರ್ವಿಯಂ ಬಿತ್ತಿ ಬ
ಲ್ಗಡಿದುರ್ಗಂಗಳ ಭದ್ರಮಾಡಿ
ಧನಧಾನ್ಯಂ ತೀವಿ ಭಂಡಾರದೋ
ಳ್ನಡೆವಂ ಭಾಗ್ಯದ ಕರ್ತನೈ !
ಹರಹರಾ ! ಶ್ರೀಚನ್ನಸೋಮೇಶ್ವರಾ !

A happy king, whose subjects are happy.

613. ಕಳವಂಪೋದುದ ಪೋಗಿ
ಹೆಜ್ಜೆವಿಡಿದಾಮರ್ಮಂಗಳಂ ಕಾಣದೇ,
ಪೊಳಲೋಳ್ಪೊಕ್ಕರ, ಪೋದರಂ,
ನುಡಿದರಂ, ಮತ್ತಾರನಂ ನೋಡದೇ,

A beadle, who cannot find out thieves, only a bird.

ಅಳಿವ ನ್ಯಾಯವ ನೋಡಿ ಯಲ್ಲ
ರಹರೆಂದುಂಮನ್ಯಥಾ ಬಾಧಿಪಾ
ತಳವಾರಂ ಬೆಳವಾರನ್ನೈ !
ಹರಹರಾ ! ಶ್ರೀಚನ್ನಸೋಮೇಶ್ವರಾ !

614. ಹಣವುಳ್ಳಂ, ಹೆಣನಾದಡಂ ವೊಲಿದ
ವೋಲಾರೆಂದಡಂ, ಬಿಟ್ಟರ
ಕ್ಷಣಮಾತ್ರಂ ; ಬಹು ಕೂಟಬ್ಯಾಟಗಳಲಿಂ
ಸೋತಂದದಿಂ ಹಾಲಮುಂ

Love of harlots lasts only as long as one has money.

ದಣ ಬೆಕ್ಕಾಡುವೋಲಾಡಿ
ಸರ್ವಧನ ತಾ ಪೋಗಲ್ಕೆ, ಮಾತಾಡರೈ !
ಗಣಿಕಾಸ್ತ್ರೀಗುಣ ಯಾತಕ್ಕೈ ?
ಹರಹರಾ ! ಶ್ರೀಚನ್ನ ಸೋಮೇಶ್ವರಾ !

615. ತೆರನಂ ಕಾಣದ ತಾಣ ತಾಟಕಿತನಂ
ತಾ ಮೂಳ್ಪರಿಪ್ಪಲ್ಲಿ ನಿ
ಷ್ಠುರಭಾಷಾನೃಪನಲ್ಲಿ
ನಿಂದೆ ವರಿದೇ ಬಪ್ಪಲ್ಲಿ, ಯನ್ನೋದಕಂ

Avoid bad society!

ಕಿರಿದಾದಲ್ಲಿ ರಿಪುವ್ರಜಂಗಳೆಡೆಯೋ
ಳ್ದುಸ್ಸಂಗದುರ್ಗೋಷ್ಠಿಯೋ
ಳಿರಸಲ್ಲಿರ್ದಡೆ, ಹಾನಿ ಯ್ಯೈ !
ಹರಹರಾ ! ಶ್ರೀಚನ್ನಸೋಮೇಶ್ವರಾ !

616. ಕುರುಡಂ ಕನ್ನಡಿಯುಂ,

The dog unequal to the lion.

ಕವೀಂದ್ರರ ಮಹಾದುರ್ಮಾರ್ಗಿಗಳ್ತ್ಯಾಗಿಯುಂ
ಬರಡಂ, ಬಾಲರ ಮುಗ್ಧಬಂಜೆ,
ಕುಲಟಾ ಪೂರ್ಣೇಂದುವಂ, ಕಾವ್ಯದಾ

ಪರಿಯಂ ಗಾಂಪರು ಪಾಪಿಗಳ್ಸುಜನರಂ
ಮಾಣಿಕ್ಯಮಂ ಮರ್ಕಟಂ,
ಜರಿಯಲ್ಸಿಂಗಕೆ ಗ್ರಾಮಶಿಂಹ್ಮ ಯೆಣೆಯೇ !
ಶ್ರೀಚನ್ನಸೋಮೇಶ್ವರಾ !

617. ಮರಗಳ್ಪುಟ್ಟವೆ ತಾಣ ವೊಂದೆ ಒಗಕಂ ?

God, the creator, also the preserver of man.

ರಾಜ್ಯಂಗಳೇಂ ಪಾಳೆ? ಭೂ
ವರರೊಳ್ತ್ಯಾಗಿಗಳಿಲ್ಲವೆ ? ಕವಿಗೆ
ವಿದ್ಯಾಮಾತೃವುಂ ಬಂಜೆಯೇ ?

ಪುರ ವಂದೇನುಣಲಿಕ್ಕದೆ ?
ಸಿಜನನಿ ಗಂಡೆಂದೆನ್ನಳೇ ? ಲೋಕದೋ
ಳ್ನರನಂ ಪುಟ್ಟಿಸಿ ಹುಲ್ಲ ಮೆಯ್ಯಿಸುವನೇ ?
ಶ್ರೀಚನ್ನಸೋಮೇಶ್ವರಾ ?

---

# ದಾಸರ ಪದಗಳು.

## THE VERSES OF KANAKADASA.

### *a.* ಕನಕದಾಸನಿಂದಾದದ್ದು.

#### ಪೀಠಿಕೆ.

ಧಾರವಾಡಜಿಲ್ಲೆಯ ಕೋಡ ತಾಲ್ಲೂಕಿನಲ್ಲಿ ಈಗ ಬಾಡ ಎಂಬುವ ಒಂದು ಸಣ್ಣ ಗ್ರಾಮವುಂಟು. ಅದರಲ್ಲಿ ಈಗ ಸುಮಾರು ೩೦೦ ವರುಷದ ಕೆಳಗೆ ಒಬ್ಬ ಬೇಡರ ಹುಡುಗನು ಕನಕ ಯೆಂಬ ಹೆಸರಿನಿಂದ ಬೆಳೆದು ಬೇಟೆ ಆಡುವಲ್ಲಿ ಯುದ್ಧ ಮಾಡುವಲ್ಲಿ ಶೂರನಾಗಿದ್ದನು. ವೇಳೆ ವೇಳೆಗೆ ಸ್ವಪ್ನದಲ್ಲಿ ಕೃಷ್ಣ ಬಂದು ಅವನಿಗೆ ನೀನು ಹೀಗೆ ಕಾಟಕ ತನದಿಂದ ಇರಬೇಡ, ನನ್ನ ದಾಸನಾಗಿ ಬಿಕ್ಷ ಬೇಡಿಕೊಂಡು ಇರು ಅಂತ ಹೇಳುತ್ತಿದ್ದನು. ಅವನು ವಲ್ಲೆನು ಅನ್ನುತ್ತಾ ಬಂದನು. ಹೀಗೆ ಕೆಲವು ಕಾಲ ಹೋದ ಮೇಲೆ, ಒಂದು ದಿವಸ ಆ ಬಾಡ ಎಂಬ ಗ್ರಾಮದವರಿಗೂ ನೆರೆ ಹಳ್ಳಿಯವರಿಗೂ ಸೀಮಾಂತರನ್ಯಾಯ ಬಿದ್ದು ಯುದ್ಧವಾಯಿತು. ಆಗ ಕೃಷ್ಣ ನೆರೆಹಳ್ಳಿಯವರ ಕಡೆಯುವನಂತೆ ಒಬ್ಬ ರಾವುತನಾಗಿ ಬಂದು ಈ ಕನಕ ಎಂಬುವ ಕಾಟಕನನ್ನು ಬಹಳ ಹೊಡೆದು ಮೈಯೆಲ್ಲಾ ಘಾಯ ಮಾಡಿದನು. ಆ ಮೇಲೆ ಅವನು ಘಾಯ ಕಟ್ಟಿಸಿಕೊಂಡು ಮನೆಯಲ್ಲಿ ಮಲಗಿದ್ದಾಗ, ಮತ್ತೂ ಸ್ವಪ್ನದಲ್ಲಿ ಬಂದು, ನಾನೇ ರಾವುತನ ರೂಪವಾಗಿ ಬಂದು ನಿನ್ನ ಹೊಡೆದೆ ಇನ್ನಾದರೂ ನನ್ನ ಮಾತು ಕೇಳಿ ನನ್ನ ದಾಸನಾಗಿ ದಂಡಿಗೆ ಹಿಡಕೊಂಡು ನನ್ನ ನಾಮಸ್ಮರಣೆ ಮಾಡಲಿಕ್ಕೆ ಒಡಂಬಟ್ಟರೆ, ನಿನ್ನ ಘಾಯ ಈಗಲೇ ಮಾಯಿಸುತ್ತೇನೆ ಅನ್ನೋಣ, ಈ ಕನಕ ಒಡಂಬಟ್ಟನು. ಆಗ ಸ್ವಪ್ನ ತಿಳಿದು ನೋಡೋದರಲ್ಲಿ ಎಲ್ಲಾ ಘಾಯ ಆಗಲೇ ಮಾದಿದ್ದವು. ಮೂಗಿನ ಮೇಲೆ ಒಂದು ದೊಡ್ಡ ಘಾಯವಾಗಿತ್ತು. ಅದು ಮಾಯಿತೋ ಇಲ್ಲೋ ಅಂತ ಎಡಗೈ ಮೂಗಿನ ಮೇಲೆ ಇಟ್ಟುಕೊಂಡು ನೋಡೋಣ ಆ ಕೈ ಬೊಟ್ಟು ಅಲ್ಲೇ ಹತ್ತಿಕೊಂಡು ಬಿಡದ ಹಾಗಾಯಿತು. ಆಗ ಕೃಷ್ಣನ ಸ್ತೊತ್ರ ಮಾಡಲಿಕ್ಕೆ ಹತ್ತಿದ ಸಮಯದಲ್ಲಿ ಅವನು ಪ್ರತ್ಯಕ್ಷವಾಗಿ ನನ್ನ ದಾಸನಾದ ನೆಂಬುವ ಗುರುತಿನ ದೆಶೆಯಿಂದ ಈ ಕೈ ಹೀಗೆ ಯಿರಲಿ, ಇದರಲ್ಲಿ ದಂಡಿಗೆ ಹಿಡಕೊಂಡು ನನ್ನ ನಾಮಸ್ಮರಣೆ ಮಾಡುತ್ತಾ ಇರು. ನಿನಗೆ ಯಾವಾಗ್ಯಾದರು ಆ ಕೈಯಿಂದ ಕೆಲಸ ಮಾಡೋದು ಬಿದ್ದಾಗ, ಬಿಡುತ್ತದೆ. ಆ ಕೆಲಸ ತೀರುತ್ತಲೇ, ಮತ್ತು ಇಲ್ಲೆ ಇಟ್ಟುಕೊಳ್ಳ ಬೇಕೆಂತ ಅಪ್ಪಣೆ ಕೊಟ್ಟ ಪ್ರಕಾರಕ್ಕೆ ಮಾಡಿ, ಪದಗಳನ್ನು ಹಾಡಿ ಕೊಳ್ಳುತ್ತಾ ತಿರುಗಿದನು. ಕಡೆಗೆ ಧಾರವಾಡ ಜಿಲ್ಲೆಯಲ್ಲಿರುವ ಕಾಗಿನೆಲೆಯಾದಿಕೇಶವನ ಗುಡಿಯಲ್ಲಿ ಸತ್ತನು.

ಈ ದಾಸರ ಪದಗಳಲ್ಲಿ ಪ್ರಾಸನಿಬಂಧನೆ ಮಾತ್ರಾ ಸಂಖ್ಯೆ ಈ ಎರಡಲ್ಲದೆ ಉಳಿದ ನೇಮ ಏನು ಇಲ್ಲ. ತಮ್ಮ ಇಚ್ಛೆಗೆ ಬಂದರಾಗಕ್ಕೂ ತಾಳಕ್ಕೂ ಸಮ ವಾಗುವ ಹಾಗೆ ನೋಡಿ ಮಾಡುತ್ತಾರೆ.

1. ರಾಗ ಕಲ್ಯಾಣಿ.

618. ತಲ್ಲಣವ ಗೊಳ್ಳದಿರು ! ಯಲೆ ಮಾನವ !

Cares unnecessary. ಕೊಳ್ಳು ಶಾಂತಿಯು ! ಸ್ವಾಮಿ ರಕ್ಷಿಸುವ ನಿನ್ನ. (ಪಲ್ಲ)

619. ಅಡವಿಯೊಳಗಾಡುವ ಮೃಗಜಾತಿ ಪಕ್ಷಿಗೆ

God cares for you. ಯುಡಿಗಳಿಗೆ ಯಾಹಾರವನು ಯಿತ್ತವರು ದಾರೋ ?

ಪಡದ ಜನನಿಯು ದೆರದಿ ಸ್ವಾಮಿ ಹೊಣೆಕಾರಾಗಿ

ಬಿಡದೆ ರಕ್ಷಿಪನಿದಕೆ ಸಂದೇಹ ಬೇಡಾ !

620. ಬೆಟ್ಟದ ತುದಿಯಲ್ಲಿ ಬೆಳದಿರ್ದ ಮರಗಳಿಗೆ

God is security for all creatures. ಕಟ್ಟೆಯನು ಕಟ್ಟಿ ನೆರೆ ನೀರೆರದರುಂಟೇ ?

ಪುಟ್ಟಿಸಿದ ಸ್ವಾಮಿ ತಾ ಹೊಣೆಕಾರನಾಗಿರಲು,

ಕೊಟ್ಟು ರಕ್ಷಿಪನಿದಕೆ ಸಂದೇಹ ಬೇಡಾ !

621. ಕಳ್ಲೊಳಗೆ ಪುಟ್ಟಿ ಕೂಗುವ ಮಂಡುಕಾದಿಗೆ

ಅಲ್ಲಿಲ್ಲಿಗಾಹಾಹಾರನಿತ್ತವರದಾರೋ ?

ಬಲ್ಲಿದನು ಕಾಗಿನೆಲೆಯಾದಿಕೇಶವರಾಯ

ನಿಲ್ಲದೇ[1] ರಕ್ಷಿಪನು ; ಸಂದೇಹ ಬೇಡಾ !

1. ಬಂದನ್ನೂ ಬಿಡದ ಹಾಗೆ.

2. ರಾಗ ಸೌರಾಷ್ಟ್ರ. ಅಷ್ಟತಾಳ.

622. ವರಕವಿ[1]ಗಳ ಮುಂದೆ ನರಕವಿ[2]ಗಳ ವಿದ್ಯ ಮಾಡ ಬಾರದು, ಈ

Do not worship stones. ಧರಣಿಯು ಕಲ್ಲಿಗೆ ಶರಣೆಂದು ಪೂಜೆಯ ಮಾಡ ಬಾರದು. (ಪಲ್ಲ)

1. ವಿಧ್ಯಾಭ್ಯಾಸ ಮಾಡದಲೆ ವರ ಪಡಕೊಂಡು (ಕನಕದಾಸನಂತೆ) ಕಾವ್ಯ ಮಾಡು ವವರು. 2. ಶಾಸ್ತ್ರ ಕಲಿತುಕೊಂಡು ಕವಿಗಳಾದವರು.

623. ಪಾಪಿಗಳಿದ್ದಲ್ಲಿ ರೂಪುಳ್ಳ ವಸ್ತುವ ತೋರ ಬಾರದು; ಬಹು
Different rules of life. ಕೋಪಿಗಳಿದ್ದಲ್ಲಿ ಯನುಭವಗೋಷ್ಟಿಯ ಮಾಡ ಬಾರದು.

624. ಅಡಿ ಸತ್ತ ಮಡಿಕೆಗೆ ಜೋಡಿಸಿ ಯೊಲೆಗುಂಡ ಹೂಡ ಬಾರದು ;
ಬಡತನ ಬಂದಾಗ ನೆಂಟರ ಬಾಗಿಲ ಶೇರ ಬಾರದು.

625. ಹರಿಯು ಜರದು ಹರ ಘನನೆಂದು ನರಕಕ್ಕೆ ಶೇರ ಬಾರದು ;
ಪರರನ್ನು ಬೈದು ಪಾತಕಕ್ಕೆ ಮುನ್ನೊಳಗಾಗ ಶೇರ ಬಾರದು.

626. ಮಡದಿ ನುಡಿಯ ಕೇಳಿ ಜಗಳಕ್ಕೊಬ್ಬರ ಕೂಡೆ ಹೋಗ ಬಾರದು ;
ಬಿಡಾರವಸ್ತಿಯು, ಬಾಯ್ಬಡಿಕರು ಯಿದ್ದಲ್ಲಿ ಮಾಡ ಬಾರದು.

627. ಮುಂದೆ ಭಲಾ ! ಯೆಂದು, ಹಿಂದೆ ನಿಂದಿಪರನು ಕೂಡ ಬಾರದು ;
ತಂದೆ ಬಡದಾದಿ ಕೇಶವನ ಸ್ಮರಣೆಯ ಮರೆಯ ಬಾರದು.

---

## THE VERSES OF PURANDARADASA.

### *b.* ಪುರಂದರ ದಾಸನಿಂದಾದದ್ದು.

### ಪೀಠಿಕೆ.

ಪುರಂದರಗಡ ಎಂಬ ಒಂದು ಊರು ಉತ್ತರ ದೇಶದಲ್ಲಿ ಉಂಟು. ಅದು ಈಗ ಅಹಂಮದನಗರದ ಜಿಲ್ಲೆಯಲ್ಲಿ ಒಂದು ತಾಲ್ಲೂಕಾಗಿರುತ್ತದೆ. ಈ ಗ್ರಾಮದಲ್ಲಿ ಸುಮಾರು ಕೆಲವು ನೂರು ವರುಷದ ಹಿಂದೆ ಒಬ್ಬ ಸ್ಮಾರ್ತಬ್ರಾಹ್ಮಣನು ಸಾವಕಾರಿಕೆ ಮಾಡಿಕೊಂಡು ಬಹಳ ಕೃಪಣ ವೃತ್ತಿಯಿಂದ ಇರುತ್ತಿದ್ದನು. ಕಿಂಚಿತ್ತಾದರೂ ದಾನಧರ್ಮ ಮಾಡುತ್ತಿದ್ದಿಲ್ಲ. ಇವನ ಕೃಪಣತ್ವ ಬಿಡಿಸಬೇಕೆಂತ, ಕೃಷ್ಣನು ಒಬ್ಬ ಬಡ ಬ್ರಾಹ್ಮಣನ ವೇಷ ತಕ್ಕೊಂಡು ಆ ಸಾವಕಾರನಲ್ಲಿ ಬಂದು ಯಾಚನೆ ಮಾಡಲಿಕ್ಕೆ ಹತ್ತಿದನು. ದಿನಪ್ರತಿ ಬೆಳಿಗ್ಯೆ ಬರುತ್ತಿರಲಿಕ್ಕೆ, ಸಾವಕಾರ, ನಾಳೆ ಬಾ ! ಈ ಹೊತ್ತು ಕೆಲಸದಲ್ಲಿದ್ದೇನೆ ಎಂದು ಹೇಳುತ್ತಾ ಬಂದನು. ಇದೇ ಪ್ರಕಾರ ಸಮಗ್ರ ಒಂದು ವರುಷ ಆ ಬ್ರಾಹ್ಮಣನು ಮನೆಗೆ ಬಂದು ಹೋಗುತ್ತಿದ್ದನಾದಮೇಲೆ, ಸಾವಕಾರನಿಗೆ ಬಹಳ ಬೇಸರ ಬಂದು, ತನ್ನ ಮನೆಯಲ್ಲಿ ಇದ್ದ ಖೊಟ್ಟಿದುಗ್ಗಾಣಿ ಒಂದು ವರುಷ ಆ ಬ್ರಾಹ್ಮಣನ ಮುಂದೆ ಸುರುವಿ, ಇದರಲ್ಲಿ ಬೇಕಾದ್ದು ಒಂದು ಆರಿಸಿ ಕೊಂಡು ಹೋಗು ಅಂತ ಹೇಳಿದರಿಂದ, ಆ ಕಪಟಬ್ರಾಹ್ಮಣನು ವಲ್ಲೆನೆಂದು ಬಿಟ್ಟು, ಹೋಗಿ ಹಿತ್ತಲಬಾಗಲಿಂದ ಆ ಸಾವಕಾರನ ಹೆಂಡತಿಯ ಕಡೆಗೆ ಬಂದು ಮಗನ ಮುಂಜಿ ಮಾಡುತ್ತೇನೆ, ಏನಾದರೂ ದ್ರವ್ಯದಾನ ಕೊಡು ! ಅಂತ ಕೇಳಿದ್ದಕ್ಕೆ, ಆ

ಕೆ, ನಾನು ಹೆಂಗಸು, ನನ್ನ ಸ್ವತಂತ್ರದಲ್ಲಿ ಏನಿಲ್ಲ ಅಂಬೋಣ, ನಿನ್ನ ಮೂಗಿನಲ್ಲಿರುವ ನತ್ತು ಕೊಡು' ಪುಣ್ಯ ಬರುತ್ತದೆ ಎಂದು ಹೇಳಿ ಆ ಬ್ರಾಹ್ಮಣ ಬಹಳ ಪೀಡಾಕಾರ ಮಾಡಿದ್ದರಿಂದ, ನನ್ನ ಗಂಡ ದೊಡ್ಡ ಸಾವಕಾರನಾದಾಗ್ಯೂ, ದಾನಧರ್ಮ ಮಾಡುವದಿಲ್ಲ, ಏನಾದರೂ ಚಿಂತೆ ಇಲ್ಲ, ನಾನಾದರೂ ದಾನ ಮಾಡೋಣ ಅಂತ ತಿಳುಕೊಂಡು, ತನಗೆ ಹೇಳಿಕೊಂಡ ಪ್ರಕಾರ, ಆ ಬ್ರಾಹ್ಮಣನಿಗೆ ತನ್ನ ಮೂಗಿನೊಳಗಿದ್ದ ನತ್ತನ್ನು ಕೊಟ್ಟು ಬಿಟ್ಟಳು. ಅವನು ಆಗಲೆ ಅದನ್ನ ತಕ್ಕೊಂಡು ಬಂದು ಅದೇ ಸಾವಕಾರನ ಬಳಿಯು ಈ ನತ್ತು ಒತ್ತೆ ಇಟ್ಟುಕೊಂಡು ಹಣ ಕೊಡು ಎಂದು ಕೇಳಿದಾಗ, ತನ್ನ ಹೆಂಡತಿಯದು ಅಂತ ಗುರ್ತು ತಿಳಿಯಿತು. ಪರಂತು ತನ್ನ ಮನೆಯಲ್ಲಿ ಮೊದಲು ವಿಚಾರ ಮಾಡಿ ನೋಡಿದ ಮೇಲೆ, ಈ ಬ್ರಾಹ್ಮಣನನ್ನು ವಿಚಾರಿಸಬೇಕೆಂದು ನೆನಸಿ ಈ ನತ್ತು ನನ್ನ ಬಳಿಯಲ್ಲಿರಲಿ ! ನೀನು ಸಂಜೆಯ ಕಡೆಗೆ ಬಾ ! ಹಣ ಕೊಡುತ್ತೇನೆಂದು ಬ್ರಾಹ್ಮಣನಿಗೆ ಹೇಳಿ ಕಳುಹಿಸಿ ನತ್ತನ್ನು ತನ್ನ ಅಂಗಡಿಯಲ್ಲಿ ಇಟ್ಟುಕೊಂಡು ಮನೆಗೆ ಹೋಗಿ ಹೆಂಡತಿಯ ನೋಡಲಾಗಿ, ಮೂಗತಿ ಇದ್ದಿಲ್ಲ. ಏನಾಯಿತು ಅಂತ ಕೇಳೋಣ, ತೆಗದಿಟ್ಟಿದ್ದೇನೆ, ಮನೆಯಲ್ಲಿ ಅದೆ ಅಂದಳು. ಈಗಲೆ ತಂದು ತೋರಿಸು ! ಎಂದು ಬಹಳ ಸಿಟ್ಟು ಮಾಡೋಣ, ತರುತ್ತೇನೆಂದು ಆಕೆ ಕೋಣೆಯೊಳಗೆ ಹೋಗಿ, ಇನ್ನು ಮೇಲೆ ನನ್ನ ಮರಿಯಾದಿ ಉಳಿಯುವದಿಲ್ಲ, ಗಂಡನಿಂದ ಶಿಕ್ಷೆ ಹೊಂದುವದಕ್ಕಿಂತ ಸಾಯುವದು ಚೆಲ್ಲೋದು ಅಂತ ತಿಳಿದು ವಿಷ ಅರದು ಬಟ್ಟಲೊಳಗೆ ಹಾಕಿ ಕುಡಿಯೋದಕ್ಕೆ ಸಿದ್ಧವಾಗಿ ಮುಖದ ಸಮೀಪಕ್ಕೆ ಆ ಬಟ್ಟಲನ್ನು ಎತ್ತಿದ್ದಾಗ್ಯೆ, ಆ ವಿಷದಲ್ಲಿ ಆ ನತ್ತು ತೇಲುತ್ತಿತ್ತು. ಆಗ ಅದು ತಕ್ಕೊಂಡು ವಿಷ ಚೆಲ್ಲಿ ಗಂಡನ ಬಳಿಗೆ ಬಂದು ನತ್ತು ತೋರಿಸೋಣ, ಅವನು ಅನುಮಾನಕ್ಕೆ ಬಿದ್ದು ಬ್ರಾಹ್ಮಣ ಕೊಟ್ಟು ಹೋದ ನತ್ತು ಅಂಗಡಿ ಚೀಲದಲ್ಲಿ ಇಟ್ಟದ್ದನ್ನು ನೋಡಲಾಗಿ, ಅಲ್ಲಿ ಇದ್ದಿಲ್ಲ. ಆಗ ಬಹಳ ಆಶ್ಚರ್ಯವಂತನಾಗಿ ಹೆಂಡತಿಯ ಕರೆದು ಏನು ಪೂರ್ವೋತ್ತರ ನಡಿಯಿತು ? ನತ್ತು ದಾರಿಗಾದರೂ ಕೊಟ್ಟಿದ್ದೀಯಾ, ಇಲ್ಲ ? ಕೊಟ್ಟಿದ್ದರೆ, ತಿರಿಗಿ ಹ್ಯಾಗೆ ಬಂತು? ಇದೆಲ್ಲ ನಿಶ್ಚಯ ಹೇಳು! ಹೆದರ ಬೇಡ. ಅಂದಲ್ಲಿ, ಆಕೆ ನಡೆದ ಪೂರ್ವೋತ್ತರ ಎಲ್ಲಾ ಹೇಳಿದಳೂ. ಆಗ ಸಾವಕಾರಗೆ ಪಶ್ಚಾತ್ತಾಪ ಹುಟ್ಟಿತು. ನನ್ನ ಕೃಪಣತ್ವಕ್ಕೆ ಕೃಷ್ಣ ಪರಿಕ್ಷೆ ಮಾಡಿದನು ಈ ದ್ರವ್ಯವಿದ್ದರೆ, ಇಷ್ಟು ಕೃಪಣತ್ವ ಮಾಡಬೇಕಾಗುತ್ತದೆ, ಇದೆಲ್ಲ ದಾನ ಮಾಡಿ ದೇವರ ಧ್ಯಾನದಿಂದ ಕಾಲಕ್ಷೇಪ ಮಾಡಿ ಮುಕ್ತನಾಗಬೇಕೆಂತ, ವೈರಾಗ್ಯ ಮನಸು ಹಿಡಿದು ತನ್ನ ದ್ರವ್ಯ ಮನೆ ಮೊದಲಾಗಿ ಎಲ್ಲಾ ದಾನ ಮಾಡಿ ತನ್ನ ಹೆಂಡರು ಮಕ್ಕಳು ಸಹಿತ ದೇವರ ದಾಸನಾಗಿ ಬೇರೆ ಬೇರೆ ಪದಗಳನ್ನು ಹಾಡಿಕೊಳ್ಳುತ್ತಾ ತಿರಿಗುತ್ತಿದ್ದನು. ವಿಶೇಷವಾಗಿ ಪಂಡರಪುರದಲ್ಲಿ ಭಿಕ್ಷ ಬೇಡಿಕೊಂಡು ಉಂಡುಕೊಂಡು ಕಾಲಕಳೆದನು. ಹೀಗೆ ಅವನ ಇತಿಹಾಸ ಉಂಟು ಈ ದಾಸರಪದಗಳಲ್ಲಿ ಬಣ್ಣಿಸಿರುವ ವೈಷ್ಣವ ಮತ ಸುಮಾರು ೭೦೦ ವರುಷದ ಕೆಳಗೆ ಮಂಗಳೂರು ಜಿಲ್ಲೆಯಲ್ಲಿಯ ಉಡುಪಿಯೊಳಗೆ ಹುಟ್ಟಿದ ಮಧ್ವಾಚಾರ್ಯನಿಂದ ಸ್ಥಾಪನೆಯಾಯಿತು. ಅಂದಿನಿಂದ ಸ್ಮಾರ್ತರಾದ ಬ್ರಾಹ್ಮಣರು ಈ ಮತದಲ್ಲಿ ಸೇರೇ ಸೇರುತ್ತಾರೆ. ಆದರೆ ಸ್ಮಾರ್ತರಿಗೂ ಈ ವೈಷ್ಣವರಿಗೂ ಮತ ಭೇದವಲ್ಲದೆ ಕುಲಭೇದವೇನಿಲ್ಲ.

1. ರಾಗ ಶಂಕರಾಭರಣ. ಅದ್ವೈತಮತ ಖಂಡನೆ.

628. ಬೇಡವೋ ! ಕುವಾದಿ ! ನೀ ಬೇಡವೋ !

*The Vedánta is a very improper doctrine.*

ಬೇಡೆಲೋ ! ಕೇಳು ! ನೀ
ನಾಡುವದುಚಿತಲ್ಲೀಹಾದಿ
ಮೂಢನೇ ! ನಿನಗಾವಖೋಡಿ ಬೋಧಿಸಿದನು ?
ನಾಡಿಗೊಡೆಯರಂಗಗೀಡು ಯೆಂಬುವ ಮಾತು ಬೇಡವೋ! (ಪಲ್ಲ.)

629. ಎಲ್ಲ ಜೀವನು ದೇವ ವೊಂದೇ, ಭೇದ

*God and animal life all one.*

ವಿಲ್ಲೆಂದಾಡುವದಿದು ಛಂದೆ ? ಯಮ
ಕೊಲ್ಲದೆ ಬಿಡುವನೆ ? ಮುಂದೆ ನಿನ್ನ
ಹಲ್ಲುದುರಿಸುವನಿದೊಂದೆ ? ಅಹಾ !
ವುಳ್ಳಿಗಡ್ಡಿಯನುದ್ದಿ ಬೆಳ್ಳಗೆ ತೊಳದಿನ್ನು
ಅಲ್ಲಕ್ಕೆ ಸರಿ ಯೆನೆ, ಬಲ್ಲರೊಪ್ಪುವರೇ ?

630. ಒಬ್ಬ ಬ್ರಹ್ಮವೆಲ್ಲ ಮಾಯವು ; ನಿನ

*All is illusion except Brahma; then he must be in hell and heaven at the same time.*

ಗೊಬ್ಬಗಿಂನೆಲ್ಲಿ ನಿರ್ಣಯವು ? ನಿನ್ನ
ಶಬ್ದಶಾಸ್ತ್ರಗಳೆಲ್ಲ ನಿಜವು ಯೆಂ
ದುಬ್ಬಿ ಯಾಡುವದೆ ನಿರ್ಣಯವು ; ಅಹಾ !
ವೊಬ್ಬ ಬ್ರಹ್ಮಗೆ ಮುಕ್ತಿ , ವೊಬ್ಬ ಬ್ರಹ್ಮಗೆ ನರಕ ;
ಇಬ್ಬರಿಗಾಯಿತು; ನಿನ್ನೊಬ್ಬಗೆ ಈ ಮಾತು.

1. ಇನ್ನೊಬ್ಜರ ಮನಸಿಗೆ ಬಾರದು ಈ ಮಾತು.

631. ಭೇದವಿಲ್ಲೆಂತೆಂಬೆ ? ನೀನು ಹೊಲೆ

*No difference, all one: then you must not observe the rules of caste.*

ಮಾದಿಗರೆಲ್ಲ ವೊಂದೇನು ? ಸರಿ
ಹೋದರಲ್ಲಿ ವುಣ್ಣು ನೀನು ! ಸವಿ

ಸ್ವಾದವು ನಿನಗಿಲ್ಲವೇನು ? ಅಹಾ !
ವೋದನಾದರೂ ವೊಂದಮೇಧವಾದರೊಂದೆ ?
ಭೇದವಿಲ್ಲವಲ್ಲೆಂದು ಸೋದಿಯೋ ನರಕಕ್ಕೇ ?

632. ನಾಶವಿಲ್ಲೆಂಬುದಾ ಸತ್ಯ ; ದೋಷ
ಕ್ಲೇಶವಿಲ್ಲೆಂಬುದು ಮಿಥ್ಯ ; ಜಗ
ದೀಶಗೆ ಜೀವನು ಭೃತ್ಯ , ಬಿಡದೆ
ವಾಸವಾಗಿಹ ಹೃದಯ ನಿತ್ಯ ; ಅಹಾ !
ವಾಸುಪರ್ಣವೆಂಬುದೀಸ್ಮೃತಿಯರ್ಥವು
ಲೇಸಾಗಿ ತಿಳಿಯದೆ ಘಾಸಿ ಬಡುವಿ ! ವ್ಯರ್ಥ !

God and man different. The latter the servant to the former.

633. ಒಂದೆಯಾದರೆ ನಿನಗೆಲ್ಲ, ನಿನ್ನ
ತಂದೆಯಿಂ ನೀ ಪುಟ್ಟಿದಲ್ಲ ! ನಿನ್ನ
ತಂದೆ ನೀನು ವೊಂದೆ ಯಲ್ಲ ? ನೀನು
ಚಂದಾಗಿ ತಿಳಿ ಈಸೊಲ್ಲ ! ಅಹಾ !
ತಂದೆಸತಿಯು ನಿನಗೇನಾದಳು ? ಮತಿ
ಮಂದ ! ತಾಯಿಗಂಡ ಇಂದು ನೀನಾದೆಲೋ !

If all is one, then you and your father are one : you are an incestuous person.

634. ಗುರುವಿಲ್ಲ, ದೈವವಿಲ್ಲ, ನಿನಗೆ ವೊಬ್ಬ
ಸರಿಯಿಲ್ಲವೀಧರೆಯೊಳಗೆ ; ವುಂಟು,
ಹಿರಿಕಿರಿಯರುಸಾಕರಿಗೆ ; ನೀನು
ಖರದ ಬಾಲದಕಿಂತ ಹೊರಗೆ, ಅಹಾ !
ಯರಡಿಲ್ಲವೆಂಬಗೆ ಇರಲಿಲ್ಲ, ನಿನಗಿನ್ನು
ಬರ ಸಿರಿಯು ವೊಂದೆ ? ಯರಿಯದೆಮುಳುಗುವೀ !

To him, who says, all is one, famine and plenty are alike.

1. ಚಾಕರ.

635. ವಂದನೆನಿಂದೆಗಳೊಂದೆ ನಿನಗೆ ?

Is abuse and praise all one?

ಗಂಧ ದುರ್ಗಂಧವು ಛಂದೆ ? ಇನ್ನು
ಹಂದಿ ನೀನು ಯಲ್ಲ ವೊಂದೆ ? ನಿನ್ನ
ಕೊಂದರೆ, ದೋಷವಿಲ್ಲೆಂದೆ ? ಅಹಾ !
ಎಂದಿಗೂ ಈಮಾತು ? ನಿಂದೆಯು[1] ನಿನಗಿನ್ನು
ಮುಂದಕ್ಕೆ ಬರಲಾರಿ, ಮಂದಮತಿಯು, ಖೋಡೀ !

1. ಹೀಗೆ ಅನ್ನುವದು ನಿನಗೆ ನಿಂದೆ ಯಲ್ಲದ ಮಾನವಲ್ಲ.

636. ಈಶನು ನೀನಾದರೆ, ಸಕಲ

If you are god, you must support the whole world.

ದೇಶ ಪೋಷಿಸದಿರ್ಪರೆ, ಪರರ
ದಾಸತ್ವವ ವಹಿಸುವರೆ ? ಹೊಟ್ಟೆ
ಯಾಸೆಯಿಂ ನೀ ತಿರುಗುವರೇ ?ಅಹಾ !
ಗ್ರಾಸಕಿಲ್ಲದೆ ವುಪವಾಸದಿ ಸತಿಸುತ
ಕ್ಲೇಶ ಬಡುವದು ವಿನಾಶ ಮಾಡಲಾರೀ !

637. ಎಲ್ಲ ಬ್ರಹ್ಮಸ್ವರೂಪವು ; ಬೇರೆ

If all is Brahma, are there not different forms, &c?

ಯಿಲ್ಲೊಂದು ನಿನಗೆ ರೂಪವು ವಾಕು ?
ಸಲ್ಲದು ನಿಂನಾರೋಪವು ; ಭೇದ
ವಿಲ್ಲೆಂದಾಡುವದು ಲೋಪವು ; ಅಹಾ !
ಬಲ್ಲಿದ ಪುರುಷನೆ ಮೆಲ್ಲನೆ ನಿನ್ನ ಸತಿ
ಯಲ್ಲಿ ಮಲಗಿದರಲ್ಲಿ ನಿಲ್ಲದಾದರಿಸುವ್ಯಾ !

638. ಅಂನವೆ ಪರಬ್ರಹ್ಮವೆಂಬೀ : ನೀನು

If you and rice are one thing, why do you not eat it, when you are sick?

ಅಂನ ಚೆಲ್ಲಲು, ದೋಷವೆಂಬೀ, ಮತ್ತೆ
ಂಚನಾಗಿ ಪರಿಪೂರ್ಣ ಗೊಂಬೀ ; ಈ

ಯಂನ ನಾನು ವೊಂದೆ ಯಂಬೀ ; ಅಹಾ !
ನಿಂನ ದೇಹಕೆ ರೋಗ ಮುನ್ನ ತಾ ಬರಲಾಗಿ,
ಅಂನವ ಬಿಟ್ಟು ನೀ ಚನ್ನಾಗಿ ಮಲಗುವೀ !

639. ಜಗದವೊಳಗೆ ನೀ ನಿಂತು ಈ
ಜಗವಿಲ್ಲೆಂತೆಂಬುವದಕಿಂತು ನೋಡಿ
ನಗುವರು ; ಶುದ್ಧದ ಜಂತು ! ಜೆಂಹ್ವೆ
ಬಿಗಿದು ಕೊಲ್ಲುವ ಯಮನಿಂತು ಅಹಾ !
ಹಗಲೆ ಇರುಳೆ ಯೊಂದೆ ? ನಗುತ ನಗುತ ಕಂಡು
ತೊಗಲ ದೇಹಕೆ ಯಾಶೆ ಬಗದು ಮಾಡು[1]ವದಿದೂ

You teach this doctrine only, to get food, (knowing that it is a lie.)

1. ನಿನ್ನ ಮಾತು ಬಾಯಿ ಮಾತು ಅಲ್ಲದೆ ಸತ್ಯವಿಲ್ಲ. ನೀನು ಉದರ ಪೋಷಣ ನಿಮಿತ್ತ ಹೀಗೆ ಅಂದಿ. 2. ಕೊಲ್ಲುವನು.

640. ಇದ್ದು ನೀನಲ್ಲೆಂದು[1]ಕೊಂಬೀ, ಯಿಲ್ಲಿ
ಇದ್ದವರೆಲ್ಲ ಬ್ರಹ್ಮರೆಂಬಿ ; ಕಾಲಿ
ಲೊದ್ದರೆ, ನೀ ನೊಂದು ಕೊಂಬಿ ; ಅವರು
ಬುದ್ಧಿಲಿ ಶುದ್ಧವಲ್ಲೆಂಬಿ ; ಅಹಾ !
ಬಿದ್ದು ಹೋಯಿತು ನಿನ್ನ ಸಿದ್ಧಾಂತವೆಲ್ಲವು !
ಸದ್ದು ಯನ್ನ ಕಡೆ ಗೆದ್ದು ಹೋಗಲಾರೀ

If all are one, why do you make distinctions? call some bad, other good?

1. ಅಂದು ಕೊಳ್ಳುತ್ತಿ

641. ಕಾಣುತ ಬೊಗಳ್ವುದು ನಾಯಿ ; ಯಿನ್ನು
ಕಾಣದೆ ಬೊಗಳ್ವುದು ಮಾ[1]ಯಿ ; ಆ
ಶ್ವಾನವು ನಿನಗಿನ್ನು ತಾಯಿ ! ಮತ್ತೆ

The Vedantist may learn from a dog, which barks only when seeing something.

1. ನಾಯಿ ಏನೇನೂ ಕಾಣದೆ ಬೊಗಳುವದಿಲ್ಲ—ಆದರೆ ಮಾಯಿ (ಅದ್ವೈತ ಮತ ಹಿಡಿದವನು) ಬೈಲಿಗೆ ಗದ್ದಲ ಮಾಡುತ್ತಾನೆ. ಆದ್ದರಿಂದ ಆ ನಾಯಿ ನಿನಗೆ ಇನ್ನು ಬುದ್ಧಿ ಕಲಿಸುವ ತಾಯಿ ಆಗಬೇಕು. 2. ದ್ವೈತ ಮತದವರು ಈ ಅಬದ್ಧ ಅದ್ವೈತ ಮತಕೆ ಆಡುವ ಗೋಳು ನಿನಗೆ ಹತ್ತಲಿ.

ನೀನು ಯಾಗೋಳ್ಗತ್ತಿ ಸಾಯಿ ! ಅಹಾ !
ಅನ್ಯಾಯ ಮರಿವೆ ನಿಂನನ್ಯಾಯದಿಂದಲಿ ! ವಾಯು
ಅನನ ಸೀಳಿದು ತಾನು ಖಂಡಿಸುವನೂ.

642. ಎಷ್ಟು ಹೇಳಿದರೆ, ನೀ ಕೇಳಿ[1] ; ಬಹಳ
ನಿಷ್ಟುರಾಡುವಿ ; ನೀನು ಬಾಳಿ ; ನಿನ್ನ,
ಕಟ್ಟಿಗಿ ಮುರದಂತೆ, ಸೀಳಿ ಬಾಯ
ಕುಟ್ಟಿ ತುಂಬುವರೀಗ ಧೂಳಿ ; ಅಹಾ !
ಶ್ರೇಷ್ಠ ಪುರಂದರವಿಠಲಮೂರ್ತಿಗೆ
ನಷ್ಟಮನುಜ ನೀನಷ್ಟು ವಂದೆಂಬುದು ಬೇಡವ್ರೋ !

The obstinacy of the Vedantist blamed.

1- ನಿಷೇಧ ರೂಪ.

2. ರಾಗ ಮುಖಾರಿ ಝುಂಪೆತಾಳ.

643. ಅಂತಕನ ದೂತರಿಗೆ ಕಿಂಚಿತ್ತು ದಯವಿಲ್ಲ ;
ಚಿಂತೆಯನು ಬಿಟ್ಟು ಸಿರಿಹರಿಯ ನೆನೆ ಮನವೆ ! (ಪಲ್ಲ)

Men always unprepared to die.

644. ದಿವರಾತ್ರಿಯನ್ನದೆ, ವಿಷಯ ಲಂಪಟನಾಗಿ
ಸವಿಯೂಟಗಳನುಂಡು ಬೆಮಿಸ ಬೇಡ !
ಅವನ ಕೊಂದಿವನ ಕೊಂದರ್ಥವನು ಘಳಿಸುವಡೆ,
ಜವನ ದೂತರು ಬರುವ ಹೊತ್ತು ನೀನರಿಯ.

645. ಮೊಂನೆ ಮದಿವಾದೆನ್ನೈ ! ಕರವದೊಂದೆರಡೆಂಮೆ !
ನಿನ್ನೆ ಕೊಂಡೆನುಕ್ಷೇತ್ರ ಫಲವು ಬಹುದು
ಹೊನ್ನು ಹಣವುಂಟೆನಗೆ, ಸಾಯಲಾರೆನು ಯನಲು,
ಬೆನ್ನು ಬಿಡುವಳೆ ಮೃತ್ಯು ? ವ್ಯರ್ಥಜೀವಾತ್ಮಾ !

646. ಹೊಸಮನೆಯ ಕಟ್ಟಿದೆನು; ಗೃಹಶಾಂತಿ[1]; ಮನೆಯೊಳಗೆ
ಬಸುರು ಹೆಂಡತಿ; ಮಗನ ಮದುವೆ ನಾಳೆ;
ಹಸನಾಗಿ ಯದೆ ಬದುಕು; ಸಾಯಲಾರೆನು ಯನಲು,
ಕುಸುರಿದರಿಯದೆ ಬಿಡರು ಯಮನವರು ಬೇಗ.

1. ಹೊಸಮನೆ ಕಟ್ಟಿದ ಮೇಲೆ ವಾಸ್ತುಪ್ರತಿಷ್ಠೆ ನಡಿಸಿ ಶಾಂತಿ ಮಾಡುವ ತನಕ ಅದರಲ್ಲಿ ಶೇರಬಾರದು. ಹ್ಯಾಗಂದರೆ ಹಿಟ್ಟಿನಿಂದ ಒಂದು ಜೊಂಬೆ ಮಾಡಿ ಅದಕ್ಕೆ ವಾಸ್ತುಪುರುಷನೆಂಬ ಹೆಸರಿಟ್ಟು ಅದಕ್ಕೆ ಪೂಜೆ ಮಾಡಿ ಮಂತ್ರೋಚ್ಚಾರಣ ಪೂರ್ವಕ ಬಲಿ ಅರ್ಪಿಸಿ ಆ ಮೇಲೆ ಅದೆಲ್ಲ ಆ ಮನೆಯ ಮುಖ್ಯಸ್ಥಲದಲ್ಲಿ ಹುಗಿದು ಬಿಡುತ್ತಾರೆ. ಶೂದ್ರರು ಅದಕ್ಕೆ ಕವಡಕಂಟಕ ಅನ್ನುತ್ತಾರೆ. ಈ ವಾಸ್ತು ಪುರುಷ ಆಕಾಶದಲ್ಲಿರುವ ಒಂದು ನಕ್ಷತ್ರ ರಾಶಿಯಲ್ಲದೆ ದೇವರಲ್ಲ ದೈವವಲ್ಲ.

647. ಪುತ್ರ ಹುಟ್ಟಿದ ದಿವಸ; ಹಾಲು ವೂಟದ ಹಬ್ಬ;
ಮತ್ತೊಬ್ಬಮಗನ ವುಪನಯನ ನಾಳೆ;
ಅರ್ತಿಯಾಗಿದೆ ಬದುಕು; ಸಾಯಲಾರೆನುಯೆನಲು,
ಮೃತ್ಯು ಹೆಡತಲೆಯಲ್ಲಿ ನಗುತಿರ್ಪಳೈಯ

648. ಅಟ್ಟಡಿಗೆ ಯುಣಲಿಲ್ಲ; ಇಷ್ಟದರುಶನವಿಲ್ಲ[1];
ಕೊಟ್ಟ ಸಾಲವ ಕೇಳ ಹೊತ್ತನರಿಯೆ;
ಕಟ್ಲೆ ತುಂಬಿದ ಮೇಲೆ, ಚಣಮಾತ್ರ ಇರವಿಲ್ಲ;
ಅಷ್ಟರೊಳು ಪುರಂದರವಿಠಲೆನ್ನು ಮನವೆ!

1. ತನ್ನ ಗೆಣೆಯರನ್ನು ನೋಡಲಿಲ್ಲ

3. ರಾಗ ಪಂತವರಾಳಿ. ಮಟ್ಟತಾಳ.

649 ಧರ್ಮವೆಂಬ ಸಂಬಳವ ಘಳಿಸಿಕೊಳ್ಳಿರೋ!
Death inexorable. ಪ್ರೆಮದಿಂದ ಈ ದೇಹವ ನಂಬ ಬೇಡಿ ಕಾಣಿರೋ! (ಪಲ್ಲ)

650. ಅಟ್ಟ ಅನ್ನ ವುಣ ಬಿಡನು
ಕೊಟ್ಟ ಸಾಲ ಕೇಳ ಬಿಡನು

ಪೆಟ್ಟಿಗೆಯೊಳಿದ್ದ ಚಿನ್ನವ
ತೊಟ್ಟೇನಂದರೆ, ಯಮನು ಬಿಡನು

651. ಅಕ್ಕನಿಲ್ಲಿಕರೆಯಲಿಲ್ಲ,
ಮಕ್ಕಳನ್ನು ಪಡೆಯಲಿಲ್ಲ ;
ದುಖ್ಖ ಗೊಂಡು ಕಣ್ಣೀರನ್ನು
ವುಕ್ಕಿಸುವದಕ್ಕೆಮನುಬಿಡನು

652. ಹೇಳೇನೆಂ[1]ಬರಿಷ್ಟರಿಂಗೆ,
ಬೇಳೆ ಬೆಲ್ಲ ಹೊನ್ನು ತಂದು
ನಾಳೆ ಮಗನ ಮದುವೆ ಯನಲು,
ಕಾಲನು ಬೆನ್ನನು ಬಿಡನು ಇದಕೊ !

1- ಮನುಷ್ಯರು ತಾವು ಮುಂದೆ ಮಾಡ ಬೇಕೆಂದಿರುವ ಕೆಲಸ ತಮ್ಮ ಇಷ್ಟರಿಗೆ ಹೇಳಿ ಹೋದೆವು ಆದರೆ ಯಮನು ಸಾವಕಾಶ ಕೊಡುವದಿಲ್ಲ.

653. ಮಾಳಿಗೆಯ ಮನೆಯೂ ಇರಲಿ !
ಜಾಳಿಗೆ ತುಂಬ ಹೊನ್ನಿರಲಿ !
ಆಳು ಮಂದಿ ಯಾನೆ ಇರಲಿ !
ಕಾಲನು ಬೆನ್ನನು ಬಿಡನು ಇದಕೊ !

654. ಅರ್ಥಿಯಿಂದ ಸಂಸಾರವ
ವ್ಯರ್ಥವಾಗಿ ನೆಚ್ಚ ಬೇಡ !
ಕರ್ತುಪುರಂದರವಿಠಲನ
ಪೂರ್ತಿಭಕ್ತಿಯಿಂದಲೆ ಭಜಿಸಿರೊ !

4. ರಾಗ ಮುಖಾರಿ. ಜಂಪೆತಾಳ.

655. ಆರು ಹಿತವರು ನಿನಗೆ ಮೂರು ಮಂದಿಗಳೊಳಗೆ ?
Women land, ನಾರಿಯೋ ? ಧಾರುಣಿಯೊ ? ಬಲುದನದ ಸಿರಿಯೊ ?

656. ಅನ್ಯರಲಿ ಜನಿಸಿರ್ದ ಅಂಗನೆಯ ಕರತಂದು
ತನ್ನ ಮನೆಗವಳ ಯಜಮಾನಿ ಯನಿಸಿ

money: these three not to be trusted.

ಭಿನ್ನವಿಲ್ಲದೆ ಯರ್ಧದೇಹವೆನಿಸುವ ಸತಿಯು
ಕಣ್ಣಿನಲಿ ನೋಡಲಮ್ಮಳು ಕಾಲವಶದಿ

657. ಮುನ್ನ ಶತಕೋಟಿರಾಯರುವಾಳಿದನೆಲೆ[1]ನ
ತನ್ನದೆಂದೆನುತ ಶಾಸನವ ಬರೆಸಿ
ಬಿನ್ನಣದ ಮನೆ ಗಟ್ಟಿ ಕೋಟೆ ಕೊತ್ತಳವಿಕ್ಕಿ
ಚಿನ್ನಿಗನು ಅಸುವಳಿಯೆ, ಹೊರಗೆ ಹಾಕುವರು.

1. ಕರ್ಮವಿಭಕ್ತಿ ; ನೆಲಕ್ಕೆ ತನ್ನೂದೆಂದನುತ್ತಾರೆ.

658. ಉದ್ಯೋಗ ವ್ಯವಹಾರ ನೃಪಸೇವೆ ಕುಶಲಗತಿ
ಚುದ್ರತನ ಕಳವು ಪರತಾಪದಿಂದ
ಬುದ್ಧಿಯಿಂದಲಿ ಘಳಿಸಿ ಸಿಕ್ಕಿರ್ದ ಅರ್ಥವನು
ಸದ್ಯದಲಿ ಆರುಂಬುವರು ? ಹೇಳು ! ಮನುಜ !

659. ಶೋಕವನು ಗೈಯ್ಯುವರುಸತಿಸುತರು ಬಾಂಧವರು ;
ಜೋಕೆ ತಪ್ಪಿದ ಬಳಿಕ, ಅರ್ಥವ್ಯರ್ಥ;
ಲೋಕದೊಳು ಘಳಿಸಿರ್ದ ಪುಣ್ಯಪಾಪಗಳೆರಡು
ಸಾಕಾರವಾಗಿ ಸಂಗಡ ಬಪ್ಪುದಲ್ಲದೆ

660. ಅಸ್ಥಿರದ ದೇಹವನು ನಚ್ಚಿ ನಂಬಿರ ಬೇಡ !
ಸೊಸ್ಥದಲಿ ನೆನೆ ಕಂಡ್ಯ ಪರಮಾತ್ಮನ
ಚಿತ್ತದೊಳು ! ಶುದ್ಧಿಯಿಂದಾಪುರಂದರವಿಠಲ
ನುತ್ತಮೋತ್ತಮನೆಂದು ಸುಖಿಯಾಗು ಮನುಜ !

---

# II. LITERATURE OF THE LINGAITES.

## BASAVA—PURÁNA.

## ಬಸವ ಪುರಾಣ. (ಭಾಮಿನಿಷಟ್ಪದಿ)

### INTRODUCTION.

### ಪೀಠಿಕೆ.

ತೆಳಗಡೆ ದೇಶದಲ್ಲಿ ಇಂದೂ ಆರಾಧ್ಯ ಬ್ರಾಹ್ಮಣರು ಇರುತ್ತಾರೆ, ಅವರು ಶೈವರು. ಅವರಲ್ಲಿ ಒಂದೊಂದು ಮನೆಯ ಹಿರಿಯನು ಮೊದಲು ಹಾಕಿ ಕೊಂಡ ಜನಿವಾರ ಇರಲಿಕ್ಕೆ ಮೇಲೆ ಇಷ್ಟಲಿಂಗ ಕಟ್ಟಿಕೊಂಡು ದೀಕ್ಷಾಬದ್ಧನೆಂದು ಅನ್ನಿಸಿಕೊಂಡು ಶಿವನಿಗಲ್ಲದೆ ಇಂನೊಂದು ದೈವಕ್ಕೆ ಪೂಜೆ ಮಾಡುವದಿಲ್ಲ. ತನ್ನ ಇಷ್ಟಲಿಂಗ ಕೈಯ್ಯ ಮೇಲೆ ಇಟ್ಟುಕೊಂಡು ತಾನುಂಬ ಅನ್ನ ಅದಕ್ಕೆ ಅರ್ಪಿಸಿ ಪ್ರಸಾದವೆಂದು ತಿಳಿದು ಅದು ಕಿಂಚಿತ್ತಾದರು ಚೆಲ್ಲದ ಹಾಗೆ, ಎಲ್ಲಾ ಉಂಡ ಪಾತ್ರೆ ಸಹಾ ತೊಳೆದು ಆನೀರು ಕುಡಿಯುವನು, ಅದಕ್ಕೆ ಎಲೆಯ ಮೇಲೆ ಉಣ್ಣಲಾಗದು. ಅವನು ಸತ್ತ ತರುವಾಯ ಮನೆಯಲ್ಲಿ ಹಿರಿಯನು ಯಾವನೋ ಅವನಿಗೆ ಅವರಲ್ಲಿಯು ಇದೆ ದೀಕ್ಷೆ ಹೊಂದಿದ ಗುರುಗಳು ಇಷ್ಟಲಿಂಗದೀಕ್ಷೆ ಕೊಡುವರು. ಈ ಆರಾಧ್ಯ ಬ್ರಾಹ್ಮಣರಲ್ಲಿ ಬಸವ ಹುಟ್ಟಿದನೆಂಬಂತೆ ಬಸವ ಪುರಾಣಸಾರದ ಮೇಲಿಂದ ತಿಳಿಯ ಬರುತ್ತದೆ. ಅವನು ಉಪನಯನ ಮಾಡಿಸಿ ಕೊಳ್ಳದೆ ಇಷ್ಟಲಿಂಗ ದೀಕ್ಷೆ ಆದರೆ ಸಾಕೆಂದು ತನ್ನ ಕುಲಾಚಾರ ಬಿಟ್ಟನು. ಬಿಜ್ಜಳಂಕ ಅರಸನ ಪ್ರಧಾನಿಯಾದ ಮೇಲೆ, ಯಾವ ಕುಲದವರಾದರೂ, ಇಷ್ಟಲಿಂಗ ಕಟ್ಟಿಸಿಕೊಳ್ಳುವವರು ಯಾರೋ, ಅವರೆಲ್ಲ ಒಂದೆ ಬಳಿಕೆಯಿಂದ ನಡೆಯ ತಕ್ಕದ್ದು ಎಂಬೀ ವೀರಶೈವ ಮತವನ್ನು ಸ್ಥಾಪನೆ ಮಾಡಲಿಕ್ಕೆ ತನ್ನ ಅಧಿಕಾರ ಪ್ರಯೋಗಿಸಿ ಹೆಣ್ಣು ಹೊನ್ನು ಮಣ್ಣು ಕೊಟ್ಟು ಅವರ ಚಿತ್ತ ಸಂಪಾದಿಸಿ ತನ್ನ ಮತಕ್ಕೆ ಬರುವ ಹಾಗೆ ಭ್ರಮೆಗೊಳಿಸಿ ಅನೇಕರನ್ನು ಕೂಡಿಸಿಕೊಂಡನು. ಧೈರ್ಯ ಸಾಲದಕ್ಕೆ ಈ ಪದ್ಧತಿ ಈಗ ಕೆಟ್ಟದೆ. ಲಿಂಗವಂತರಾದರೂ ತಮ್ಮೊಳಗೆ ಕುಲಭೇದ ನಡಿಸುತ್ತಾರೆ. ಹೀಗೆ ಕೆಲವು ಕಾಲ ನಡಿಸಿದ ಮೇಲೆ, ತಮ್ಮಗೂ ಜೈನರಿಗೂ ವಿರುದ್ಧ ಹುಟ್ಟಿತು. ಬಿಜ್ಜಳಂಕನು ತನ್ನ ಮತಕ್ಕೆ ಬಾರದೆ ತನ್ನ ಭಕ್ತರನ್ನು ಹಿಂಸಿಸಿದರಿಂದ, ಅವನನ್ನು ಕೊಲ್ಲ ಹೇಳಿ ಕೂಡಲ ಸಂಗವು ಎಂಬ ಗ್ರಾಮಕ್ಕೆ ಹೋಗಿ ಅಲ್ಲಿಯು ಸಂಗಮೇಶ್ವರನ ಕಲ್ಲಿನ ವಿಗ್ರಹದಲ್ಲಿ ಐಕ್ಯವಾದನಂತೆ.

### PREFACE.

### ಪೀಠಿಕಾ ಪದಗಳು.

661. ಇನಿತು ಬಡಮತಿಯಿಂ ಬಸವರಾ
ಜನ ಕೃತಿಯ ನಾನೆನಿತು ರಚಿಸುವೆ
ನೆನುತೆಣಿಸಿ ಶಿವಯೋಗನಿದ್ರಾಮುದ್ರಿತದೊಳಿರಲೂ,

The Poet Somésha of Pálkurike appears in a dream to Bhímakavi, who was

in some perplexity, how to write this work,

ಅನುನಯದಿ ಪಾಲ್ಕು[1]ರಿಕೆಸೋಮೇ
ಶನುಮನಘದೇವಾರ್ಯನುಂ ಕನ
ಸಿನೊಳೊಸೆದು ಬಂದು ಪ್ರಸಾದವನಿತ್ತು ನುಡಿಸಿದರು.

1. ಗೋದಾವರಿಯ ಸಪ್ತಬಾಹುಗಳ ಮಧ್ಯದಲ್ಲಿಯ ಒಂದು ಊರು. ಅಲ್ಲಿ ಪೂರ್ವದಲ್ಲಿ ಸೋಮೇಶನೆಂಬ ಒಬ್ಬ ಪ್ರಸಿದ್ಧಕವಿ ಇದ್ದನು. ಸಂಸ್ಕೃತದಲ್ಲಿ ಆಗಲಿ ತೆಲಗಿನಲ್ಲಿ ಆಗಲಿ ಅವನಿಂದ ಬಸವ ಪುರಾಣ ರಚನೆ ಆಗಿತ್ತು. ಇವನು ಭೀಮ ಕವಿಗೆ ಕನಸಿನಲ್ಲಿ ಪ್ರತ್ಯಕ್ಷವಾಗಿ ಅದನ್ನು ಕನ್ನಡಿಸ ಬೇಕೆಂದು ಹೇಳಿದನು.

and speaks thus: "I shall be with you and teach you, to compose the history of Basava."

662. ಆವುದಕ್ಕನುಮಾನಿಸದಿರೊಲಿ
ದಾವಶಬ್ದಾರ್ಥಮುಮನಾದೊಡೆ,
ಭಾವಿಸಲ್ಕಿನಗರುಪಿ ನಿನ್ನಾತ್ಮದೊಳಗಲದಿರ್ದು
ನಾವುರಚಿಸುವೆವೆಸವಬಸವಕ
ಥಾವಿಸರಮಂ, ಬರದುಕೋ ! ಯಿಂ
ದೋವಿದವರಾಜ್ಞೆಯನು ಶಿರದೊಳು ಧರಿಸಿ ಮತಿವೆತ್ತು

Thereby the task of Bhímakavi became easy.

663. ಅಸಮಲಿಂಗೈಕ್ಯಾನುಭಾವ
ಪ್ರ[1]ಸರಮತಿಕವಿಸೋಮನಾಥಂ
ರಸವೊಸರೆ, ಮುನ್ನುಸುರ್ದದನೆ ಕನ್ನಡಿಸಿ ಪೇಳೆಂದು
ಎಸವ ಬಸವಪುರಾಣಮಂ ಪಸ
ರಿಸುವ ನಿರ್ಮಳಬೋಧೆಯಂ ಕರು
ಣಿಸಿದ ಕಾರಣವೆನಗೆ ಪಿರಿದಾಯಾಸವಿನ್ನಿಲ್ಲ.

1, ಅಸಮ=ಮತಿ ಎಂಬ ಪದಗಳು ಸೋಮನಾಥನನ್ನು ವಿಶೇಷಿಸುತ್ತವೆ

Bhímakavi, the son of the poet Shivakavi, who was the moon to the sea of the

664. ವಿಮಳ ಸದ್ಗುರುಸೇವೆಯಲಿ ಜಂ
ಗಮಭಜನೆಯಲಿ ಲಿಂಗನಿಷ್ಠಾ
ಸಮತೆಯಲಿ ತನುಮನಧನಂಗಳನಿತ್ತು ಭವಭಕ್ತಿ

worshippers of Shiva.

ಸಮಯವಾರ್ಧಿವಿವರ್ಧನೋಜ್ವಳ
ಹಿಮಗುಶಿವಕವಿ[1]ದೇವನಾತ್ಮಜ
ಸುಮತಿಭೀಮನುಭಯಕವಿ[2]ತ್ವಸಮರ್ಥನುಸುರುವಡೆ.

1. ಭೀಮಕವಿಯ ತಂದೆ ವಿಮಳ –ಇತ್ತ ಎಂಬುವಂಥಾದ್ದು, ಭವ—ಹಿಮಗು (ಈಶ್ವರನ ಮೇಲೆ ಭಕ್ತಿಯಿಂದ ನಡೆಯುವ ಮತ ಸಮುದ್ರವನ್ನು ಉಕ್ಕಿಸುವ ಪ್ರಕಾಶವುಳ್ಳ ಚಂದ್ರ) ಎಂಬುವಂಥಾದ್ದು: ಈ ಎರಡು ವಿಶೇಷಗಳಿಂದ ಅವನನ್ನು ವರ್ಣಿಸುತ್ತಾನೆ. 2. ಸಂಸ್ಕೃತ ಮತ್ತು ಕನ್ನಡ.

665. ಪಾಲೊಳೊಪ್ಪಿನ ವಿವರವರಿವ ಮ
ರಾಳವಂ ಕಂಡುಬ್ಬಿ ಲೋಕಂ
ಲಾಲಿಸುವ ಪೋಲ್ಶ್ವನಕ ಮೊಗೆವಾಲಂ ಕಡಿದು ಪೋಗೆ,
ಆಳಿಗೊಳುತಂ ಬಡಿವರಲ್ಲದೆ,
ಲಾಲಿಸುವರೇ ? ಸುಕವಿಯಂದರೆ,
ಮೇಲಹುದು ಕೃತಿ, ಕುಕವಿ ಯಂದಡದೇನಹುದು ತನಗೆ ?

The swan knows to discern milk in water and drinks it; for which he is praised; the dog is beaten for drinking milk: a good and bad poet.

666. ಧರೆಯೊಳೂರಡಿಯಾದ ಕೊಳಗದ[1]
ಸರಿಯ[2] ಸೊಲ್ಲಿಗೆ ಸಲ್ಲದಿಪ್ಪುದೆ ?
ಪರಿಮಿತಾಕ್ಷರತಲೆಯೊಳಪರಮಿತಾರ್ಥರಚನೆಯಲಿ
ವಿರಚಿಸುವದದು ಕವಿಯ ಚತುರತೆ ;
ಗುರುಬಸವನಂ ನೆನೆವ ಬಲ್ಪಿಂ
ಸರಸಮೃದುಮಧುರೋಕ್ತಿಗಳು ಮಿಗೆ, ರಚಿಸುವೆಂ ಕೃತಿಯ !

The measure of grain, the words, the meaning the grains of corn.

1. ಅಕ್ಷರಗಳೇ ಮತ್ತು ಶಬ್ದಗಳೇ ಪೂರೊಳಗೆ ನಡೆಯುವ ಕೊಳಗ, ಧಾನ್ಯದ ಕಾಳುಗಳೇ ಕವಿರಚಿಸುವ ಅಪರಿಮಿತಾರ್ಥಗಳು. ಒಂದು ಕೊಳಗದಿಂದ ಎಷ್ಟೊ ಅಳೆಯ ಬಹುದು! ಹಾಗೆ ೫೦ ಅಕ್ಷರಗಳಿಂದ ಎಷ್ಟೋ ಚಮತ್ಕಾರವನ್ನು ರಚಿಸ ಬಹುದು. 2. ಷಷ್ಟಿ ಪ್ರಥಮಾರ್ಥದಲ್ಲಿ ಬಂದದೆ (ಸರಿಯು)

667. ಕೋವಿದರು ಕೇಳೊಳ್ಳಿತೆನಲುಡು

Time of the composition of this work.

ದೇವನಿಧಿನಯನೇಂದುಸಂಖೆಗ

ಳೋವಿ ಶಕವರುಷಂಗಳಾಗಲು ಸಾವ್ಯವತ್ಸರದ

ಶ್ರಾವಣಬಹುಳಪಕ್ಷದಶಮಿಾ

ಜೀವವಾರದೊಳಾದಿವೃಷಭೇಂ

ದ್ರಾವತಾರದ ಬಸವಚರಿತೆ ಸಮಾಪ್ತಿಯಾಯಿತ್ತು.

ಇಂದು=ಚಂದ್ರ=ಒಂದರ ಸಂಜ್ಞೆ; ನಯನ=ಕಣ್ಣು=ಎರಡರ ಸಂಜ್ಞೆ; ನಿಧಿ=ಕುಬೇರನಲ್ಲಿರುವ ಒಂಬತ್ತು ನಿಕ್ಷೇಪಗಳು=ಒಂಬತ್ತರ ಸಂಜ್ಞೆ; ಉಡುದೇವ=ಚಂದ್ರ=ಒಂದರ ಸಂಜ್ಞೆ; ಹಾಗಾದರೆ ೧೨೯೧ ಎಂಬ ಸಂಖ್ಯೆ ಹೊರಡುತ್ತದೆ. ಇದು ಶಾಲಿವಾಹನಶಕ; ಈಗ ಈ ಶಕದ ಪ್ರಕಾರ ೧೮೮೪ ಆಗಿದೆ. ಇದರಲ್ಲಿ ೧೨೯೧ ಕಳೆದರೆ ೫೯೩ ಉಳಿಯುತ್ತದೆ. ಇಷ್ಟು ವರುಷದ ಕೆಳಗೆ ಈ ಕೃತಿ ಹುಟ್ಟಿತು. ಹಾಗಾದರೆ ಬಸವ ಇದ್ದು ೮೦೦ ವರುಷ, ಜನರು ಹೇಳುವಂತೆ, ಆಗಿದ್ದರೆ, ಅವನು ಹೋಗಿ ಮುನ್ನೂರು ವರುಷದ ಮೇಲೆ ಈ ಕೃತಿ ರಚನೆ ಆಯಿತು ಎಂದು ತಿಳಿಯ ಬರುತ್ತದೆ.

---

## THE BIRTH, YOUTH OF BASAVA AND HIS EMPLOYMENT AS MINISTER IN THE TOWN OF KALYANA.

2 ಬಸವ ಹುಟ್ಟಿ ಬೆಳದು ಕಲ್ಯಾಣದಲ್ಲಿ ಪ್ರಧಾನಿಯಾದದ್ದು. (ಸಂಧಿ. ೧—೬.)

668. ಆರಜತಗಿರಿ[1]ಶಿಖರದೊಳ್ಮದ

When Shiva with Párvati on Kailasa held a public levy,

ನಾರಿಯುಂ ಗೌರಿ[2]ಯುಮುಚಿತಲೀ

ಲಾರಚಿತಸುಖಸತ್ಕಥಾಪ್ರಿಯಕೌತುಕದೊಳಿರಲೂ,

ವೀರವೀರಕನಂದಿರೇಣುಕ

ದಾರುಕರುಮುಪಮನ್ಯುಭೃಂಗಿಯು

ವೀರಭದ್ರಾದಿಪ್ರಮಥ[3]ರೋಲಗಿಪ ಸಮಯದಲೀ

1. ಕೈಲಾಸ. 2. ರಕ್ತದಂತೆ ಕೆಂಪಾಗಿದ್ದದರಿಂದ ಈ ಹೆಸರು (ಕೆಂಪಿನ; ಗೌರ=ಕೆಂಪು) ಪಾರ್ವತಿಗೆ ಬಂತು. 3. ಕಾಡುವವರು; ಈಶ್ವರನ ಬಂಟರು.

669. ಪರಿಮಿತದ ಸಮಯೋಚಿತವನರಿ
ದುರುವಣೆಯನುಳಿದೊಯ್ಯನೊಯ್ಯನೆ
ಹರನ ಪೊರೆಗೈತಂದು ನಾರದನೆಂಬ ಮುನಿರಾಯಾ
ಧರಣಿಯೊಳು ಸಾಷ್ಟಾಂಗವೆರಗಿಯೆ
ಕರಯುಗಳಮುಕುಳಿತದೊಳೊಂದಿಸಿ
ಪರಮಗುರು ! ಚಿತ್ತೈಸು ಲೋಕಾಲೋಕಚರಿತೆಗಳಾ !

Nárada-Muni appeared, and gave an account of the general decline of

670. ಪರಮಶೈವಾಚಾರತತ್ಪರ
ಪರರಿ[1]ಹರ್ಪರರೊಡನೆ ನುಡಿಯದೆ ;
ಶರಣರಿರ್ಪರ್ಕೆಲರ್ಕೆಲಬರುಂ ಲೋಕಲೌಕಿಕದೀ
ಬೆರಸಿಯುಂ ; ತಲ್ಲೋಕಬಾಧೆಗೆ
ಬೆರಸದಿರ್ಪರ್ಕೆಲಬರತಿಸುಖ
ಪರವಶದಿ ಮರದಿರ್ಪರೀಲೋಕಕ್ಕೆ ಮರೆಗೊಂಡೂ.

the Shaiva-sect on earth,

1. ಶೈವಾಚಾರಕ್ಕೆ ಮಾಡುವ ಆಸಕ್ತಿಯಲ್ಲಿ ವಿಶೇಷವಾದವರು.

671. ಸಂಮುದಿತಸದ್ಭಕ್ತಿಯುಕ್ತರು
ಹಂಮಿನಿಂದಿರುತಿಹರು ಕೆಲಬರು
ತಂಮತಂಮೊಡಲುಗಳನಂತುಮುಡಂಗಿ ಕೊಂಡಿಹರೂ
ನಿಂಮ ಭಕ್ತಿಯ ತುದಿಮೊದಲಿದೆಂ
ದೊಂಮೆಯುಂ ಸತಿದೋರದಾರಿಗೆ
ಸಂಮತಿಸಲರಿದಲ್ಲಿ ದುಷ್ಟಪ್ರತ್ಯಯಂಗಳಲೀ.

672. ನೀವೆ ಬಿಜಯಂಗೈದು ಕರುಣಾ
ಭಾವಗುಣದಿಂ ನೋಡಿ ಮರ್ತ್ಯವ
ನೋವಿ ಮನುಜರನೆಲ್ಲರಂ ನಿಜಭಕ್ತಿಯುಕ್ತಿಯಲೀ.

He entreats Shiva, to go himself there and restore his worship.

ಪಾವನತ್ವಮನಿತ್ತು ಪಾಲಿಸಿ
ಕಾವುದೆಂನಯು ಬಿಂನಪವನೆನೆ,
ದೇವದೇವಂ ಸಂತಸದೊಳಂತೆಂದನಾಮುನಿಗೇ :

673. ನಂದಿನಾಥಾಗ್ರೇಶ್ವರಂಗೆಮು
*Shiva's answer: "I shall send Nandi."* ಗೊಂದಿನಿತು ಸಂದಿಲ್ಲ ದಿರ್ಪುದು
ಸಂದೆಗವೆ ? ನಾವೀತನಂ ಮರ್ತ್ಯಕ್ಕೆ ಕಳುಪುವೆವ್ರಾ ;
ಮುಂದಕೀಯರಡನೆಯ ಶಂಕರ
ನಿಂದೆ ಪರಮಪವಿತ್ರದುನ್ನತಿ
ಯೊಂದಿ ನೆಗಳುದು ಲೋಕವೆಲ್ಲಂ ಬೋಧಿಸಲ್ಪಡೆಗೂ.

674. ಎಂಮುಕೌತುಕವಾಗಿ ಮರ್ತ್ಯವ
*Instructions to Nandi.* ನಿಂಮಡಿಸಿ ಪಾವನಮನೈದಿಸು
ವೊಂಮೆಯುಂ ನೀಬಸವನೆಂಬಭಿಧಾನದಿಂದೆನಲೂ,
ಸಂಮುದಂ ಮಿಗೆ, ನಂದಿ ತನ್ನ ಕ
*His readiness, to undertake this task.* ರಂ ಮುಗಿದು ತಾ ಬಿಂನೈಸಿದಂ :
ನಿಂಮನುಜ್ಞೆಯನೆನ್ನ ಮಂಡೆಯೊಳಾಂತು ಮಾಡುವೆನೂ !

1. ಹೀಗಂದ ಮೇಲೆ ಹುಟ್ಟುವದಕ್ಕೆ ಅನೇಕ ಗಣಗಳ ಸಹಿತ ಭೂಲೋಕಕ್ಕೆ ಇಳಿದು ಹೋದನು.

675. ಗುರುತರೋಂನತಮಾಗೆಸವ ಸಿರಿ
*In the village of Bágavádi, which is in the Karnataka, west of the sacred* ಗೆರಿಯ ಪಡುವಣ ಕಡೆಯ ಧರೆಯೊಳು
ನರವರಾಸ್ಪದ[1]ವೆನಿಸಿದಾಕರ್ನಾಟದೇಶದೊಳೂ

1. ಹೊಲ ಮನೆ ವ್ಯಾಪಾರ ಮುಂತಾದ್ದಕ್ಕೆ ಅನುಕೂಲವಾಗಿರುವಂಥಾದ್ದು.

hill of Tirupati, near Chittoor,

ಕರಮೆಸೆದುದಲ್ಲಿ ಪ್ರಸಿದ್ಧ[2]ದೆ
ಪಿರಿದೆನಿಪ ಶಿವಭಕ್ತಿ ಬೀಜ
ಕ್ಕರವೆನಿಸಿದೊಂದಿಂಗಳೇಶ್ವರಬಾಗವಾಡಿಪುರ

2. ವ್ಯಾ. ಸೂ. 42.

lived Mandige Mádirája, the father of Basava,

676. ಆಮಹಾಬಹುಳಾಗ್ರಹಾರದಿ
ಗ್ರಾಮಣೀಮಣಿ, ವಿತರಣದ ಕಣಿ,
ಭೂಮಿದೇವಾಗ್ರಣಿ, ಪರಮಶೈವಾಂಬುರುಹತರಣೀ,
ನೇಮಿಸುವ ಷಟ್ಕ[1]ರ್ಮಮಾರ್ಗ
ಪ್ರೇಮಿ ಸಂತತ ವರತನೂಭವ
ಕಾಮಿ, ಮಂಡಿಗೆಮಾದಿರಾಜನೆನಿಪ್ಪನೆಸೆದಿರ್ದಾ.

1. ಯಜನ (ಯಜ್ಞ ಮಾಡುವದು) ಯಾಜನ (ಯಜ್ಞ ಮಾಡಿಸುವದು) ಅಧ್ಯಯನ (ವೇದ ತಾನೆ ಓದುವದು) ಅಧ್ಯಾಪಕ (ವೇದ ಓದಿಸಿ ಕಲಿಸುವದು) ದಾನ (ತಾನೆ ಕೊಡುವದು) ಪ್ರತಿಗ್ರಹ (ದಾನ ತಾನೆ ತಕ್ಕೊಳ್ಳುವದು) ಈ ಆರು ಕರ್ಮಗಳನ್ನು ಬ್ರಾಹ್ಮಣರು ಮಾಡ ತಕ್ಕದ್ದು.

and his mother Mádámbike.

677. ಆತನುತ್ತಮಸತಿ ವಿಶೇಷವು
ನೀತೆ, ಮಾದಾಂಬಿಕೆ, ಸುವಿನಯಾ
ನ್ವೀತೆ, ಸತ್ಕುಲಜಾತೆ, ಸಜ್ಜನಭಕ್ತಿನಿರ್ನೀತೇ,
ಪಾತಕಕ್ಕತಿ ಭೀತೆ, ಧರ್ಮ
ಶ್ರೋ[1]ತೆ, ಪುಣ್ಯಸಮೇತೆ, ಸತ್ಯವಿ
ನೀತೆ, ಸುಗುಣವ್ರಾತೆ, ವಿಮಳಾಚಾರವಿಖ್ಯಾತೇ.

1. ಧರ್ಮಕ್ಕೆ ಕಿವಿಕೊಡುವಂಥಾದ್ದಕೆ

They performed different vows to Párvati, to get children, but in vain.

678. ಕಾಂತೆ ತಾಂ ಸುತರಿಲ್ಲದಿರ್ದೊಡ
ನಂತಚಿಂತಾಕ್ರಾಂತೆ ಯಾಗುತೆ,
ಕುಂತಿನೋಂಪಿಗಳಂ ಪಲವನುರೆ ನೋಂತು ಬೇಸತ್ತು

ಸಂತತಿ ಯದೆಂತಪ್ಪುದೆಮಗಿಂ
ನೆಂತೆನುತೆ, ಸತಿಪತಿಗಳುಂ ಮತಿ
ವಂತರಿಂದಂ ಪೊತ್ತಿಗೆಗಳಂ ತೆಗಸಿ ನೋಡಿಸುತೇ ;

679. ಸಂದ ನೋಂಪಿಗಳೊಳ್ವಿಚಾರಿಸಿ

At the advice of the learned, she goes to perform a vow to Nandinátha.

ನಂದಿನಾಥನ ನೋಂಪಿ ಯದು ಪಲ
ವಂದದಿಂ ಕಾಮ್ಯಾರ್ಥಸಿದ್ಧಿಗೆ ನಿತ್ಯಕಾರಣಮೂ
ಎಂದು ಸುವ್ರತನಿಯತಮಂ ಬುಧ
ರಿಂದುಮುಖಿಗರುಪಿದೊಡೆ, ಪರಮಾ
ನಂದದಿಂ ಮಾದಾಯಿ ಶಿವಮಂದಿರಕೆ ನಡೆತಂದೂ,

680. ಅಪ್ರತಿಮನಂ ಕಾಣುತವೆ,[1] ದಂ

She prays him in the temple.

ಡಪ್ರಣಾಮವನಿಕ್ಕಿ[2] ಸರ್ವ
ಜ್ಞ ! ಪ್ರಮಥವರ ! ನಂದಿನಾಥನೆ ! ಯನಿಮಿಷರಯೂಥಾ[3] !
ಸುಪ್ರಸನ್ನ ! ಯನುತ್ತ ಭಯಭ
ಕ್ತಿಪ್ರಿಯೋಕ್ತಿಗಳಿಂದೆ ಕೀರ್ತಿಸು
ತೀಪ್ರಕಾರದಿ ಯುಂಚಿತವ್ರತಚರ್ಯಮಂ ಮಾಡೀ

1. ಕಾಣುತ್ತಲೆ. 2. ಕೋಲಿನಾಕಾರವಾಗಿ ಅಡ್ಡ ಬೀಳುವದು. 3. ದೇವತೆಗಳ ಸಮೂಹ ವುಳ್ಳವನು ; ಅವನ ಸಂಗಡ ಬಹಳ ಮಂದಿ ಇರುತ್ತಾರೆ.

681. ನಂದಿಕೇಶ್ವರ ! ಹರಶರಣ ! ನವ

Her prayer.

ನಂದಿನಾಥಾನಾಥಬಂಧುವೆ !
ತಂದೆ ! ನಿನ್ನ ಪೊಲೀಶಭಕ್ತಿಯಕಂದನೆನಿಸಿರ್ದಾ
ಕಂದನಂ ನೀನಿತ್ತೊಡಾನೊಲ
ವಿಂದೆ ನಿಮ್ಮಯ ಪೆಸರನಿಕ್ಕುವೆ
ನೆಂದೆನಲು ಮಾದಾಂಬಿಕೆಯು, ಜನರಾಗ ನೋಡಲ್ಕೇ,

682. ಇಂಡೆಯುಂ ಕರುಣಿಸಲದಂ ಕೈ
ಕೊಂಡುರದೊಳಾನನದೊಳೊತ್ತುತೆ,
ಮಂಡೆಯೊಳ್ಸೂಡಿದಳು ಮಾನಿನಿ ತತ್ಪ್ರಸಾದವನೂ ;
ಗಂಡಪೆಂಡರು ನಂದಿಯುಂ ಬಲ
ಗೊಂಡುವಂದಿಸಿ ಪಿರಿಯಶುಭವಿದಿ
ಗೊಂಡವೊಲ್ನಿಜಮಂದಿರಕೆ ನಡೆತಂದರಳ್ತಿಯುಲೀ.

He has mercy on her and gives his blessing. Man and wife return home.

683. ಎಂದಿನಂತೆ ವಿಶೇಷಸಂತಸ
ದಿಂದ ಸತಿಯುಂ ಪತಿಯುಮತ್ಯಾ
ನಂದಸುಖದೊಳು ವರ್ತಿಸುತ್ತಿರೆ, ಮುನ್ನೆ ಮರ್ತ್ಯಕ್ಕೇ
ಇಂದುಮೌಳಿಯ ಬೆಸನದಿಂ ತಾಂ
ಬಂದು ನಂದಿಯು ಹೃದಯದೊಳು ಸಾ
ನಂದರಾಗಂ ಬೆತ್ತು ತಾನೈಯ್ತರ್ಪ ಭರವಿಂಗೇ

with great joy.

684. ಅನುಗುಣಕೆಪಡಿಯೆನಿಸಿತನ್ನಂ
ತನಯನಾಗಲ್ಕೆಂತಳಬುಜಾ
ನನೆಯ ಸುಕೃತವನೇನನೆಂಬೆನು ? ನೆನೆದ ಕಾರ್ಯವದೂ
ತನಗೆ ನೆರೆ ಸಿದ್ಧಿಸಿತೆನಲ್ಕಾ
ವನಿತೆಬಸುರೊಳ್ತಾಂ ಪ್ರವೇಶಿಸ
ಲನಿತರೊಳ್ತದ್ಗರ್ಭಚಿನ್ಹೆಗಳಂಕುರಿತವಾಯ್ತು

Nandinatha enters her womb.

685. ಸತತಮುಂ ಹಿಮಕಿರಣಕಾಂತಾ
ಪ್ರತಿಮೆ ಯುದರದೊಳುಜ್ವಲಿಸುವ
ಪ್ರತಿಮದೀಪದ ವೋಲ್ಸಿತಾಂಗದ ಸತಿಯ ಜಠರದೊಳೂ

After she had been pregnant three years,

ಅತುಲಿತಪ್ರಭೆ ವೆತ್ತು ಸುತನೀ
ನತಿಯೊಳೀಶಧ್ಯಾನತತ್ಪರ
ಮತಿಯೊಳಿರ್ದನು ತಾಯಬಸುರೊಳು ವತ್ಸರತ್ರಯವುಾ.

686. ಬಳಗಣುಪತಾಪೋಪಶಮನಕೆ
she felt much pain. Vrishabha appears to her, and tells her
ಮಲಯರುಹಕರ್ಪೂರಸೀತಳ
ಸಲಿಲದಿಂ ನೆನೆದಿದರ ನೆವದಿರುಳನಿತು ಕಣ್ಮುಚ್ಚೇ,
ವೊಲಿದು ವೃಷಭಾಧಿಪನು ದರ್ಶನ
ದೊಳಗೆ ಜಂಗಮಲಿಂಗರೂಪಂ
ತಳೆದು ಸತಿಗಾಯವಸರದೊಳಿಂತೆಂದು ಬೆಸಸಿದನೂ.

687. ನಿಂನುದರದುಪತಾಪದುರಿಯಂ
who is to be her son,
ನಿಂನ ಚಿಂತಾಕ್ರಾಂತಸೆಲ್ಲವ,
ನಿಂನು ಪರಿಹರಿಸಲ್ಕೆ ಬಂದೆಂ ಕಮಲದಳನಯನೇ ?
ನಿಂನಬಸುರೊಳ್ಬೆಳೆವ ಸುಕುಮಾ
ರಂ ನಿಖಿಳಪಾವನನೆನಿಪ್ಪ ಜ
ಗಂನುತೋಂನತಮೂರ್ತಿಯಲ್ಲದೆ ಜಾವಳನೆ ? ಕೇಳೂ ?

688 ಆದಿಗಾದಿಯನಾದಿನಂದಿ ಶಿ
ಲಾದನಣುಗಂ ಶಿವನ ಬೆಸನದಿ
ವೇದಿತಾಮಳಭಕ್ತಿವರ್ಧನಕಾರಣದಿ ಬಂದೂ
ಮೇದಿನಿಯೊಳೊಗೆದಂ ನಿನಗೆ ; ಸಂ
ಮೋದದಿಂ ಪೇಳ್ದಪೆವು ಸೂನ್ರತ
ವಾದ ನುಡಿಯಂ ನಂಬಿ ಪದುಳಿರು ? ಚಿಂತಿಸದಿರಿನ್ನೂ ?

689. ಪುಟ್ಟಿದಪನುತ್ತಮಕುಮಾರಂ

and commands her, to call him Basava.

ಪುಟ್ಟಿದಾಗಳೆ, ಬಸವನಾಮವ
ನಿಟ್ಟಿಸಿ ಕರೆ ನೀನೆನಲನಿತರೊಳ್ನಿದ್ರೆ ತಿಳಿದೆದ್ದು
ದಿಟ್ಟಿಸಾರುವನಲ್ಲಿ ಕಾಣದೆ
ನೆಟ್ಟನೀತನೆ ವೃಷಭಪತಿ ; ಕೃಪೆ
ಪುಟ್ಟಿ ಯೆಮ್ಮನುಸಲಹಲಿಲ್ಲಿಗೆ ಬಂದನಿದು ಧಿಟವ್ರೊ?

690. ಏನನುಸುರುವೆನೆನ್ನ ಜನ್ಮಫ

Her joy.

ಲಾನುಭೋಕ್ತೃವ್ಯಕ್ಕೆ ಮಿಗೆ ಸಂ
ಧಾನವಾಯಿತು ; ಬದುಕಿದೆಂ ನಾನೆನುತೆಹರುಷದೊಳೂ
ಮಾನಿನಿಯರುಂ ಗೋತ್ರಬಂಧುವಿ
ತಾನವಚ್ಚರಿ ಬಟ್ಟು ಕೇಳ
ಲ್ತಾನಿರುಳು ಕಂಡಿರ್ದ ಕನಸನವರ್ಗೆ ಪೇಳಿದಳೂ.

691. ಪ್ರೀತಿಯಲಿ ಪುತ್ರನು ಕರಾಂಭೋ

Birth of Basava.

ಜಾತಮುಕುಳಿತನಾಗಿ ಮೆಲ್ಲನೆ
ಮಾತೆಯುದರದೊಳುದಯಿಸಲು ; ಅರ್ಧೋದಯದೊಳಾಗಾ
ಆತನಯನೊಳಗಿಹ ಶಿವಂ ವಿ
ಖ್ಯಾತ ಗುರುವಾಕಾರಮಂ ತಾ
ಳಾ ತನಂಗದ ಮೇಲೆ ಲಿಂಗಾಸಂಗಗೈಸಿದನೂ.

692. ಜಗದೊಳಗೆ ಸರ್ವಜ್ಞವೃಷಭನ

When he was eight years of age, his father was going to invest his son with the holy thread.

ಬಗೆಯೊಳೊಗೆದವನಾಗಿ ಸರ್ವಕ
ಳೆಗಳು ಸಹಜವೆನಲ್ಕೆ[1], ಗರ್ಭಾಷ್ಟಕ[2]ದೊಳಾಜನಕಾ

1. ಎಲ್ಲಾ ವಿದ್ಯಗಳನ್ನು ವೇದಾದಿ ಶಾಸ್ತ್ರಗಳನ್ನು ಬಲ್ಲವನಾದನು. 2. ಗರ್ಭದಲ್ಲಿದ್ದ ದಿವಸ ಸಹ ಹಿಡಿದು ಎಂಟು ವರುಷ ತುಂಬುವಷ್ಟರೊಳಗೆ.

ಮಗನಿಗುಪನಯನವನೊಡರ್ಚಲ್,
ಬಗೆದು ಶುಭಲಗ್ನಕ್ಕೆ ತೊಡಗಲ್,
ನಗುತ ಬಸವಂ ಭಕ್ತಿಯರಿಯದ ತಂದೆಗಿಂತೆಂದಾ.

693. ಜನಕ! ಕೇಳ್ಳುವದೀಕ್ಷೆ ಇಲ್ಲದ
But Basava refuses. ವನವೊಲೆನ್ನಂ ಮುಂಜಿ ಗಟ್ಟುವ
He states his reasons for doing so. ಮನವಿದೆಂತಾಯ್ತಾಗ? ನಿನಗವಿವೇಕಿಯುಂದದಲೀ ?
ಜನಿಸಿದಾಗಳೆ, ಸಂಗಮೇಶ್ವರ
ನೆನಗೆ ಸದ್ಗುರುವಾಗಿ ಬೋಧಿಸಿ
ವಿನುತಶೈವಾಚಾರಮಾರ್ಗದೊಳಿರಿಸಿ ಸಲಹಿದನೂ.

694. ಸಾರಸಂಸಾರದ್ವಿಜತ್ವವ
ಪಾರಪತಿತವಲಾ ? ಸದಮಳಾ
ಚಾರಸದ್ಗುರುವಿನ ಕರಾಬ್ಜದಿ ಜನ್ಮನಾದಂಗೇ
ಧಾರುಣೀಸುರಜನ್ಮಕರ್ಮಂ
ಕ್ರೂರಕರ್ಮವಲಾ ? ಸುಗುರುಭಜ
ನಾರ[1]ತಂಗನಲಾಹುತಿಯನಿಕ್ಕಿದೊಡೆ, ದೋಷವಲಾ ?

1. ಗುರು ಭಜನೆಯಲ್ಲಿ ಪ್ರೀತಿಯುಳ್ಳವನು.

695. ವಿರಸವೆನಗಿದು ? ಮುಂಜಿ ಯೆಂಬುದ
ನೊರೆಯದಿರು ? ಪರಿಹರಿಸಿ ಕಳೆ! ಶಂ
ಕರನನರ್ಚಿಸುತಕಟ ? ನೀ ಮರುಳಾಗಿ ಹೋದೆಯಲಾ.
ಪರಮಗುರುಪದ ವಿಡಿದು ಈದು
ರ್ನರರ ಕಾಲ್ಗಳಿಗೆರಗುವಂಗತಿ
ನರಕವಲ್ಲೈ ? ಪೂರ್ವಭವಸಂಸ್ಕಾರರಹಿತಂಗೇ.

696. ಮಲಹ[1]ರಾತ್ಮಕಮಂತ್ರಮಂ ನೆರೆ
ಕಲಿತು ಬಹು ಮಂತ್ರಂಗಳಂ ತಾಂ
ಕಲಿವುದುಕ್ಕಟಪಾಪವಲ್ತೆ ? ಸಹಜಭಕ್ತರಿಗೇ
ಬಲವಿನೆತ್ತು[2]ವ ಕೈಗಳಂ ದು
ರ್ಮಲಿನಕರ್ಮಚರದ್ವಿಜಾತ
ರ್ಗಲಸದೆತ್ತುವುದು ಧರ್ಮಜಾತರ್ಗಧಮಜಾತವೇಂ.

1. ಪಾಪನಾಶನ ಮಾಡುವವನು=ಶಿವ. 2. ನಮಸ್ಕಾರ ಮಾಡುವದು.

697. ಕರ್ಮಪಾಶವನುರೆ ಪರಿದು ದು
ಷ್ಕರ್ಮರಜ್ಜುಗಳಂ ತೊಡವುದತಿ
ಕರ್ಮವಲ್ತೆ ? ಭಸಿತರುದ್ರಾಕ್ಷಾದಿಮುದ್ರೆಗಳಾ
ನಿರ್ಮಲತೆಯಿಂ ಧರಿ[1]ಸಿ ಚರಿಸುತ
ಚರ್ಮದುರ್ಮುದ್ರೆಗಳನೇಂ ಶಿವ
ಧರ್ಮಮರ್ಮಜ್ಞರಿಗೆ ಧರಿಸುವುದುಚಿತವೇ ? ಹೇಳೂ.

1. ಆರಾಧ್ಯ ಬ್ರಾಹ್ಮಣರು ಭಸಿತರುದ್ರಾಕ್ಷಾದಿ ಹಾಕಿಕೊಂಡ ಮೇಲೆ ಅವರು ಉಳಿದ ಬ್ರಾಹ್ಮಣರಂತೆ ಚರ್ಮ ಧರಿಸ ಬಾರದು.

698. ನೀರ ನೇ[1]ಣಿನ ಬಾಧೆ ಇಲ್ಲದ
ವೀರಶೈವಾಚಾರದೀಕ್ಷಾ
ಧಾರಕನನತಿನಿರ್ಮಿತೋಭ[2]ಯಕರ್ಮನಿರ್ಮಲನಾ
ಘೋರಕರ್ಮಾಶ್ರಯದ ಪಾರಾ
ವಾರದೊಳು ಮುಣಿಗಿಸುವೆನೆಂಬ ವಿ
ಚಾರವಿಂತಿದು ನಿನಗೆ ಧರ್ಮವೆ ? ಬೆಪ್ಪ ? ನೀ ಕೇಳೂ.

1. ಸ್ನಾನ ಜನಿವಾರಗಳು. 2. ಇಹಪರದ ಕರ್ಮಗಳು.

699. ಖಾತಿಯೊಳು ಬೊಮ್ಮನ ಸಿರವನರಿ[1]
ದಾತ ತತ್ಪ್ರಮಥೇಂದ್ರವಂಶನ[2]
ನೇತಕೆಂನಂ ಬ್ರಹ್ಮವಂಶಜನೆಂದು ಭಾವಿಸುವೇ ?

ಜಾತಿಗೋತ್ರಾತೀತಸದ್ಗುರು
ಜಾತನಂ[3] ಬಹು ಜಾತಿಗೋತ್ರಸ
ಮೇತದುಷ್ಕ್ರಿಯದಾಶ್ರಯನ[4] ನೀನೆಂತು ಮಾಡಿದಪೇ ?

1. ದೋಷದ ನಿಮಿತ್ತ ಶಿವನು ಅವನ ತಲೆಯ ಕಡಿದನು. 2. ವಂಶವುಳ್ಳವನು. 3. ಜಾತಿ ಗೋತ್ರ ಲಕ್ಷಿಸದ ಗುರುವಿನಿಂದ ಹುಟ್ಟಿದ ಮೇಲೆ, ಜಾತಿ ಕರ್ಮ ಹೇಳ ಬಾರದು. 4. ದ್ವಿತಿಯ ಆಶ್ರಮವನ್ನು.

700. ಅಕುಲದಭವನ ಭಕ್ತತತಿಗಾ
ವಕುಲವೆಂದಿನನೆಣಿಸಿ ನೀ ಪಾ
ರ್ಬಿಕೆಗೆ ಸಲಿಸುವೆ ; ಯಿಂತಿನಿತು ಮಾರ್ಗಂಗಳಂದೆಮಗೇ

ಪ್ರಕಟಿಸದಿರೀಮುಂಜಿ ಯಂಬುದ
ನಕಟ ! ಪಾತಕವೆಂಬ ಮಾತಿಗೆ[1]
ವಿಕಳನಾಗುತೆ ತಂದೆ ಯಿಂತೆಂದನು ತನೂಜಂಗೇ.

1. ಬಸವ ಇಲ್ಲಿತನಕ ಹೇಳಿದ ಮಾತಿಗೆ.

701. ವಾದಿಸದೆ, ಬಸವಣ್ಣ ; ಕೇಳ್ಳೈ
ಮೇದಿನೀಸುರಮಾರ್ಗದಿರವಂ ?
ವೇದಮತದಿಂ ಗರ್ಭಸಂಸ್ಕಾರಂ ಮೊದಲೆನಿಪ್ಪಾ

ಆದಿಕರ್ಮಂಗಳವು ಹದಿನಾ
ರಾದವದರೊಳಗೊಂದುವುಂ ಕುಂ
ದಾದಡಾತಂ ಬ್ರಾಹ್ಮಣೋತ್ತಮನಾಗಲರಿಯಕಣಾ ;

Reply of the father. He tries to persuade his son, that he may worship Shiva, and at the same time

702. ಇದರೊಳಾವವಿರುದ್ಧವುಂಟೈ ?

perform the rites prescribed to Brahmans.

ಯಿದಕೆ ರುದ್ರನೆ ಗಣವಲ್ಲೈ ? ಬಳಿ
ಶಿವಕೆ ನಂದಿಯೆ ಮುಖ್ಯಮುಪನಯನಾರ್ಚನಂಗಳ್ಗೀ ;
ಇದಕೆ ಬೀಜಂ ಪ್ರಣವವದು ತಾ
ನಿದಕೆ ದೈವಂ ಭರ್ಗನೆಂಬುದು
ವಿದಿತಮಂತ್ರವಿರಲ್ಕೆ ದೋಷವೆನಂತುಮಲ್ಲದೆಯೂ

703. ಪಿಡಿವ ಪಾತ್ರೆ ಪಿತಾಮಹನ ತಲೆ,
ತೊಡುವ ಸೂತ್ರವೆ ಪಾವು, ಕೈಗಳ
ವಡುವ ತತ್ಪಾಲಾಶದಂಡವೆ ವಿಷ್ಣುಕಂಕಾಳಾ,
ಯಿಡುವ ಮೇಧಾವಿಯೆ ಭಸಿತವೆಡೆ
ವಿಡಿದೆಸವ ಚಂಡಿಕೆಗಳೈದುಂ
ಜಡೆ, ಕೊರಲಕೃಷ್ಣಾಜಿನವೆ ಕರಿ[1]ಯಜಿನವಾಗಿರಲೂ

1. ಶಿವನು ಆನೆ ಚರ್ಮ ಹೊದ್ದುಕೊಂಡಿರುತ್ತಾನೆ. ಉಪನಯನ ಮಾಡಿಸಿಕೊಳ್ಳುವಾಗ್ಯೆ ನೀನು ಶಿವನು ಎಂದು ತಿಳುಕೋ.

704. ಪುರಹರಂ[1] ಭಿಕ್ಷಾಟಣವನಾ
ಚರಿಸಲ್ಕೈದುವ ವೇಷವನಿತಂ
ಧರಿಸಿದಲ್ಲದೆ, ಭೂಸುರೊತ್ತಮನಾಗನೆಂದೊಡಿದೂ
ಹರನ ಭಕ್ತರ್ಗೀಂ ವಿರುದ್ಧಮೆ ?
ವಿರಸವೆಂತಾಯ್ತೈ ? ತನೂಭವ ?
ಪರಮಭಕ್ತಿಗೆ ಹೀನಮುಪ್ಪುದೆ, ಮುಂಜಿ ಗಟ್ಟಿದೊಡೇ ?

1. ತ್ರಿಪುರ ನಾಶ ಮಾಡಿದವನು=ಶಿವ.

705. ಮಾತುಗಾರತನದೊಳುಲಿವ ಪಲ
ಮಾತದೇತಕೆ ? ನಾವು ಪೇಳದ
ಮಾತನಾಲಿಸಿ ಮಾಡ ಬೇಹುದು ; ಮಕ್ಕಳಾದವರೂ
ಜಾತಿಗುತ್ತಮಕುಲದೊಳೊಗೆದು ಪು
ನೀತನಾಗಿ ಸಮಸ್ತವರ್ನ
ವ್ರಾತದೊಳಗಗ್ರಜಕುಲಾಗ್ರಣಿ ಯೆನಿಸಿ ಬಾಳ್ದಿರದೇ ?

706. ನಾವರಿಯೆವಿಂತಪ್ಪ ಚೋದ್ಯವ
ಸಂವನಾಡೊಳು ; ನಿನ್ನ ತಲೆಯಲಿ
ಆವಗಂ ಶಿವಭಕ್ತಿ ಮೂಡಿದುದೇ ಜಗತ್ರಯಕೇ ;
ನೀವುದಯಿಸಲ್ಬದುಕಿದೆವು ; ಪೆರ
ತಾವುದಿಲ್ಲ; ಕೃತಾರ್ಥರಾದೆವು ;
ಕಾವುದೆಂಮುವನುದ್ಧರಿಸು ಕುಲಕೋಟಿಯಲ್ಲವನೂ !

707. ಇಳೆಗೆ ಕುಲದೀಪಕನುದಯಿಸ
ಲ್ಕುಲವೊಡನೆವರ್ಧಿಸುವದಾಗಳು ;
ಬಳಿಕ ಕುಲನಾಶಕನು ಪುಟ್ಟಲ್ಕುಲವಳಿದು ಪೋಗೆರ್[1]
ಕುಲದ ಬೇರಿಗೆ ನೀನೆ ಗುದ್ದಲಿ
ಗೊಳಲದೇಕೆ ? ಸುಪುತ್ರ[2]ನಾಗಿದ
ನಲಘು[3]ವಿಪ್ರರ್ಕೇಳಿದೊಡೆ, ಪೊರಗಿಕ್ಕರೇ ನಿಂನಾ ?

1. ಹೋಗುತ್ತದೆ. 2. ವಿಧಿ. (ಆಗು) 3. ಲಘುವಿಲ್ಲದ=ಘನವುಳ್ಳ.

708. ಎಂದುವಂ ಲೋಕಕ್ಕೆ ಬಾರದ
ನಂದನಂ ನೀನಮ್ಮ ಬಸುರೋ
ಳ್ಬಂದು ಹರುಷವನ್ನೈದಿಸದೆ ಪಿರಿದುಂಮುಳವನೆಮಗೇ

ತಂದಕಟ ! ಕುಲಗೇಡಿ ಯುಪರೆ ?
ಕಂದ ! ನಿನ್ನಂ ಪಿಡಿದು ಸುಗತಿಯ
ನೊಂದಿ ಬದುಕುವೆವೆಂದು ನಾವ್ನೆರೆ ನಂಬಿಕೊಂಡಿಹೆವೂ.

709. ಚಾರುಕುಲಮಾಕುಲಕೆ ತಕ್ಕಾ
ಚಾರಮಾಚಾರಕ್ಕೆ ತಕ್ಕ ಪು
ರಾರಿಭಕ್ತಿ, ಯದೊಳ್ಳಿತಲ್ಲಾ ! ಇಹಪರಂಗಳ್ಗೇ
ಕಾರಣಂ ; ಸಂಸಾರದುಃಖನಿ
ವಾರಣಂ ತಾನುಭಯಧರ್ಮಾ
ಚಾರಮಾರ್ಗದಿ ದೇವಪಿತೃಗಳ್ತುಷ್ಟರಹರೆಂದೂ

1. ಈ ಭಕ್ತಿ ಇಹಪರಕ್ಕೆ ಉಪಯೋಗ, ಸಂಸಾರ ದುಃಖವ ನಿವಾರಣ ಮಾಡುವಂಥಾದ್ದು.

710. ಯುಕ್ತಿಯಂ ಪೇಳ್ದಪೆವು ; ನಿನಗೀ
Basava's answer to his father's arguments.
ಯುಕ್ತಿಯಿಂ ಕಡೆಗೊಲ್ಲದಿರ್ದೊಡೆ,
ಭಕ್ತಿಯಿಂ ನೀನಿಂತು ಬಲ್ಲಂತಾಗುತಿರು ! ನಿನ್ನಾ
ಭಕ್ತತನಕಂಜುವೆವೆನುತ ಕಠಿ
ಣೋಕ್ತಿಯಲಿ ನುಡಿಯಲ್ಕೆ, ಕೇಳ್ದು ವಿ
ರಕ್ತ ಕರ್ಮಂ ಬಲಿದು ಮುಳಿಸಿಂ ಬಸವನಿಂತೆಂದಾ :

711. ತೋರಪಟ್ಟಾಬ್ರಾಹ್ಮವೆಂಬುದು
ಬೇರೆ ದರ್ಶನಮೀಶಭಕ್ತಿಯು
ಬೇರೆ, ಇಂತಿವನೆರಡುಮಂ ನೀಂ ಕೂಡಿ ನುಡಿಯದಿರೂ ?
ಬೇರೆ ದೈವಂ, ಬೇರೆ ಮಂತ್ರಂ,
ಬೇರೆ ಗುರುವುಂ, ಬೇರೆ ವೇಷಂ,
ಬೇರೆ ಬೇರೇ ಧ್ಯಾನಬಾಹ್ಯಕ್ರಿಯಗಳಾಚಾರಾ.

712. ಆದೊಡಾನನವಗ್ನಿ, ಶಿರವಜ
ನಾದಿರುದ್ರನೆ ಶಿಖೆ, ಹೃದಯುವ
ಬ್ಜೋದರಂ, ಪ್ರಾಣಾದಿವಾಯುಗಳ್ಳೈದೆಯು ತತ್ಪ್ರಾಣಾ,
ಮೇದಿನೀಸತಿ ಯೋನಿ, ಧವಳತ
ವಾದ ವರ್ನಂ, ಶಂಕರನ ಪರಿ
ಯಾದುದೀಗಾಯತ್ರಿ ಸಾಂಖ್ಯಾಯನಸಗೋತ್ರವಲಾ ?

1. ಶಿವ ಸರ್ವಸ್ವರೂಪವಾದಾತ. 2. ಈ ಮಂತ್ರವೊಬ್ಬಾನೊಬ್ಬ ದೇವಿ, ಸಾಂಖ್ಯಾಯನ ಗೋತ್ರದಾಕೆ. ಶಿವನು ಅಗ್ನಿ ಬ್ರಹ್ಮ ವಿಷ್ಣು ಜೀವ ಭೂಮಿ ಮುಂತಾದದ್ದು ಅಂದರೆ ಅವನು ಎಲ್ಲಾ ಆದ ಮೇಲೆ, ಒಂದು ಗೋತ್ರದಲ್ಲಿ ಹುಟ್ಟಿದ ಒಬ್ಬ ದೇವಿಯಾದ ಗಾಯತ್ರಿ ಮಂತ್ರಕ್ಕಿಂತ ದೊಡ್ಡವನಲ್ಲವೆ,

713. ಪರಿಕಿಸುವಡಿಪ್ಪತ್ತುನಾಲ್ಕ
ಕ್ಷರವದಕೆ, ಮೂರಡಿ, ಯುದರವಾ
ಶಿರಸುಗಳುವ್ಯೆದೆಂಬುದಲ್ಲಾ ನಿಮ್ಮ ಯಾಜ್ಞಿಕವೊ
ನಿರುತದಲಿ ಕೇಳ್ದೈವವದು ವಿ
ಸ್ತರಿಸೆ, ಬೇರಹುದಲ್ಲವೋ ? ಯದ
ರಿರವು ಸಾಂಖ್ಯಾಯನಮತವಲಾ ! ದೈವವೆನಲಿಲ್ಲಾ.

ಈ ಗಾಯತ್ರಿ ಎಂಬ ದೇವಿಯು ರೂಪವನ್ನು ವರ್ಣಿಸುತ್ತಾನೆ.—ಗಾಯತ್ರಿ ಎಂಬ ಮಂತ್ರ ಹ್ಯಾಗಂದರೆ:

ಓಂ ಭೂರ್ಭುವಸ್ಸ್ವಃ
ತತ್ಸವಿತುರ್ವರೇಣ್ಯಂಭರ್ಗೋದೇವಸ್ಯಧೀಮಹಿ
ಧಿಯ್ಯೋಯೋನಃ ಪ್ರಚೋದಯಾತ್

ಇದರ ಅಭಿಪ್ರಾಯು ಏನಂದರೆ : ಓಂ ಭೂವ್ಯಾಕಾಶ ಸ್ವರ್ಗಗಳೇ ; ಸನ್ಮಾನಿಸತಕ್ಕ ಪ್ರಕಾಶವುಳ್ಳ ಸೂರ್ಯನನ್ನು ಧ್ಯಾನಿಸುತ್ತೇವೆ. ನಮ್ಮ ಬುದ್ಧಿ ಪ್ರಜ್ವಲಿಸಲಿ.

714. ಪರವು ರೂಪದು, ತಾನದಕೆ ಗುರು,
ಬಲಿದ ಕರ್ಮ ಜಡಾತ್ಮನದಕಿಂ
ನೊಲಿವ ಮಂತ್ರಂ ತಾನಿದಕೆ ಗಾಯತ್ರಿ ಯನುದಿನವೂ
ಇಳೆಯೊಳಾಕ್ರಿಯೆ ಕರ್ಮಬಂಧದ
ನೆಲೆ ಯದರ ವೇಷಂ, ವಿಚಾರಿಸಿ
ನಿಲುವಡಿತರೇತರವಲಾ ! ಯದು ಮೋಕ್ಷಕಾರಣವೇ ?

ಇದಕ್ಕೆ ರೂಪ ಗೋತ್ರ ಜಡತ್ವ ಗುರುಮುಖತ್ವ ಇತ್ಯಾದಿ ವೇಷವಿದ್ದಮೇಲೆ, ಎಲ್ಲಕ್ಕೂ ಮೀರುವ ದೇವರಿಗೆ ಸಮನಾಗಿ ಮೋಕ್ಷಕ್ಕೆ ಕಾರಣ ಹ್ಯಾಗಾಧೀತು; ಆದರೆ ಓನಮಃ ಶಿವಾಯ(=ಓ ಶಿವನಿಗೆ ನಮಸ್ಕಾರ) ಎಂಬುವ ನನ್ನ ಮಂತ್ರದಿಂದ ಮೋಕ್ಷವಾಗುವದು. ಇದಕ್ಕೆ ಆರು ಅಕ್ಷರ ಇರುವದರಿಂದ ಷಡಕ್ಷರೀ ಮಂತ್ರವೆಂದನ್ನಿಸುತ್ತದೆ.

715 ಧರೆಗೆ ಭಕ್ತಂಗನ್ಯದೈವ
ಸ್ಮರಣೆಯಿಂ ಪದಿನೆಂಟು ಕೋಟಿ ವಿ
ವರನರಕವಹುದೆಂಬ ಸುತಿಯಂ ಕೇಳ್ದರಿಯಿರಲ್ಲಾ ?
ತರಣಿಯಂ ಪಾವಕನನಜನಂ
ಹರಿಯನಿಂದ್ರಾದ್ಯರನು ಮೂರವ
ಸರದೊಳರ್ಚಿಸಿ ಬಿಡದೆ ವಂದಿಸ ಬೇಕು ಪಾರ್ವಂಗೇ.[1]

1. ಬಂದಿಸಬೇಕು ಮುಂತಾದ ಧರ್ಮ ಅವನಿಗೆ ಅದೆ.

716. ಕಡೆಗೆ ವಂದಿಸದಿರ್ದನಾದೊಡೆ,
ಕೆಡಗು ಪಾರ್ವಿಕೆ; ಮುಂದೆ ವಂದಿಸಿ
ದೊಡೆ, ಕೆಡಗು ಮೃಡಭಕ್ತಿ ; ಯಂತಾಗಿಂತೆರಡರಿಂದಾ
ಕೆಡುವನಿಳೆಯೊಳ್ಪಾರ್ವನಾದೊಡೆ,
ಮೃಡನ ಭಕ್ತನದೆಂತಹಂ ? ತಾಂ
ಮೃಡನ ಭಕ್ತಂ ಪಾರ್ವನೆಂತಹನಯ್ಯ ; ಭಾವಿಪಡೇ ?

717. ಇಳೆಗೆ ಮಾವಿನ ಬೀಜಮಂ ಬಿ
ತ್ತಲದು ತಾಂ ಬೇವಹುದೆ? ಬಹು ಕಥೆ
ಗೆಳನುಸುರಲೇಂ ? ಸಹಜಶಿವಲಿಂಗೈಕ್ಯಭಕ್ತಿಯುಮಾ
ಪಲವುದೇವಾಭ್ಯರ್ಚನಾಖ್ಯಾ
ಕುಲಮಹೀಸುರಕುಲವನೆಣಿಸಲು,
ಕುಲಸತಿಯ ವೊಲು ಭಕ್ತಿ, ಬೆಲೆವೆಂಣಿನ ವೋಲಾಬ್ರಾಹ್ಮ್ಯ.

718. ನಂದಿಮುಖ್ಯಸ್ಥಿತಿಯೊಳರ್ಚಿಸಿ
ಮುಂದೆ ದೈವಂ ಭರ್ಗನೋರ್ವನೆ
ಯೆಂದೆನಿಪ ಮಂತ್ರವನರಿದು ತಾಂ ರುದ್ರವೇಷದೊಳೂ
ಬಂದಿ ಯಂತಾಚರಿಸ ವೇಡವೆ ?
ತಂದೆ? ಮನೆದೈವಂ ನಿಮಗೆ ತರು
ಣೇಂದುಧರನಿರೆ, ಯನ್ಯದೈವದ ಸೇವೆಸನ್ಮತವೇ ?

719. ಕೇಳು ? ನೀನಂತಾಗಿನಿತುಮಂ
ಪೇಳಲೇಂ? ಸಂದೇಹಮೇ? ವ್ರತ
ಶೀಲಗೌತಮಭೃಗುದಧೀಚಿವ್ಯಾಸಮುನಿವರರಾ
ಸ್ಥೂಲಶಾಪಾನಲದಿನುರಿದತಿ[1]
ಖೂಳರಪ್ಪ ಮಹೀಸುರಾಳಿಗೆ
ಪೋಲುವುದೆ ಪೊಂದುವದೆ ಸಜ್ಜನಭಕ್ತಿತಾತ್ಪರ್ಯ?

1. ಈ ಮುನಿಗಳಿಂದ ಬೇರೆ ಬೇರೆ ಬ್ರಾಹ್ಮಣರು ಯಾವದೊಂದು ದೋಷದ ನಿಮಿತ್ತ ಶಾಪಹೊಂದಿ ಬೆಂದು ಸುಮಾರಾದರು.

720. ಇದನುರವಣಿಸಿ ಯಾಡಿದುದ್ರೇ
ಕದೊಳೆ ಪರಮಾರ್ಥಮನುಳಿದು ಪೇ
ಳದನೆನಲ್ವೇದಾಗಮಂಗಳ ಮೂಲವಲ್ಲದಿದೂ

ಪದಕವಾದಮಿದೆಂದು ನೀವುಸು
ರದಿರಿ ? ಕರ್ಮಪಥಂ ದ್ವಿಜತ್ವಂ
ಸದಮಳೋತ್ತಮಭಕ್ತಿನಿಷ್ಟಿತವಹುದೆ? ಭಾವಿಸಲೂ.

721. ಈಗಳುಂ ದ್ವಿಜಮಾರ್ಗವನೆ ಥಿಟ
ವಾಗಿ ನೀ ಪಿಡಿದಾಡಿದೊಡೆ, ಯೆಮ
ಗಾಗದೀಕರ್ಮಕ್ರಿಯಾಚಾರಪ್ರವರ್ತನವೂ ;
ಕಾಗೆ[1] ಸಾಕಿದ ಕೋಗಿಲೆಯ ಮರಿ
ಕೂಗುವದು ಸುಸ್ವರದೊಳಲ್ಲದೆ,
ಕಾಗೆ ಯಂದದಿ ಕಾವುಕಾವೆಂದರಿಚುವದೆ? ಹೇಳೂ .

1. ತಂದೆ ತಾಯಿಗಳು ಕಾಗೆ, ಬಸವ ಕೋಗಿಲೆಯ ಮರಿ.

722. ಗುರುಪದಾರ್ಚನೆಗೊಲಿದು ಹಾರುವ,
ಪರಮಶೈವೋನ್ನತಿಗೆ ಹಾರುವ,
ಶರಣಸಾನುಭವಕ್ಕೆ ಹಾರುವ, ತತ್ಪ್ರಸಾದಕ್ಕೇ
ಹರಿದು ಹಾರುವ, ವೀರಭಕ್ತಿಗೆ
ಪಿರಿದು ಹಾರುವ ನಾನದೆಂದುಂ
ಬೆರಸಿ ಹಾರುವ ಕುಲಕೆ ಹಾರುವನಲ್ಲ, ನುಡಿಯದಿರೂ !

723. ತಂದೆ ! ಕೇಳೀರೇಳು ಲೋಕದ
ತಂದೆಯುಂ ಭಜಿಸದೆ ರತೀಶನ[1]
ತಂದೆಯುಂ ವಿಧಿರವಿಶಿಖಿಗಳಂ ಭಜಿಸಿಕರ್ಮಕ್ಕೇ
ತಂದೆ[2] ನಿನ್ನೊಡಲಂ ; ಭವಾಳಿಗೆ
ತಂದೆ ! ಯಕ್ಕಟ ! ನೀನದೆಲ್ಲಿಯ
ತಂದೆ ? ಯೆನಗಿನ್ನೀಶಭಕ್ತರೇ ತಂದೆತಾಯಿಗಳೂ.

1. ಮನ್ಮಥನ ತಂದೆ=ವಿಷ್ಣು. 2. ನೀನು ನಿನ್ನ ಶರೀರವ ಕರ್ಮಕ್ಕೆ ತಂದಿ.

724. ಅಯ್ಯನಾಕಿನಗವ್ವೆ ಯಾರ್ಪಿರಿ
ಯಯ್ಯನಾರ್ನೀನೆಲ್ಲಿಯುವ ? ನಿ
ನ್ನಯ್ಯತನವೇತಕ್ಕೆ ? ಸುಡು ! ಶಿವಭಕ್ತಿಹೀನ[1]ರಿರಾ !
ಅಯ್ಯನಯ್ಯನು ಚನ್ನ[2]ಯಂ, ಚಿ
ಕ್ಕಯ್ಯ, ಕಕ್ಕಯ್ಯನು, ತೆಲುಗುಜೊಂ
ಮಯ್ಯನಯ್ಯನು, ನಿಂಬಿ ತಾಯ್ಚಾರಮನ ಮಗ ನಾನೂ

1. ಮಧ್ಯಮ ಪುರುಷ=ಹೀನರಿರುತ್ತೀರಿ. 2. ಇವರು ಲಿಂಗವಂತರಲ್ಲಿ ಶರಣರು.

725. ಸಾರಭಕ್ತಿಸ್ಥಿತಿಯೊಳುಮೆಯೊಳ
ನಾರತಂ ಸುಖವೊಂದುತಿರ್ಪೆಂ ;
ವೀರಮಾಹೇಶ್ವರರೆ ಗತಿ ಯೆನಗಿದುವೆ ನಿಶ್ಚಯವೂ ;
ಸೇರದಿಂತಿಹದೆಮಗೆ ; ನಿಮ್ಮಾ
ಚಾರದೊಳ್ನೀ ವಿಪ್ರದೆಂಮಾ?
ಚಾರದೊಳ್ನಾ ವಿರ್ಪೆವಿಂನಾವಾರು ? ನೀವಾರೂ ?

726. ಎನುತ ಬಸವಂ ನಿಜಸಹೋದರೆ
ಯೆನಿಪ ನಾಗಾಂಬಿಕೆಯು ತಾನೂ
ಯೆನಗೆ ಇಲ್ಲಿರಲಾಗದೆನುತ್ತೈತಂದು ಮಹಮನೆಯಾ
ಮನೆಗೆ ಬರುತಿರೆ, ಭಕ್ತರೆಲ್ಲ
ರ್ಮನವೊಸೆದಿವಂ ತಮ್ಮ ಮಗನೆಂ
ದೆನುತೆ ತಮ್ಮತ್ತತ್ತಿಗದುಕೊಂಡರು ಬಳಿಕಲಿತ್ತಾ[1].

Basava with his younger sister goes to Mahaman.

1. ಉಳಿವಿಯ ಹತ್ತರದಲ್ಲಿರುವ ಬಂದು ಊರು, ಅದು ಶಿರಸಿಯ ಜಿಲ್ಲೆಯೊಳಗದೆ.

727. ಸುಸಿರಮಾಯಿತು ಮುಂಜಿ ಯೆನುತಂ
ವಸುಮತೀಸುರರೈದೆ ದುಗುಡದ
ಮುಸುಡಗಳ್ಬೆರಸೈದಿದರ್ತಮತಮ್ಮ ಮನೆಗಳಿಗೇ
ಪೊಸತು ಲೋಕಕ್ಕೆನುತ ಪುರಜನ
ಮೊಸೆದು ಕೀರ್ತಿಸಲಾಸಮಯದೊ
ಳ್ಬಸವನುಪನಯನೋತ್ಸಹಕ್ಕೆಂದಂದುಬಂದಾತಾ

The Brahmans, who had come to the festivity, go home. Astonishment of the people.

728. ಮಾದಲಾಂಬಿಯ ಸೋದರಂ, ಶಿವ
ಪಾದಪಂಕಜಭಕ್ತಿಯುಕ್ತಂ,
ಮೇದಿನೀಶ್ವರಬಿಜ್ಜಳನಭಂಡಾರಿ ಬಲದೇವಾ ;
ಆದಿಶಿವಭಕ್ತಂಗೆ ಮದುವೆಯ
ನಾದರದಿ ನಾ ಮಾಳ್ಪೆನಲ್ಲದೆ
ಈದುಹಿತೆಯಂ ಭವಿಗೆ ಕೊಡೆನೆಂದೆಂಬ ಭಾಷೆಯೊಳೂ,

Baladéva, the uncle of Basava, minister at the court of Bijjala in Kalyana, who had also been there,

729. ವೀರ[1]ಮಾಕರಭಕ್ತಿಯುಕ್ತಾ
ಚಾರಿಗೀಯದೆ ಮತ್ಸುತೆಯನಿಂ
ನಾರಿಗೀವೆನೆನುತ್ತಲಾಬಲದೇವಮಂತ್ರೀಶಾ
ಭೂರಿಹರುಷದೊಳುಬ್ಬಿ ಬಸವಕು
ಮಾರನಿರ್ದೆಡೆಗೈದಿ ತನ್ನ ಕು
ಮಾರಿಯಂ ಸದ್ವಿನಯಪೂರ್ವಕಯಿತ್ತು ಪೊಡಮಟ್ಟಾ.

follows Basava, and gives him his daughter in marriage.

1. ಮಾಚ=ಂದ್ರ, ಕರ=ಕಿರಣ, ಮಾಕರ=ಚಂದ್ರ ಕಿರಣವುಳ್ಳವನು=ಈಶ್ವರ.

730. ಅತ್ತಲಾಕಲ್ಯಾಣಕಟಕದೊ
ಳುತ್ತಮಾಚಾರ್ಯೈಕಭಕ್ತಿಗೆ
ಬಿತ್ತೆನಿಪಭಂಡಾರಿಬಲದೇವಂಸಚಿವವರನೂ

Death of Baladéva.

ಇತ್ತಲೀಬಸವಂಗೆ ತನಯಳ
ನಿತ್ತೊಡೊಲಿದಾಪ್ರಮಥರತಿಮುದ
ವೆತ್ತು ಕರಸಲು ಪೋಪವೊಲು, ಶಿವಲೋಕಕ್ಕೈದಿದನೂ.

1. ಪ್ರಮಥರು ತನ್ನ ಮಗಳನ್ನು ಬಸವನಿಗೆ ಕೊಟ್ಟನೆಂದು ಸಂತೋಷವಾಗಿ ಕರಸುವಾಗ, ಬಲದೇವನು ಹೋದನೇನೋ ಎಂಬಂತೆ ಸತ್ತನು.

Bijjala calls his relations and asks them, who would take the place among them of Baladéva. They advice the king, to appoint Basava, the son in law of his deceased minister.

731. ಬಳಿಕಲಾಬಲದೇವಮಂತ್ರಿಯು
ಬಳಗಮಂ ಬಂಧುಗಳನಾಪ್ತರು
ಗಳನಿಳಾಧೀಶನು ಕರಸಿ ತಾನವರಿಗಿಂತೆಂದಾ :
ನಲಿವ ಹಿತವರು ಸೋದರರು ಮ
ಕ್ಕಳುಗಳಾರಾಯ್ತಾದೊಡೀತನ
ಬಲುನಿಯೋಗವನೆಲ್ಲವಂ ಪ್ರತಿಪಾಲಿಸುವರುಳರೇ?

732. ಎನೆ, ಮಹಾರಾಜೇಂದ್ರ! ವುಂಟಾ
ತನ ತನಯಳ ಪ್ರಾಣನಾಥನು ;
ವಿನಯವಾಕ್ಯಂ[1] ; ನಿಮ್ಮ ರಾಜ್ಯವನುದ್ಧರಿಸಲಾರ್ಪಂ[2] ;
ಅನಘನತಿಬಳನಖಿಳಪಾವನ
ವನಧಿ, ಯಾತನದೆಂತೆನಲು, ಭೂ
ವಿನುತಸಂಗಮದೇವನಿಂ ಪಡೆದನು ಪ್ರಸಂನತೆಯಾ.

1. ವಾಕ್ಯವುಳ್ಳವನು. ಇವಂ ಪಾಪವಿಲ್ಲದವನು. 2. ಆಗುವವನು. ವ್ಯಾ. ಸೂ.

The king assents to this, and sends ministers to call him.

733. ಜನವರಿಯಲಂತಾಗಿ ಯಾತನು
ನಿನಗೆ ಮಂತ್ರಿತನಕ್ಕೆ ತಕ್ಕವ
ನೆನಲಿದೆಲ್ಲವ ಕೇಳ್ದು ಮುದದಿಂದುಬ್ಬಿ ಬಿಜ್ಜಳನೂ

ಘನದ ಭದ್ರೇ[1]ಭವನಮಾತ್ಯರ
ನನಿಬರಂ ಬೆಸನಿತ್ತು ಬಸವನ
ನನುನಯದೊಳೊಡಗೊಂಡು ಬರಲೆಂದಟ್ಟಲೊಡನವರೂ

1. ದೊಡ್ಡ ಆನೆ.

734. ಧಾರುಣಿಗೆ ಸಚಿವಾಗ್ರಪಟ್ಟಕ
The ministers of Bijjala entreat Basava, to accept this appointment. ಪಾರಭಂಡಾರಕ್ಕೆ, ಬಹುಪರಿ
ವಾರಕಾಪ್ತಜನಕ್ಕೆ, ವಿಶ್ವಾಸಕ್ಕೆ ಬಿಜ್ಜಳನಾ
ಭೂರಿಸಾಮ್ರಾಜ್ಯಕ್ಕೆ, ಸಕಳದ
ಭಾರಮಂ ತಾಳಲ್ಕೆ, ಮತ್ತೆ ವಿ
ಚಾರಿಸಲು, ನೀವಲ್ಲದಾತಂ[1]ಗಾವನಿರ್ದಪನೂ?

1. ಬಿಜ್ಜಳನಿಗೆ.

735. ಅರಸನೊಕ್ಕೈ[1]ಯೋಗರಕೆತಾ
ನರುಹನುಳಿದಂತೀಧರಿತ್ರಿಗೆ
ನಿರುತವಧಿಪತಿ ನೀವೆ ಯಲ್ಲಾ! ಬಸವಮಂತ್ರೀಶಾ
ಪುರಕೆ ಬಿಜಯಂ ಗೈದು ಸಲೆ ವು
ದ್ಧರಿ[2]ಸಿ ಯಂಬರ ಬಿನ್ನಪವನವ
He consents. ಧರಿಸಿ ಭಕ್ತಹಿತಾರ್ಥಮಂ ನೆನದಲ್ಲಿಗೊಡಬಟ್ಟಾ.

1. ಅರಸನಿಗೆ ಒಂದು ಸೆರೆ ಅನ್ನ ಕೊಟ್ಟರೆ, ಸಾಕು, ರಾಜ್ಯಾಧಿಕಾರವೆಲ್ಲಾ ನಿನ್ನದು. 2. ವಿಧಿ. ಧಾರುಣಿಗೆ–ಉದ್ಧರಿಸಿ (ರಿ) ಎಂಬ ಮಾತುಗಳನ್ನು ಹೇಳಿ ಬಸವನನ್ನು ಕರತರಲಿಕ್ಕೆ ಬಂದ ಜನರು ಅವನನ್ನು ಒಡಂಬಡಿಸುತ್ತಾರೆ.

736. ತಂನನೆಲ್ಲರು ಯೋಲಯಿಸಿ ಬರೆ,
ಬಿಂನವಿಸಿ ಭಕ್ತಾವಳಿಗೆ ನಯ
ದಿಂ ನಮಿಸಿ ಯವರುಗಳ ಕರುಣಾರಸದೊಳೋಲಾಡೀ

The king goes to meet him,

ಉಂನತಿಯೊಳ್ಳೈತಪ್ಪ ಬಸವಜ
ಗಂನುತನನಿದಿರ್ಗೊಂಬ ತವಕದಿ
ತಂನರೇಂದ್ರನು ಕೇಳದಡೆ, ಯಿದೆ ಬಂದೆನೆಂದನಲೂ
ಕೇರಿಕೇರಿಗೆ ಮನೆಮನೆಗೆ ಗುಡಿ

737.

orders the town, to be decorated on Basava's account,

ತೋರಣಂಗಳನೆತ್ತಿ ಮಣಿಮಯ
ತೋರಣಂಗಳನಳವಡಿಸುತಂ ಕಳಶಕನ್ನಡಿಯಾ
ತೋರಣಂಗಳನಲ್ಲಿಗಲ್ಲಿಗ
ಪಾರರಚನೆಗಳಿಂದೆ ತತ್ತ
ದ್ವಾರಶಿಖರಂಗಳೊಳಮರ್ಚಿಸಿ ನಗರಿಯಗಲದಲೀ

738. ಲೋಕಪಾವನಕಾರಕನನಾ

and receives him kindly.

ಲೋಚಿಸುತ್ತಾನೆಯನಿಳಿದು ತಾಂ
ಲೋಕಪಾಲನು ಕಾಲ್ನಡೆಯೊಳಿದಿರೊಂದೊಡೇ[1] ಸಾದರ್
ಪ್ರಾಕಟಪ್ರಿಯವಿನಯಪೂರ್ವ
ಸ್ವೀಕರಣಸತ್ಕಾರಸಂತು
ಷ್ಟಾಕುಲನನಂ ಮಾಡಿ ಬಸವನನಿರಿಸಿದನು ಧರೆಗೇ.

1. ಇದಿರ್ವಂದು=ಇದಿರು ಬಂದು. ವ್ಯಾ. ಸೂ. ಈ ಪ್ರಧಾನಿಯೋಗದಲ್ಲಿ ಇದ್ದು ಬಹಳ ಐಶ್ವರ್ಯವನ್ನು ಸಂಪಾದಿಸಿದನು.

3. ಮುಳಿದು ಭಕ್ತದ್ರೋಹಿಯನ್ನು ಕೊಲ್ಲ ಹೇಳಿ ಜಗ ದೇವನನ್ನು ಇರಿಸಿ ಬಸವನು ಸಂಗಮೇಶನಲ್ಲಿ ಐಕ್ಯವಾದದ್ದು. (ಸಂಧಿ. ೬೧.)

(Basava's end)

739. ಕೆಲವು ಕಾಲಕ್ಕೈಸರಲಿ ಬಿ

Bijjala, as if desirous of going to the town of Yama, despises Basava.

ಜ್ಜಳನೃಪಾಲಂ ತನಗೆ ಕಾಲನ
ಪೊಳಲಿಗೈದಲು[1] ಬಗೆದು ಬಸವನ ಬಹಳಮಹಿಮೆಯನೂ

1. ಬಿಜ್ಜಳನು ಬಸವನ ಮಹಿಮೆಯನ್ನು ತಿರಸ್ಕರಿಸಿ ಯಮನ ಊರಿಗೆ ಹೋಗುವ ಹಾಗೆ ಮಾಡಿಧನು.

ಛಲದ ಭಕ್ತಿಮಹತ್ವದೊಂದ
ಗ್ಗಳಿಕೆಯುಂ ತಾನರಿದು[2]ಮರಿಯದ
ವೊಲು ನೆರೆಯಲಜ್ಞಾನಮದದಿಂ ಕಾಣದತಿಮದಿಸೀ.

2. ಅರಿದರೂ ಮನಸಿಗೆ ತರುತ್ತಿದ್ದಿಲ್ಲ.

Bijjala not pleased with their religion, orders the eyes of Halleija and Maduveija to be cut out.

740. ಸೊಗಸದವದಿರ ಮತಕೆಹಳ್ಳ
ಯ್ಯಗಳ ಮದುವಯ್ಯಗಳನಾಗಳೆ
ಜಗತಿಪಂ ತಪ್ಪೇನುವಿಲ್ಲದೆ ನೀತಿಯಲ್ಲೆಂದೂ
ಬಗೆಯದವರಂ ಕರೆಸಿ ಕಂಣಂ
ತೆಗೆಸಿದನು; ಮಾಹೇಶ್ವರರ ಮಹಿ
ಮೆಗಳನುದ್ದಂಡತೆಗಳಂ ತಾನರಿಯನೇ ಮುನ್ನಾ ?

1. ಅವರ ಮತಕ್ಕೆ ಸೊಗಸದೆ ಮುಂತ.

Uneasiness of the people.

741. ಲೋಕಪಾಲಂ ಕೇಡ ಬಗೆದನೆ ?
ಈಕಟಕವಿಂನಳಿವುದಕಟ ! ಪಿ
ನಾಕಿ ಭಕ್ತರು ಮುಳಿದೊಡಂ, ಬದಕುವನೆ ? ತಾನೆನುತಾ
ವ್ಯಾಕುಳಿತಯುತಹೃದಯರಾಗುತ
ನೇಕರುಂ ಗುಜುಗುಜಿಸುತಿರಲು
ದ್ರೇಕಿಸುತ ಬಸವಂ ಸಹಿತ ಹರಭಕ್ತಸಂದೋಹಾ

Basava convenes the Lingaites, restores to those sufferers their eyes, and announces that he will leave the city.

742. ಅಸಮಕೋಪೋದ್ದೀಪಿತಾಂಗೋ
ಲ್ಲಸನರಾಗುತ ಕೂಡಿ ವಿಕ್ರಮ
ವೆಸೆಯೆ, ಹಳ್ಳಯ್ಯನ ಮಧುವಯನಕಂಗಳಂ ಪಡೆದೂ
ಬೆಸನವಾಯಿತು ಶಿವನೊಳುಂ ವ
ರ್ಜಿಸಿದೆವಿಂನೀಪ್ಪುರನೆನುತುಂ
ಬಸವನುಂ ಭಕ್ತಾಳಿಯುಂ ಜಗದೇವನಂ ಕರೆದೂ,

743\. ನಿನ್ನ ಯಂದಿನ ಭಾಷೆಯಂ ಸಲಿ
ಸಿನ್ನು ತದ್ದ್ರೋಹಿಯನಪಹರಿಸಿ
ನನ್ನಿಯಿಂ ಮೆರೆ ಯೆನುತ ಜಗದೇವಂಗೆ ಬೆಸನಿತ್ತು
ತನ್ನರೇಂದ್ರನ ನೊಸಲ ಬರಹವ
ಮುಂನೊರಸಿ ಬಿಜ್ಜಳನ ಸಾಮ್ರಾ
ಜ್ಯೋನ್ನತಿಯನೀಶನ ಕವಳಿಗೆಯೊಳಂತು ತೊಡಯಿಸುತಾ,

He commands Fagadeva to kill the king, and thus makes over his kingdom to the drinking vessel of Shiva, i. e. to destruction.

744\. ಇಲ್ಲಿ ಇವರವರೆನ್ನದೇ ನೀ
ವೆಲ್ಲರುಂ ಕೇಳೀಕ್ಷಣದೊಳೇ
ಬಲ್ಲಹನ ಸಾಮ್ರಾಜ್ಯಮುಂ ಕಲ್ಯಾಣಪಟ್ಟಣವೂ
ಎಲ್ಲವುಂ ಹಾಳಹುದು ಧಿಟವನೆ
ಸೊಲ್ಲಿದೆವು ನಾವೆನುತ ಶಪಿಸುತ
ಬಲ್ಲಿದರು ಮಾಚಯ್ಯನವರುಂ ಮುಸುಟಿಬಾಡಯ್ಯಾ

He foretells, that the city will be laid waste.

745\. ಲಿಂಗವಂತರು ತಂಡತಂಡದ
ಜಂಗಮಾವಳಿ ತಂನೊಡನೆ ಬರೆ,
ಸಂಗಮೇಶ್ವರಪುರಕೆ ಬಸವಂ ನಡವುತಿರಲಾಗಿ
ಇಂಗಿತಾಬಿಜ್ಜಳನ ಸಂಪ
ತ್ಸಂಗತಾಂಬುಧಿ; ಯಾಗ ಶಿವನ ಗ
ಣಂಗಳೆಲ್ಲರು ಪೋಗೆ, ಕಟಕದ ಭಾಗ್ಯವಳಿಯಿತ್ತು.

With a great many followers he goes to Sangamséshvara.

(೭೪೦—೭೪೪.) ಈ ಐದು ಪದಗಳಲ್ಲಿ ವೊಂದು ವಾಕ್ಯವದೆ.—ಉದ್ರೇಕಿಸುತ ಬಸವಂ— ನಡೆಯುತ್ತಿರಲಾಗಿ ಯಿಂಗಿತು ಎಂದು ಅನ್ವಯಿಸಬೇಕು· 1. ಕೊಲ್ಲುತ್ತೇನೆಂಬ ಭಾಷೆ ಮುಂಚೆಮಾಡಿದ್ದನು. 2. ಸಾಯುವ ಹಾಗೆ ಮಾಡಿದರು. 3. ಈಶನು ಸುಡುಗಾಡಿನಲ್ಲಿ ತಿರುಗುವವನು ಆದ್ದರಿಂದ ಅಡವಿಪಾಲು ಮಾಡಿದರೆಂಬಂತೆ ಅಭಿಪ್ರಾಯ.

746. ಧರಣಿ ಕಂಪಿತವಾಯ್ತು ; ಕಾಗೆಗ

Bad omens at the exodus of Basava.

ಳಿರುಳುಡುಗದರಿಚಿದವು ; ಹಗಲುಂ

ನರಿಗಳೂಳಿದವುಲ್ಕ ಬಿದ್ದವು ; ಕಲ್ಲುಮಳೆ ಮೇಲೇ

ಸುರಿಯಿತಾದಿತ್ಯೇಂದುಗಳನಾ

ವರಿಸಿತಾಪರಿವೇಷವತಿನಿ

ರ್ಭರದೊಳನಿಲಂ ಬೀಸಿದನು ; ಕೆಂಧೂಳಿ ಮುಸಗಿತ್ತು ;

747. ಹಗಲೆ ಮುಸುಕಿತು ಮಂಜುಗತ್ತಲೆ

ಗಗನದೊಳು ; ಭೀಕರಕೃತಾಂತನು

ವಿಗಡರೂಪಂ ತೋರಿದನು ಪಟ್ಟಣಸವಿಾಪವಲೀ ;

ಜಗತಿ ಯೊಡೆಯನು ಶಿರಸುವಿಲ್ಲದ

ಬಗಿದ ಪೆಣನಂ ಕಂಡನುದಯಾ

ದ್ರಿಗೆ ತರಣಿ ಬಹ ಸಮಯದಲಿ ಪ್ರತಿಯಿನನುದಯಿಸಿದನೂ.

1. ಕೆಲಸ ತೀರಿಸುವವನು=ಯಮ. ಇವೆಲ್ಲಾ ಕೆಟ್ಟ ಶಕುನಗಳು ಅಂತ ನೆನಿಸುತ್ತಾರೆ.

748. ಇದರ ಮೇಲೇನಾಗಲಾಗಿ

ರ್ದುದೊ ? ಯೆನುತ ಸಂತಾಪಿಸುತ್ತಂ

ಹೆದರುತಿರೆ ಜನವಿತ್ತಲಾಜಗದೇವನುಂ ತನ್ನಾ

ಸದನಕ್ಕೈತರೆ, ತಜ್ಜನನಿ ಕಂ

The mother of Fagadéva exhorts him to kill

ಡೊದರುತಾತನ ಮುಸುಡನೀಕ್ಷಿಸು

ತಿದು ಸದಾಚಾರೈಕಭಕ್ತಿಗೆ ಪಥವೇ ? ಕೇಳ್ಮಗನೇ !

749. ಹಿಂದೆ ಭಕ್ತದ್ರೋಹಿಯಂ ನೀ

the king; and reproves him for his backwardness.

ಕೊಂದು ಬಂದೈ ! ಯಿತ್ತಲೂಟಕೆ

ಬಂದೆ ; ಯಿಾಹಲುವ್ರಾಟವಿಂನೆಹ[1]ಗಿಂಪಹುದು ? ಹೇಳೂ !

1. ಹ್ಯಾಗೆ ಅರಸನನ್ನು ಕೊಲ್ಲದಲೆ ಇಷ್ಟು ಎಷ್ಟು ಸರ್ತಿ ಊಟಕ್ಕೆ ಬರಬೇಕು.

ನಿಂದಿರಾ ! ಚೀಃಕುಂನಿ ! ಕೈಕ್ಯೆ
ಯಿಂದೆ ಶಿವಲಿಂಗಪ್ರಸಾದವ
ನಿಂದು, ನಾಚಿಕೆ ಯಿಲ್ಲದೊಡೆ, ನಾಯ್ಬದುಕು ! ನೀ ತಿಂದೂ !

750. ಎನುತಮಿಂತುಚ್ಛುಚ್ಛೆರೇ ಯೆಂ
ದೆನುತ ಚಿಟುಕಿಕ್ಕುತವೆ, ತನ್ನಯ
ಮನೆಯ ಹಿತ್ತಿಲ ಬಾಗಿಲಲಿ ಲಿಂಗಪ್ರಸಾದವನೂ
ಜನನಿ ತಂದವನಿಯಲಿ ಸುರಿಯಲು,
ಶುನಕನಂದದೊಳುಚಿತವಹುದಹು
ದೆನುತ ಜಗದೇವಂ ಪ್ರಸಾದವನುಂಬ ಸಮಯದಲೀ,

1. ನಾಯಿ ಕರೆಯುವ ಅನುಕರಣ.

751. ಲಿಂಗವಂತರು ಮೊಲ್ಲಬೊಂಮ
ಯ್ಯಂಗಳೆನಲತಿವೀರಭಕ್ತಿಸು
ರಂಗದಿಂ ವರ್ತಿಸುತಿಳೆಯೊಳೀವಾರ್ತೆಯಂ ಕೇಳ್ದೂ
ಹಿಂಗದಾಜಗದೇವನೆಡೆಗೆ ಕ
ಡಂಗಿ ಬಂದೊಂದಾಗಿ ತಾವುಂ
ತುಂಗವಿಕ್ರಮರಾಪ್ರಸಾದವನಾಗಳನುಭವಿಸೀ,

Fagadéva is joined by Malleija and Bommeija.

752. ದೇವವಸ್ತ್ರವನುಟ್ಟು, ಭಸ್ಮಾಂ
ಗಾವಿಭೂಷಣರಾಗಿ ತಾ ವೀ
ರಾವತಾರರು ವೀರಭದ್ರಾದಿಪ್ರಮಥವರರಾ
ಭಾವದಲಿ ನೆನೆದುಗ್ರಕೈದುಗ
ಳೋವಿ ಮೂವರು ತಮತಮಗೆ ಪರಿ
ದಾವನಿತೆಗೊಲಿದೆರಗಿ ಪರಕೆಯ ಶಾಸೆಗಳ ಧರಿಸೀ

These three set out, to kill Bijjala.

753. ನಿಳಯಮಂ ಪೊರಮಟ್ಟು ಬರಲತಿ

A bull on the road makes way for them. This is considered a good omen by them.

ಬಳವೃಷಭ ಕೆಲವುತ್ತ ಮುಂದಿಯ
ತೊಲಗಿಸುತ ಮುಂದೆಸೆಗೆ ದಾರಿಯ ತೋರಿ ನಡವುತಿರೇ,
ಕೆಲಸ ತಳುವಿದೊಡೆಂಮ ಮೇಲಣ
ವೊಲುಮೆಯಿಂ ಬಸವೇಶ ಬಂದನು
ನಲವಿನಿಂ ನೆರೆವಾಗಿ ಕರೆಯಲ್ಕಿದುವಲಾ! ಯೆನುತಾ,

754. ಬರಬರಲು, ಸಂದಣಿಪ ನಾನಾ
ಕರಿಘಟಾವಳಿಮಾವತಿಗರುಂ
ತುರುಗಜಯದೇರಾಟದಾರಾಹುತರ ಸಂದೋಹಾ
ನೆರದು ಬರುತಿಹವರ್ಗಳೆಲ್ಲಂ
ತರಿಸಿ ದಾರಿಯನೀಯೆ, ಧೀರರು
ಪುರವಣಿಸಿ ವೀರಾವತಾರರುಮೂವರೈತರಲೂ;

755. ಅಂದಣದ ಸಂದಣೆಯ ದೊಂದಣ

They enter the palace.

ಮುಂದಿ ಯಿಬ್ಬಗಿಯಾಗಿ ಹೆಬ್ಬೆರ
ಗಿಂದ ವೊಂದುಂ ತೊಳತೊಳಗುತುಜ್ಜ್ವಳಿಸಿ ನಡೆತರುತಾ,
ಮುಂದೆ ತೊಲಗದೆ ಬಪ್ಪವರ ಮುಡು
ಹಿಂದಣದು ಹೊಯ್ವುತ್ತ ಕೈದುಗ
ಳಿಂದ ಚಿಂಮುತ ಬಂದು ಹೊಕ್ಕರು ರಾಜಮಂದಿರವಾ.

747—754, ಈ ಪದಗಳಲ್ಲಿ ಒಂದೇ ವಾಕ್ಯ, ಆ ಮೂವರು ಬಂದು ಅರಮನೆಯ ಹೊಕ್ಕರು ಎಂಬ ಮುಖ್ಯಾಭಿಪ್ರಾಯ.

756. ಅಯಿರುಳ ನೋಲಗಕೆ ಗಮನಿಸಿ

Bijjala killed.

ರಾಯನಂ ಕಾಣುತ್ತವೈಸರೊ
ಳಾಯುಧಂಗಳನುರ್ಚಿ, ಸಭೆ ಝಲ್ಲೆನಲು, ಬಿಜ್ಜಳನಾ

ಕಾಯದಲಿ ವೊಂದೆರಡು ಮೂಪ್ರುರ್
ರಾಯಘಾಯದೊಳಿರಿದು ಕೆಡಹಿ ಯ
ಜೇಯರಸಮರು ಮೂವರುಗ್ರೋದಗ್ರವೃತ್ತಿಯಲೀ,

757. ಅತ್ತಲರಮನೆಯಿಂದ ಪೊರಮ
ಟ್ಟೃತ್ತ ತಂನಯ ಮನೆಗೆ ವೀರಂ
ಬೆತ್ತು ವೊಲ್ಲೆಯುಬೊಂಮಯಂಗಳು ತಾನುವ್ಯೆತಂದೂ
ಸೆತ್ತ ತಾಯಿಗೆ ವಂದಿಸುತ ನಾಂ
ಪೊತ್ತ ಹಿಂದಣ ಕೆಲಸವಿಂದಾ
ಯಿತ್ತೆ ಯೆಂದುತ್ತಮೆಯ ಕೃಪೆಯಂ ಪಡೆದು ಜಗದೇವಾ

The three murderers return home.

758. ಇಹಪರೇತರನರನರಕವಿ
ಗ್ರಹನ ನೀಶ್ವರಭಕ್ತಜನನಿ
ಗ್ರಹನಪಹರಿಸಿದೊಡನಿತರೊಳ್ ಹೋಗದಾಖಳನಾ
ಅಹಗೆ[2] ಕೊಲ್ಲದೆ ಬಂದ ತಪ್ಪಿಗೆ
ವಿಹಿತವಿಂನೊಂದುಂಟು, ದಂಡನೆ
ಯಿಹಗೆ[2]ನುತ್ತವೆ ತನ್ನ ಶಿರವಂ ತಾ ತರಿದುಕೊಂಡಾ

Jagadéva, not having stayed to see the death of Bijjala from his wounds, is dissatisfied with himself, and commits suicide.

1. ಬಿಜ್ಜಳನು ಇಹಪರಕ್ಕೆ ಹೊರಗಾದ ನರನು, ನರಕಕ್ಕೆ ತಕ್ಕ ಶರೀರ ವುಳ್ಳವನು, ಭಕ್ತ ಜನರನ್ನು ಕಷ್ಟಪಡಿಸುವವನು ಎಂದು ಅವನನ್ನು ವರ್ಣಿಸುತ್ತಾನೆ. 2. ಹಾಗೆ, ಹೀಗೆ.

759. ಹೊದ್ದದೊಬ್ಬೊರ್ಬರ ಕಲಹವಾ
ಗೆದ್ದು ತಾವಿರಿದಾಡಿದರು ; ಪುರಿ
ದೊಡ್ಡೆಯಾದುದು ; ಹುಟ್ಟಿದುದು ವಿಪರೀತವದರೊಳಗೇ ;

After the death of Bijjala a civil war begins in the city of Kalyána.

ಇದ್ದ ಭಕ್ತರು ವಾರ್ತೆಯಂ ಕೇ
ಳಿದ್ದ ಭಕ್ತರು ಕೂಡಿ ನೋಡು
ತ್ತಿದ್ದ ಭಕ್ತರು ಹೋದರೊಂದೊಂದೆಡೆಗೆಯ್ದೆ ಸರಲೀ.

760. ಮಾನವೇಂದ್ರನು ಮಡಿದೊಡಾತನ
ನೂನ ಲಕ್ಷ್ಮಿ ಯಲಕ್ಷ್ಮಿ ಯಾಯಿ
ತ್ತಾನಗರಿ ಯಮನಗರಿಯೋಲಾಯಿತ್ತದೇವೇಳ್ವೇ ?
ಆನರಾಧಿಪಬಿಜ್ಜಳನ ಸಂ
ತಾನವೆಲ್ಲವು ಕಡೆಗೆ ನಿಸ್ಸಂ
ತಾನವಾಯಿತು ; ಕುದುರೆಗಳು ಶಾಲೆಗಳೊಳಿರ್ದಪರಿ,

Desolation of the city and country.

761. ಉರಿದು ಬಿಕ್ಕನೆ ಬಿರಿದು ಬಿದ್ದವು ;
ಸುರಿಯೆ ಬಾಲಂಗಳಲಿ ಕೆಂಡವು ;
ಕರಿಗಳುಂ ಕರಿಗಳು ಕನಲ್ದಿದಿರಾಗಿ ಮಿಗೆ ತಾಗೀ
ಧರಣಿತಳದೊಳು ಕೆಡದು ಮಡಿದವು ;
ನೆರದ ಸಾಮಂತಾದಿಭಟಪರಿ
ಕರನಿಕರವುದ್ಭ್ರಮಿಸಿ ಸವದರು ಕಾದಿ ತಮ್ಮೊಳಗೇ.

762. ಬಸವರಾಜನ ಸತ್ಯಶಾಪವು
ಮಸೆದೊರಸಿ ಹಾಳಾಯ್ತು ಕಟಕದ
ಪಸರವನಿತರೊಳನಿತುಮಂ ಕೇಳಿದನು, ಕೂಡಲಿಗೇ.
ಸಸಿಗೆ ತಾನೈದಿದನು; ಕಂಡನು
ಅಸಮಸದ್ಗುರುಸಂಗಮೇಶನ
ನೊಸೆದು ತನುಪುಳುಕಂಗಳುಗೆ ಸಾಷ್ಟಾಂಗವೆರಗಿದನೂ.

Basava absorbed into Sangaméshvara.

763. ಇತ್ತಲಿರ್ದಾಭಕ್ತರುಗಳು ಮ

Máchidéva and Channabasava, with many Lingaites, go to Mahamane.

ಹತ್ತು ಸಹಿತಂ ಮಾಚಿದೇವಗ
ಣೋತ್ತಮಂ ಬಸವಂಣನಂ ಮಿಗೆ ಕೂರ್ತುಕೀರ್ತಿಸುತಾ
ಚಿತ್ತಕಮಲವನಲರಿಸುತ ಮುದ
ವೆತ್ತು ತಾನುಂ ಚನ್ನಬಸವಂ
ಹತ್ತೆಬರೆ, ನಡೆತಂದರಾವುಳವೆಯು ಮಹಾಮನೆಗೇ.

---

## CHANNABASAVA PURANA.
## ಚನ್ನಬಸವ ಪುರಾಣ. (ವಾರ್ಧಿಕಷಟ್ಪದಿ.)

### CHANNABASAVA'S BIRTH
### ಚನ್ನಬಸವ ಜನಿಸಿದ್ದು (ಸಂಧಿ. ೪.)

764. ಇರರಿತ್ತ[1] ನಾಗಲಾಂಬಿಕೆ[2] ಮಹಾಭಕ್ತಿಯಿಂ

Shiva in the disguise of a Jangam appears to Nágalámbike and speaks to her :

ಗುರುಲಿಂಗಜಂಗಮಾರ್ಚನೆಯನೊಲವಿನ್ಮಾಡಿ
ಪರಮಪ್ರಸಾದಮಂ ಸವಿದು ಶೈಯೆಯೊಳಂದು ಪರಶಿವಧ್ಯಾನದಿಂದಾ
ವರುಷದಿಂ ಯೋಗನಿದ್ರಾಮುದ್ರಿತಾಕ್ಷಿ ತ
ತ್ಪರವಶದೊಳಿರಲೀಶ್ವರಂ ಕರುಣದಿಂದ ವರ
ಚರಮೂರ್ತಿಯಾಗಿ ತತ್ಸತಿಯನೇಳೆಂದೊಡನೆ ಕರದೆಚ್ಚರಿಸಿ ನುಡಿ
[ದನೂ.

ಕವಿಸಿದ್ಧವಿರೇಶನ ಶಿಷ್ಯನಾದ ವಿರೂಪಾಕ್ಷ ಪಂಡಿತಾರಾಧ್ಯನು ಹಂಪಿಯಲ್ಲಿ ಇದ್ದನು. ಮೊದಲು ಆರಾಧ್ಯ ಬ್ರಾಹ್ಮಣನಾಗಿದ್ದನು. ಆಮೇಲೆ ಇಷ್ಟಲಿಂಗದೀಕ್ಷೆ ಮಾಡಿಸಿ ಕೊಂಡನು. ಅವನ ಹತ್ತರ ಲಿಂಗವಂತರು ಬಂದು ಶರಣರ ಕಥೆಗಳನ್ನ ಕವೀಶ್ವರರು ಹೇಳಿದರು ; ಈ ಚನ್ನಬಸವೇಶ್ವರನ ಚರಿತೆಯನ್ನು ಇನ್ನು ಯಾರು ಹೇಳಲಿಲ್ಲ ; ಅದನ್ನು ನಮಗೆ ಹೇಳಬೇಕು ಎಂದು ಬೇಡಿದ್ದಕ್ಕೆ ಅವನು ಈ ಕೃತಿಯನ್ನು ಮಾಡಿ ಶಾಲಿವಾಹನಶಕದ ೧೫೦೪ನೆ ವರುಷದಲ್ಲಿ ಅದನ್ನು ಮುಗಿಸಿದನು. ಹಾಗಾದರೆ ಈ ಕೃತಿಯಾಗಿ ೨೪೪ ವರುಷವಾಯಿತು.

1. ಕೈಲಾಸದಲ್ಲಿ ಶಿವನು ತನ್ನ ಮಗ ಷಣ್ಮುಖನನ್ನು ಮರ್ತ್ಯಲೋಕದಲ್ಲಿ ಹುಟ್ಟಿದ ನಂದಿಕೇಶ್ವರನಿಗೆ ಉಪದೇಶ ಮಾಡುವದಕ್ಕೆ ಕಳುಹಿಸಬೇಕೆಂದು ನಿರ್ಣಯಿಸಿದನು. 2. ಬಸವನ ಸಹೋದರಿ ಅವನ ಸಂಗಡ ಕಲ್ಯಾಣಕ್ಕೆ ಬಂದಿದ್ದಳು, ಬಹಳ ಚೆಲ್ವೆಯಾದಕಾರಣ, ಬಿಜ್ಜಳ ಆಕೆಯನ್ನು ಉಪಪತ್ನಿ ಮಾಡಿಕೊಂಡಿದ್ದನಂತೆ ಜೈನರು ಹೇಳುತ್ತಾರೆ.

765. ಎಲೆ ತರುಣಿ ! ಕೊಳ್ಳೌ ! ಮಹಾಪ್ರಸಾದವನೆನ
ಲ್ಕಲಿದು ಕೈಕೊಂಡು ಲಿಂಗಕೆ ಕೊಟ್ಟು ತಾಂ ಕೊಂಡ
ಬಳಿಕ, ಚರರೂಪನಡಗಿಸಿ ಪಂಚವದನದಶಭುಜತ್ರಿಪಂಚಾಕ್ಷಿಯಿಂ [ದೇ
ಪೊಳೆವ ಫಣಿಕಟಕತ್ರಿ[1]ಶೂಲಡಮರುಗದಿಂದೆ
ಪುಲಿ ದೊವಲಿನುಡಿಗೆಯಿಂ ಪಾರ್ವತಿ ಸಮೇತದಿಂ.
ದೊಲಿದು ಪ್ರಸನ್ನಭಾವದೊಳ್ ಪರಶಿವನಾಗಳಾ ತರುಣಿಗಿಂತೆಂದನೂ:

"Take this blessing!" He takes off his disguise, and appears in his true form.

1. ಹಾವನ್ನು ಆಭರಣ ಮಾಡಿಕೊಂಡನು.

766. ಲಲಿತಾಂಗಿ ! ಸಂಕಲ್ಪಮುಮ್ಮಾಡ ಬೇಡ ! ನಾಂ
ತಿಳುಪೆವೆಂ ಪೊಸತಪ್ಪ ಚೋದ್ಯಮಂ; ನೀಂ ಕೇಳ್ವು
ದೊಲಿದು ! ನಮ್ಮಿಾಚಿತ್ಕಳಾಮೃತಪ್ರಸಾದಮಿದರಿಂ ನಿನ್ನ ಗರ್ಭ [ದೊಳಗೇ
ತೊಳಗುವೆಂಮಿಾಷಣ್ಮುಖಸ್ಥಿತಪ್ರಣವನಿ
ರ್ಮಳರೂಪನಾಷಟ್ಸ್ಥ[1]ಲಬ್ರಹ್ಮ, ಸಕಳಭೂ
ತಳವಂದ್ಯನಗಣಿತಪವಾಡಪುರುಷಂ ಜನಿಪನೆಂದೀಶ್ವರಂ ನುಡಿವನೂ.

"My son Shanmukha shall be born from thee!"

1. ಭಕ್ತಸ್ಥಲ, ಮಹೇಶ್ವರಸ್ಥಲ, ಪ್ರಸಾದಿಸ್ಥಲ, ಪ್ರಾಣಲಿಂಗಸ್ಥಲ, ಶರಣಸ್ಥಲ, ಐಕ್ಯಸ್ಥಲ, ನೋಡು ಚನ್ನಬಸವ ೬೧ ಸಂಧಿ. ಚನ್ನಬಸವ ವೇದಾಂತ ಬೋಧಿಸಿದನಾದಕಾರಣ, ಅವನ ಬೋಧನೆ ಹೊಸತಲ್ಲ. ಆ ಮಹಾ ವಾಕ್ಯದಲ್ಲಿ ಅಸಿ ಎಂಬುದು ಭಾವಲಿಂಗ, ತ್ವಂ ಎಂಬುದು ಪ್ರಾಣಲಿಂಗ ತತ್ ಎಂಬುದು ಇಷ್ಟಲಿಂಗ ಎಂದು ಹೇಳಿದ ಮೇಲೆ, ಅವನ ಬೋಧನೆ ವೇದಾಂತದೊಳಗೆ ಕೂಡಿ ಹೋದ ಹಾಗಾಯಿತು. ಬೇರೆ ಬೇರೆ ಹೆಸರಿಟ್ಟು ಮುಚ್ಚು ಮರೆ ಯಾಕೆ ಮಾಡ ಬೇಕು.

767. ಪೊಸತಪ್ಪ ವೀರಶೈವಾಚಾರಮಂ ಪ್ರತಿ
ಷ್ಠಿಸಿ ಜಯಿನಬೌದ್ಧಚಾರ್ವಾಕರ ಮತವನಳಿದು
ಬಸವಾದಿಪ್ರಮುಖರ್ಗೆ ಷಟ್ಸ್ಥಲಬ್ರಹ್ಮೋಪದೇಶನಿಂ ನಿಜಪದವನೂ

Shiva after directing Nágalámbike, to make known this to the Lingaites, disappears.

ಬಸದೀವನೌ ನಿನ್ನ ಗರ್ಭದರ್ಭಕನುದಯ
ದೊಸೆಗೆಯುಂ ಸಕಳಗಣಕರುಪ್ರ! ಶೀಘ್ರದೊಳೆನು
ತ್ತಸಮಾಸ್ತ್ರಶಿಕ್ಷಂ ವಿರೂಪಾಕ್ಷನಾನಿರಾಕಾರರೂಪಂ ತಳೆದನೂ.

1. ಅಸಮವಾದ ಅಸ್ತ್ರವುಳ್ಳವನು=ಮನ್ಮಥ, ಅವನನ್ನು ಶಿಕ್ಷಿಸಿದವನು=ಶಿವನು.

768. ಅನಿತರೊಳ್ಕಂದೆರದು ನಾಗಲಾಂಬಿಕೆ ತನ್ನ
Her astonishment when awaking. ಮನೆಯೊಳೀಶ್ವರ ಮೂರ್ತಿಯಂ ಕಾಣದಿಂತಿದೇಂ?
ಕನಸಾಗಿಯುಂ ಕನಸಿನಂದಮಲ್ಲಿದು! ನೋಡೆ, ಪ್ರತ್ಯಕ್ಷಮೆಂಬಂ
[ತಿರೇ,
ಮನದೊಳಗೆ ವಿಸ್ಮಯರಸಂ ತುಳುಕುತಿದೆ; ಯೆನ್ನ
ನೆನಹಿನೊಳು ಶಿವರೂಪ ಹೊಳವುತದೆ, ಚೋದ್ಯಮಂ
ದೆನುತ ಜಾನಿಪಸಮಯದೊಳ್ಬೆಳಗುಜಾವಗೋಳಗಳುಲಿದವೇನಂ
[ಬೆನೂ.

769. ಇಂದರನ ದೆಸೆ ಕೆಂಪು ಮೂಡೆ, ಕತ್ತಲೆ ಯೋಡೆ,
Sun-rise. ಮಂದಾನಿಲಂ ತಂಪು ತೀಡೆ, ಭ್ರಮರಂ ಪಾಡೆ,
ಬಂದುಚಕ್ರಂ ಕೂಡೆ, ಕೈರವಂ ಬಾಡೆ, ಕಮಲಂ ಬಿರಿದು ನಗೆ
[ಯೊಳಾಡೇ
ಮುಂದೋರ್ವವೀರಶೈವಾಚಾರ್ಯನೀಧರೆಗೆ
ಬಂದಿವಕೆ ನೂರು ಮಡಿಯಾಗಿ ಬೆಳಗಂ ತೋರ್ಪ
ನೆಂದು ಸೂಚಿಸುವಂದದಿಂದುದಯಶೈಲಾಗ್ರದೋಳ್ದಿನಪನುದಯಿಸಿ
[ದನೂ.

770. ಆಕಾಲದೊಳು ಭಕ್ತಿಯಿಂ ನಾಗಲಾಂಬಿಕೆ ಯು
She relates what had happened to her, to Basava. ಮಾಕಾಂತಪೂಜೆಯಂ ತೀರ್ಚಿಯಾಬಸವಾದ್ಯ
ನೇಕರೊಡನೀವಾರ್ತೆಯಾದ್ಯಂತಮಂ ಹಿಂಚು ಮುಂಚೆನಿಸದಾಂಪೇ
[ಳಲೂ

ಬೇಕೆಂದು ಬೇಗಮನುಭವವಮುಂಟಪಕ್ಕೆ ಬಂ
ದಾಕಾರ್ಯಮಮ್ಮಹಾಗಣಕುಲಂ ಕೇಳ್ವಂತೆ,
ಜೋಕೆ ಇಂಪಾಗೆ, ದಂಡಾಧೀಶನೊಳು ಸವಿಸ್ತರವಾಗಿ ವಿರಚಿಸಿ [ದಳೂ.

771. ಕೇಳ್ದು ಮುದಮಂ ತಾಳ್ದನಾಬಸವನುತ್ಸವಂ[2]
ದಾಳ್ದುದು ಗಣಪ್ರತತಿ, ನಾಗಲಾಂಬಿಕೆಯ ಮೊಗ
ಮಾಳ್ದುದು[1] ವಿಕಾಸಮಂ ಗರ್ಭಚಿಹ್ನಂ ದಿನದಿನಕ್ಕೆ ತಲೆ ದೋರ [ಲೊಡನೇ

General rejoicing at this news on the part of the Lingaites.

ನೀಳ್ದುದೆಲ್ಲರ ಮನೋಹರುಷಲತೆ ; ಧಾರುಣಿಯೊ
ಳೇಳ್ದು ಶೈವಾಚಾರಮಂದನಾಚಾರಮಂ
ತೂಳ್ದುದು ಸುಗರ್ಭದೊಳಗಿರ್ದ ಪರಶಿವನ ಚಿತ್ಕಳೆ ಯದೇಂ ಸಾ [ಮಾನ್ಯವೇ !

1. ಧರಿಸಿತು. 2 ಕ್ರಿಯಾಸಮಾಸವಾಗಿರುವದರಿಂದ ದ್ವಿಕೆಯನ್ನಿಕ್ಕಲಿಲ್ಲ ವ್ಯಾ. ಸೂ.

772. ಕ್ಷೀರಾಬ್ಧಿಮಧ್ಯಚಿಂತಾರತ್ನದಂತೆ, ನವ
ಶಾರದಾಭ್ರದಮರೆಯಶಶಿಯಂತೆ, ಸತ್ಪುಣ್ಯ
ಧಾರುಣಿಯೊಳಿರ್ಪ ನವನಿಧಿಯಂತೆ, ಗುರುಬೋಧೆಯೊಳಗಿಪ್ಪ ಮು [ಕ್ತಿಯಂತೇ

That treasure of knowledge was hidden in the womb as the wonderful gem in the milk-sea, &c.

ಅರವಿಗ್ರಾವಗುಪ್ತಜ್ಯೋತಿಯಂತೆ, ಮಂ
ದಾರಮುಕುಳದೊಳಿರ್ಪ ಸುರಭಿಯಂತಧಿಕಗಂ
ಭೀರಾಬ್ಧಿ ನಾಗಲಾಂಬಿಕೆಯಬಸುರೊಳುತತ್ವನಿಧಿ ಗೋಪ್ಯದಿಂದಿ [ರ್ದನೂ.

Wonder of the people of Kalyana at this.

773. ಪಲತೆರದ ಗರ್ಭಚಿಹ್ನಂಗಳಂದಿಂಗಿಂತು ತ
ಲ್ಲಲನೆ ಕೆಲಕೆಲವು ದಿವಸಂಗಳಂ ಕಳೆಯೆ, ಪುರ
ದೊಳಗೆ ಗುಜುಗುಜು ಮಸಗಿ, ನಾಗಲಾಂಬಿಕೆ ಗಡ ವಿರಕ್ತೆಗಡರಾ [ಯಗುರುವಾ
ಬಲದನಾಯಕಬಸವನಕ್ಕಗಡ ಗರ್ಭಮಂ
ತಳೆದಳ್ಗಡಂ ! ಚಿತ್ರಮೊಂದು ಮನೆಮನೆ ನೀರ
ಹೊಳೆಬೀದಿಬೀದಿಯೊಳಗೀವಾರ್ತೆ ಪುರಜನದ ಕರ್ಣಂಗಳೊಳಗಿಡಿ [ದುದೂ

Remarks of the people, some wonder, some scoff. Bijjala is informed of this occurrence.

774. ಆಕೆ ದೈವಜ್ಞೆ ! ಯೆಂಬರ್ಕೆಲಬರುತ್ತಮ
ಜೋರ್ಕೆ ಮಿಗೆ ಮದ್ಯಮರ್ವಿಸ್ಮಯಂ ಬಡುವರವಿ
ವೇಕಿನೀಚರು ಹಾಸ್ಯ ಮಾಡುವರದಂ ಕೇಳ್ದು ಮತ್ತೋರ್ವಪಿಸು [ಣರರಸಂ
ಭೂಕಾಂತಬಿಜ್ಜಳಂಗರುಪ ಬೇಕೆಂದು ಬಂ
ದೇಕಾಂತದೋಲಗದೊಳೀವಾರ್ತೆಯಂ ಪೇಳೆ,
ಪೋಕನಿವನಿವನ ನುಡಿ ಪುಸಿ ಯೆನಲ್ಭಾಷೆಯಂ ಬರಸಿ[1] ಮತ್ತಿಂತೆಂ [ದನೂ

1. ತಾನು ಹೇಳಿದ್ದು ಖರೆ ಎಂದು ಬರಸಿ ಕೊಟ್ಟನು.

The king, who was unwilling to believe it, is told, to go and see for himself.

775. ಕರದ ಕಂಕಣಕೆ ಕನ್ನಡಿ ಯುಂಟೆ ? ಜೀಯ್ಯ ! ಬಹು
ಪರಿಯೊಳಾಂ ಬಿನ್ನೈಸಲಂಜುವೆಂ ನಿಮಗೆ ; ತವ
ಚರಣಪಂಕಜದಾಣೆ ! ಪುಸಿ ದಿಟಂ ನೋಳ್ಪಡಿದು ವೇಳೆ! ಯಾಬಸ [ ವಣ್ಣನಾ
ವರಗೃಹಾಂತರಸ್ತದನುಭವಮಂಟಪದೊಳೀಗ
ಹರಭಕ್ತರುಂ ನೀಲಲೋಚನೆಯುಮಾಗರ್ಭ
ದರಸಿಯುಂ ಸಹ ಬಸವನಿರ್ದಪಂ ; ದೇವರ್ಕೈತರೆ, ಕಾಣ ಬಹು [ದೆಂದನೂ.

776. ಎನೆ, ಬಿಜ್ಜಳಂ ವಿಸ್ಮಯಂ ಬಟ್ಟು ನೋಡ ಬೇ

The king with his ministers in Basava's house.

ಕೆನುತ ಸಕಲಪ್ರಧಾನರ್ವೆರಸು ಕೆಲವು ಪರಿ
ಜನಸಹಿತಲರಮನೆಯನೊಳಪೊಕ್ಕು ಬರಲಸಂಖ್ಯಾತಗಣದೊಡನೆ [ಬಸವಂ
ಘನಹರುಷದಿಂ ಕಾಣುತಿದಿರೆದ್ದು ಬಂದು ಸ
ದ್ವಿನಯಮಂ ನುಡಿದು ಕರತಂದಮಳರತ್ನರಂ
ಜನಸಿಂಹ್ಮಪೀಠದೊಳ್ಕುಳ್ಳಿರಿಸಿದಶನದೀಧಿತಿ ಪೊಳೆಯಲಿಂತೆಂದನೂ:

777. ಎಲೆ ರಾಯ ! ಕೇಳ್ಮಂನ ಭಲ್ಲೆಯದ ಮೊನೆಗೆ ಮಾ

Basava asks the king to tell him the reason of this unexpected visit.

ರ್ಮಲೆವ ಪರನೃಪರಿಲ್ಲವಾಹೆಗಪಜಯವಿಲ್ಲ
ಮಿಳೆಯ ಸಿರಿಗೇಂ ಬಾಧೆಯಿಲ್ಲವನುಜಾಗ್ರಜಸುತರ್ಕಳೊಳ್ಭೇದ [ಮಿಲ್ಲಾ;
ಹಲವು ಕೋಶಕೆ ಕಡಿಮೆಯಿಲ್ಲಮಿಾಚತುರಂಗ
ಬಲದೊಳೆರಡಿಲ್ಲಮಿಂದೆನ್ನೆಡೆಗೆ ನೀಂ ಬಪ್ಪ
ಬಲು ಗಜ್ಜಮಾವುದುಂಟೆನೆ, ಕೇಳಿ ನಸುನಗುತವನೀಶನಿಂತೆಂ [ದನೂ :

778. ಮಾನನಿಧಿ ಬಸವದಂಡೇಶ ! ನೀನೆನ್ನ ಪ್ರ

The king assures him of his confidence in him, and seeing Nágalámbike asks her.

ಧಾನಿಯಾಗಿಪ್ಪನ್ನಮೆಂನ ಸೌಭಾಗ್ಯಕ್ಕೆ
ಹಾನಿ ಯೆಲ್ಲಿಯದೆಂದು ಮಾರುತ್ತರಂ ಗೊಟ್ಟು ಕೆಲಬಲವ ನೋಡು [ತಿರಲೂ,
ಆನಾಗಲಾಂಬಿಕೆಯ ಗರ್ಭಸೌಂದರ್ಯಮಂ
ತಾನರಿದು ತತ್ಸತಿಯ ಪೇರ್ವಿಡುವುತಂ ವಿರತೆ
ನೀನಾರಿದೇಂ ಕಾರಣಂ ? ವೃಥಾ ಗರ್ಭಮಾಯ್ತೆನಲಾಕೆ ಯಿಂತೆಂ [ದಳೂ:

779. ಪೊಡವೀಶ ! ನೀಂ ಕೇಳ ತಕ್ಕದೀಗರ್ಭಮಾ

Conversation with her about this subject.

ಮೃಡಚಿತ್ಕಳಾಮೃತಪ್ರಸಾದಿಂದಾದುದೆಂ
ದೊಡೆ, ಸಕಲಶಿವಭಕ್ತರೆಲ್ಲರುಂ ತತ್ಪ್ರಸಾದಿಗಳವರಿಗೀಗರ್ಭದಾ
ಗೊಡವೆಯುಂ ಕಂಡು ಕೇಳ್ದುದಿಲ್ಲಮೆನೆ, ಪುಸಿಯು
ನುಡಿವಳಲ್ಲೀಶ್ವರಂ ಕರುಣದಿಂ ತನ್ನ ಮುಖ
ದೆಡೆಯ ಸುಜ್ಞಾನಪುತ್ರಂ ಜನಿಪನೆಂದಿತ್ತನೆನಲರಸನಿಂತೆಂದನೂ :

780. ಆಶಿವಜ್ಞಾನಭರಿತಂ ನಿನ್ನ ಗರ್ಭದೊಳ

The child in the womb speaks

ಗೀಶಕೃಪೆಯಿಂ ಬಂದನಾದೊಡದು ಲೇಸು ! ಮ
ತ್ತಾ ಶಿಶುವೆ ತಾನೆಮ್ಮೊಳೀವಾರ್ತೆಯಂ ಪೇಳ್ಗೆ, ನಿಜವೆಂಬಕಟಕಿ [ನೃಪನಾ[1]
ಆಶಯುವನರಿದಾಕೆಯುದರಮಧ್ಯಧಲೆ, ನಿಖಿ
ಳಾಶೆಯುಂ ತೀವಲೆಲ್ಲಾಜನರ್ಕೇಳೆ, ಬಸ
ವೇಶಮುಖ್ಯರ್ನಲಿಯೆ, ಪೊಣ್ಮಿತೊಂದಾನೊಂದು ನುಡಿ ; ಯದೇಂ [ಬಂಣೆಸುವೆನೂ.

1. ಹೀಗೆ ಹೇಳಿದ ಅರಸಿನ ಅಭಿಪ್ರಾಯುವನ್ನು ತಿಳಿದಾಕೆಯು ಉದರ ಮಧ್ಯದಲ್ಲಿ ಮುಂತಾದ.

781. ಕಳಕಳವಿದೇಕೆ? ಹೋ ಹೋ ! ನಿಲ್ಲು! ನಿಲ್ಲು! ಬಿ

"I am not of blood, but I am the splendour of knowledge, that is in Shanmukha the son of Shiva."

ಜ್ಜಳನೃಪತಿ! ಯಾಗಸಂ ನೆಲಕಿಳಿದೊಡಂ, ಧರಾ
ತಳಮಿರದೆ, ಪಾತಾಳಕದ್ದೊಡಂ ಶಿವಶರಣರಿಂದೆ ಪುಸಿನುಡಿ ಬಪ್ಪ [ದೇ ?
ವಿಲಸಿತವಿರೂಪಾಕ್ಷ ಷಣ್ಮುಖಸ್ಥಿತಸುಚಿ
ತ್ಕಳೆಯಿಲ್ಲದಾಂ ರಕ್ತರೇತಃಪ್ರಯುತಪಿಂಡ
ದೊಳಗಲ್ಲನೆಂಬಗಂಭೀರಸ್ವರಂ ಪೊಣ್ಮೆ, ಬಿಜ್ಜಳಂ ಬೆರಗಾದನೂ.

782. ಪ್ರತ್ಯಕ್ಷಮಂ ಪ್ರಮಾಣಿಸಿ ನೋಡ ಬೇಕೆಂಬು

Bijjala cannot yet believe, that the immortal god can be in the body of mortals.

ದತ್ಯಧಿಕನೀತಿಶಾಸ್ತ್ರಮುದುಂಟುವದರಿಂದ
ನಿತ್ಯವಹ ಮಾನವಶರೀರದಿಂ ಮಲಮೂತ್ರರಕ್ತಮಾಸಂಗಳೊಳಗೇ
ನಿತ್ಯವಹ ಶಿವನ ಚಿತ್ಕಳೆ ಯಿಪ್ಪುದೆಂಬುದಿದು
ಸತ್ಯಮೋ ? ಯೆಂದೆನಲ್ಕಜ್ಞರನೊಡಂಬಡಿಪ
ಕೃತ್ಯಮಂ ತಿಳಿದು ತನ್ನೊಳ್ವಿಚಾರಿಸೆ, ನಾಗಲಾಂಬೆ ಯಂದಿಂತೆಂ
[ದಳೂ.

783. ಅಕ್ಕ[1]ಕ್ಕ, ಮೂತ್ರಮಲಮಾಂಸರಕ್ತಂಗಳೊಳ
ಗಿಕ್ಕು[2]ಮೇ ಶಿವಮೂರ್ತಿ ಯನ್ನುದರದೊಳಗವರ
ತೊಕ್ಕಿಲ್ಲವೆನೆ, ಬಿಜ್ಜಳಂ ಕೇಳ್ದು ದೃಷ್ಟಮಿಲ್ಲದೆ ನನಗೆ ಬರಿಯ
[ಮಾತೂ
ತಕ್ಕುದೇ ? ಯೆನೆ, ದೃಷ್ಟಮಂ ತೋರ್ಪುದೀಶಿವಗ
ಣಕ್ಕನರಿದರಿದು ? ನೋಡುತ್ತಾಗ ಬೇಗನಸು
ನಕ್ಕು ತನ್ನುದರವನುಗುರ್ಗೊನೆಗಳಂ ಬಗೆದಳೇನೆಂಬೆನಚ್ಚರಿ
[ಯಾ ?

1. ಆಗುವದು. (ಆಗುಗು.) ಎಂಬ ರೂಪದಿಂದಾಯಿತು. ವ್ಯಾ. ಸೂ. 2. ಶಿರುಗು =ಶಿರುತ್ತದೆ. ವ್ಯಾ. ಸೂ.

784. ಮೇಲುಗುರ್ಗೊನೆ ಸೋಂಕಲುದರದೊಳು ಹೊಳಹೊಳವ

The tears open her womb and the child is born.

ಬಾಲಾರ್ಕಕೋಟಿಪ್ರಕಾಶದಿಂ ಮೆರೆವ ಭಸಿ
ತಾಲೇಪನದ, ಥಳಥಳಿಪ ನಗೆಮೊಗದ, ಕರ್ಣಕುಂಡಲಯುಗಂಗಳಂ
[ದಾ

ಆಲೋಲವಾದ ಕಿರುಜಡೆಗಳಿಂ ಸುರಕುಸುಮ
ಮಾಲಿಕಾಮಧ್ಯದೊಳು ಶಿವಲಿಂಗಧರನಾಗಿ
ಬಾಲಕಂ ನೋಳ್ಪ ಸಭೆಯುಂ ವಿಸ್ಮಯಾರ್ಣವದೊಳದ್ದಿದನದೇಂ
[ಪೊಗಳ್ವೆನೊ ?

Astonishment of all present.

785. ದೇವದುಂದುಭಿ ಮೊಳಗಿದವು; ಸುರರ್ನಲಿದು ಕುಸು
ಮಾವಳಿಯ ವೃಷ್ಟಿಯುಂ ಕರದರಾಸ್ಥಾನಿಕರ
ನಾವರಿಸಿದುದು ಬಕ್ತಿರಸಜಲಧಿ ; ಬಸವನಾನಂದದಿಂ ಮೈಮರದ
[ನೊ ;
ಕಾವುದೆನ್ನಪರಾಧ ಶತವನೆಂದಾಬಿಜ್ಜ
ಳಾವನೀಶಂ ಮಹಾಭಯಭರಿತಭಕ್ತಿಯಿಂ
ಕೇವಲಜ್ಞಾನಯುತನಾಗಿ ಧರೆಯೊಳ್ಮೈಯ್ಯನಿಕ್ಕಿಬಳಿಕಿಂತೆಂದನೊ;

The king prays to Shiva, to forgive him his five trespasses.

786. ಚಿದ್ರೂಪ[1] ! ನಿಂನಿರವನರಿಯದಾಂ ಪಳಿದನಿಂ[2]
ದಾದ್ರೋಹವೊಂದು, ಶಿವಶರಣೆಯಂ ಜರೆದ ಭ
ಕ್ತದ್ರೋಹವೆರಡು ; ಶಿವವಚನಮಲ್ಲೆಂದ ದೈವದ್ರೋಹದಿಂದೆ
[ಮೂರೊ,
ಉದ್ರೇಕದಿಂದೀಕೆಯುದರಮಂ ಬಗಿಸಿದ ಸ
ತಿದ್ರೋಹನಾಲ್ಕಿನಿತನಾನರಿಯದರಿಯದಾ
ತ್ಮದ್ರೋಹದಿಂ ಪಂಚಮದ್ರೋಹಿಯಂ ರಕ್ಷಿಸೆನುತವಂ ಪೊಗಳ್ದ
[ನಂದೊ.

1. ಅರುವು ಸ್ವರೂಪವುಳ್ಳವನು=ಚನ್ನಬಸವ. 2. ಹಳಿದವನಿಂದ ಆದ ದ್ರೋಹ.

All praise.

787. ಬಂದು ಕಡೆಯೊಳು ಬಿಜ್ಜಳಂ ಪೊಗಳಲಿತ್ತ ಮ
ತ್ತೊಂದು ಕಡೆಯೊಳ್ಬಸವದಂಡೇಶ್ವರಂ ನುತಿಸ
ಲೊಂದು ದಿಕ್ಕಿನೊಳಸಂಖ್ಯಾತಗಣವೈದೆ ಜಯಜಯವೆಂದು ನು
[ತಿಸುತಿರಲೊ

ಹಿಂದೆ ಮುಂದೆಡಬಲದೊಳೊಡೆಯರುಂ ಭಕ್ತರುಂ
ನಿಂದು ಕೊಂಡಾಡುತಿರೆ, ನಿಲಾಂಬೆಸಹಿತ ಸಲೆ
ವೃಂದವೊಡಗೂಡಿ ನಡಿಯಲ್ಕೆ, ಮೊದಲೋಳ್ಪವಾಡಂ ವಿಭವದಿಂ
[ಮೆರದುದೂ.

Wonders and signs at the birth of Channabasava.

788. ಕಡಿದೊಣಗಿದಖಿಳವೃಕ್ಷಂಗಳ್ಕೊನರ್ತವೆ
ಲ್ಲೆಡೆಯೊಳುಂ, ಬರಡುಗಳ್ಕೊಡವಾಲ್ಗಳಂ ಕರೆಯ
ತೊಡಗಿದವು ; ಕಗ್ಗಲ್ಗಳೊಸರಿತಾಕೊಯ್ದು ಫಲತತಿ ಮುಗುಳೆ ಫ
[ಲವಾದವೂ ;
ಸಡಗರದೊಳಂ ಶಿವಾಲಯದ ಕಲ್ಬೊಂಬೆಗ
ಳ್ನಡದು ನರ್ತಿಸುತಿರ್ದವಾಕ್ಷಣಂ ಜ್ವೈನರೆದೆ
ಯೊಡವುತಿರ್ದುದು, ಷಟ್ಸ ಲ[1]ಬ್ರಹ್ಮ ಭೂತಳದೊಳವತರಿಸಲೇ
[ನೆಂಬೆನೂ.

1. ಚನ್ನಬಸವ ತಾನು ಷಟಸ್ಥಲ ಆಚರಿಸಿ ಬೋಧಿಸಿದನು.

789. ಕಳವಳಿಸಿದಂ ಕಾಲನಡುಗಿದಂ ಪೂಗೋಲ
ನಳವಳಿದುದಜ್ಞಾನವಿಳಿದುದಂ ಮದಮಾನ
ಮೊಳಗೊಳಗೆಕಂದಿದಳ್ಮಾಯೆ ; ಪೋದುದಸೂಯೆ ; ಷಡ್ವರ್ಗಮೋ
[ನಾಯಿತೋ ;
ಸಲೆ ಕೆಟ್ಟುದಪಮೃತ್ಯು ; ಚಲಿಸಿದುದು ಭಯ ಬಿತ್ತು ;
ನೆಲೆಗುಂದಿ[1]ದಳ್ಮಾರಿ ; ತೊಲಗಿತಘಚಯಭೂರಿ ;
ಲಲಿತಮುಕ್ತಿಸ್ವರೂಪಂ ಸತ್ಕಲಾಪನವತರಿಸಿದಾಕ್ಷಣಮಿಳೆಯೊ
[ಳೂ.

1. ಅಸ್ಥಿರವಾಯಿತು. 2. ಚನ್ನಬಸವನನ್ನು ವರ್ಣಿಸುತ್ತಾನೆ. ಅವನು ಮುಕ್ತಿ ಸ್ವರೂಪ, ವೈರಿಗಳ ಸಂಗಡ ಬಳ್ಳಿ ತರ್ಕ ಮಾಡುವನು.

## SARVAGNA.

## ಸರ್ವಜ್ಞ (ತ್ರಿಪದಿ.)

### ಪೀಠಿಕೆ.

ಧಾರವಾಡದ ಜಿಲ್ಲೆಯ ಮೂಸೂರು ಎಂಬ ಗ್ರಾಮದಲ್ಲಿ ಮುಂಚೆ ಆರಾಧ್ಯ ಬ್ರಾಹ್ಮಣರಾದ ಬಸವರಸ ಮಲ್ಲಮ್ಮ ಎಂಬುವ ಗಂಡಹೆಂಡರು ಇದ್ದರು. ಮಕ್ಕಳಿಲ್ಲದ ದುಃಖ ಕಳೆಯಲಿಕ್ಕೆ, ಈ ಮೂಸೂರ ಬಸವರಸನು ಕಾಶಿಗೆ ಹೋಗಿ ಗಂಡು ಕೂಸನ್ನು ಈಶನನ್ನು ಬೇಡಿ ಪ್ರಸಾದ ಪಡೆದು ನುಂಗಿದನು. ತಿರಿಗಿ ಬರುವಾಗ್ಯೆ, ದಾರಿಯಲ್ಲಿ ಮಳೆ ಮೋಡ ಹತ್ತಿದದರಿಂದ, ಅವನು ಅಂಬಲೂರೊಳಗೆ ಬಂದು ಕುಂಬಾರ ಸಾಲೆಯಲ್ಲಿ ಇಳುಕೊಂಡನು. ಅಲ್ಲಿ ಇದ್ದ ಮಾಳೆ ಎಂಬ ಒಬ್ಬ ವಿಧವೆಗೆ ಬಸವರಸ ಮೋಹಿಸಿ ಆಕೆಯ ಸಹವಾಸ ಮಾಡಿದರಿಂದ, ಆಕೆ ಗರ್ಭವತಿಯಾಗಿ ಒಬ್ಬ ಮಗನನ್ನು ಹಡೆದಳು. ಅವನು ಬೆಳೆದು ಬಹಳ ಬುದ್ಧಿವಂತನಾಗಿ ಲೋಕಹಿತಾರ್ಥವಾದ ನೀತಿ ಮಾತುಗಳನ್ನು ತ್ರಿಪದಿರೂಪವಾಗಿ ರಚಿಸಿದನು. ತನ್ನ ಹೆಸರು ಸರ್ವಜ್ಞ, ಅಂತ ಹೇಳಿಕೊಂಡು ತಾನು ಮಾಡಿದಂಥಾವು ಅಂಬುವದಕ್ಕೆ ಸರ್ವಜ್ಞ ಸಾಕ್ಷೆಯನ್ನ ಈ ತ್ರಿಪದಿಗಳ ಒಂದೊಂದಕ್ಕ ಕೊಟ್ಟಿರುತ್ತಾನೆ. ಅವನ ಕೃತಿ ಹಳೆಗನ್ನಡ ಮಾತಾಗಿರುವದರಿಂದ ಅದು ರಚಿತವಾಗಿ ಕೆಲವು ನೂರು ವರುಷವಾಗಿದ್ದೀತು ಎಂಬಂತೆ ತೋರುತ್ತಡೆ ಅವನು ಲಿಂಗದೀಕ್ಷೆ ಮಾಡಿಸಿಕೊಂಡು ಲಿಂಗವಂತರೊಳಗೆ ಕೂಡಿದ ಹಾಗೆ ಕಾಣುತ್ತದೆ

## POLITICS AND CONDUCT BECOMING KINGS AND THEIR COURTIERS.

### 1. ರಾಜನೀತಿಪದ್ಧತಿ.

790. ನಚ್ಚಿರ್ದಂತರಸಿನ ಇಚ್ಛೆಯಂತಿರುವದದು
ಮಚ್ಚೊತ್ತು[1] ತಪ್ಪಿ ನಡದರೆ, ಹೊತ್ತೇರಿ
ಕಿಚ್ಚುಕಾದಂತೆ ಸರ್ವಜ್ಞ.

The king's favour, if abused, is as a

1. ಅಪಮರಿಯಾದೆಯ ದೋಷ ತನ್ನ ಮೇಲೆ ಹೊತ್ತು=ಮರಿಯಾದೆಯನ್ನ ಕಾಯದೆ ದೋಷಕ್ಕೆ ಒಳಗಾಗಿ.

791. ಚಿತ್ತವೃತ್ತಿಯನರಿದು ಹತ್ತೆವಿಡಿದೋಲೈಸು !
ಚಿತ್ತವ ಪಡೆದು ಮದವಾಗೆ, ಮೊಲ ನಾಯಿ
ಹತ್ತಿದಂತಕ್ಕು, ಸರ್ವಜ್ಞ.

burning sun. The king to a proud favourite is as a dog catching a hare.

792 ಬಲ್ಲವರು ಹಾಂಸೆಯು ಕಲ್ಲು ತಾ ಮೆಟ್ಟುವರೆ ?
ಬಲ್ಲಿದರೊಡನೇ ಕಣಸಿ ಮಾತಾಡಿದ
ರಲ್ಲಿಯೆ ಕೇಡು, ಸರ್ವಜ್ಞ.

Treading on slippery stones, quarrelling with the mighty.

793. ಅರಸನೋಲಗದೊಳಗೆ ಸರಸವಾಡಲಿ ಬೇಡ !
ಸರಸನಿಂದ್ಯ[1]ದಲಿರ ಬೇಡ ! ವೋರ್ವರಾ
ಭರವಸ ಬೇಡ ! ಸರ್ವಜ್ಞ.

Do not make fun before kings.

1. ಸರಸವಾಡಿ ನಿಂದೆಗೆ ವೊಳಗಾಗುವದು.

794. ಎದ್ದು ಮಾತಾಡದಿರು ! ಯೆದ್ದೆದ್ದು ನಿಲ್ಲದಿರು !
ಯಿದ್ದ ಮನುಜರ ಜರಿಯದಿರು ! ವಾಲಗದೊ
ಳಿದ್ದಾಗ, ನೀನು ! ಸರ್ವಜ್ಞ.

After rising, do not remain in a public levy.

795. ಅರಸೊಲಿದು ನಡಿಸಿದರೆ, ಶಿರಿಯಕ್ಕು, ದೆಶೆ ಯಕ್ಕು,
ಕರಿತುರಗಬಲವು ಪಿರಿದಕ್ಕು; ಮುನಿದರೆ,
ಕರನಾಶವಕ್ಕು ಸರ್ವಜ್ಞ.

Kings' favour a great fortune; his displeasure bad luck.

796. ಹರಿವ ನೀರೆಳೆವಳ್ಳಿ[1], ತುರಗ, ಚೈತ್ರವು, ಭಂಡಿ,
ಅರಸಿನ ಮನವು, ಬೆಲೆವೆಣ್ಣು, ಯಿವು ಯೇಳು
ತಿರುಹುವರಿಚ್ಛೆ ಸರ್ವಜ್ಞ.

Seven things in the power of those who know how to turn them.

1. ಎಳೆ ಬಳ್ಳಿ.

797. ಜಾತಿವೀ[1]ರರು ಸಾವ ಭೀತಿಗಂಜುಳವರೇ ?
ಜಾತಸ್ಯ ಮರಣಂಧ್ರು[2]ವವೆಂಬುದಿರಲು
ಯಾತಕಂಜುವದು ? ಸರ್ವಜ್ಞ.

Death common to all; why should heroes be afraid of it?

1. ಬಳ್ಳಿವೀರರು, ವೀರರಾಗಿರವದು ಅವರ ಜಾತಿಯೇ. 2. ಹುಟ್ಟಿದವನ ಮರಣ ನಿಶ್ಚಯವೇ ಸಂ (ಸಂಸ್ಕೃತ.)

798. ಅಡಿಯ ಮುಂದಿಡೆ, ಸ್ವರ್ಗವಡಿಯ ಹಿಂದಿಡೆ,[1] ನರಕ ;
ಅಡಿಗಶ್ವಮೇಧಫಲ ; ಸ್ವಾಮಿಕಾರ್ಯಕ್ಕೆ
ಮಡಿಯಲೇ ಬೇಕು. ಸರ್ವಜ್ಞ.

*Remain in the king's sevice and die in it.*

1. ಅರಸನ ಸೇವೆ ಮಾಡ ಆರಂಭಿಸಿದ ಮೇಲೆ, ಹಿಂಜರಿಯ ಬಾರದು. 2. ಅರಸನ ಸೇವೆಯಲ್ಲಿ ಒಂದು ಅಡಿ ಇಟ್ಟರೆ, ಅಶ್ವಮೇಧಫಲ ಬರುತ್ತದೆ.

799. ಅರಸನೋಲೈಸುವರೆ, ಕರಭೀತಿ ಬೈಕೈಯು !
ಅರಸುಕರಿಯುರಗನೊಳೆಚ್ಚರಿಲ್ಲದೊಡೆ,
ತ್ವರಿತದಿಂ ತೊಲಗು ! ಸರ್ವಜ್ಞ.

*Great caution necessary in the king's service.*

800. ಅನವರತವಗಲದಲೆ, ಜನಪತಿಯನೋಲೈಸು !
ಧನವಕ್ಕು, ತೇಜ ಹಿರಿದಕ್ಕು, ವೈರಿಯು
ತನಗೆ ಸಖನಕ್ಕು. ಸರ್ವಜ್ಞ.

*Royal service very profitable.*

801. ಯಂತಪ್ಪ[1]ನಾದರೂ, ಮಂತ್ರಿಯ ಹಗೆ ಸೊಲ್ಲಾ ;
ಯಂತಕ್ಕು[2]ಮರಸು ಮುನಿದರೆ, ಯಾಮಂತ್ರಿ
ಅಂತಕನಕ್ಕು. ಸರ್ವಜ್ಞ

*The enmity of a royal minister very ruinous.*

1. ಯಂಥವನಾದರೂ. 2. ಹ್ಯಾಗಾಗುವದು ? ಮುಂದೆ ಹೇಳುತ್ತಾನೆ.

802. ಮಂತ್ರಿಯಾ ಹಗೆ, ನೃಪನ ಕಾಂತಿಯಾ ಸಮಗೋಷ್ಟಿ,
ಮಂತ್ರವಿಲ್ಲದ[1]ನೊಡನಾಟವಿವು ತನ್ನ
ಅಂತಕಾಲಕ್ಕೆ[2] ಸರ್ವಜ್ಞ.

*The minister's enmity, familiarity with the queen your ruin.*

1. ಇಲ್ಲದವನ, 2. ಬರುತ್ತವೆ.

803. ಅರಗು ಕಲ್ಲೂ ಕೂಡಿ ನೆರೆ ಯಕ್ಕ್ಯ ಗೆಲುವಂದ,[1]
ಅರಮನೆಯು ಕಂಡ ಯಧಮರು ವುತ್ತಮರ
ನೆರೆಗೆಲುವರ್ಯೈಯು ! ಸರ್ವಜ್ಞ.

Shell-lac and stone, good and base courtiers.

ಅರಗು ಹೆಚ್ಚಿನದು ಆದರೂ ಕಲ್ಲು ಅದಕ್ಕೆ ತಾಗಿದರೆ ಅದು ಒಡೆಯುವದು ಹಾಗೆ ಅಧಮರಾದರೂ ಅರಮನೆಯ ಸಂಗತಿ ಬಲದಿಂದ ತಮಗಿಂತ ಒಳ್ಳೆಯವರನ್ನು ಗೆಲ್ಲುತ್ತಾರೆ.
1. ಗೆಲ್ಲುವ ರೀತಿಯಾಗುವದು.

804. ಪರನಾರಿಸೋದರನು ವರಶತ್ರುದಲ್ಲಣನು
ಖರಪಾಪಭಯ ಹೊರೆವ[1] ಗುಣಿ ಯಹ ನೃಪಗೆ
ಸ್ಥಿರವಿಹಳು[2] ಲಕ್ಷ್ಮಿ ಸರ್ವಜ್ಞ.

Properties of a good king.

1. ತಾಳುವ=ಕಾಯುವ. 2. ನಾನಾ ಸೌಭಾಗ್ಯವನ್ನು ದೇವಿಯನ್ನು ಮಾಡಿಕೊಂಡಿರುತ್ತಾರೆ.

805. ಹೊನ್ನು ಮುನ್ನಿತವಿಲ್ಲ,[1] ಮನ್ನಣೆಯು ಪಿರಿದಿಲ್ಲ,
ಬಿನ್ನಪ ಕೇಳದರಸಿನೋಲಗಕ್ಕಿಂತ
ಸನ್ಯಾಸ ಲೇಸು ಸರ್ವಜ್ಞ.

A hermitage better than the court of a king without honour.

1. ಮುಂಚೆ ಇಲ್ಲ.

806. ಬಂದವರನ್ನರಿಯನು; ನಿಂದವನ್ನುಡಿಸನು ;
ಹಂದಿಯು ಗಜವ ಸರಿ ಯೆಂಬನೋಲಗವು
ಯೆಂದಿಗೂ ಬೇಡ ! ಸರ್ವಜ್ಞ.

Away with kings, who do not know how to discern men.

1. ಷಷ್ಟಿ. ಹೀಗೆ ಅನ್ನುವ ಅರಸನ ಮುಂತ.

807. ನುಡಿಯುಪಾಲಿಸಿ[1] ನುಡಿಯೆ ನುಡಿಯುವದು ಜಗವೆಲ್ಲ;
ನುಡಿದರೇ, ಕೆರಳಿ ಕಿಡಿ ಯಹ ನೃಪನ ತಾ[3]
ನುಡಿಸುವರೆ[2] ಇಲ್ಲ; ಸರ್ವಜ್ಞ.

Nobody will speak to a king who gives no answer.

1. ಮಾತಾಡಿಸಿದರೆ ಮಾತಾಡುತ್ತಾರೆ. 2. ಮಾತಾಡಿಸುವದಿಲ್ಲ. 3. ತಾವು.

808. ಅಪಮಾನದೂಟವೆಂದುಪವಾಸವೇ ಲೇಸು
ನೃಪನೈದೆ ಬಡಿವ ವೊಡ್ಡೋಲಗಕ್ಕಿಂತ
ತಪವೆ ಲೇಸೆಂದ ಸರ್ವಜ್ಞ.

*Better to live an ascetic, than at the court of an insolent king.*

809. ನಾಡೆಂಬ ದೇಹಕ್ಕೆ ರೂಢಿಪತಿಯೇ ಪ್ರಾಣ;
ನಾಡಳಿಯೆ, ರೂಢಿಪತಿ ಕೆಡಗು, ಅರಸಳಿಯೆ,
ನಾಡೆಲ್ಲ ಕೆಡಗು; ಸರ್ವಜ್ಞ.

*The king the life, the country the body.*

810. ಬಡವನೊಳ್ಳೆಯುವಮಾತ ನುಡಿವರಲ್ಲೆಂಬುವರು;
ಪೊಡವೀಶ ಜೊಲ್ಲೊಡನೆ ತಾ ಕೂಗಿದರೆ,
ಕಡು ಮೆಚ್ಚುತಿಹರು; ಸರ್ವಜ್ಞ.

*All are pleased with what kings say.*

1. ಜೊಲ್ಲು ಸೋರಿಕೊಳ್ಳುತ=ವು.

811. ಕುದರೆಯನ್ನೇರದೇ, ಕದನವನ ಜೈಸದೇ,
ಸುದತಿ ರೊಲುವೆ ಯರಿಯದಿಹಯರಸು ತಾ
ಶಿದಿಗಿಸೆಣದಂತೆ ಸರ್ವಜ್ಞ.

*An unwarlike king a corpse on a bier.*

---

## ON BENEFICENCE AND GIVING ALMS.

### 2. ದಾನ ಪದ್ಧತಿ.

812. ಅಂನವನು ಯಿಕ್ಕುವದು; ನಂನಿಯನು ನುಡಿಯುವದು,
ತಂನಂತೆ ಪರರ ಬಗೆದಡೆ, ಕೈಲಾಸ
ಬಿಂನಣವಕ್ಕು; ಸರ್ವಜ್ಞ.

*To him, who thinks of others as of himself, Heaven sure.*

813. ಕೊಟ್ಟದ್ದು ತನಗೆ ಬೈಚಿಟ್ಟದ್ದು; ಪರರಿಂಗೆ
ಕೊಟ್ಟದ್ದು ಕೆಟ್ಟತೆನ ಬೇಡದು ಮುಂದೆ
ಕಟ್ಟಿಹುದು ಬುತ್ತಿ; ಸರ್ವಜ್ಞ.

*Alms given, food prepared for a journey.*

814. ಹೆಂಡರು ಮಕ್ಕ[1]ಳಿಗೆಂದ್ದಂಡಿಸದಿರು ದೇಹವ !

*If you do not give and enjoy your wealth, others will get it.*

ಕಂಡೆ[2] ವಸ್ತುವನುಕೊಡದುಣದೆ ಬೈಚಿಡಲು
ಕಂಡರಿಗಹದು ; ಸರ್ವಜ್ಞ.

1. ಅವರಿಗಾಗಲೆಂದು ನೀನು ಕಷ್ಟಪಟ್ಟು ಘಳಿಸ ಬೇಡ. 2. ಶಿಕ್ಕಿದ

815. ಈವಂಗೆ[1] ದೇವಂಗೆ ಯಾವದಂತರವೈಯ್ಯ ?

*No difference between a giver and God.*

ದೇವನು ಜಗದಿ ಕೊಡುವವನೆ, ಕೈಯಾರೆ
ಈವನೆ ದೈವ ; ಸರ್ವಜ್ಞ.

1. ಕೊಡುವವಗೆ.

816. ಮರಣವೆಂಬುದು ಸತ್ಯ, ಹರನಾಣೆ ! ಹುಸಿಯಲ್ಲ;

*Death certain: give alms!*

ತರುಣಿಯರಿಗಿರಿಸೆ, ಪರರುಂಬರದರಿಂ
ವರದಾನವ ಗೈ ! ಸರ್ವಜ್ಞ.

817. ಆನೆಯನ್ನೇರುವರೆ, ದಾನವಂ ಮಾಡುವದು ;

*Will you be happy in this and the other world? give to the hungry!*

ಭಾನುಮಂಡ[1]ಲವಡರುವರೆ ; ಹಸಿದರಿಗೆ
ನೀನೊಲಿದಿಕ್ಕು ! ಸರ್ವಜ್ಞ.

1. ಅದನ್ನು ತಟ್ಟಿ ಸ್ವರ್ಗಕ್ಕೆ ಹೊಗುತ್ತಾರೆ.

818. ಉತ್ತಮದ ದೇವಾಂಗವಸ್ತ್ರವನ್ನುಡುವರೆ,

*If you want good raiment, &c., give always!*

ಮುತ್ತು ಮಾಣಿಕವನಿಡುವಡೆ, ಮಾಡು ನೀ
ನಿತ್ಯದಾ[1]ನವನು ! ಸರ್ವಜ್ಞ.

1. ತಾವು ಉಂಣುವ ಎಲ್ಲಾ ಪದಾರ್ಥಗಳಲ್ಲಿ (ಅಕ್ಕಿ ಹಿಟ್ಟು ಮುಂತ.) ಒಂದು ಭಾಗ ತೆಗದಿಟ್ಟು ಒಂದು ತಿಂಗಳು ಆದಮೇಲೆ, ಅದನ್ನೂ ತನ್ನ ಯೋಗ್ಯತಾನುಸಾರವಾದ ದಕ್ಷಣೆಯನ್ನು ಕೊಡಬೇಕು.

819. ಶಿರಿ ಬಂದ ಕಾಲಕ್ಕೆ ಕರದು ದಾನವ ಮಾಡು !

*Give when you have, and heaven will be near.*

ಪರಿಣಾಮವಕ್ಕು, ಪದವಕ್ಕು ಸ್ವರ್ಗ
ನೆರೆಮನೆ ಯಕ್ಕು ; ಸರ್ವಜ್ಞ.

820. ಭಿಕ್ಷವೆಂದವರಿಗೇ ಭಿಕ್ಷವನ್ನು ನೀಡಲು,
ಅಕ್ಷಯಪದವು ತನಗಕ್ಕು ಯಿಲ್ಲವೆನೆ,
ಭಿಕ್ಷವನೆ ಯಕ್ಕು ; ಸರ್ವಜ್ಞ.

Give to beggars! Else you yourself will become a beggar.

821. ಆಗ ಬಾ ! ಈಗ ಬಾ ! ಹೋಗಿ ಬಾ ! ಯನ್ನದೇ,
ಆಗಲೇ ಕರೆದು ಕೊಡುವನಾಧರ್ಮ ಸೊಂ
ನಾಗದೆ ಬಿಡದು ; ಸರ್ವಜ್ಞ.

Give without delay!

## ILLIBERALITY.

### 1. ದಾನಹೀನ ಪದ್ಧತಿ.

822. ಉಳ್ಳಲ್ಲಿ ವುಣಲಿಲ್ಲ ; ವುಳ್ಳಲ್ಲಿ ವುಡಲಿಲ್ಲ ;
ವುಳ್ಳಲ್ಲಿ ದಾನ ಗೊಡದವನ ವಡವೆಯು
ಕಳ್ಳಗೆ ನೃಪಗೆ ; ಸರ್ವಜ್ಞ.

The wealth of the illiberal will go to thieves, to the king.

823. ಉಂಣಿಕೆಚ್ಚಲೊಳಿರ್ದು ವುಂಣದದು ನೊರೆಹಾಲ ;
ಪುಣ್ಯವ ಮಾಡಿ ವುಣಲೊಲ್ಲದವನಿರವು
ವುಂಣಿಗು ಕಷ್ಟ ಸರ್ವಜ್ಞ.

An illiberal man is worse off than a tick.

824. ಯಿಲ್ಲವೆಂದರೆ, ಯತ್ತ ಬಲ್ಲ ಠಾವಿಗೆ ಹೋಹ ;
ಯಿಲ್ಲವೆನಲೊಲ್ಲ ಕೂಡಲೊಲ್ಲದ ಪಾಪಿ
ಕೊಲ್ಲದೆ ಕೊಂದ ; ಸರ್ವಜ್ಞ.

A sinner, who will not say "no!" and will not give.

825. ಕಟ್ಟಿದಂತಾಯುಧವು ಯಟ್ಟಿ ಬಂದಿರಿಯುವದೆ ?
ಕೊಟ್ಟೆಹೆನೆಂದು ಕೊಡಲೊಲ್ಲದನ ಮಾತು
ಅಟ್ಟಿ ಯಿರಿದಂತೆ ; ಸರ್ವಜ್ಞ.

The word: "I gave," with slliberal men, a word that pursues and stabs.

826. ಹೊತ್ತಾರೆ ಬೈಗಿಂಗೆ ಮತ್ತೆ ಬಾರೆಂದೆನುತಾ
ಹೊತ್ತನ್ನೆ ಕೊಂದು ಹುಸಿಯುವನಿಗಿಂದಲು
ಸತ್ತಾತ ಲೇಸು; ಸರ್ವಜ್ಞ.

A dead man is to be preferred to a man who delays giving.

827. ಕೊಡುವರೇ, ಕೈಹಾಳೆ! ಯೆಡೆ ಯೇನು ದೂರವೇ?
ಯೆಡಿಯಾಡಿಸಿ ತಾ ಕೊಡದ ಲೋಭಿಮಾತು
ಕೊಡಲಿಯ ಘಾಯ; ಸರ್ವಜ್ಞ.

The refusal of a miser to give, is a wound made with an axe.

1. ಕೈ ಹಾಳಾಯಿತೇ=ಬಿದ್ದು ಹೋದ ಹಾಗಾಯಿತೇ. 2. ದ್ರವ್ಯ ಯಿಟ್ಟ ಜಾಗ ದೂರವೇ? ತರಲು ಸಲ್ಲದೇ?

828. ಆಡದೇ ಮಾಡುವನು ರೂಢಿಯೊಳಗುತ್ತಮನು;
ಆಡಿ ಮಾಡುವನು ಮಧ್ಯಮನಧಮ ತಾ
ನಾಡಿ ಮಾಡದವ; ಸರ್ವಜ್ಞ.

829. ಬೇಡದೇ ಮುನ್ನೀವ ರೂಢಿಯೊಳಗುತ್ತಮನು;
ಬೇಡಿದಡೀವ ಮಧ್ಯನು; ಯಧಮ ತಾ
ಬೇಡಿದಡೀಯ; ಸರ್ವಜ್ಞ.

He, who gives without speaking of it and without being asked for, is the best man.

830. ಇಚ್ಛೆ ಯರಿದಿತ್ತಂಥ ನುಚ್ಚೊಂದು ಮಾಣಿಕವು;
ಯಿಚ್ಛೆಯು ತೀರ್ದ ಬಳಕಿತ್ತ ಮಾಣಿಕವು
ನುಚ್ಚಿಗು ಕಷ್ಟ; ಸರ್ವಜ್ಞ.

Broken rice in its time, a ruby; a ruby out of time less than rice.

831. ಧರ್ಮದಾ ಕರ್ಮದಾ ಮರ್ಮವನು ನೋಡುವರೆ,
ಧರ್ಮಿ ಯಂದಳದಿ ಬರುತಿಹನದ ಹೊತ್ತು
ಕರ್ಮಿ ಬರುತಿರ್ಪ; ಸರ್ವಜ್ಞ.

The pious in the palanquin, the sinner carrying it.

832. ಕೊಟ್ಟು ಬಹ ಕಾಲದಲಿ ಕೊಟ್ಟು ವುಣ್ಣಲರಿಯದೆ
ಹುಟ್ಟಿಯುವಳಗೆ ಜೇನಿಟ್ಟು ಪರರಿಂಗೆ
ಕೊಟ್ಟು ಹೋದಂತೆ ; ಸರ್ವಜ್ಞ.

Wealth not enjoyed and used, honey in the comb.

833. ಮಾನವರ ದುರ್ಗುಣವ ನೇನೆಂದು ಬಣ್ಣಿಸುವೆ ?
ದಾನವ ಗೈ ! ಯನೆ ಕನಲುವರು ; ದಂಡವ
ಮೌನದಿ ಈವರು ; ಸರ್ವಜ್ಞ.

Men will not give alms, but readily pay fines.

834. ಬೇವು[1] ಫಲವಾಗಲದು ಸೇವಿಸಲಿಕ್ಯೋಗ್ಯವೇ ?
ಗಾವಿಲನ ಧನ ಘನವಾಗಿ ಬೈಚಿಟ್ಟ
ಠಾವಿಲೀ ಹೊಕ್ಕು ; ಸರ್ವಜ್ಞ.

The fruit of the neem tree and the wealth of the stupid miser are both useless.

1. ಬೇವಿನ ಫಲ ಕೆಲಸಕ್ಕೆ ಬಾರದೆ ತಾನು ಉದರಿದ ಸ್ಥಲದಲ್ಲಿ ಬಿದ್ದಿರುವಂತೆ ಅವನು ದಾನ ಧರ್ಮ ಕೊಡದಿರುವದರಿಂದ, ಅದು ತಾನಿಟ್ಟ ಸ್ಥಲದಲ್ಲಿ ಅನರ್ಥ ಇರುತ್ತದೆ.

## ON FATE.

### 4. ವಿಧಿವಾಸ ಪದ್ಧತಿ.

835. ಹರಿಯು ಹಂದ್ಯಾದಂದು ಹರನು ತಿರಿದುಂಡಂದು
ಹರನಜನ ಶಿರವರಿದಂದು ಲಿಖಿತವನು
ಬರೆದವರಾರು ? ಸರ್ವಜ್ಞ.

When Shiva beheaded Brahma, who wrote then the decrees of fate?

836. ಮುರಕ್ಕೆ ಆರಕ್ಕು ; ಆರು ಹನ್ನೆರಡಕ್ಕು ;
ಹೇರುವ ಗೊಡ್ಡು ಗೈನಕ್ಕು ; ಪಾಪ ತಾ
ಹಾರು ಕಾಲಕ್ಕೆ ; ಸರ್ವಜ್ಞ.

Three will become six, &c., when sin is going.

837. ಕೇಡು ಬಹ ಕಾಲಕ್ಕೆ ಕೂಡುವವೆ ಬುದ್ಧಿಗಳು ?
ಕೋಡಗನು ಲಂಕೆ ಸುಡವಾಗ, ರಾವಣ
ನಾಡ[1] ಕಾದಿರ್ದ ? ಸರ್ವಜ್ಞ.

When one is to be ruined, he will become stupid.

1. ಪ್ರಶ್ನೆ ಅಂತ ಭಾವಿಸ ಬೇಕು.

838. ಶೀತೆ ವೈದದು ಭಂಗ; ಶೇತು ಕಟ್ಟಿದ ಭಂಗ;
ಮಾತಿನ ಭಂಗ ರಾಮಂಗೆ; ರಾವಣಗೆ
ಯಾತರ ಭಂಗ? ಸರ್ವಜ್ಞ.

No defeat to those who are ruined.

839. ಯಲ್ಲ ತೀರ್ಥದೊಳಿರಲು, ಬಲ್ಲಿದರ ಮರೆ ಹೊಗಲು,
ಕಲ್ಲುಮಾಳಿಗೆಯೊಳಗಿರಲು, ವಿಧಿ ಬಂದು
ಕೊಲ್ಲುವದು, ಬಿಡದು; ಸರ್ವಜ್ಞ.

However pious and mighty one may be, no escape from fate.

## ON CASTE.

### 5. ಕುಲ ಪದ್ಧತಿ.

840. ಜಾತಿಹೀನರ ಮನೆಯ ಜೋತಿ ತಾ ಹೀನವೇ?
ಜಾತಿ ವಿಜಾತಿ ಯನ ಬೇಡ! ದೇವ ವಲಿ
ದಾತನೇ ಜಾತ[1] ಸರ್ವಜ್ಞ.

Does a light in the house of low caste people burn less?

1. ಅವನೇ ವುತ್ತಮ ಕುಲದವನು.

841. ಹೊಲಿಯಮಾದಿಗರುಂಡು ತೊಗಲಿಟ್ಟ ತೊಗಲೊಳು
ಕುಲಜರೆಂಬರಿಗೆ ವ್ರಣಲಾಯಿತು; ಹೊಲಿಯನ
ಕುಲವಾವುದ್ಯೆಯ? ಸರ್ವಜ್ಞ.

The shoemaker of the highest caste.

1. ಖಂಡ ತಿಂದ ಮೇಲೆ, ತೊಗಲನ್ನು ಕೆಲಸಕ್ಕೆ ಬರುವದಿಲ್ಲವೆಂದು ತೆಗದಿಡುತ್ತಾರೆ. ಅದು ಅವರಿಗೆ ಎಂಜಲನ್ನಿಸುತ್ತದೆ. ಜನಿವಾರ ಹಾಕಿ ಕೊಂಡವರು ಚಿಗರಿದ್ದರೆ ಕೃಷ್ಣಾಜಿನ ವೆಂದು ಅದನ್ನು ತಂದು ಅದರ ಮೇಲೆ ಕೂತು ಉಣ್ಣುತ್ತಾರೆ. ಅವರ ಎಂಜಲ ಇವರು ಬಳಿ ಸಿದ ಹಾಗಾಯಿತು.

842. ಧಾತು ಯೇಳನು ಕಲಿತು ಭೂತಪಂಚಕವಾಗಿ
ವ್ರೋತು ದೇಹವನು ಧರಿಸಿರ್ದ ಮನುಜಗೆ
ಜಾತಿ ಯತ್ತಣದು? ಸರ್ವಜ್ಞ.

The body of all men alike composed of the five elements;

843. ನಡೆಯೊದೊಂದೇ ಭೂಮಿ ; ಕುಡಿಯೊದೊಂದೇ ನೀರು ;
ಸುಡುವಗ್ನಿ ವಂದೆ ಇರುತಿರೆ; ಕುಲಗೋತ್ರ
ನಡುವೆ ಯತ್ತಣದು ? ಸರ್ವಜ್ಞ.

All walk on one ground, drink one water, are burnt with one fire;

844. ಹಸಿವು ತೃಷೆ ನಿದ್ರೆಗಳು ವಿಷಯ ಮೈಥುನ ಬಯಕೆ
ಪಶು ಪಕ್ಷಿ ನರಗೆ ಸಮವಿರಲು, ಕುಲವೆಂಬ
ಘಸಣೆ ಯತ್ತಣದು ? ಸರ್ವಜ್ಞ.

All feel hunger thirst; &c., whence caste?

845. ಎಲು ತೊಗಲು ನರಮಾಂಸ ಬಲಿದ ಚರ್ಮದ ಹೊದಿಕೆ
ಹೊಲೆರಕ್ತ ಶುಕ್ಲ ದಿಂದಾದ ದೇಹಕೆ
ಕುಲವಾವುದ್ಯೈಯ್ಯ ? ಸರ್ವಜ್ಞ.

What caste has this unclean body?

846. ಅವಯವಗಳೆಲ್ಲರಿಗೆ ಸಮನಾಗಿ ಇರುತಿರಲು,
ಭವಿಭಕ್ತ ಶ್ವಪಚಶೂದ್ರರು ಯೆಂತೆಂಬ
ಕವನ ಯತ್ತಣದು ? ಸರ್ವಜ್ಞ.

As all have the same body, whence these distinctions of high and low caste?

847. ಹೊಲಸುಮಾಂಸದ ಹುತ್ತ, ಯಲುವಿನ ಹಂದರವು,
ಹೊಲಹದ ತನುವಿನೊಳಗಿರ್ದುಮದರಲ್ಲಿ
ಕುಲವನರಸುವರು ; ಸರ್ವಜ್ಞ.

This body a shed made of bones, a hillock of flesh: why caste?

848. ಎಲುವಿನೀಕಾಯಕ್ಕೆ ಸಲೆ ಚರ್ಮವನು ಹೊದಿಸಿ
ಮಲ ಮೂತ್ರ ಕ್ರಿಮಿಗಳೊಳಗಿರ್ದ ದೇಹಕೆ
ಕುಲವಾವುದ್ಯೈಯ್ಯ ? ಸರ್ವಜ್ಞ.

What caste has this body filled with worms and filth.

849. ಬಂದು ಆವಿಗೆಯ ಭಾಂಡೊಂದೊಂದು ಭೋಗವನು
ಅಂದದಿ ಸಂದುವಡದು[1] ಹಂಚಾದಂತೆ,
ಬಿಂದುವಿನ ದೇಹ ; ಸರ್ವಜ್ಞ.

This body an earthen pot, which, used for a while, is broken into potsherds.

1. ಭೋಗವನ್ನು ಪಡೆದು (ಪಟ್ಟು).

850\. ಕುಲಗೆಟ್ಟು, ವರಚಿಂತೆಯೊಳಗಿರ್ಪರಂತಲ್ಲ;
ಕುಲಗೆಟ್ಟು ಶಿವನ ಮರೆಹೊಕ್ಕ ಋಷಿಗಳು
ಕುಲವಾದರ್ಕೈಯ್ಯ! ಸರ್ವಜ್ಞ.

The greatest saints have not observed caste rules.

851\. ಯಾತರ ಹೂವಾದರು, ನಾತರೆ, ಅದು ಸಾಲದೆ?
ಜಾತಿವಿಜಾತಿ ಯನ ಬೇಡ! ದೇವನೊಲಿ
ದಾತನೇ ಜಾತ; ಸರ್ವಜ್ಞ.

Any flower, if it has a good smell only, is acceptable.

## ON PRIESTS.

### 6. ಗುರು ಪದ್ಧತಿ.

852\. ಒಳ್ಳಗುರುಡರು[1] ಕೂಡಿ ಹಳ್ಳವನ್ನು[2] ಬಿದ್ದಂತೆ,
ವಳ್ಳೆಯಗುರುವಿನುಪದೇಶವಿಲ್ಲದಿರೆ,
ಯಲ್ಲಿಯ ಮುಕ್ತಿ? ಸರ್ವಜ್ಞ.

Blind men, though many, will fall: men without a priest.

1\. ಒಬ್ಬರನ್ನೊಬ್ಬರು ಹಿಡಕೊಂಡು ಹೋಗುತ್ತಾರೆ. 2. ಹಳ್ಳದಲ್ಲಿ.

853\. ಶ್ವಾನ ತೆಂಗಿನ ರುಚಿಯ ತಾನೇನೂ ಬಲ್ಲದು?
ಹೀನಮನದವಗುಪದೇಶವಿತ್ತರ್ಗೆ
ಹಾನಿ ತಪ್ಪುವದೆ? ಸರ್ವಜ್ಞ.

A dog cannot relish the cocoa-nut; the bad cannot learn.

854\. ಸುರತರುವು ಮರನಲ್ಲ; ಸುರಭಿ ಯೊಂದಾವಲ್ಲ;
ಪರುಸ[1] ಪಾಷಾಣದೊಳಲ್ಲ ಗುರುರಾಯ
ನರರೊಳಗಲ್ಲ; ಸರ್ವಜ್ಞ.

A true priest not from among men.

1\. ಈ ಕಲ್ಲು ಲೋಹಕ್ಕೆ ಮುಟ್ಟಿಸಿದರೆ, ಅದು ಭಂಗಾರವಾಗುವದಂತೆ. ಮೋಕ್ಷದ ಹಾದಿ ತೋರಿಸುವ ಗುರು ಮನುಷ್ಯರೊಳಗಲ್ಲ ಹೌದು, ದೇವರು ತಾನೇ ಆ ಗುರು.

855. ಮಂಡೆ ಬೋಳಾದಡಂ, ದಂಡಕೋಲ್ವಿಡಿದಡಂ,
ಹೆಂಡತಿಯು ಬಿಟ್ಟು ನಡೆದಡಂ, ಗುರುಮುಖ
ಕಂಡ[1]ಲ್ಲದಿಲ್ಲ ; ಸರ್ವಜ್ಞ.

An ascetic life not sufficient, a priest is necessary.

1. ಸನ್ಯಾಸಿಯಾದರೂ ಗುರುವಿನಿಂದಲ್ಲದೆ ಮೋಕ್ಷವಿಲ್ಲ.

856. ಊರಿಗೆ ದಾರಿಯನ್ನು ಯಾರು ತೋರಿದಡೇನು ?
ಸಾರಾಯದಾ ನಿಜವ ತೋರುವ ಗುರುವು
ಯಾರಾದಡೇನು ! ಸರ್ವಜ್ಞ.

If a man shows you only the road, whatever he may be, no matter: so with priests.

857. ಮೊಸರು ಕಡೆಯಲು, ಬೆಣ್ಣೆ ಮಸೆದು ತೋರುವ ದೆರದಿ,
ಹಸನುಳ್ಳ ಗುರೋಪದೇಶದಿಂ ಮುಕ್ತಿ
ವಶವಾಗದಿಹುದೆ ? ಸರ್ವಜ್ಞ.

By churning butter is produced; by the instruction of priests salvation.

858. ತಾಪದಲಿ ಸಂಸಾರಕೂಪದಲಿ ಬಿದ್ದವರ
ಕೂಪದಿಂ ಪಾರುಮಾಡುವ ಗುರುಕರುಣ
ಸೋಪಾನ, ಕಂಡ್ಯಾ ! ಸರ್ವಜ್ಞ.

The mercy of priests a flight of steps leading up from the pit of this life.

859. ಬೆಟ್ಟಕರ್ಪೂರವುರಿದು, ಬೊಟ್ಟಿಡಲು ಬೂದಿಲ್ಲ,
ನೆಟ್ಟನೆ ಗುರುವಿನುಪದೇಶದಿಂ ಕರ್ಮ
ಮುಟ್ಟವು ; ನೋಡ ! ಸರ್ವಜ್ಞ.

Sin, a mass of camphor: the instruction of priests, a fire to burn it.

860. ಗುರುರಾಯನುಪದೇಶ ದೊರಕೊಂಡಿತಾದಡೇ,
ಹರಿವುದು ಪಾಪವೆಂತೆನಲು, ವಜ್ರದಿಂ
ಗಿರಿಯು ಹೊಯಿದಂತೆ, ಸರ್ವಜ್ಞ.

Sin a mountain: the instruction of priests a diamond to cut it.

861. ಹೊಲಬನರಿಯದ ಗುರುವು, ತಿಳಿಯಲರಿಯದ ಶಿಷ್ಯ,
ನೆಲೆಯನಾರಯ್ಯದುಪದೇಶವಂಧಕನು
ಕೊಳನ ಹೊಕ್ಕಂತೆ ; ಸರ್ವಜ್ಞ.

An ignorant priest and a stupid disciple, a blind man going into a lake;

862. ಭಕ್ತಿಯಿಲ್ಲದ ಶಿಷ್ಯ, ಗೊತ್ತು ಗೆಟ್ಟುಪದೇಶ

sowing rice in a field, which is dried up. ಬತ್ತಿದ ಕೆರೆಯು ಬೈಲಲ್ಲಿ ರಾಜಾನ್ನ

ಬಿತ್ತಿ ಬೆಳದಂತೆ; ಸರ್ವಜ್ಞ.

863. ಹಸಿಯು ಸಮಿಧೆಯು ತಂದು ಹೊಸದರುಂಟೇ ಕಿಚ್ಚು ?

No fire from green wood; no use from instruction to a sensual man. ವಿಷಯಗಳುಳ್ಳ ಮನುಜಂಗೆ ಗುರುಕರುಣ

ವಶವರ್ತಿಯುಹುದೇ ? ಸರ್ವಜ್ಞ.

ON GOD.

7. ದೈವ ಪದ್ಧತಿ.

864. ಆದೇವ ಈದೇವ ಮಾದೇವನೆನ ಬೇಡ !

There is only one God, who preserves all creatures. ಆದೇವರ ದೇವ, ಭುವನಪ್ರಾಣಿಗಳ

ಗಾದಪನೆ ದೇವ ; ಸರ್ವಜ್ಞ.

865. ಹತ್ತು ಭವವನು ಯೆತ್ತಿ ಯೆತ್ತು ಯುಮ್ಮಿಯು ಕಾದು

Vishnoo, no god. ಮತ್ತೆ ಪಾಂಡವರಿಗಾಳಾದ ಹರಿಯು ತಾ

ನೆತ್ತಣ ದೈವ ! ಸರ್ವಜ್ಞ.

866. ಹೆತ್ತಾತನರ್ಜುನನು ; ಮುತ್ತೈಯ್ಯ ದೇವೇಂದ್ರ,

Arjuna, Indra, Vishnu: destitute of divine power. ಮತ್ತೆ ಮಾತುಳನು ಹರಿ ಯಿರೆ, ಯಭಿಮನ್ಯು

ಸತ್ತನೇಕೈಯ್ಯ?[1] ಸರ್ವಜ್ಞ.

1. ಅವನಿಗೆ ಆಶ್ರಯು ಕೊಟ್ಟವರು ದೆವರಲ್ಲ.

867. ಹಾದರದ ಕಥೆಯನ್ನು, ಸೋದರರ ವಧೆಯನ್ನು

The Ramayana, a story of fornication; the Bharata, a story of murder. ಆದರಿಸಿ ಪುಣ್ಯಕಥೆ ಯೆಂದು ಕೇಳುವ

ಮಾದಿಗರ ನೋಡು ! ಸರ್ವಜ್ಞ.

868. ಒಬ್ಬನಲ್ಲದೆ ಜಗಕೆ ಇಬ್ಬರುಂಟೆ ? ಮತ್ತೆ
ವಬ್ಬ ಸರ್ವಜ್ಞ ಕರ್ತನು ಜಗಕೆಲ್ಲ
ವೊಬ್ಬನೆ ದೈವ ; ಸರ್ವಜ್ಞ.

There is only one omniscient God.

869. ಹುಟ್ಟಿಸುವನಜನೆಂಬ ಕಷ್ಟದ ನುಡಿ ಬೇಡಾ !
ಹುಟ್ಟಿಪನ ಶಿರ ತಾನರಿಯೆ[1], ಮತ್ತೊಂದು
ಹುಟ್ಟಿಸನೇಕೆ ? ಸರ್ವಜ್ಞ.

Why did Brahma, the creator, not restore that head which he had lost?

1. ಅಹಂಕಾರ ತೋರಿಶಿದರಿಂದ, ಶಿವನು ಕಡಿದನು.

870. ಬೊಮ್ಮ ನಿರ್ಮಿಪನೆಂಬ ದುರ್ಮತಿಯೆ, ನೀ ಕೇಳು !
ಬೊಮ್ಮನ ಸತಿಗೆ ಮೂಗಿಲ್ಲವಾಮೂಗ[1]
ನಿರ್ಮಿಸನೇಕೆ ? ಸರ್ವಜ್ಞ.

Why did he not give his wife a nose?

1. ದಕ್ಷ ಒಂದಾನೊಂದು ದಿವಸ ಬ್ರಹ್ಮನ ಸಭಾಂತರಕ್ಕೆ ಬಂದನು. ಅಲ್ಲಿ ಈಶ್ವರ ಕುಳಿತಿದ್ದನು. ದಕ್ಷನನ್ನು ಕಂಡು ಎಲ್ಲರು ಪ್ರತ್ಯುತ್ಥಾನ ಮಾಡಿದರು. ಈಶ್ವರ ಮಾಡಲಿಲ್ಲ. ಅದಕ್ಕೆ ದಕ್ಷ ಸಿಟ್ಟು ಮಾಡಿಕೊಂಡು ಹೋದನು. ಇತ್ತ ಕೆಲವು ದಿವಸದ ಮೇಲೆ ಯಜ್ಞ ಮಾಡಿದಾಗ, ತನ್ನ ಎಲ್ಲ ಹೆಂಣು ಮಕ್ಕಳನ್ನು ಕರಿಸಿ ಕೊಂಡನು. ಈಶ್ವರನ ಸತಿಯಾದ ತನ್ನ ಹಿರೇಮಗಳನ್ನು ಕರಿಸಲಿಲ್ಲ. ಆಕೆ ತಾನಾಗಿ ಹೋದಳು. ಆಗ್ಯೆ ದಕ್ಷ ಆಕೆಯನ್ನು ಸತ್ಕರಿಸದೆ ಆಕೆಯ ಗಂಡನಾದ ಈಶ್ವರನನ್ನು ನಿಂದಿಸಿದನು. ಅದನ್ನು ಕೇಳಲಾರದೆ ಆಕೆ ಆ ಯಜ್ಞದ ಕೊಂಡದಲ್ಲಿ ಬಿದ್ದು ಸತ್ತಳು. ಈ ಸುದ್ದಿ ಈಶ್ವರ ಕೇಳಿ ಸಿಟ್ಟು ಬಂದು ತನ್ನ ತಲೆಯ ಜಡೆ ಕಿತ್ತಿ ನೆಲಕ್ಕೆ ಅಪ್ಪಳಿಸಿದನು. ಅದರಿಂದ ವೀರಭದ್ರನು ಹುಟ್ಟಿದನು. ಅವನಿಗೆ ದಕ್ಷನನ್ನು ಸಂಹಾರ ಮಾಡ ಬೇಕೆಂಬ ಅಪ್ಪಣೆ ಆಯಿತು. ಆದಕಾರಣ ವೀರಭದ್ರನು ಅಲ್ಲಿಗೆ ಹೋಗಿ ಅಲ್ಲಿ ನೆರದಂಥ ದೇವತೆಗಳನ್ನ ಅವಮಾನ ಭಂಗ ಮಾಡಿದನು. ಆಗ ಸರಸ್ವತಿಯ ಮೂಗು ಹೋಯಿತು.

871. ಗುಡಿಯ ಬೋದಿಗೆ[1] ಕಲ್ಲು ; ನಡುರಂಗ ತಾ ಕಲ್ಲು ;
ಕಡೆಮೂಲಿ ಶರಗು ತಾ ಕಲ್ಲು ; ವರವನು
ಕೊಡುವಾತ ಬೇರೆ ; ಸರ್ವಜ್ಞ.

The giver of blessings not a stone.

1. ಕಲ್ಲು ದೇವರಾದರೆ ಬೋದಿಗೆ ಮುಂತಾದದ್ದು ಸಹ ದೇವರಾಗಿರಬೇಕು.

872. ಅಕ್ಕರವು ಲೆಕ್ಕಕ್ಕೆ ; ತರ್ಕ ತಾ ವಾದಕ್ಕೆ ;
ಮಿಕ್ಕ ವೋದುಗಳು ತಿರುಪೆಗೆ[1] ; ಮೋಕ್ಷಕೆರ
ಡಕ್ಕರವೆ[2] ಸಾಕು ; ಸರ್ವಜ್ಞ.

Only two letters required for salvation, namely (God.)

1. ತಿರುಪೆ ದೊರಕಿಸಿ ಕೊಳ್ಳುವದಕ್ಕೆ ಓದುವ ಚಮತ್ಕಾರವಿರಬೇಕು. 2. ದೇವಕಿ.

873. ಭ್ರಷ್ಟದೈವಕೆ ಬಾಯಬಿಟ್ಟಲ್ಲಿ ಫಲವಿಲ್ಲ,
ಸೃಷ್ಟಿಗೀಶ್ವರನ ಭಜಿಸಿದರೆ, ಮುಂದಕ್ಕೆ
ಇಷ್ಟಾರ್ಥವೀವ ; ಸರ್ವಜ್ಞ.

The worship of false gods is vain.

874. ಕರ್ಮದಿಂದವೆ ಹರನು ಚರ್ಮವ[1] ತಾನುಟ್ಟನು ;
ಹೊಮ್ಮರಾಳನಜನಾದನು[2] ; ಗೋವಿಂದ
ಯುಮ್ಮೆಯ[3] ಕಾದಂ ; ಸರ್ವಜ್ಞ.

Brahma, Vishnoo, Shiva, not free from sin.

1. ಗಜಾಸುರನನ್ನು ಕೊಲ್ಲುವಾಗ ಅವನು ತನ್ನ ಗುರುತು ನೀನು ಧರಿಸು ಎಂದು ಈಶ್ವರನನ್ನು ಬೇಡಿಕೊಂಡದ್ದಕ್ಕೆ ಇವನು ಒಪ್ಪಿಕೊಂಡು ಅವನ ದೇಹದ ಚರ್ಮ ಸುಲಿದು ಉಟ್ಟು ಕೊಂಡನು. 2. ಈಶ್ವರನ ಲಿಂಗದ ಮೇಲ್ಭಾಗವ ನೋಡಲಿಕ್ಕೆ ಹೋಗುವಾಗ್ಯೆ. 3. ನೋಡು ಭಾಗವತ.

875. ನರಸಿಂಹನವತಾರ ಹಿರಿದಾದದ್ಭುತವು ; ವು
ಗರಿಂದ[1] ಶರಭ ಕೊಲ್ಲುವಾಗ, ಹರಿಯೂರ
ನರಿಯಂದವಾದ[2] ; ಸರ್ವಜ್ಞ.

Narasinha killed by Sharabha.

1. ತನ್ನ ಕೆಲಸವಾದ ಮೇಲೆ ನರಸಿಂಹನು ತನ್ನ ಉಗ್ರವೇಷ ಬಿಡದೆ ಲೋಕಕ್ಕೆ ಉಪದ್ರಮಾಡಲಾಗಿ, ಶಿವನು ಈ ಅವತಾರ ತಕ್ಕೊಂಡು ಅವನನ್ನು ಶೀಳಿ ಹಾಕಿದನು. 2. ಬಲವಿಲ್ಲದ್ದು.

876. ಹಿರಿಯಬೊಂಮನು ಕೆಂಚ ; ಕಿರಿಯಹರಿ ತಾ ಕರಿಗ ;
ಪುರಹರನು ಶುದ್ಧಧವಳಕನಿವರುಗಳು
ಸರಿಯೆ ದೈವಕ್ಕೆ ? ಸರ್ವಜ್ಞ.

Brahma of a red, Vishnu of a dark, Shiva of a white colour.

## ON THE WORSHIP OF GOD AND ON PIETY.

### 8. ಭಕ್ತಿ ಪದ್ಧತಿ.

877. ಕಾಜು ವೀಳೆಯಕಿಂಬು ; ಲೋಚನಾಂಕಿತಕಿಂಬು,
ಕೂಜುಗಳಿಂಬು ಮಾಳಿಗೆಗೆ ಭಕ್ತಗೈ
ದಾಚಾರವಿಂಬು ; ಸರ್ವಜ್ಞ.

As these three: so is pious practice to a worshipper.

1. ಐದೆ=ಚಂದಾಗಿ.

878. ಯೆಣಿಸುತಿರ್ಪುದು ಬಾಯಿ ; ಪೋಣರುತಿರ್ಪುದು ಬೆರಳು ;
ಕ್ಷಣಕೊಂವೆ ವೊಂದನೆಣಿಸುವ ಜಪಕೊಂದು
ಕುಣಿಕೆಯುಂಟೆಂದ ; ಸರ್ವಜ್ಞ.

He knows only by the noose in the rosary, that his prayer is finished.

879. ಕಡುಭಕ್ತನಾಗಲೀ, ಜಡಧಾರಿಯಾಗಲೀ,
ನಡೆವ ವೃತ್ತಿಯಲಿ ನಡೆಯದೊಡಾಭಕ್ತಿ
ಹುಡಿಸಂಘವೆಂಬ ; ಸರ್ವಜ್ಞ.

A piety only in words and ceremonies is like dust.

880. ಯೆಣಿಸುತಿರ್ಪುದು ಬೆರಳು ; ಗುಣಿಸುತಿರ್ಪುದು ಜಿಂಹ್ವೆ
ಮನ ಹೋಗಿ ಹಲವೆಣಿಸಿದರೆ, ಹಾಳೂರ
ಶುನಕನೆಂತಕ್ಕು ; ಸರ್ವಜ್ಞ.

A man, who, while praying, thinks of other things—a dog.

881. ವಸೆದೆಂಟು ದಿಕ್ಕಿನಲಿ ಮಿಸುನಿಗಿಣಿಲುಗಿಂಡಿ
ಹುಸಿದು ಮಾಡುವವನ ಪೂಜೆ ಭೋಗಾರ
ಪಸರವಿಟ್ಟಂತೆ ; ಸರ್ವಜ್ಞ.

Vain worship like putting up a shop.

882. ಬಟ್ಟೆಯಾ ಕಲ್ಲಿಂಗೆ ವೊಟ್ಟೆ ಪತ್ರೆಯನಿಟ್ಟು
ಕಟ್ಟಿದ ಲಿಂಗವಡಿಯಾಗಿ ಶರಣೆಂಬ
ಭ್ರಷ್ಟರಾ ನೋಡು ! ಸರ್ವಜ್ಞ.

Perverse practices of the Lingaites.

883. ಆದಿದೈವವನು ತಾ ಭೇದಿಸಲರಿಯದಲೇ,
ಹಾದಿಯಾ ಕಲ್ಲಿಗೆಡೆ ಮಾಡಿ ನಮಿಸುವ
ಮಾದಿಗರ ನೋಡು ! ಸರ್ವಜ್ಞ.

See these low men, making offerings to a stone.

884. ಬತ್ತಿ ಹೆತ್ತಪ್ಪವನು ಹತ್ತಿಸಿದ ಫಲವೇನು ?
ನಿತ್ಯನೆಲೆಗೊಳದೆ ಭಜಿಸುತಿರಲಾಪೂಜೆ
ಹತ್ತಿಗೇಡೆಂದ ; ಸರ್ವಜ್ಞ.

Lighting a wick before an idol, a waste of cotton and oil.

885. ಕಟ್ಟಲೂ ಬಿಡಲು ಶಿವಬಟ್ಟಲವ, ಕದ್ದನೇ[1] ?
ಕಟ್ಟಲೂ ಬೇಡ ! ಬಿಡ ಬೇಡ ! ಕಣ್ಮನವ
ಕಟ್ಟಿದರೆ, ಸಾಕು ! ಸರ್ವಜ್ಞ.

Is he a thief, that Lingaites tie their god to their necks ?

1. ಲಿಂಗ ಕಟ್ಟಿಕೊಂಡರೆ ಶಿವನನ್ನು ಕಳ್ಳನಂತೆ ಕಟ್ಟಿದ ಹಾಗಾಯಿತು.

886. ಇಂದುವಿನೊಳುರಿ ಯುಂಟೆ ? ಸಿಂಧುವಿನೊಳರಬುಂಟೆ ?
ಸಂದ[1] ವೀರನೊಳು ಭಯವುಂಟೆ ? ಭಕ್ತಗೆ
ಸಂದೇಹವುಂಟೆ ? ಸರ್ವಜ್ಞ.

Is fire in the moon? is doubt in the pious?

1. ಹೌದಾದ.

887. ಕೊಲುವ ಕೈಯೊಳು ಪೂಜೆ ; ಮೊಲುವ ಬಾಯೊಳು ಮಂತ್ರ ;
ಸಲೆ ಪಾಪವೆರದ ಮನದೊಳು ಪೂಜಿಪನು
ಹೊಲೆಯಗು ಕಷ್ಟ ; ಸರ್ವಜ್ಞ.

A man, whose thoughts, words, and actions are contrary to his worship.

888. ಅಳುತೇಳುತ, ಬೆರಳು ಚಾಳ, ಮಿಡಕುವ ಬಾಯಿ,
ಮೋಳದಳ ತೊಡಕ ಬಿಡದವನ ಜಪವದು
ಹಾಳುಮನೆಯಂತೆ ; ಸರ್ವಜ್ಞ.

The prayer of one, who lives in fornication, a desolated house.

889. ಸತಿಯುರಾದಡದೇನು ? ಸುತರಾಗಿ ಫಲವೇನು ?
ಶತಕೋಟಿ ಧನವ ಘಳಿಸೇನು ? ಭಕ್ತಿಯು!
ಸ್ಥಿತಿ ಯಿಲ್ಲದನಕ ಸರ್ವಜ್ಞ.

Wife, children, wealth—all in vain without piety.

## ON KNOWLEDGE.

### 9. ಜ್ಞಾನ ಪದ್ಧತಿ.

890. ಜ್ಞಾನವುಳ್ಳವನೊಡಲು ಭಾನುವಿನ ತೆರನಿಹುದು ;
ಜ್ಞಾನಿಲ್ಲದವನ ಕಾಯವು ಹಾಳೂರ
ಸ್ಥಾನದಿಂ ಕಡೆ ; ಸರ್ವಜ್ಞ.

The body of the wise like the sun; that of the unwise, a waste place.

891. ಬಲ್ಲೆನೆಂಬುವ ಮಾತು ಯಲ್ಲವು ಹುಸಿ ; ಕಾಣ
ಬಲ್ಲರೆ, ಬಲ್ಲೆನೆನ ಬೇಡ ! ಸುಮ್ಮನಿರ
ಬಲ್ಲವನೆ ಬಲ್ಲ ! ಸರ್ವಜ್ಞ.

He who knows to be silent, is a wise man.

892. ಚಂದನವ ಕರಗಿಸಲು ಬೆಂದು ಪರಿಮಳವಕ್ಕು ;
ಸಂದರಿವನರಿದ ಸತ್ಪುರುಷರು ತಾವು
ನೊಂದು ಸೈರಿಪರು ; ಸರ್ವಜ್ಞ.

Sandal-wood burnt, gives perfume; the wise suffering.

893. ಸಾವಿಂಗೆ ಸಂಮತಿಗೆ ಯಾವುದಂತರವೈಯು ;
ಸಾವು ತಾ ಸಮತಿಯೊಳಗಲ್ಲ ಕೋಪವ
ತಾವುದೆ ಸಂಮತಿ ; ಸರ್ವಜ್ಞ.

Compliance keeps down anger.

894. ಕೋಪವೆಂಬುದು ಕೇಳಿ[1] ! ಪಾಪದ ನೆಲೆಗಟ್ಟು ;
ಕೂಪದೊಳು ನೇಣು ಹರಿದಂತೆ ನರಕಕೆ
ಕೋಪಿ ತಾನಿಳಿವ ಸರ್ವಜ್ಞ.

An angry man, as if, the rope breaking, falling into a well, (goes to hell.)

1. ವಿಧಿ.

895. ಕಪ್ಪೆಗಳು ಮೀನುಗಳು ಯಿಪ್ಪುದದು ತೀರ್ಥವೇ ?
ತುಪ್ಪ ವಾಗರಕೆ ಸಲುವದು ; ಸತ್ಪುರುಷ
ನಿಪ್ಪುದೆ ತೀರ್ಥ ; ಸರ್ವಜ್ಞ.

Frogs and fishes are in the water: is that holy? The place of a good man is holy.

896. ಕಂಣಿನಿಂದಲೆ ಪುಣ್ಯ ; ಕಂಣಿನಿಂದಲೆ ಪಾಪ;
ಕಂಣಿನಿಂದ ಯಿಹಪರವಕ್ಕು ; ಲೋಕಕ್ಕೆ
ಕಂಣು ಕಾರಣ ; ಸರ್ವಜ್ಞ.

The eye, the cause of sin and virtue, and of the whole world.

897. ಸತ್ತು ಹೋದರೆ, ನಿನಗದೆತ್ತಣದು ಮೋಕ್ಷವೈ ;
ಸತ್ತು ಹೋಗದತಿ ಜೀವಿರಲು, ಮೋಕ್ಷದ
ಗೊತ್ತು ತಿಳಿ ! ಯೆಂದ; ಸರ್ವಜ್ಞ.

Seek salvation before you die!

898. ಜೊಳ್ಳು ಮನುಜರು ತಾವು ಸುಳ್ಳುಸಂಸಾರದೊಳು
ಮಳ್ಳಿಡಿದು ಮಾಯೆ ಯಂಬವಳ ಬಲೆಯೊಳು
ಹೊಳ್ಳ್ಯಾಡುತಿಹರು ; ಸರ್ವಜ್ಞ.

Men caught in the net of illusion.

899. ಯಂಣೆ ಬೆಂಣೆಯ ರಿಣವು , ಅನ್ನವಸ್ತ್ರದ ರಿಣವು ,
ಹೊಂನ್ಹಂಣಿನ ರಿಣವು ತೀರಿದಾಕ್ಷಣದಿ
ಮಂಣುಪಾಲೆಂದ ; ಸರ್ವಜ್ಞ.

Men, after enjoying what is due to them, return to the dust.

900. ಸತ್ಯಸದ್ಗುಣ ತೀರ್ಥ, ವುತ್ತಮರ ನಡೆತೀರ್ಥ ;
ಸತ್ಯರ ಸಂಗವದು ತೀರ್ಥ ; ಹರಿವ ನೀ
ರೆತ್ತಣ ತೀರ್ಥ ! ಸರ್ವಜ್ಞ.

Truth, conversation with the good, is holy water, not flowing water.

901. ಆನೆ ನೀರಾಟದಲಿ ಮೀನ ಕಂಡಂಜುವದೆ ?
ಹೀನಮಾನವರ ಬಿರಿನುಡಿಗೆ ಸತ್ಯದ
ಜ್ಞಾನಿ ಯಂಜುವನೆ ? ಸರ್ವಜ್ಞ.

An elephant not afraid of the fishes, nor the wise of the bad.

902. ಆನೆ ತಾ ತುಡಗಾಗೆ, ಜ್ಞಾನಿ ಮೂರ್ಖನುಮಾಗೆ ;
ಭೂನಾಥ ಜಾರನಾದರೆ, ಮಾಣಿಪುದು
ಮಾನವರಿಗಳವೆ ! ಸರ್ವಜ್ಞ.

If the wise become foolish who can stop them ?

903. ಆನೆ ಬೀದಿಯಲಿ ಬರೆ, ಶ್ವಾನ ತಾ ಬೊಗಳುವದು ;
ಶ್ವಾನನಂತಾನೆ ಬೊಗಳೆ, ಯಾನೆಯ ಯಭಿ
ಮಾನವೇ ಹಾನಿ ; ಸರ್ವಜ್ಞ.

If the elephant barks like the dog, his reputation is gone.

904. ಆನಿಗಂಜಿಕೆ ಯಾರೆ ? ಶ್ವಾನಗೆ ಸೊಬಗ್ಯಾಕೆ ?
ದಾನಿಗೆ ದೀನತನವ್ಯಾಕೆ ? ಜ್ಞಾನಿಗೆ
ಹೀನತನ ಯಾಕೆ ? ಸರ್ವಜ್ಞ.

Why fear to the elephant ? why deficiency to the wise ?

905. ಕಾಶಿ ಕಂಚಡಿ ಯಾಕೆ ? ಭಾಸುರದ ಜಡಿ ಯಾಕೆ ?
ಕೇಶ ಕಿತ್ತಿಕೊಳ್ಳಲ್ಯಾಕೆ ? ತ್ರೈಮಲದ[1]
ಆಶೆ ಬಿಡದನಕ ? ಸರ್ವಜ್ಞ.

All austerities in vain as long as there are worldly desires.

1. ವಿತ್ತೇಷಣ, ದಾರೇಷಣ, ಪುತ್ರೇಷಣ.

906. ಸಂನ್ಯಾಸ ತನಗೆಂಬುವನ್ಯಾಯನುಡಿ ಯಾಕೆ ?
ವುಂನತದೇವರಿರವರಿಯ[1] ; ತನ್ನೊಡಲ
ದನ್ಯಾಯದಿರವು ; ಸರ್ವಜ್ಞ.

Why an ascetic life, whilst one's own body is the very seat of sin.

1. ಸಂನ್ಯಾಸಿ ಕರ್ತವ್ಯವಾಗಿದೆ.

907. ಅಟ್ಟಡಿಗೆಯ ರುಚಿಯನು ಹುಟ್ಟು ತಾ ಬಲ್ಲದೇ ?
ಶ್ರೇಷ್ಟರು ಯೆಂದು ಯನ ಬೇಡ ! ಯರುಹಿನಾ
ಬಟ್ಟೆ ಬೇರೆಂದ ; ಸರ್ವಜ್ಞ.

The ladle cannot relish the meal: so ignorant men.

908. ಕುರಿ ಕಬ್ಬಿನೊಳು ಹೊಕ್ಕುವರಿವದೇ ತನಿರಸ ?
ಸೊರಗಣ ಸೋಗೆ ಯುಗಿವಂತೆ, ಜ್ಞಾನದಾ
ಕುರುಹು ಬೇರೆಂದ ; ಸರ್ವಜ್ಞ.

The sheep, which eats only the sugarcane flag: the ignorant.

909. ತನ್ನ ನೋಡಲಿ ! ಯುಂದು ಕನ್ನಡಿಯು ಕರೆವುದೇ ?
ತನ್ನಲ್ಲಿ ಗ್ಞಾನವುದಿಸಿದ ಮಹಾತ್ಮನು
ಕನ್ನಡಿಯುಂತೆ ; ಸರ್ವಜ್ಞ.

The wise, a mirror, which does not call "see me."

910. ತನ್ನ ತಾನರಿವವನ ಮುನ್ನ ಹೊದ್ದದು ಮಾಯೆ ;
ವುನ್ನತವಪ್ಪ ಗಜವೇರಿ ಬಪ್ಪವನು
ಕುನ್ನಿಗಂಜುವನೆ ? ಸರ್ವಜ್ಞ.

A wise man, like one riding on an elephant, is not afraid.

911. ಸತ್ಯವನ್ನರಿವರೇ ಸತ್ತ ಹಾಗಿರಬೇಕು ;
ಸತ್ಯವನರಿದುವುಸುರಿದರೆ, ಸತ್ತವರಿ
ಗತ್ತ ಹಾಗಕ್ಕು ; ಸರ್ವಜ್ಞ.

The wise are like the dead: if they talk it is as if weeping over the dead.

912. ಸತ್ತು ಹುಟ್ಟುವರೆಂಬ ಮಿಥ್ಯದಾ ನುಡಿ ಯಾಕೆ ?
ಬಿತ್ತಿದರೆ ಬೀಜ ಬೆಳವಂತೆ ಗಿಡ ತಾ
ಸತ್ತು ಹುಟ್ಟುವದೆ ? ಸರ್ವಜ್ಞ.

Does a tree, being decayed, spring up again? The dead not born again.

913. ಮುತ್ತು ನೀರಲಿ ಹುಟ್ಟಿ ಮತ್ತೆ ನೀರಪ್ಪುದೇ ?
ಸತ್ಯವನರಿದ ಗ್ಞಾನಿ ಸಂಸಾರವನು
ಮತ್ತೆ ಹೊದ್ದುವನೆ ? ಸರ್ವಜ್ಞ.

A pearl, though originating in the water, does not become water again; so the wise.

914. ಯುಂಜಲು ಹೊಲೆಯಿಲ್ಲ ! ಸಂಜೆಗತ್ತಲೆ ಯಿಲ್ಲ ;
ಅಂಜಿಕೆಂಬ ಭಯವಿಲ್ಲ ಜ್ಞಾನವೆಂಬ
ಅಂಜನವಿರಲು, ಸರ್ವಜ್ಞ.

By the magic of knowledge, fear, &c, disappears.

915\. ಬಲ್ಲೆನೆಂದೆಂಬುವರು ಯಲ್ಲವರು ಹಿರಿಯರೇ ?
ಸೊಲ್ಲಿಸಿ ಭೇದವನರಿದೊಡೆ, ಕಿರಿಯ ತಾ
ಯಲ್ಲರಿಗೆ ಹಿರಿಯ ; ಸರ್ವಜ್ಞ.

Those who know to speak with discretion, elders.

916\. ಜಾತಿ ಜಾತಿಗೆ ವೈರ ; ನೀತಿ ಮೂರ್ಖಗೆ ವೈರ ;
ಪಾತಕ ವೈರ ಸುಜನರಿಗರಿದವನಿಗೆ
ಯಾತ[1]ರ ವೈರ ? ಸರ್ವಜ್ಞ.

The wise have no enemy.

1. ಎಲ್ಲಾ ಗೆದ್ದಿರುತ್ತಾನೆ.

917\. ಅರ್ತಿಗೆ ಬೆಲೆಯಿಲ್ಲಾ ; ಚಿತ್ತಕ್ಕೆ ಹೊಲೆಯಿಲ್ಲ ;
ಬತ್ತಲಿರ್ದವಗೆ ಭಯವಿಲ್ಲ ; ಜ್ಞಾನಿಗೆ
ಕತ್ತಲೆ ಯಿಲ್ಲವು ; ಸರ್ವಜ್ಞ.

No darkness to the wise.

918\. ಬಂಧನ ಮಾಡಿದರೂ, ಸಂದ ಜ್ಞಾನಿಯೆ ಲೇಸು !
ಹೊಂದಿ ಸಾಸಿರವ ಕೊಡುತಿರಲು, ಕರ್ಮಿಯ
ದಂದುಗವೆ ಬೇಡ ! ಸರ್ವಜ್ಞ.

Better associate with the wise, though they put you in fetters, than with sinners though they give you presents.

919\. ವ್ಯಾಪಾರವಳಿದಲ್ಲದಾಪರವು ಕಾಣಿಸದು,
ಪಾಪಕರ್ಮಗಳತಿಳದು ನಿಂದವಗೆ
ಕೋಪವೆಲ್ಲಿಹದು ! ಸರ್ವಜ್ಞ.

No heaven without giving up intercourse with this world.

920\. ಸತ್ಯವೆಂಬುದು ತಾನು ಹಿತ್ತಲಗಿಡ, ನೋಡಾ !
ಮತ್ತೆಲ್ಲಿ ನೋಡಿ ಯರಸದೆ ತಾನಿರ್ದ
ಹತ್ತಿಲೇ ನೋಡ ! ಸರ್ವಜ್ಞ.

Truth, a tree in the backyard: not far from you.

921. ಯಿಲ್ಲಿಲ್ಲ ವೆಂಬುದನು ಯಿಲ್ಲಿಯೇ ಅರಸಿದಡೆ ;
ಯಿಲ್ಲದೇ ಯಿಲ್ಲವೆಂದುವರಿದಡೆ, ಜಗ
ವೆಲ್ಲದೊಳಗಿಕ್ಕು[1] ; ಸರ್ವಜ್ಞ.

What people deny to be, is everywhere in the world : truth, &c.

1. ಜ್ಞಾನ, ದೇವರು, ಆತನು ಕೊಡುವ ಮೋಕ್ಷ.

922. ದೊರದದನು ವುಂಡುಂಡು ದೊರಕಿದನು ವುಟ್ಟುಟ್ಟು
ದೊರಕಿದಲಿ ಶಯನ ಪಡೆವವ ಲೋಕಕ್ಕೆ
ನಿರುತನಾಗಿಕ್ಕು ; ಸರ್ವಜ್ಞ.

A true man, who is content with what he gets.

923. ವಲ್ಲೆನೆಂಬುವ ಮಾತು ಬಲ್ಲಿತಾಗಿಯೆ ಇರಲು,
ತಲ್ಲಣ ನಿಲ್ಲೆ, ದೇವಿತ್ತ ಪಡಿ ತಾನಿ
ದ್ದಲ್ಲಿಗೇ ಬಕ್ಕು ; ಸರ್ವಜ್ಞ.

What God has allowed him, will come of itself to a man without desires.

924. ಮುಂಡೆ ಬೋಳಾದವರ ಕಂಡಿನ್ನು ನಂಬದಿರು !
ಖಂಡಿತಮುಪ್ಪ ಪರಜ್ಞಾನವಿಷಯುವನು
ಕಂಡು ನಂಬುವದು ! ಸರ್ವಜ್ಞ.

Do not trust bald heads (ascetics.)

925. ಮಾತಿನಾಜ್ಞಾನವೇ ತೂತಾದ ಮಡಿಕೆಯೇ ;
ಪಾತಕನ ಹೆಸರೇ ಮೂರು ಲೋಕದೊ
ಳ್ಯಾತಕ್ಕು ಬೇಡ ! ಸರ್ವಜ್ಞ.

Knowledge consisting only in words, an earthen vessel with holes.

926. ತೆಂಗಿಗೂ ದೇವಗೂ ಹಂಗ ಮಾಡಲಿ ಬೇಕು ;
ತೆಂಗಿನ ಮೊದಲಿಗೆ[1] ನೀರೆರೆಯೆ, ಕಡಿಯುಲಿ
ಹಿಂಗದೀವಂತೆ ; ಸರ್ವಜ್ಞ.

God like a cocoa-nut tree : give them and they will give you.

1. ಬುಡ ಅಥವ ಬೇರಿಗೆ.

927. ವೊಡಲ ಹೋಗಾಡಿದರು, ನುಡಿ ನೀಗಾಡಿದರು,
ನಡೆಯೊಳು ಯೆಚ್ಚರನು ಬಿಡದಿರಲು, ಪರವಶ[1] !
ದೃಢ[2]ಮನವಿಡಿದು ; ಸರ್ವಜ್ಞ.

Heaven to be obtained only by a good life.

1. ಪರಲೋಕ ವಶವಾಗುವದು. 2. ಅನ್ವಯ ; ಧೃಢ—ಬಿಡದಿರಲು.

928. ನೀರ ಬೊಬ್ಬುಳಿ ನೆಚ್ಚಿ ಸಾರಿ ಕೆಡದಿರು ! ಮರುಳೆ !
ಸಾರಗುಣಿ ಯಾಗು ! ಸರ್ವರೊಳು ನಿಜ ತಿಳಿ !
ಕಾರಣಿಕನಾಗು ! ಸರ್ವಜ್ಞ.

Do not put confidence in a bubble of water

ON SOCIETY.

10. ಸಭಾಸಭೆ ಪದ್ಧತಿ.

929. ಆರಾರ ನಂಬುವಡೆ, ಆರೈದು ನಂಬುವದು !
ನಾರಾಯಣಗೆ ಬಲಿ[1] ಕೆಟ್ಟ ಮಿಕ್ಕವರ
ನಾರನಂಬುವದು ? ಸರ್ವಜ್ಞ.

Be cautious in trusting people !

1. ಅವನನ್ನು ನಂಬಿ. ನೋಡು ಭಾಗವತ.

930. ಎಲ್ಲರಾಸೆಯು ಬಿಟ್ಟಡಿಲ್ಲಿಯೇ ಕೈಲಾಸ !
ಯೆಲ್ಲವ ಬಯಿಸಿ ಭ್ರಮಿಸಿದೊಡೆ, ನರಕ ತಾ
ನಿಲ್ಲಿಯೇ, ನೋಡ ! ಸರ್ವಜ್ಞ.

Even here, where no desires, there is heaven; where desires, there is hell,

931. ಸತ್ಯರೂ ಹುಸಿದೊಡೇ, ವೊತ್ತಿಹರಿದಡೆ ಶರಧಿ,
ವೃತ್ತಮುರು ತಪ್ಪಿ ನಡೆದರೆ, ಲೋಕವಿಂ
ನೆತ್ತ ಶೇರುವದು ! ಸರ್ವಜ್ಞ.

If the ocean overflows its bounds, the good sin ; ruin certain.

932. ಅರಿಯದವರೊಡನಾಡಿ ಸರಿರಾಜ್ಯವಾಳುವದು,
ಅರಿಕೆಯುಳ್ಳವರೊಡನಾಡಿ ಯಾವಾಗ
ಸೆರೆ ಯಿಹುದೆ[1] ಲೇಸು ! ಸರ್ವಜ್ಞ.

Prison with the wise, better than empire with the ignorant.

1. ಅದರಕ್ಕಿಂತ ಇನ್ನು ಬುದ್ಧಿವಂತರ ಸಂಗತಿ ಮಾಡಿ ಸೆರೆಯಲ್ಲಿರುವದು ಲೇಸು.

933. ತ್ರಿಕರಣ[1]ಶುದ್ಧರೊಳೂ ಪ್ರಕೃತಿ[2]ವಿರಹಿತರೊಳೂ
ಮುಕುತಿಗೆಳಸುವ ಜನರೊಳಗೆ ಯಾವಾಗ
ಸಹಿತನವೆ ಲೇಸು ! ಸರ್ವಜ್ಞ.

Friendship with the pious, good.

1. ಮನೋವಾಕ್ಕಾಯಗಳು. 2. ಲೋಕ, ಭವ.

934. ಮೇರುವಿಂಗೆಣೆ ಇಲ್ಲ ; ಧಾರುಣಿಗೆ ಪಡಿ ಇಲ್ಲ ;
ಕಾರಣಿಕರಪ್ಪ ಹಿರಿಯರ ಸಂಸರ್ಗ
ವಾರಿಂದಲಧಿಕ ? ಸರ್ವಜ್ಞ.

Nothing like the earth ; nothing like union with wise elders.

935. ತೆರೆದ ಕೆಂಡವ[1] ಮೆಟ್ಟಿ ಮುರಗುವ ತೆರನಂತೇ
ಅರಿಯದರ ಕೂಟ ಬರೆಕೂಟ ತನ್ನನೆ
ಇರಿದು ಕೊಂಡಂತೆ ಸರ್ವಜ್ಞ.

Treading on burning coals associating with the ignorant.

1. ತರೆಗಿಡದ ಕೆಂಡಕ್ಕೆ ಬಹಳ ಕಿಚ್ಚು ಅದೆ.

936. ಕುದಿಯುದಿಹ ಕೂಳಂಗೆ ಹದುಳದಂಬುಲಿ ಲೇಸು !
ಹೃದಯಶೂನ್ಯರುಗಳೊಲವಿಂದೆ ಬಲ್ಲರ
ಕದನವೇ ಲೇಸು ! ಸರ್ವಜ್ಞ.

Strife with the wise preferable to love with the heartless.

937. ಬರೆ ಕಂಡು ಕರೆಯುದನ[1] ಬರೆ ಕುಳ್ಳಿರೆನ್ನದನ
ಸರಸಸಜ್ಜನಿಕೆ ಇಲ್ಲದನ ಸಖ್ಯವ
ಬೆರಸಲೇ ಬೇಡ ಸರ್ವಜ್ಞ.

Have no intercourse with the uncivil !

1. ಕರೆಯುದವನ—ಮು. ವ್ಯಾ. ಸೂ. ೨೪.

938. ಒಳ್ಳಿದರ[1] ವೊಡನಿರ್ದ ಕಳ್ಳ ವಳ್ಳಿದನಕ್ಕು
ವೊಳ್ಳಿದ ಕಳ್ಳನೊಡನಾಡೆ, ಯುವ ಶುದ್ಧ
ಕಳ್ಳನೇ ಯುಕ್ಕು ; ಸರ್ವಜ್ಞ.

A thief in the company of the good will become a good man and *vice versa*.

1. ಒಳ್ಳಿದನು=ಒಳ್ಳೆಯವನು. ನೋಡು ಗುಣ ವಾಚಕ.

939. ಈಶತ್ವವಿಲ್ಲದೆ ನೀನೀಶನೆಂತಾದಿ? ನೀ
ನೀಶನೀಶನೆನ ಬೇಡ ! ಲೋಕಕೆ ಮಾ
ನೇಶನೇ ಈಶ ! ಸರ್ವಜ್ಞ.

An honoured man only a lord in this world.

1. ಮಾನಸ್ಥನೇ ಲೋಕದಲ್ಲಿ ಯಜಮಾನ ; ಕಂಡವರಿಗೆ ಈಶ=ಯಜಮಾನವೆನ್ನಬೇಡ ಮಾನ ಧನಕ್ಕಿಂತ ಹೆಚ್ಚು.

940. ಅಕ್ಕಿಯಿಂದಲಿ ತೆಂಗು, ಮೆಕ್ಕೆಯಿಂ ಕಣಕ, ಜಾ
ನಕ್ಕಿ[1]ಯಿಂ ಲಂಕೆ ಕೆಡುವಂತೆ, ದುರ್ಬುದ್ಧಿ
ಹೊಕ್ಕಲ್ಲಿ ಕೇಡು ; ಸರ್ವಜ್ಞ.

From bad company great mischief results.

1. ಸೀತೆ. ನೋಡು ರಾಮಾಯಣ.

941. ಸಿದ್ಧರಿಗೆ ಯೋಗವನು, ಬುದ್ಧಿವಂತಗೆ ಮತಿಯು,
ಬಿದ್ದಿದ್ದಡವಿಗೆ ಕಿಚ್ಚನು, ಮುಳ್ಳುಮೊನೆ
ತಿದ್ದಿದವರಾರು ? ಸರ್ವಜ್ಞ.

These cannot be improved.

942. ಮಾತು ಬಲ್ಲಂಣ ತಾ ಸೋತು ಹೋಹದು ಲೇಸು ;
ಮಾತಿಗೆ ಮಾತು ಮಥಿಸಲ್ಕೆ, ವಿಧಿ ಬಂದು
ಆತುಕೊಂಡಿಹುದು ; ಸರ್ವಜ್ಞ.

Better to lose, than to quarrel.

1. ತನ್ನ ಮಾತು ಹಿಡಿದು ವಾದಿಸ ಬಾರದು, ಇಲ್ಲವೆ ಜಗಳ ಹುಟ್ಟುವದು.

943. ಮಾನಹೀನರ ಸಂಗ, ಯೇನು ಕೊಟ್ಟರು, ಬೇಡ !
ಗ್ನಾನವುಳ್ಳವರ ಸಂಗ ತಾ ಸಕ್ಕರೆ
ಜೇನು ಸವಿದಂತೆ; ಸರ್ವಜ್ಞ.

Union with the wise, sweet as honey and sugar.

944. ಬಲ್ಲವರ ವಡನಾಟ ಬೆಲ್ಲವನು ಮೆದ್ದಂತೆ;
ಅಲ್ಲದಹುದೆಂಬ ಅಗ್ಞಾನಿ ವಡನಾಟ
ಕಲ್ಲು ಹಾದಂತೆ; ಸರ್ವಜ್ಞ.

Good company—eating sugar: bad company—dashing against stones.

945. ಸಜ್ಜನರ ಸಂಗವೂ ಹೆಜ್ಜೇನು ಸವಿದಂತೆ,
ದುರ್ಜನರ ಕೂಡ ವಡನಾಟ ಬಚ್ಚಲದ
ರೊಚ್ಚಿನಂತಿಹುದು ; ಸರ್ವಜ್ಞ.

Good society is honey, bad society is mire.

946. ಸಜ್ಜನನು ಸತ್ತರೆ ನಿರ್ಜರರು ಮರಗುವರು
ದೌರ್ಜನ್ಯಕಾರಿ ಸತ್ತರೇದೇಪದಾ
ಖಜ್ಜಿ ಹರಿದಂತೆ ಸರ್ವಜ್ಞ.

The death of the good mournful; that of the wicked, getting rid of the itch.

947. ಬಳ್ಳೆನಿಲ್ಲದ ವೂರು ಕಳ್ಳನೊಡನಾಟವೂ
ಸುಳ್ಳನ ಮಾತೂ ಯಿವು ಮೂರು ಕೆಸರೊಳಗೆ
ಮುಳ್ಳು ತುಳದಂತೆ ಸರ್ವಜ್ಞ.

These three like treading in a mire filled with thorns.

948. ತಪ್ಪ ಸಾಧಿಸುವನಲ್ಲಿಪ್ಪವನೆ ಕಡು ಹೆಡ್ಡ
ಸರ್ಪನುರೆ ಹೆಡೆಯ ನೆರಳಲ್ಲಿ ಸೇರಿದಾ
ಕಪ್ಪೆಯಂತಕ್ಕು ಸರ್ವಜ್ಞ.

Union with people, who seek faults: a frog remaining in the shade of the hood of a serpent.

949. ವುದ್ದುರುಟು ಮಾತಾಡಿ ಯಿದ್ದದನು ಹೋಗಾಡಿ
ವುದ್ದಮರದ ತುದಿಯ ಯೇರಿ ಕೈ ತಪ್ಪಿ
ಬಿದು ಸತ್ತಂತೆ; ಸರ್ವಜ್ಞ.

The proud, like one ascending a high tree, the hand giving way, falls down.

950. ಕಂಬಳಿ ಹೊದ್ದರೆ ತನ್ನಿಂಬಿನೊಳಗಿರ ಬೇಕು

The proud will be in hell.

ಕಂಬಳಿ[1] ಬೆನ್ನ ಬಿಡದಿರಲು ನರಕದಾ

ಕುಂಭದೊಳಿಹನು; ಸರ್ವಜ್ಞ.

1. ಬಿರಿದಿನ ಬಳಿ.—ಸೊಕ್ಕು ಬಿಡದೆ ಇದ್ದರೆ ಎಂಬರ್ಥ.

## ON ASCETICS AND DEVOTION.

### 11. ಯೋಗಿ ಪದ್ಧತಿ.

951. ಆಯದಲಿ ನಿಜನಿಂದ ದಾಯವಾನರಿಯದೇ

A useless devotee.

ಆಯಾಸಜಪವ ಜಪಿಸುವ ಯೋಗಿಯಾ

ಬಾಯ ನೋಡೆಂದ! ಸರ್ವಜ್ಞ.

952. ವಡಲು ತಾನಳವಲ್ಲಿ, ಮಡದಿಯರು ಮಡಿದಲ್ಲಿ

He who does not lose his temper when abused, &c. a true devotee.

ಯೆಡರು ನಿಂದೆಗಳು ಬರುವಲ್ಲಿ ಸಮತೆಯು

ಬಿಡದಿರೆ, ಯೋಗಿ! ಸರ್ವಜ್ಞ.

953. ಜಡೆಯು ಕಟ್ಟಲಿ ಬಹುದು; ಕಡವಸಜಿನುಡ ಬಹುದು;

Easy to become an ascetic; difficult to restrain the mind.

ಬಿಡದೆ ದೇಗುಲದಲಿರ ಬಹುದು; ಕರಣವ

ತಡೆಯುವದರಿದು; ಸರ್ವಜ್ಞ.

954. ಜಡಿಯು ಕಟ್ಟಿದ ಮುನ್ನ ವಡನೆ ಬಂದದು ಮಾರಿ[1]

The gain of a devotee letting his hair grow: the trouble of lice.

ಘುಡಿಘುಡಿಸಿ ಹೇನು ಹರಿಯಲು, ಬೋಳಯ್ಯ

ಕಡು ನಗುವನಯ್ಯ! ಸರ್ವಜ್ಞ.

1. ಯಾವದು ವಂದು ಉಪದ್ರ. 2. ಯೋಗಿಯಾಗಿ ನಡೆಯಲಾರದ್ದಕ್ಕೆ ಅವನಿಗೆ ನಗುತ್ತಾರೆ.

955. ಬೆಂಣಿ ಬೆಂಕಿಯ ಸಖಿಗೆ ತಂಣಗಿರ ಬಲ್ಲದೇ ?

Butter before the fire a devotee before women.

ಹೆಣ್ಣಿದ್ದ ಮನೆಗೆ ಯಡತಾಕಿ ಶಿವಯೋಗಿ
ಮಣ್ಣುಮುಶಿಯಾದ ; ಸರ್ವಜ್ಞ.

956. ದಂಡಕೋಲಿನ ತುದಿಗೆ ಹಿಂಡಿ ಕೈಪವ ಕಟ್ಟಿ

Why a bald head, if one cannot live continently ?

ಮುಂಡಿಯುರ ಕಂಡು ಭ್ರಮಿಸುವ ಯೋಗಿಗೆ
ಮುಂಡೆ ಬೋಳೇಕೆ ? ಸರ್ವಜ್ಞ.

957. ಆಲಧೆ[1]ಮ್ಮರನಂತೆ ಜೋಲುಜೆಡೆಗಳ ಬಿಟ್ಟು

The tuft of hair of an incontinent ascetic, the tail of a dog.

ನಾಲಿಗೆ ಕೈಪ ಶುದ್ಧಿಲ್ಲ ಮರಿನಾಯ
ಬಾಲದಂತಕ್ಕು ; ಸರ್ವಜ್ಞ.

1. ಆಲದ ದೊಡ್ಡ ಗಿಡ.

958. ಓದಿ ಬೂದಿಯ ಪೂಸಿ ತೇದು ಕಾವಿಯ ಹೊದಿದು

A devotee one who restrains his senses.

ಹೋದಾತ ಯೋಗಿ ಯನ ಬೇಡವಿಂದ್ರಿಯುವ
ಕಾದಾತ ಯೋಗಿ ; ಸರ್ವಜ್ಞ.

1. ಶಾಸ್ತ್ರ ಓದಿಕೊಂಡು.

959. ಕತ್ತಲೆಯ ತಾ[1]ವಿಂಗೆ ವೃತ್ತಮವಾದ ಜೋತಿ

A dark place illuminated, an ignorant man enlightened.

ಮತ್ತು ಪ್ರಜ್ವ[2]ಲಿಸಾತಾವು ಬೆಳಗಾಗೆ,
ವೃತ್ತಮವೆ ಯಕ್ಕು ; ಸರ್ವಜ್ಞ.

1. ತಾವು ಬೆಳಗಾದರೆ ; ಸಾಕು=ತಿಳುವಳಿಕೆ ಒಬ್ಬನಲ್ಲಿ ಇದ್ದರೆ ಯೋಗಿ ಯಾಕಾಗಬೇಕು. 2. ಪ್ರಜ್ವಲಿಸೆ.

960. ಮನವ ಘನದಲಿ ಕಟ್ಟಿ ಘನವ ಮನದಲಿ ಕಟ್ಟಿ

Men, restraining their desires, need not go to the forest.

ಮನವನ್ನು ಪಾನಕೆಳಸದಾಯೋಗಿಗೆ
ವನವಾಸ ಯಾಕೆ ? ಸರ್ವಜ್ಞ.

961. ಹಾಲುಂಬ ಹಂಸವನು ಸೋಲ ಬಲ್ಲನೆ ? ಯೋಗಿ ;
ಮೇಲಣ ಪಥವನರಿಯದೊಡೆ, ಗಿಣಿ ಪೋದಿ
ಕಾಳುಗೆಡದಂದ ; ಸರ್ವಜ್ಞ.

A devotee not knowing the way to heaven a parrot.

962. ಜಡೆಯುಳ್ಳ ಹಿರೆಯರಿಗೆ; ಹೆಡೆಯುಳ್ಳ ಸರ್ಪನಿಗೆ,
ನಡಗುತ್ತ ನಮಿಸಿ ನಯದಿಂ ಯಬ್ಬರನು
ಬಿಡದೆ ಕೊಡೆ, ಭಕ್ತಿ ; ಸರ್ವಜ್ಞ.

Beware of devotees and of serpents!

1. ಯೋಗಿ ಅವರು ಸರ್ಪಗಳ ಹಾಗೆ ; ಅದಕ್ಕೆ ಅವರಿಗೆ ಸರ್ಪದ ಹಾಗೆ ಅಂಜ ಬೇಕು·
2. ಕೊಡಲಾಗಿ,

963. ಕಪ್ಪರದಲುಂಬರು, ವೊಪ್ಪರದಿ ನಡೆವರು ;
ತಪ್ಪಿದರೆ, ಹಲ್ಲ ಕಳೆವರು, ಮಹಾತ್ಮರ
ವೊಪ್ಪವಂ ನೋಡು ! ಸರ್ವಜ್ಞ.

See these saints! they lose their teeth for their faults!

964. ತಪವ ಮಾಡುವೆನೆಂದು ಗುಹೆಯ ಹೊಕ್ಕಿರ ಬೇಡ !
ತಪದಲ್ಲಿ ಕುಪಿತ ಬಿಡದಿರಲು, ಯಾತಪಾ
ತಪತಾಪ ಕಂಡ್ಯ ! ಸರ್ವಜ್ಞ.

If you do not cease from anger, your penance a burning fire.

965. ತೋರುವ ಕುಲಗಿರಿಯನ್ನೇರಿ ತಪದೊಳಗಿರ್ದು
ಬೇರೊಂದು ಪದವೆಣಿಸಿದರೆ, ಬೆಳೆದ ಹೊಲ
ಸೂರೆ ಹೋಹಂತೆ ; ಸರ್ವಜ್ಞ.

Performing penances with the body and thinking of the world, a crop destroyed.

966. ಯತಿಗೇಕೆ ಕೋಪ ? ದುರ್ಮತಿಗೇಕೆ ಪರಜ್ಞಾನ ?
ಪತಿವ್ರತಿಗೇಕೆ ಪರನೋಟ ? ಯೋಗಿಗೆ
ಸ್ತುತಿನಿಂದೆ ಯಾಕೆ ? ಸರ್ವಜ್ಞ.

Why praise or blame to a devotee?

967. ಬಂದದನೆ ತಾ ಹಾಸಿ, ನಿಂದದನೆ ತಾ ಪೊತ್ತು,

From a man, who is content, even fate is flying.

ಬಂದದನೆ ಮೆಟ್ಟಿ ನಡೆವಾತನಿಗೆ ವಿಧಿ
ಮುಂದೆ ಪೋಡುವದು ; ಸರ್ವಜ್ಞ.

1. ತನಗೆ ಶಿಕ್ಷೆ ದ್ವೆ ಸಾಕಾದರೆ ವಿಧಿಯಿಂದಲಾದರೂ ಮನಸು ನೊಂದು ಕೊಳ್ಳಲಿಕ್ಕಿಲ್ಲ.

FOOLS.

12. ಮೂರ್ಖನ ಪದ್ಧತಿ.

968. ಮೂರ್ಖಂಗೆ ಬುದ್ಧಿಯನು ನೂರ್ಕಾಲ ಹೇಳಿದರೆ,

Teaching a fool—pouring water on a stone.

ಘೋರ್ಕಲ್ಲ ಮೇಲೆ ಮಳೆ ಗರೆದರಾಕಲ್ಲು
ನೀರ್ಕುಡಿಯಲಹುದೆ ? ಸರ್ವಜ್ಞ.

969. ಅಳ ಹೊಲ್ಲ ಯಾಡಿನ ; ಕಳೆ ಹೊಲ್ಲ ಕೋಡಗನ ;

Friendship with a fool improper.

ವಳುಕೋಪ ಪೋಪರೊಳೆ ಹೊಲ್ಲ ; ಮೂರ್ಖನ
ಗೆಳೆತನ ಹೊಲ್ಲ ! ಸರ್ವಜ್ಞ.

970. ಆರು ಬೆಟ್ಟವನೊಬ್ಬ ಹಾರ ಬಹುದೆಂದರೇ,

Do not quarrel with a fool : say "yes" to whatever he says, though it is nonsense !

ಹಾರ ಬಹುದೆಂದು ಯನ ಬೇಕು ; ಮೂರ್ಖನಾ
ಹೋರ್‍ಯಾಟ ಸಲ್ಲ ; ಸರ್ವಜ್ಞ.

971. ಬಲೆಗುಂಡನೊಬ್ಬನೇ ಮೇಲ ಬಹುದು ಯಂದರೇ,
ಮೆಲ ಬಹುದೆಂದು ಯನ ಬೇಕು ; ಮೂರ್ಖನನ
ಗೆಲ ಬಾರದೈಯು ! ಸರ್ವಜ್ಞ.

972. ಹೊಳೆಯ ನೀರೊಬ್ಬನೇ ಯಳೆಯ ಬಹುದೆಂದರೇ,
ಅಳೆಯ ಬಹುದೆಂದು ಯನ ಬೇಕು ಮೂರ್ಖನ
ಕಳೆಯುಲಳವಲ್ಲ ; ಸರ್ವಜ್ಞ.

## ON WOMEN.

### 13. ಸ್ತ್ರೀಯರ ಪದ್ಧತಿ.

973. ಯಾತಗಣಿ ಯದು ಚಿಗತು ಕಾತು ಫಲವಾದಂದು,
ಹೋತು ಹೆಬ್ಬುಲಿಯುನಿರಿದಂದು ಹೆಂಣಿನ
ಮಾತ ನೆಚ್ಚೆಂದ ! ಸರ್ವಜ್ಞ.

When a dry pole buds, then trust a woman, i. e. never !

974. ಗಂಡಗಂಬಲಿ ಯಿಕ್ಕಿ ಗಂಡುಗರಣಿಯ ನುಂಗಿ
ಗಂಡ ಬಂದಾಗ, ನರಳುವ ಹೆಂಣಿಂಗೆ
ಗುಂಡಿಗಿಕ್ಕೆಂದ ! ಸರ್ವಜ್ಞ.

A junketing housewife.

975. ಅತ್ತಿಗಿಡಕ್ಹುವ್ವಿಲ್ಲ ;ಕತ್ತೆಗೇ ಕೋಡಿಲ್ಲ ;
ಹತ್ತಿಯ ಹೊಲಕೆ ಗಿಳಯಿಲ್ಲ ; ಸೂಳಗೆ
ಸತ್ಯವಿಲ್ಲೆಂದ ; ಸರ್ವಜ್ಞ.

No truth,

976. ಆಲಕ್ಕೆ ಹೂವಿಲ್ಲ ; ಸಾಲಕ್ಕೆ ಕೊನೆಯಿಲ್ಲ ;
ಜಾಲಿಯುಗಿಡಕ್ಕೆ ಗಂಧಿಲ್ಲ ; ದೇವರು
ಸೂಳಗಿಲ್ಲೆಂದ ; ಸರ್ವಜ್ಞ.

and no fear of God in a harlot.

977. ಆಕೆಯನು ಕಂಡು ಮನೆಯಾಕೆಯನು ಮರದರೆ,
ಹಾಕಿದ ವುಂಕಿ ಹರಿದಂತೆ, ಮನೆಯೊಳ
ದ್ದಾಕೆ ತಾ ಕೆಡಗಂ; ಸರ್ವಜ್ಞ.

A good wife will become bad, when the husband lives in sin.

978. ಕೊಂಕುಗುರುಳಿನ ರಂಭೆ ; ಕಂಕಣವು ಕಟಿಸೂತ್ರ,
ಪಂಕಜಾಗಂಧಿ ಯನ ಬೇಡ ! ತಾನೊಲಿದ
ಮಂಕು ಮಾಣಿಕವು ; ಸರ್ವಜ್ಞ.

Regard not beauty! An affectionate wife, though dull, a jewel.

979. ಸತ್ತವರ ಬಾಯೊಳಗೆ ಬತ್ತಿನೀರೆರದಂತೆ,
ಚಿತ್ತವಿಲ್ಲದಳ ವಡನಾಟ ಶುನಿ ಹೆಣನ
ಹತ್ತಿ ತಿಂದಂತೆ ; ಸರ್ವಜ್ಞ.

Living with a wife, who does not love, a dog eating a corpse.

980. ನಂಬಿದಂತಿರ ಬೇಕು ; ನಂಬದೇ ಯಿರ ಬೇಕು,
ಯಿಂಬರಿದು ಯೆಚ್ಚರಿರ ಬೇಕು ; ಹೆಂಣನು
ನಂಬಿದವ ಕೆಡುವ ; ಸರ್ವಜ್ಞ.

Mischief from indiscreetly trusting woman.

981. ಹಂಚು ಮುಂಣಿಂದ್ದುಟ್ಟಿ ವಂಚನೆಯಲಿರುವಂತೆ,
ಸಂಚು ಬೇರವಳ ಮನ ಬೇರೆ ಹೆಂಣೆಂಬ
ಹಂಚ ನೆಚ್ಚುವರೆ ? ಸರ್ವಜ್ಞ.

Woman a tile, easily broken; do not trust.

982. ಮೊಗೆನೀರಿನೊಳಗೊಂದು ನೆಗಳಾಡಿದಂದಿಗೆ
ತಗುಣಿ ಹೆಬ್ಬುಲಿಯ ಹಿಡಿದಂದು ಹೆಂಣಿನ
ಬಗೆಯ ನಂಬುವದು ; ಸರ್ವಜ್ಞ.

When a crocodile swims in a small vessel of water;

983. ಹೆಂಡರಾ ಕೌತುಕವ ಗಂಡರೂ ಬಲ್ಲರೇ ?
ಗಿಂಡಿನೀರೊಳಗೆ ಕಿರಿಮೀನ ಹೆಜ್ಜೆಯನು
ಕಂಡಾತನಾರು ? ಸರ್ವಜ್ಞ.

When one can see the track of the fishes in the water ;

984. ಜಲದವಳಗಿನ ಕಲ್ಲು ಸಲೆ ಬೆವರ ಬಲ್ಲದೇ ?
ಲಲನೆಯರ ವಲುಮೆ ತನಗೆಂಬ ಮರುಳಂಗೆ
ಮಲರೋಗದಂತೆ; ಸರ್ವಜ್ಞ.

When the stone iu the water perspires ;

985. ಅಡವಿಯೊಳು ಮಳೆ ಹೊಡದು ಗಿಡ ಶೇಡುಗೊಂಡಂದು
ಹುಡಿಯೊಳಗೆ ಕಮಲ ಬೆಳದಂದು ಹೆಂಣಿನ
ನುಡಿಯ ನೆಚ್ಚೆಂದ ಸರ್ವಜ್ಞ.

When the lotus grows in the dust: then trust women!

986. ದಾಸಿಯನು ಹೋಗುವಗೆ ವೀಸ ಹತ್ತದು ಕೈಗೆ;
ಹೇಸಿ ತೊಲಗುವಳು ಜಯಲಕ್ಷ್ಮಿ; ಆಯುಷ್ಯ
ನಾಶವಾಗುವದು; ಸರ್ವಜ್ಞ.

Wealth and health will leave him, who loves women.

987. ಜಾರತ್ವವೆಂಬುದದು ಕ್ಷೀರ ಸಖ್ಖರೆಯಂತೆ;
ಪೂರಲ್ಲಿ ಯೊಬ್ಬರರಿತರೇ ಬೇವಿನ
ಸಾರದಂತಕ್ಕು; ಸರ್ವಜ್ಞ.

Fornication at first like sugar, then bitter as the juice of the neem-tree.

988. ಪುರುಷ ಕಂಡರೆ, ಕೊಲ್ವ, ಅರಸು ದಂಡವ ಕೊಂಬ;
ನರಸುರರು ಯಲ್ಲ ಮುನಿಸಕ್ಕು; ಯಂತ್ಯಕ್ಕೆ
ನರಕ ಪರಸತಿಯು ಸರ್ವಜ್ಞ.

The strange woman is hell.

989. ಕುದುರೆಯಾ ಚದುರೆಯಾ ಹದಿರೆರೆಡು ವಂದೈಯ್ಯ!
ಚದುರನೇರಿದರೆ, ಕುಣಿವದು; ಬೆಳ್ಳಾಳ[1]
ಬಿದಿರಿ ಹಾಕುವದು; ಸರ್ವಜ್ಞ.

A horse—a wife.

1. ಕರ್ಮವಿಭಕ್ತಿ ಅವನನ್ನು ಕುದರೆ ಕೆಡವಿ ಹಾಕುವದು.

990. ಚಿಕ್ಕಾಡಿ, ತಗಣೆಯೂ, ರಕ್ಕಸರು, ಜಾರೆಯರು,
ವಕ್ಕಲಿಕ್ಕುವರು ಯಿರುಳೆಲ್ಲ; ಬೆಳಗಾಗೆ,
ಸುಕ್ಕಿದಂತಿಹರು ಸರ್ವಜ್ಞ.

These four give trouble in the night only.

991. ಯಡವಿ ಬೊಟ್ಟೊಡದರೇ, ಕೆಡ ಬೀಳ ವಿರಿದರೇ,
ನಡುಬೆಂನಿಲಲಗು ಮುರಿದರೆಯು, ಹಾದರದ
ಕಡುಹು ಬಿಡದೆಂದ; ಸರ್ವಜ್ಞ.

Though one is dishonoured, is the ardour of fornication not less.

992. ತುಡುತಿಂನಿ ಗಂಡನಾ ಬಡತನವ ಬಲ್ಲಳೇ ?
ಕಡನ ತಂದಿಕ್ಕಿ ಕುದಿಸಿ ತುಪ್ಪವ ಬೇಸಿ
ಹೊಡದು ಕುಳ್ಳಿಹಳೊ ; ಸರ್ವಜ್ಞ.

A junketing house wife knows nothing of the poverty of her husband.

993. ಮಿಂಡಿಯಾ ಗಂಡ ತಾ ದಂಡಿಂಗೆ ಹೋದರೇ,
ಹಿಂಡಿಯು ಹೆಡಿಗೆಗೆ ಕೋಣನ ತಂದು ಕಣು
ಗಂಡು ಸೊಡದಂತೆ ; ಸರ್ವಜ್ಞ.

Husbands leaving their wives, putting boiled rice

994. ನಾರಿಯಳ ಗಂಡ ತಾ ಬೇಲೂರಿಗ್ಹೋದರೇ,
ಆರಿದೋಗರಕೆ ಮೊಸರಿಕ್ಕಿ ಕಾಗಿಗೆ
ತೋರಿ ಕೊಟ್ಟಂತೆ ; ಸರ್ವಜ್ಞ.

and curds to the crows, i. e. exposing them to temptation.

995. ತಾಳದೋಲೆಯನಿಟ್ಟು ಬೇಳಮಣಿಯನೆ ಕಟ್ಟಿ
ವೇಳ್ಯವನ್ನರಿತು ನಡವವಳು ದೊರವದು
ಶೂಲಿಯ ಕರುಣ ಸರ್ವಜ್ಞ.

To find a virtaous parsimonious housewife is the mercy of God.

1. ಭಂಗಾರದ ವಸ್ತುಗಳಿಲ್ಲದಿದ್ದರೂ ಆಸಿಸಿ ಕಾಡುವಾಕೆಯಲ್ಲ.

996. ಉಲಿಯದೇ ಕೆಲಿಯದೇ ತಲೆ ಯೆತ್ತಿ ನೋಡದಲೆ,
ಬಲುಬಲ್ಲತನದಿ ಯಿರುವವಳು ದೊರವದು
ಸಲೆ ಗುರುಕರುಣ ; ಸರ್ವಜ್ಞ.

997. ನಾರಿ ಪರವುಪಕಾರಿ ನಾರಿ ಸ್ವರ್ಗಕೆ ದಾರಿ ;
ನಾರಿ ಸಕಲರಿಗೆ ಹಿತಕಾರಿ ; ಮುನಿದರೇ,
ನಾರಿಯೇ ಮಾರಿ ; ಸರ್ವಜ್ಞ.

Wives a way to heaven ; but when angry, they are death.

998. ಕೊಟ್ಟಾತ ಬರಡಾದ ; ಬಿಟ್ಟಾತ ಹಯನಾದ ;
ಕೊಟ್ಟವಳ[1] ಪಡವೆನೆನುವಾತ ತಾ ಮೊದಲೆ
ಬಟ್ಟ ಬಯಲಾದ ಸರ್ವಜ್ಞ.

He who gives his substance to women, ruined.

1. ಸ್ತ್ರೀಯರಿಗೆ.

999. ಹಲ್ಲ ಮೇಲಿನ ಕೆಂಪು ; ಕಲ್ಲಮೇಲಿನ ಹಂಸೆ ;
ಮಲ್ಲಿಗೆಯರಳ ತನಿಗಂಪು, ಹೊಸಮೋಹ
ನಿಲ್ಲವು ; ನೋಡು ! ಸರ್ವಜ್ಞ.

New love will not last.

1000. ಬೇಲೂರ ಸ್ನೇಹಕ್ಕೆ ಹಾರಿ ಸೋಗುವ ಹೆಡ್ಡ ;
ಮೀರಿದ ಶೂಲದ ಸೆಣಕೊಲಿದು ನರಿ ಬಾ
ಯಾರಿ ಸತ್ತಂತೆ; ಸರ್ವಜ್ಞ.

A fool, who seeks strange women.

1001. ಯೇರಿಮೇಲಣ ಪಂಜು ನೀರೊಳಗೆ ಮುರಿದಂತೆ;
ನಾರಿಯರೊಲುಮೆ ತನಗೆಂಬ ಮರುಳಂಗೆ
ಮಾರಿ ಹೊಡದಂತೆ ಸರ್ವಜ್ಞ.

The affection of women inconstant.

1002. ಅಳಿಯಾಸೆ ಹೆಪ್ಪಿಂಗೆ ; ಮಳೆಯಾಸೆ ಸಕಲರಿಗೆ;
ಬಲೆಯಾಸೆ ಮೀನ ಹಿಡಿವವಗೆ ; ಹಾದರಕೆ
ಸುಳಿದಾಟದಾಸೆ ; ಸರ್ವಜ್ಞ.

Fornication and roaming about;

1003. ಪಡಿಯಾಸೆ ಹರದಂಗೆ; ನುಡಿಯಾಸೆ ವೇಶಿಗೇ;
ಜಡೆಯಾಸೆ ಬೂದಿಗೊರವಗೆ[1]; ಹಾದರಕೆ
ಯುಡೆಯಾಟದಾಸೆ ; ಸರ್ವಜ್ಞ.

these two requisite to each other.

1. ಬೂದಿ ಹಚ್ಚಿ ಕೊಂಡಂಥಾ ತಪಸಿಗೆ.

## MANNERS OF THE WORLD IN GENERAL.

### 14. ನೀತಿ ಪದ್ಧತಿ.

1004. ಹೆಂಣನ್ನು ಹೊನ್ನನ್ನು ಹಂಣಾದ ಮರಗಳನು
ಕಂಣಿಲಿ ಕಂಡು ಮನದಲ್ಲಿ ಬಯಸದಿಹ
ಅಂಣಗಳಾರು ? ಸರ್ವಜ್ಞ.

Who is not desirous of women and money?

1005. ಖಂಡಿಸದೆ ಕರಣವನು, ದಂಡಿಸದೆ ದೇಹವನು,
ಉಂಡುಂಡು ಸ್ವರ್ಗವೈದಲ್ಕೆ, ಯದನೇ
ನ್ರಂಡಾ[1]ಳುತಾಳೆ? ಸರ್ವಜ್ಞ.

Does a bad woman reign in heaven, that sensual men should go there?

1. ಹಿರಿತನ ವಿಚಾರ ಇಲ್ಲವೇ ಅಲ್ಲಿ.

1006. ಕೂಳು ಕು[1]ತ್ತವೆ ಕುತ್ತ ; ಕೂಳು ಮೇ[2]ಳವೆ ಮೇಳ;
ಕೂಳೊಂದು ಘಳಿಗೆ ತಡೆದರೆ, ಪಾತರದ
ಮೇಳ ಮುರಿದಂತೆ ; ಸರ್ವಜ್ಞ.

The world would come to a stop, but for food.

1. ಅದನ್ನ ದೊರಕಿಸಿಕೊಳ್ಳುವದು. 2. ಕೂಳು ಇದ್ದರೆ ಕೆಲಸ ಮುಂತಾದ್ದು ಆಗುವದು.

1007. ವಡಲೆಂಬ ಹುತ್ತಕ್ಕೆ ನುಡಿವ ನಾಲಿಗಿ ಸರ್ಪ ;
ಕಡು ರೋಷವೆಂಬ ವಿಷವೇರೆ, ಸಮತಿ ಗಾ
ರುಡಿಗನಂತಕ್ಕು ; ಸರ್ವಜ್ಞ.

The body a snake-hole, the tongue the snake, anger the poison, compliance the conjurer.

1. ಹಾವನ್ನಾಡಿಸುವವರು.

1008. ಬಡವನ್ಹೆಂಡತಿ ತಾ ಕಡು ಚೆಲುವೆಯಾದಡೇ,
ನಡು ಬೀದಿಯೊಳಗೆ ದವನವನು ಬಿತ್ತಲು,
ಮುಡಿಯದವರಾರು ? ಸರ್ವಜ್ಞ.

The beautiful wife of a poor man: fragrant flowers put in the street.

1009. ನಲ್ಲ ವಲ್ಲೀ ವಲ್ಲ ; ನೆಲ್ಲಕ್ಕಿಬೋೞನೊಲ್ಲ ;
ಅಲ್ಲನೆ ವಲ್ಲ ; ಮೊಸರೊಲ್ಲ ; ಯೂಕೊಲ್ಲ ;
ಯಿಲ್ಲದಕ್ಕೊಲ್ಲ ; ಸರ್ವಜ್ಞ.

A husband wants nothing, because he has nothing.

1010. ಅಂತಿದ್ದ, ಯಿಂತಿದ್ದ, ಯಂತಿದ್ದನೆನ ಬೇಡಿ !
ಕುಂತಿಯು ಮಕ್ಕಳು ತಿರದುಣೆ, ಮಿಕ್ಕವರು
ಯಂತಿದ್ದರೇನು ? ಸರ್ವಜ್ಞ.

Fortune unsteady.

1011. ಒಕ್ಕಲಿಗನೋದಲ್ಲ ; ಬೆಕ್ಕು ಹೆಬ್ಬುಲಿಯಲ್ಲ ;
ಯಕ್ಕಿಯ ಗಿಡವು ಬನವಲ್ಲ ; ಯಿವು ಮೂರು
ಲೆಕ್ಕದೊಳಗಲ್ಲ ; ಸರ್ವಜ್ಞ.

A cat is no tiger, and a farmer no scholar.

1012. ಭಂಡುಹೆಂಡತಿ ಯಾಗಿ, ತುಂಡೊಬ್ಬ ಸೊಸೆಯಾಗಿ,
ಕಂಡಲ್ಲಿ ತಿರಗೋ ಮಗನಾದರೆ, ಮನೆಗೆ
ದಂಡ ತಪ್ಪದು ; ಸರ್ವಜ್ಞ.

A house, in which is a bad wife and a wicked daughter-in-law, will be liable to fines.

1013. ಬಂಧುಬಳಗವು ಕೂಡಿ ಹೊಂದಿ ಜೋಗಳ ಪಾಡಿ
ಹಿಂದೆ ಸತ್ತವರ ಹೆಸರಿಟ್ಟು, ಗುಗ್ಗರಿ
ತಿಂದು ತೂಗುವರು ; ಸರ್ವಜ್ಞ.

The ceremony of giving a name.

1014. ಕ್ರೀಡೆಯಲಿ ಬಾಲತ್ವ, ಪ್ರಾಢಿಯಲಿ ತರುಣತ್ವ ;
ಗಾಢಚಿಂತೆಯಲಿ ವೃದ್ಧತ್ವಗಳೆ ; ಸುಡು
ಗಾಡಿಗೆಡೆಯಹರು ; ಸರ್ವಜ್ಞ.

Infancy, youth, old age, at last the cemetery.

1015. ಮೃತ್ಯುದೇವತೆ ಬೆಂನಿಲ್ಹೊತ್ತನುದಿನ ತಿರಿಗಿ
ತುತ್ತು ಯಿದ್ದಲ್ಲಿ ವೈದುಃಸುತಿರಲಿಕೆ,
ಹೊತ್ತು ಚೆಲ್ಲುವಳು ; ಸರ್ವಜ್ಞ.

Death, carrying men about on her back, throws them off.

1. ಮೃತ್ಯು ಮನುಷ್ಯರನ್ನು ಹೊತ್ತು=ಇರಗೊಟ್ಟಹಾಗಾಯಿತು; ತನಗೆ ಬೇಕಾದಾಗ ಕೆಡಹುತ್ತದೆ.

1016. ಕಂಣು ಮನ ನಾಲಿಗೆಯು ತಂನದೆಂದೆನ ಬೇಡ!
ಅಂನ್ಯರು ಕೊಂದರೆನ ಬೇಡ! ಯಿವು ಮೂರು
ತಂನ ಕೊಲ್ಲುವವು; ಸರ್ವಜ್ಞ.

Eye, mind, tongue: these three will kill you.

1017. ಹಂಗಿನರಮನೆಗಿಂತ ಯಿಂಗಡದ ಗುಡಿ ಲೇಸು;
ಭಂಗಬಟ್ಟುಂಬ ಬಿಸಿಯುಂನಕಿಂತಲು
ತಂಗಳವೆ ಲೇಸು! ಸರ್ವಜ್ಞ.

Better stale food than warm rice with dishonour.

1018. ಎಳ್ಳು ಗಾಣಿಗ ಬಲ್ಲ; ಸುಳ್ಳು ಸಿಂಪಿಗ ಬಲ್ಲ;
ಕಳ್ಳರನು ಬಲ್ಲ ತಳವಾರ; ಬಣಜಿಗ
ನೆಲ್ಲವನು ಬಲ್ಲ; ಸರ್ವಜ್ಞ.

Among these three, the merchant the most acute.

1019. ಈಚಲದ ಮರ ಹೀನ; ನೀಚರದುನೆರೆ ಹೀನ;
ಮೋಚಿದ ಹೆಂಣು ತರಹೀನ; ಮನೆಯೊಳಗೆ
ಪೇಚಾಟ ಹೀನ; ಸರ್ವಜ್ಞ.

These bad, each in its way.

1020. ಇಂದು ನಾಳಿಗೆ ಯೆಂದು ತಂದದಂನಿಡ ಬೇಡ!
ಬಂದದನುಂಡು ಸುಖಿಯಾಗಿ ಬೇನೆಯು
ಬಂದಾಗ, ನೆರಳು! ಸರ್ವಜ್ಞ.

In prosperous days be joyful! In misfortune, sorrowful.

1021. ಇತ್ತು ದಣಿಯದವಂಗೆ ಮೃತ್ಯು ವಲಿಯದೆ ಬಿಡದು;
ಪತ್ತಿರ್ದ ಶಿರಿಯು ತೊಲಗುವದು; ಯಿಂಥವನ
ತೊತ್ತಾಗ ಬೇಡ! ಸರ್ವಜ್ಞ.

Be not the servant of the insatiable!

1022. ಸಾಲವನು ತರುವಾಗ, ಹಾಲು ಬೋನುಂಡಂತೆ;
ಸಾಲಿಗನು ಬಂದು ಕೇಳದರೆ, ಕುಂಡೆಗೆ
ಚೇಳು ಕಡಿದಂತೆ; ಸರ್ವಜ್ಞ.

Making debts sweet as milk: the importunity of the creditor as the bite of the scorpion.

1023. ಸಾಲವನು ಕೊಂಬಾಗ, ಹಾಲೋಗರುಂಡಂತೆ ;
ಸಾಲಿಗನು ಬಂದು ಯೆಳವಾಗ, ಕಿಬ್ಬದಿಯು
ಕೀಲು ಮುರಿದಂತೆ ; ಸರ್ವಜ್ಞ.

Making debts.

1024. ಒಳ್ಳೆಯ ಮಾತಿಂಗೆ ವುಳ್ಳೊಡವೆ ಬಿಡೆನೆಂದು
ಬೊಳ್ಳಿಟ್ಟು[1] ಬೊಗಳಿ ಹುಸಿದು ಸಾಲವ ನುಂಗಿ
ಯಿಲ್ಲೆನುತಲಿಹನು ; ಸರ್ವಜ್ಞ.

Repudiating debts.

1. ಪ್ರಮಾಣವಾಚಕಕ್ಕೆ ಸಂಜ್ಞೆ.

1025. ಬೆಂಡಿರದೆ ಮುಳುಗಿದರು, ಗುಂಡೆದ್ದು ತೇಲಿದರು,
ಬಂಡಿಯು ನೊಗವು ಚಿಗತರು, ಸಾಲಿಗನು
ಕೊಂಡದ್ದು ಕೊಡನು ; ಸರ್ವಜ್ಞ.

Though a spongy plant sink in the water, a debtor will not pay.

1026. ನಂಬಿಗೆಯುಳ್ಳವ ತಾ ಕೊಂಬುವನು ಸಾಲವನು ;
ನಂಬಿಗೆ ಕೆಟ್ಟ ಬಳಿಕ, ಬೆಂದಾವಿಗೆಯ
ಕುಂಭದಂತಿಹನು ; ಸರ್ವಜ್ಞ.

A man without credit, an useless earthen pot.

1. ಯಾವಾಗಲೂ ಆವಿಗೆಯ ಬುಡಕ್ಕೆ ಹಾಕಿರುವಂಥಾವು.

1027. ಇಲ್ಲದ ಕಾಲಕ್ಕೆ ತಾ ಹೊಲ್ಲನವ ಜನರಿಂಗೆ ;
ಅಲ್ಲದ ಗುಣವುಳ್ಳ ಯರಸಿಂಗೆ ಸಾಲಕ್ಕೆ
ಕಲ್ಲೆದೆಯು ಬೇಕು ; ಸರ್ವಜ್ಞ.

To a bad king and to a debtor, a heart of stone necessary.

1028. ಅಕ್ಕಸಾಲಿಯನೂರಿಗೊಕ್ಕಲೆಂದೆನ ಬೇಡ !
ಬೆಕ್ಕು ಬಂದಿಲಿಯು ಹಿಡಿವಂತೆ ; ವೂರಿಂಗೆ
ರಕ್ಕಸನಹನು ; ಸರ್ವಜ್ಞ.

A goldsmith, a cat catching mice.

1029. ಹಣಕ್ಕೊಂದೀಸವಿಪ್ಪಣಕ್ಕೊಂದುಬೇಳಯು
ತ್ರಿಣಯನ ಮುಕುಟವಾದರಕ್ಕಸಾಲೆಯು
ಟೊಣಿಯದೆ ಬಿಡನು ; ಸರ್ವಜ್ಞ.

Goldsmiths will cheat, even if it were the crown of Shiva.

1030. ಬೂದಿಯೊಳು ಹುದಿಗಿಸಿ ವೇದಿಸಿ ಮರೆಮಾಡಿ
ಕಾದಿರ್ದ ಚಿಂನದೊಳು ಬೆರಸಿ ವರೆಹಚ್ಚಿ
ಮೂದುತಾಟೋಣಿವ ; ಸರ್ವಜ್ಞ.

Goldsmiths great cheats.

1. ಭಂಗಾರ ಮುಂತಾದದ್ದು ತಂದು ಕೂತವರನ್ನು ಹೋಗಿರಿ ಎಂದು ಉಪದ್ರ ಪಡಿಸಿ ಕಾದ ಭಂಗಾರದಲ್ಲಿ ಏನಾದರೂ ಭೊಟ್ಟಿ ಕೂಡಿಸಿ ಚೊಕ್ಕವೆಂದು ವರೆಹಚ್ಚಿ ಅವರಿಗೆ ತೋರಿಸಿ ಕೊಟ್ಟು ಮೋಸ ಮಾಡುತ್ತಾನೆ.

1031. ಬಿದರೆ ಯೆಂದಣವಕ್ಕು ; ಬಿದರೆ ಸತ್ತಿಗೆ ಯಕ್ಕು ;
ಬಿದರಿಂದ ಸಕಲಪದವಕ್ಕು ; ಲೋಕದೊಳು
ಬಿದರದವ ಕೆಟ್ಟ ; ಸರ್ವಜ್ಞ.

Different things are made of bamboo; so fear keeps men in order (if of different uses).

1. ಲೋಕ ನಡೆಯಲಿಕ್ಕೆ ಭಯ ಆಧಾರ.

1032. ಬಲ್ಲಿದನು ನುಡಿದರೆ, ಬೆಲ್ಲವನು ಮೆದ್ದಂತೆ ;
ಯಿಲ್ಲದಾಬಡವ ನುಡಿದರೇ, ಬಾಯಿಂದ
ಜೊಲ್ಲು ಬಿದ್ದಂತೆ ; ಸರ್ವಜ್ಞ.

The speech of the mighty is sweet: the speech of the poor is empty brag.

1033. ಕಂಡದ್ದನಾಡೆ, ಭೂಮಂಡಲವು ಮುನಿವುದು ;
ಕೊಂಡಾಡುತಿಚ್ಛೆ ನುಡಿದರೇ, ಜಗವೆಲ್ಲ
ಮುಂಡಾಡುತಿಹರು ; ಸರ್ವಜ್ಞ.

You speak what is true and all will be angry with you, you speak what is liked, and all will caress you.

1034. ಮೇಲರಿಯದಧಿಕರೊಳು ಕಾಳಗವ ತೊಡಕಿದರೆ,
ಬಾಳುವೆ ಗೆಟ್ಟು ಬಡವಕ್ಕು ಬೆಸಲಾದ
ಚೇಳಸೆಂ[1]ತಕ್ಕು ; ಸರ್ವಜ್ಞ.

Mischief from quarrelling with those, who do not know what is good.

I. ಹಡಿಯುತ್ತಲೆ ಬೆನ್ನು ಒಡೆದು ಸಾಯುತ್ತದೆ.

1035. ಸುಂಕಿಗನು, ಹುರಿಹಲು, ಬಿಂಕಿದ ಬೆಲೆವೆಣ್ಣೂ,
ಕಂಕಿಯು, ಸುಂಕ, ನಸುಗುಂನಿ, ಯೀಯಾರು
ಸೊಂಕಿದರೆ, ಬಿಡವು ; ಸರ್ವಜ್ಞ.

These six if they touch you, will not let you go.

1036. ಸೊಡರು ಲಂಚವ ಕೊಂಡು ಕೊಡುವುದೊಚ್ಚತಬೆಳಗ
ಪೊಡವಿಗೆ ಸೂರ್ಯ ಬೆಳಗೀವ್ವೊಲ್ಲಂಚವ
ಹಿಡಿಯುದವ ಧರ್ಮಿ ; ಸರ್ವಜ್ಞ.

The lamp—the sun: selfish and disinterested beneficence.

1037. ಬಡವ ಬಟ್ಟೆಯ ಹೋಗಲೊಡನೆ, ಸಂಗಡವೇಕೆ ?
ಬಡತನವೆಂಬ ಹುಲಿ ಗೂಡಿ ಬರುವಾಗ,
ನುಡಿಸುವರಿಲ್ಲ ; ಸರ್ವಜ್ಞ.

The poor want no protector on the road; a tiger, poverty with them.

1038. ಪ್ರಸ್ತಾಪಕ್ಕೊದಗಿದ ಕತ್ತೆ ಮದಕರಿಯಂತೆ
ಪ್ರಸ್ತಾಪ ತೀರ್ದ ಮರುದಿವಸ ಮದಕರಿಯು
ಕತ್ತೆಯಂತಕ್ಕು ಸರ್ವಜ್ಞ.

A well-timed gift, though small, of great value.

1039. ಮಾತ ಬಲ್ಲಾತಂಗೆ ಮುತ್ತೊಂದು ಮಾಣಿಕವು ;
ಮಾತುಗಳರಿಯದಧಮರಿಗೆ ಮಾಣಿಕವು
ತೂತು ಬಿದ್ದಂತೆ ; ಸರ್ವಜ್ಞ.

Dexterity of speech, a jewel.

1040. ಧನಕನಕವುಳ್ಳನಕ, ದಿನಕರನಂತಕ್ಕುಂ ;
ಧನಕನಕ ಹೋದ ಮರುದಿನ ಹಾಳೂರ
ಶುನಕನಂತಕ್ಕು ; ಸರ್ವಜ್ಞ.

When there is wealth, men are like the sun; when it is gone, like dogs.

1041. ಸೊಡರು, ಸುಲಿಗೆಯ ಯಾಳು, ಪಡೆದುಂಬ ಸೂಳೆಯೂ,
ತುಡುಗಣಿನಾಯಿ, ಯೆಳಯನು, ಯರಸಾಳೂ,
ಬಡತನಯರಿಯರು ; ಸರ್ವಜ್ಞ.

These know nothing of poverty.

1042. ಅಳಿಯೂರ ತಳವಾರ, ಕಳೆಯುಳ್ಳ ಸೂಳೆಯೂ,
ಹೊಳಲ ಸುಂಕಿಗ, ಹಳೆನಾಯಿ, ಯಾಚಕನು,
ತೊಲಗುವತೆ ಯಲ್ಲ ; ಸರ್ವಜ್ಞ.

These will not go out of the way.

1043. ಅಬ್ಬಿಗರುಷ್ಣವ್ಯಾಕೆ ? ಕಬ್ಯಾಕೆ ಬೋಡಂಗೆ ?
ನಿಬ್ಬಣವು ಯಾಕೆ ಕುರುಡಂಗೆ ? ವನವೊಳು
ಬೊಬ್ಬುಲಿಯು ಯಾಕೆ ? ಸರ್ವಜ್ಞ.

A man must not desire a thing, for which he is unfit.

1044. ಆಡಿ ಹುಸಿಯಲು ಹೊಲ್ಲ; ಕೂಡಿ ತಪ್ಪಲು ಸೊಲ್ಲ ;
ಕಾಡುವ ನೆಂಟ ಬರ ಹೊಲ್ಲ; ಮಾನಿನಿಗೆ
ನಾಡ ಮಾತ್ಹೊಲ್ಲ; ಸರ್ವಜ್ಞ.

It is not proper to promise, and then to lie: a woman not fit for talking on politics.

1045. ಅರಿವು ಇರದಿರೆ, ಹೊಲ್ಲ ; ಕರಿಯು ಬೆದರಲು ಹೊಲ್ಲ;
ಅರಿಯದೂರೊಳಗಿರ ಹೊಲ್ಲ; ಧೊರೆಗಳಿಗೆ
ಸರಿಮಾತು ಹೊಲ್ಲ; ಸರ್ವಜ್ಞ.

Familiarity with princes not proper, &c.

1046. ಕೆಟ್ಟ ಹಾಲಿಂದ ಹುಳಿ ಇಟ್ಟರ್ದ ತಿಳಿ ಲೇಸು !
ಕೆಟ್ಟ ಹಾರ್ವಿತೆಯು ಬದಕಿಂದ ಸೂಳೆಯು
ನೆಟ್ಟನೇ ಲೇಸು ! ಸರ್ವಜ್ಞ.

A harlot better than a bad brahman-wife.

1047. ಯೆಲ್ಲಾರು ಹಿರಿಯರೂ; ಬಲ್ಲ ಗುರುವರುಗಳೂ;
ನಲ್ಲಳು ಮುಂದೆ ಸುಳಿದರೆ, ಲೋಕದೊಳಗೆ
ವೊಲ್ಲದವರಾರು ? ಸರ್ವಜ್ಞ.

All are called elders, priests, but not one is able to withstand a woman.

1048. ಸುಣ್ಣವಿಲ್ಲದ ವೀಳ್ಯ, ಬಣ್ಣವಿಲ್ಲದ ಮದುವೆ,
ಹೆಂಣಿಲ್ಲದನ ಸಂಸಾರ, ಮಳಲೊಳಗೆ
ಯೆಣ್ಣೆ ಹೊಯಿದಂದೆ ; ಸರ್ವಜ್ಞ.

These are as pouring oil on the sand, i. e., useless.

1049. ರಾಗವಿಲ್ಲದ ವಿದ್ಯೆ, ಭೋಗವಿಲ್ಲದ ನಿದ್ರೆ,
ತ್ಯಾಗವಿಲ್ಲದನ ಧೊರೆತನ, ಹಾಳೂರ
ಗೂಗೆಯಂತಕ್ಕು ; ಸರ್ವಜ್ಞ.

These are like an owl in a desolated village, i. e. nobody regards them.

1050. ಹಾಸುವಿಲ್ಲದ ನಿದ್ರೆ, ಪೂಸುವಿಲ್ಲದ ಮೀಯು
ಭಾಷೆಯಿಲ್ಲದನ ಗೆಣೆತನ, ಮೋಟಕ್ಕೈ
ಬೀಸಿ ಕರೆದಂತೆ ; ಸರ್ವಜ್ಞ.

These are like winking with a handless arm, i. e., of no effect.

1051. ಬೇಡನೊಳ್ಳಿದನೆಂದು ಮಾಡದಿರು ! ಸಭೆಯೊಳಗೆ
ಬೇಡ ಬೇಡಿಮುದ ಕೊಡದಿರೆ, ರಾತ್ರಿಯೊಳು
ಗೋಡೆಯಾನೊಡೆವ; ಸರ್ವಜ್ಞ.

The fowler a bad man.

1052. ವ್ರೋಜನೊಕ್ಕಲು ಯಲ್ಲ, ಹೂಜೆ ಭಾಂಡದೊಳಲ್ಲ;
ಗಾಜೊಂದು ಲೋಹದೊಳಗಲ್ಲ ಯಂಬಲಿ
ಭೋಜನವೆ ಯಲ್ಲ; ಸರ್ವಜ್ಞ.

These seem to be something, but are of no account really.

1053. ಉತ್ತರೆಯು ಬರತರೇ, ಹೆತ್ತಮ್ಮ ತೊರಿದರೇ,
ಸತ್ಯರೂ ತಪ್ಪಿನಡೆದರೆ, ಲೋಕ ತಾ
ನೆತ್ತ ಸೇರುವದು ? ಸರ್ವಜ್ಞ.

If these happen, the world will come to a stand still.

1. ಉತ್ತರೆ ನಕ್ಷತ್ರದ ಮಳೆ.

1054. ಯತಿಗಳಿಗೆ ಮತಿ ಕೆಡಗು ; ಸತಿಗೆ ಸಜ್ಜನ ಕೆಡಗು;
ಮತಿವಂತರೂ ಭ್ರಮೆಗೊಳಗು ಹೊನ್ನೆಂಬ
ಶ್ರುತಿಯ ಕೇಳಿದರೆ ; ಸರ್ವಜ್ಞ.

At the sound of money, even wise men become infatuated.

1055. ಅಟ್ಟಲೋಡದ ತೇಜಿ, ಮುಟ್ಟಿ ಇರಿಯದ ಬಂಟ,
ಇಟ್ಟೆಡೆಗಿಲ್ಲದಾಳಿದ್ದರಾಕಾರ್ಯ
ಕೆಟ್ಟಿತೆಂದರಿಯೊ ! ಸರ್ವಜ್ಞ.

By these the king's cause is lost.

1056. ವೊರಿಗೆ ಧೊರೆಯು ರೂಪು; ನಾರಿಗೆ ಗುಣವು ರೂಪು;
ಚಾರುಕೋಗಿಲೆಗೆ ಸ್ವರ ರೂಪು; ಮನುಜಗೆ
ಧೀರತ್ವ ರೂಪು; ಸರ್ವಜ್ಞ.

Goodness and bravery are beauty to a king.

1057. ಪ್ರಸ್ತಾವ ನುಡಿಯಲ್ಪ್ರಶಸ್ತವಾಗಿರ ಬೇಕು;
ಪ್ರಸ್ತಾವ ತಪ್ಪಿ ನುಡಿದರೆ, ದೇವಾಂಗ[1]
ದುಸ್ತು ಬಿದ್ದಂತೆ; ಸರ್ವಜ್ಞ.

A word in season excellent: out of season it is a silk-cloth torn.

1. ಅಪೂಟ ರೇಸ್ಮಿಯ ವಸ್ತ್ರ.

1058. ಹೊಲಬನರಿಯದ ಮಾತು ತಲೆ ಬಾಗಿ ಯೆದ್ದಂತೆ;
ಹೊಲಬರಿತು ವೊಂದ ನುಡಿದರೆ, ಯಾಮಾತು
ಫಲಪಕ್ವದಂತೆ; ಸರ್ವಜ್ಞ.

An unwise word as one looking to the ground, a wise one like a ripe fruit.

1059. ಶಿರಿ ಭರವುಳ್ಳಾಗಲು, ಮರೆಯದವನೇ ಜಾಣ;
ಕೊರತೆ ಯಾಗೆ, ಯಾಕೊಡವೆನಗಿಲ್ಲೆಂದು
ಅರಸುವವ ಹೆಡ್ಡ; ಸರ್ವಜ್ಞ.

A clever man not forgetting himself in prosperity.

## DESCRIPTION OF THE COUNTRY (KARNATAKA.)

### 15. ದೇಶ ಪದ್ಧತಿ.

1060. ಬಟ್ಟೆಬಟ್ಟೆಯೊಳಲ್ಲ ಸೊಟ್ಟೆಜಾಲಿಯ ಮುಳ್ಳು;
ಹುಟ್ಟಿದವರೆಲ್ಲ ಗಿಜಿಪಾಯಿ[1]; ಮೂಡಲ
ಬಟ್ಟೆ ಬೇಡೆಂದ! ಸರ್ವಜ್ಞ.

The country and people to the east.

1. ಮಾತು ನೆಟ್ಟಗೆ ಬಾರದವರು.

1061. ಊರು ಸನಿಹದಲಿಲ್ಲ; ನೀರೊಂದು ಗಾವುದವು;
ಸೇರಿ ನಿಲ್ಲುವರೆ, ನೆರಳಿಲ್ಲ ಬಡಗಲ
ದಾರಿ ಬೇಡೆಂದ ಸರ್ವಜ್ಞ.

The north.

1062. ಜೋಳದಾ ಬೋನಕ್ಕೆ ಬೇಳೆಯ ತೊಗಿಯಾಗಿ
The open country. ಕಾಳೆಮ್ಮೆ ಕರದ ಹೈನಾಗಿ ಬೆಳವಲು
ಮೇಳ[1] ! ನೋಡೆಂದ ! ಸರ್ವಜ್ಞ.

1. ಈ ಪದಾರ್ಥಗಳಿಗೆ ಬೆಳವಲಶೀಮೆ ಚಂದ.

1063. ಕಡಲೆಯನು ಗೋಧಿಯನು ಮಡಿಕುದ್ದು ಬೆಳವರೂ
May he not be satiated, who contemns open country! ಸುಡ ಬೇಕು ನಾಡನೆಂದವನ ಬಾಯೊಳಗೆ
ಪುಡಿಗಡಬು ಬೀಳ್ಗ ! ಸರ್ವಜ್ಞ.

1064. ಕಾಡೆಲ್ಲ ಕಸುಗಾಯಿ; ನಾಡೆಲ್ಲ ಹೆಗ್ಗಡವು;
The west the woody country. ಆಡಿದ ಮಾತು ನಿಜವಿಲ್ಲ; ಮಲನಾಡ
ಕಾಡು ಸಾಕೆಂದ ಸರ್ವಜ್ಞ.

1065. ಶೀತಧಾತುಗಳುಂಟು ; ಬಾತಿಹವು ಕುಕ್ಷಿಯೂ ;
It is unhealthy ; ಪಾತಕರು ಮರದಿ[1] ತಿರಿದುಂಬ ನಾಡಿಗೆ
ಯಾತಕೆ ಬಹರು ಸರ್ವಜ್ಞ.

1. ಸಾಟು ಪಾತ್ರೆ ಮುಂತಾದ ಸಾಮಾನುಗಳು ಅಲ್ಲಿ ಮರದವು.

1066. ಅಲ್ಲ ಯರಿಷಣವುಂಟು ; ಬೆಲ್ಲ ಬಿಳಿಯಲೆ ಯುಂಟು ;
but for eatables it is unsurpassed ವಳ್ಳೆಹಲಸುಂಟು ; ಮೆಲಲ್ಕೆ ಮಲನಾಡ
ಅಲ್ಲೆಂನ ಬಹುದೆ ? ಸರ್ವಜ್ಞ,

1067. ಕಾಳಕೂಟದ ವಿಷವು, ಚೇಳು ನಂಬಿದ ಹಗೆಯು,
Tamulians, emigrants. ಹಾಳೂರ ಚುರಚಿ, ನಸುಗುನ್ನಿ[1], ತಿಗುಳರ[2]
ಘಾಳಿ ಬೇಡೆಂದ ಸರ್ವಜ್ಞ.

1. ಇವಷ್ಟು ಬೇಡ; ತಿಗುಳರನ್ನು ಇವಕ್ಕೆ ಸರಿ ಮಾಡುತ್ತಾನೆ. 2. ಅಗ್ನಿ ದಿಕ್ಕಿನ ಕಡೆಯವರು ತಂಮ ದೇಶದಲ್ಲಿ ಯಥಾಪ್ರಕಾರ ಇರುತ್ತಾರೆ, ಆದರೆ ಅದನ್ನು ಬಿಟ್ಟು ತಿರಿಗಿ ತಿರಿಗಿ ತಂಮ ಜವಾರಿ ಮರ್ಯಾದೆಯು ಕಳೆದು ಇತ್ತಕ್ಕೂ ಅತ್ತಕ್ಕೂ ಹೊಂದದೆ ಅಸಂಖ್ಯಕ್ಕೆ ಒಳಗಾಗುತ್ತಾರೆ.

1068. ತಿಗುಳಜನಗೆಣಿಗಿಂದ ಬಗಳುವ ಶುನಿ ಲೇಸು
ಮುಗುಳಿಯ ಮರದ ನೆರಳಿನಿಂದ ನುಂಗುವಾ
ನೆಗಳು ಲೇಸೆಂದ! ಸರ್ವಜ್ಞ.

1069. ರಾಗವೇ ಮೂಡಲೂ ಯೋಗವೇ ಬಡಗಲೂ
ರೋಗವೇ ಶುದ್ಧ ಪಡವಲೂ ತೆಂಕಲೂ
ಭೋಗದಾ ಬೀಡು ಸರ್ವಜ್ಞ.

East, west, north, south; these four described.

1070. ವೃಡಹೀನ ಮೂಡಲೂ ನುಡಿಹೀನ ಬಡಗಲೂ
ಕಡುಕೋಪದವರು ಪಡವಲು ಟೆಂಕಲೂ
ಸಡಗರಾದವರು ಸರ್ವಜ್ಞ.

## ON THE JAINS.

### 16. ಜೈನರ ಪದ್ಧತಿ.

1071. ಮುತ್ತು ಮುದಿಕಿಗೆ ಯಾಕೆ? ತೊತ್ತ್ಯಾಕೆ ಗುರುಗಳಿಗೆ?
ಬತ್ತಿದ ಕೆರೆಗೆ ತೆರಿಗ್ಯಾಕೆ? ಶ್ರವಣರಿಗೆ
ಮಿಥ್ಯತನ ಯಾಕೆ? ಸರ್ವಜ್ಞ.

Jains shall not lie.

1072. ಉಪ್ಪು ಸಪ್ಪಗೆ ಯಕ್ಕು! ಕರ್ಪುರವು ಕರಿದಕ್ಕು!
ಸರ್ಪಗೆ ಬಾಲ ಯರಡಕ್ಕು ಶ್ರವಣರುಂ
ತಪ್ಪುಡಿದಂದು[1]! ಸರ್ವಜ್ಞ.

It is impossible with Jains, to lie.

1. ಇದು ಹಾಸ್ಯ.

1073. ಹೆರೆ ಹೋದ ವುರುಗನಾ ಗರಳ ತಾ ತಪ್ಪುವದೆ?
ಪರಜ್ಞಾನಬೋಧೆ ಯರಿಯದಾ ಗುರುಗಳು
ಶಿರಿಯು ತೊರೆದೇನು ಸರ್ವಜ್ಞ.

The serpent throwing off its hood, their priests becoming ascetics.

1074. ಎಂತು ಪ್ರಾಣಿಯ ಕೊಲ್ಲದಂತುಟೇ ಜಿನಧರ್ಮ
ಜಂತು ಬಸುರಲ್ಲಿ ಸತ್ತರೇ, ಯಾಜೀವಿ
ಯಂತಾದ ಶ್ರವಣ ! ಸರ್ವಜ್ಞ

Their religion is, not to kill: but how, if in their bellies, worms are killed?

## BRAHMANS.

### 17. ದ್ವಿಜದರಶನ ಪದ್ಧತಿ

1075. ಅರಿತಂಗೆ ಆರ್ವತ್ತು ; ಮರತಂಗೆ ಮೂವತ್ತು ;
ಒರೆವಂಗೆ ರಾಜ್ಯ ಸರಿಪಾಲು ; ಬ್ರಾಹ್ಮಣ
ಬರಿಯದೆ ಕೆಟ್ಟ; ಸರ್ವಜ್ಞ.

They must live on government-employ.

1076. ಬೇಡಂಗೆ ಕೊಡೆ ಹೊಲ್ಲ ; ಆಡಿಂಗೆ ಮಳೆ ಗೊಲ್ಲ ;
ಬೇಡುಂಬವಂಗೆ ಬರ ಹೊಲ್ಲ ; ದ್ವಿಜನಿಗೆ
ನಾಡ ನುಡಿ ಸಲ್ಲ ; ಸರ್ವಜ್ಞ.

An umbrella to a hunter, government employ to a brahman priest.

1077. ಮೀಪರೆ[1], ಪೋಪರೇ, ಪಾಪವೇನದು ಕೆಸರೇ ?
ಮೀಪರೆ, ಮೈಯ್ಯ ಮಲ ಪೋಪುದಾಪಾಪ
ಲೇಪಿಸಲಕ್ಕು ; ಸರ್ವಜ್ಞ.

Sin not bodily filth, not removed by ablutions.

1. ಜಳಕ ಮಾಡಿದರೆ, ಪಾಪ ಹೋಗ ಬೇಕಾದರೆ, ಅದು ಕೆಸರಾದರೆ ಹೋದೀತು.

1078. ಹಿರಿದು ಪಾಪವ ಮಾಡಿ ಹರಿವ ನೀರೊಳು ಮುಳುಗೆ,
ಕರಗೊದೆ ಪಾಪ ? ತಾ ಮುನ್ನ ಮಾಡಿದ್ದು
ಯೆರೆಯಕಲ್ ಹೆಂಟೇ ? ಸರ್ವಜ್ಞ.

Is sin an unburnt brick, that it should dissolve by bathing.

1079. ಮಟ್ಟಿಯಾ ಮಣ್ಣನ್ನು ಯಿಟ್ಟು ತಾ ನೊಸಲೊಳಗೆ
ನೆಟ್ಟನೆ ಸ್ವರ್ಗವಡಯುವರೆ, ಸಾಣಿಕ
ಲ್ಕೆಟ್ಟ ಕೇಡೇನು[1] ? ಸರ್ವಜ್ಞ.

The sectarian mark on the forehead of no use.

1. ಅದುಯಾಕೆ ಬಡಯುತ್ತದೆ, ಯಾಕೆ ಸ್ವರ್ಗಕ್ಕೆ ಹೋಗುವದಿಲ್ಲ.

1080. ಎಂಜಲೆಂಜಲು ಯಂನುತಂಜುವ ವಿಪ್ರರು ತಾ
ವೆಂಜಲಿಂದಾದ ತನುವಿರಲದನರಿತು
ಅಂಜುವರೇಕೆ ? ಸರ್ವಜ್ಞ.

Why are they afraid of 'refuse' their body consisting of it ?

1081. ಮುಟ್ಟಾದ ಹೊಲೆಯೊಳು ಹುಟ್ಟೋದು ಜಗವೆಲ್ಲ ;
ಮುಟ್ಟ ಬೇಡೆಂದು ತೊಲಗುವ ಹಾರ್ವ ತಾ
ಹುಟ್ಟಿದನೆಲ್ಲಿ ? ಸರ್ವಜ್ಞ.

Whence was he born, that he should call others impure ?

1082. ಚಂನಾದ ಮೂಟೆಂದು ಕೆಂನೆಯಾಡನು ತಿಂದು
ಮುಂನತಸ್ವರ್ಗವಡರುವರೆ, ಹಿಂಡಾಡ
ತಿಂನುವನೇಕೆ ? ಸರ್ವಜ್ಞ.

If there is heaven by eating a sacrificed he-goat, why hell to him, who eats always ?

1. ನಿತ್ಯ ತಿನ್ನುವವನು ಯಾಕೆ ಸ್ವರ್ಗಕ್ಕೆ ಹೋಗುವದಿಲ್ಲ; ಅವನು ತಿಂದದ್ದು ಹಿಂಡಿನಷ್ಟು ಆಗುವವು.

1083. ಮುನ್ನ ಮಾಡಿದ ಪಾಪ ಹೊಂನಿಲೀ ಪೋಪುದೇ ?
ಹೊನ್ನಿನ ಪುಣ್ಯವದು ಬೇರೆ ; ಪಾಪ ತಾ
ಮುನ್ನಿನಂತಿಹದು ; ಸರ್ವಜ್ಞ.

Remission of sins not by giving gold.

1084. ಬೆಂದಿರ್ಪ ಮನೆಗೆತ್ತ ಮುಂದೆ ತೋರಣ ವ್ಯಾಕೆ ?
ಸಂದ ಶೂದ್ರತಿವಡನಿರುವ ಬ್ರಾಹ್ಮಣಗೆ
ಮಿಂದೂಟವ್ಯಾಕೆ ? ಸರ್ವಜ್ಞ.

Decorations to a house burnt down, the ablutions of brahmans living in sin

## THE SIGNS OF THE ZODIAC.

## 18. ರಾ ಶಿ ಪ ದ್ಧ ತಿ .

1085. ಕುರಿಯುನೇರಲು[1] ಗುರುವು[2] ಧರೆಗೆ ಹೆಂಮಳೆ ಯಕ್ಕು ;
ಪರಿಪರಿಯ ಧಾನ್ಯ ಬೆಳೆಯಕ್ಕು ; ಪ್ರಜೆಗೆ
ಕರೆಯಲಕ್ಕು ಪಶು; ಸರ್ವಜ್ಞ.

Aries.

1. ಮೇಷ. 2. ಗೃಹಗಳಲ್ಲಿ ಒಂದು=ಬೃಹಸ್ಪತಿ.

1086. ವೃಷಭನೇರಲು ಗುರುವು, ವಸುಧೆಯೊಳು ಮಳೆ ಯಕ್ಕು ;
Taurus. ಶಿಶುಪಶುಸ್ತ್ರೀಯರು ಜಯಕ್ಕು ; ಜನರೆಲ್ಲ
ಮಿಸುನಿಯಂತಕ್ಕು ; ಸರ್ವಜ್ಞ.

1087. ಮಿಥುನಕ್ಕೆ ಗುರು ಬರಲು; ಮಥನ ಲೋಕದೊಳಕ್ಕು ;
Gemini. ಪೃಥುವಿಯೊಳಗೆಲ್ಲ ಬರನಕ್ಕು ; ನರಪಶು
ಹತವಾಗಲಕ್ಕು; ಸರ್ವಜ್ಞ.

1088. ಏಡಿ[1] ಯೇರಲು ಗುರುವು; ನೋಡೆ ಕಡೆಮಳೆ ಯಕ್ಕು ;
Cancer. ನಾಡೊಳಗೆಲ್ಲ ಬೆಳೆ ಯಕ್ಕು; ಪ್ರಜೆಗಳೂ
ಈಡೇರಲಕ್ಕು; ಸರ್ವಜ್ಞ.

1. ಕರ್ಕಟ, ಕರ್ಕಾಟಕ.

1089. ಸಿಂಗಕ್ಕೆ ಗುರು ಬರಲು, ಸಂಗರವು ಘನವಕ್ಕು ;
Leo. ಅಂಗನೆಯರಿಗೆ ಬಾಧೆ ಯಕ್ಕು ; ಕಡೆಮಳೆ
ಹಿಂಗಾರಿ ಯಕ್ಕು ; ಸರ್ವಜ್ಞ.

1090. ಕನ್ಯಕ್ಕೆ ಗುರು ಬರಲು, ಚೆನ್ನಾಗಿ ಮಳೆ ಯಕ್ಕು ;
Virgo. ಚೆಂನಾಗಿ ಪಶುಕರೆಯಕ್ಕು ; ಮುಂಡನದ
ಕನ್ಯಯರು ಯಕ್ಕು ; ಸರ್ವಜ್ಞ.

1091. ತುಲವನೇರಲು ಗುರುವು, ನೆಲೆಯಾಗಿ ಮಳೆ ಯಕ್ಕು ;
Libra. ಫಲವುಧಾನ್ಯಗಳು ಬೆಳೆ ಯಕ್ಕು ; ಪ್ರಜೆಗೇ
ನಿಲಕಾಲ[1]ಮುಕ್ಕು ; ಸರ್ವಜ್ಞ.

1. ನಿಲ್ಲುವ ಕಾಲ.

1092. ಚೇಳನೇರಲು[1] ಗುರುವು ; ಕಾಳಗವು ಪಿರಿದಕ್ಕು ;
Scorpio. ಘೋಳಯಿಂ ಮಳೆ ಕಿರಿದಕ್ಕು ; ಬೆಳೆ ಯಲ್ಲ
ಕೋಳಾಗಲಕ್ಕು ; ಸರ್ವಜ್ಞ.

1. ವೃಶ್ಚಿಕ.

1093. ಬಿಲ್ಲನೇರಲು[1] ಗುರುವು, ತಲ್ಲಣವು ಜಗಕೆಲ್ಲ;
Sagittarius. ಕಲ್ಲ ಮೇಲೆಲ್ಲ ಬೆಳೆ ಯಕ್ಕು ; ನೃಪರಿಗೆ
ತಲ್ಲಣವಕ್ಕು ; ಸರ್ವಜ್ಞ.

1. ಧನು, ಧನುಸ್ಸು.

1094. ಮಕರಕ್ಕೆ ಗುರು ಬರಲು, ಮಕರತೋರಣವಕ್ಕು ;
Capricornus. ಸಕಲಧಾನ್ಯಗಳು ಬೆಳೆ ಯಕ್ಕು ; ಪ್ರಜೆಗಳು
ಸುಖವಿರಲಕ್ಕು ; ಸರ್ವಜ್ಞ.

1095. ಕುಂಭಕ್ಕೆ ಗುರು ಬರಲು ; ತುಂಬ್ಯಾವು ಕೆರೆ ಭಾವಿ ;
Aquarius. ಸಂಭ್ರಮದಿಂದ ಬೆಳೆ ಯಕ್ಕು ; ಮರ್ತ್ಯದೊಳು
ಯೆಂಬೊದಿದು ಶಿದ್ಧ ; ಸರ್ವಜ್ಞ.

1096. ಮೀನಕ್ಕೆ ಗುರು ಬರಲು, ಮಾನ ಖಂಡಗವಕ್ಕು ;
Pisces. ಕಾನನವೆಲ್ಲ ಬೆಳೆ ಯಕ್ಕು ; ಪ್ರಜೆಗಳ್ಗೆ
ಆನಂದವಕ್ಕು ; ಸರ್ವಜ್ಞ.

ಮಂಗಳ, ಬೃಹಸ್ಪತಿ, ಶನಿ, ಶುಕ್ರ, ಬುಧ ಎಂಬೀ ಯೈದು ಮಾತ್ರ ಗ್ರಹಗಳ ಲೆಖ್ಖದಲ್ಲಿ ರತಕ್ಕದು. ರಾಹು, ಕೇತು, ಸೂರ್ಯ, ಚಂದ್ರ ಎಂಬಿವು ಗ್ರಹಗಳೊಳಗಲ್ಲ.

## ASTROLOGY AND ASTRONOMY.

### 19. ಜ್ಯೋತಿಷ್ಯ ಪದ್ಧತಿ.

1097. ರಂಧ್ರಗತಿಯಾದಿತ್ಯರೊಂದಾಗಿ ಯರ್ಥಿಸುತ
Computation of the 27 lunar mansions.
ಅಂದಿನಾ ತಿಥಿಯನೊಡಗೂಡೆ, ನಕ್ಷತ್ರ
ಮುಂದೆ ಬಂದಕ್ಕು ; ಸರ್ವಜ್ಞ.

1. ದೇಹದಲ್ಲಿ ಒಂಭತ್ತು ರಂಧ್ರಗಳಿರುವದರಿಂದ, ಈಶಬ್ದ ಒಂಭತ್ತಕ್ಕೆ ಸಾಜ್ಞೆ. ರಂಧ್ರಗತಿ=ಸೂರ್ಯ ಹಾದು ಹೋಗುವ ೯ನೇ ಸ್ಥಾನ. (೧೨ ರಾಶಿಗಳು ೧೨ ಸ್ಥಾನಗಳಾಗಿವೆ.) ಯಾವದೊಂದು ದಿವಸದ ನಕ್ಷತ್ರ ತಿಳಿಯಬೇಕಾದರೆ, ಆದಿವಸ ಸೂರ್ಯವಿರುವ ರಾಶಿಗೆ ಧನುರಾಶಿಯಿಂದ (ಇದು ೯ನೇದು) ಎಣಿಸಿ ಬಂದಷ್ಟರಲ್ಲಿ ಆ ದಿವಸದ ತಿಥಿಯ ಕೂಡಿಸಲಾಗಿ, ಯಾವ ಸಂಖ್ಯೆ ಹೊರಡುತ್ತದೋ, ಅದರಲ್ಲಿ ಒಂದನ್ನು ಕಳೆದು ಉಳಿದ ಸಂಖ್ಯೆದ ನಕ್ಷತ್ರವಿರುವದು. ಉದ: ೧೮೬೦ನೇ ಇಸವಿ ೧ನೇ ಜುಲೈ ; ಈ ದಿವಸದ ತಿಥಿ: ಆಷಾಡ ಶು॥ ೪. ಈ ದಿವಸ ಸೂರ್ಯ ಮಿಥುನರಾಶಿಯಲ್ಲಿರುವದರಿಂದ, ಧನುರಾಶಿಯಿಂದ ಎಣಿಸಿದರೆ ೭ ಬರುತ್ತದೆ. ಇದಕ್ಕೆ ನಾಲ್ಕು ಕೂಡಿಸಿದರೆ, ೧೧ ಬರುವದು. ಇದರಲ್ಲಿ ತಿರಿಗಿ ೧ ಕಳೆದರೆ, ೧೦ ಉಳಿಯುತ್ತದೆ. ಹತ್ತನೇ ನಕ್ಷತ್ರ ಮಘೆ, ಈ ಪ್ರಕಾರ ನೋಡಬೇಕು. ಬಹುಳ ಪಕ್ಷವಾದರೆ, ಶುದ್ಧ ಪಕ್ಷದ ಹದಿನೈದು ತಿಥಿಗಳಲ್ಲದೆ, ಆ ಬಹುಳ ಪಕ್ಷದ ತಿಥಿಗಳನ್ನು ಸಹಾ ಕೂಡಿಸಲಾಗಿ ಇಪ್ಪತ್ತೇಳಕ್ಕಿಂತ ಹೆಚ್ಚಿನ ಸಂಖ್ಯೆ ಕೂಡಿ ಬಂದರೆ, ನಕ್ಷತ್ರ ಸಂಖ್ಯೆ ೨೭ ಕಳೆದು ಉಳಿದ ಸಂಖ್ಯೆ ವೆಷ್ಟೋ ಅಷ್ಟನೇ ನಕ್ಷತ್ರ ಸರಿ.

ಉದ: ೧೮೬೦ ಇಸವಿ ೨೫ ಜುಲೈ; ಈ ದಿವಸದ ತಿಥಿ ಆಷಾಡ ಬ॥ ೧೪. ಈದಿವಸ ಸೂರ್ಯ ಕರ್ಕಾಟಕದಲ್ಲಿರುತ್ತಾನೆ. ಧನುರಾಶಿಯಿಂದ ಕರ್ಕಾಟಕಕ್ಕೆ ಎಣಿಸಿದರೆ ೮ ಬರುತ್ತದೆ. ತಿಥಿಗಳು ಶುದ್ಧ ಪಕ್ಷದವು ೧೫ ಬಹುಳ ಪಕ್ಷದವು ೧೪ ಅಂತು ೨೯ ಬರುವದು. ಇವಕ್ಕೆ ೮ ಕೂಡಿಸಲಾಗಿ ೩೭ ಬರುವದು. ಇದರಲ್ಲಿ ಒಂದು ಕಳೆದರೆ ೩೬ ಉಳಿಯುವದು ಇದರಲ್ಲಿ ನಕ್ಷತ್ರ ಸಂಖ್ಯೆ=೨೭ ಹೋಗಲಾಗಿ ೯ ಉಳಿಯುವದು ಅಂದರೆ ಈ ದಿವಸದಲ್ಲಿ ೯ನೇ ನಕ್ಷತ್ರ ವಿರುತ್ತದೆ. ಅದು ಆಶ್ಲೇಷ.

1098. ಸಂದಿದ್ದ ಮಾಸವನು ಕುಂದದಿಂಮಡಿ ಮಾಡಿ
Another method of that computation.
ಅಂದಿನ ತಿಥಿಯನೊಡಗೂಡಲಾತಾರೆ
ಮುಂದೆ ಬಂದಿಹುದು ; ಸರ್ವಜ್ಞ.

ಉದ: ೧೮೬೦ ಇಸವಿ ೧ನೇ ಜುಲೈ, ಈ ದಿವಸ ಯುಗಾದಿ ಹಿಡಿದು ಸಂದಿದ್ದ ಮಾಸ ೩.

ಇದನ್ನು ಇಮ್ಮಡಿ ಮಾಡಲಾಗಿ ೬ ಬರುತ್ತದೆ. ಈ ದಿವಸದ ತಿಥಿ ೪ ಹೀಗೆ ಇರಲಾಗಿ ೧೦ನೇ ನಕ್ಷತ್ರ ಬಂತು—ಆದರೆ ಖಂಡ ತಿಥಿಗಳು ಬಂದ ದಿವಸ ನೋಡಿದರೆ ಸ್ವಲ್ಪ ತಪ್ಪುವದು. ಉದ: ೧೮೬೦ ಇಸವಿ ೨೫ ಜೂಲೈ; ಈ ದಿವಸದ ತಿಥಿಗಳು ಕೂಡಿ ೨೯, ಸಂದಿದ್ದ ಮಾಸ ೬ ಇವನ್ನು ಕೂಡಿಸಲಾಗಿ ೪೫ ಬರುವದು. ಇದರಲ್ಲಿ ೨೭ ಕಳೆದರೆ ೮ ಉಳಿಯುವದು, ಆದರೆ ಈ ದಿವಸದ ನಕ್ಷತ್ರ ಆಶ್ಲೇಷಾ ಇದು ೯ನೇ ನಕ್ಷತ್ರ.

1099. ಮೃಗಶಿರಾದಿಯು ಮೂರು ಭಗಣದಲಿ[1] ರವಿ ಯಿರಲು,
ಮಘೆಯ ರಿಕ್ಷವನು ಶಶಿ ತೊಲಗೆ, ಮಳೆಗಾಲ
ಜಗಕೆ ಯಿಟ್ಟೆಡೆಯು ; ಸರ್ವಜ್ಞ.

*Signs of an abundant rainy season.*

1. ಆರಿದ್ರ ಪುನರ್ವಸು ನಕ್ಷತ್ರಗಳಲ್ಲಿ ಸೂರ್ಯನು ಈ ೨ ನಕ್ಷತ್ರಗಳನ್ನು ತಿಂಗಳಿಗೆ ಎರಡರಂತೆ ಕಳೆದು ಹೋಗುತ್ತಾನೆ ; ಆದರೆ ಚಂದ್ರನು ದಿನಕೊಂದರ ಪ್ರಕಾರ ಅವನ್ನೆಲ್ಲ ಬಂದು ತಿಂಗಳೊಳಗೆ ದಾಟಿ ಹೋಗುತ್ತಾನೆ. ಸೂರ್ಯನು ಪುನರ್ವಸುವಿನಲ್ಲಿ ಬಂದ ದಿವಸ ಚಂದ್ರನು ಮಘ ನಕ್ಷತ್ರ ಬಿಟ್ಟಿರ ಬೇಕು; ಹಾಗೆ ಯೋಗವಾದರೆ ಆ ವರುಷದ ಮಳೆಗಾಲ ಹೆಚ್ಚು ಅಂತ ತಿಳಿಯ ಬೇಕು.

1100. ಅಗಿಯ ಹುಂಣಿವಿ ಹೋದ ಮಿಗೆ ಮೂರು ದಿವಸಕ್ಕೆ,
ಮೃಗಧರನ ಕೂಡೆ ಮೃಗವಿರಲು,[1] ಮಳೆಗಾಲ
ಜಗ ದಣಿಯುಲಕ್ಕು ; ಸರ್ವಜ್ಞ.

*Another sign of a good rainy season.*

1. ಮೃಗಶಿರ ನಕ್ಷತ್ರ.

1101. ಅಡಿಯನಿಂಮಡಿ ಮಾಡಿ ಮೊಡಗೂಡಿ ಹಂನೊಂದ
ತಡೆಯದಿಂನೂರಪತ್ತಕೆ ಭಾಗಿಸಲು,
ನಡವ ಘಳಿಗಕ್ಕು ; ಸರ್ವಜ್ಞ.

*Computation of the hour of the day.*

ತನ್ನ ದೇಹಛಾಯೆ ತನ್ನ ಪಾದದಿಂದ ಅಳೆದು ಎಷ್ಟು ಅಡಿಗಳಾಗುತ್ತವೋ, ಅಷ್ಟನ್ನು ಇಮ್ಮಡಿ ಮಾಡಿ ಅದಕ್ಕೆ ಹಂನೊಂದನ್ನು ಕೂಡಿಸಿ ಬಂದಷ್ಟರಿಂದ ೨೧೦ ಭಾಗಿಸಬೇಕು. ಭಾಗಾಕಾರ ಬಂದದ್ದನ್ನು ಘಳಿಗೆ ಅಂತ ತಿಳಿಯ ಬೇಕು. ಆರು ತಾಸಿನೊಳಗಾಗಿ ನೋಡಿದರೆ, ಭಾಗಾಕಾರ ಬಂದಷ್ಟು ಘಳಿಗೆ ಆಗಿದೆ ಅಂತ ತಿಳಿಯಬೇಕು. ಆರು ತಾಸು ಆದ ಮೇಲೆ ನೋಡಿದರೆ, ಭಾಗಾಕಾರ ಬಂದಷ್ಟು ಘಳಿಗೆಗಳು ಹೊತ್ತು ಮುಣಗಲಿಕ್ಕೆ ಇನ್ನು ಉಳಿಯುತ್ತವೆಂತ ತಿಳಿಯಬೇಕು.

ಉದ : ದೇಹದ ಛಾಯ ೧೦ ಅಡಿ ಅದೆ. ೧೦+೧೦=೨೦. ೨೦+೧೧=೩೧ ಮುಂ

ೞ೧) ೨೧೧ (೬
೧೮೬
———
೨೫

ಜಾನೆಮಲ್ಲಿ ಛಾಯ ಹೀಗಿದ್ದರೆ, ೬|೨೫ ಆಗೆವೆಂತ ತಿಳಿಯಬೇಕು. ಆರು ತಾಸಿನ ಮೆಲೆ ದೇಹದ ಛಾಯ ಇಷ್ಟಾದರೆ ಹೊತ್ತು ಮುಣಗಲಿಕ್ಕೆ ಇನ್ನು ೬|೨೫ ಉಳಿಯುತ್ತವೆಂತ ತಿಳಿಯಬೇಕು.

**1102.** ಚಂದ್ರಮಾರ್ತಾಂಡರನು ಸಂದಿಸಿಯೆ ಪರಿವೇಷ
ಕುಂದದೇ ನಿಚ್ಚ ಬರುತಿರಲು, ಜಗವೆಲ್ಲ
ಕುಂದಣಿಗೆ ಯಕ್ಕು ; ಸರ್ವಜ್ಞ.

Every day a halo round the sun and moon, a bad sign.

**1103.** ಹೊತ್ತಾರೆ ನೆರವುದದು ಹೊತ್ತೇರೆ, ಹರವುದದು
ಕತ್ತಲೆಯ ಬಂಣಮುಗಿಲಾಗೆ, ಮಳೆಯು ತಾ
ನೆತ್ತಣದ್ದೈಯು ? ಸರ್ವಜ್ಞ.

Signs of rain not coming.

**1104.** ವಾಯು ವಾಯುವ ಕೂಡೆ, ವಹಿಲದಿಂ ಮಳೆ ಯಕ್ಕು ;
ವಾಯು ನೈರುತಿ ಯೊಡಗೂಡೆ, ಮಳೆಯು ತಾ
ವಾಯುವೇ ಯಕ್ಕು ; ಸರ್ವಜ್ಞ.

Signs of rain coming, and not coming.

**1105.** ಅಳಿವಂಣದಾಕಾಶ[1], ಗಿಳಿವಂಣದಾ ಮುಗಿಲು,
ಅಳಿದಳಿದುಮರ್ಕನುದಯಿಸಲು ಮಳೆಯು ತಾ
ತಳುವದೇ ಬಕ್ಕು ; ಸರ್ವಜ್ಞ.

Different signs of rain.

1. ಭೃಂಗ=ಕಪ್ಪು.

**1106** ಅಡರಿ ಮೂಡಲು ಮಿಂಚೆ, ಪಡವಲಕೆ ಧನು[1] ವೇಳೆ,
ಬಡಗಣದ ಘಾಳಿ ಕಡು ಬೀಸೆ, ಮಳೆಯು ತಾ
ತಡೆಯದಲೆ ಬಕ್ಕು ; ಸರ್ವಜ್ಞ.

ಇಂದ್ರ ಚಾಪ, ಮಳೆ ಬಿಲ್ಲು.

1107. ತೆಂಕಲಕೆ ಮುಗಿಲಡರೆ, ಶಂಕರನ ದೆಸೆ ಮಿಂಚೆ,
ಪಂಕಜಾರಾತಿ ಗುಡಿಗಟ್ಟೆ, ಮಳೆಯು ತಾ
ಭೋಂಕನೆ ಬಕ್ಕು ; ಸರ್ವಜ್ಞ.

1108. ತಳಿಗಿಗೆಯು ತಲೆ ಯಿಲ್ಲ; ಮಳೆಗೆ ಜೋಯಿಸರಿಲ್ಲ;
There is no abiding in this world. ಬೆಳಗಾಗಿ ಕಂನಗಳವಿಲ್ಲ ; ಲೋಕದಿ
ವುಳಗಾಲವಿಲ್ಲ; ಸರ್ವಜ್ಞ.

1109. ಹಸಿದರೆ, ವುಣಲಿಲ್ಲ, ವಸದೇಳ ಹೊತ್ತಿಲ್ಲ;
The annoyance of astrologers is not proper. ಬೆಸಗೊಂಬೊದಕ್ಕೆ ಗಡಿಯಿಲ್ಲ ; ಜೊಯ್ಸರ
ಘಸಣಿಯೆ ಸಲ್ಲ; ಸರ್ವಜ್ಞ.

1110. ಹಿಡಿಯುವದು ಹೆಬ್ಬಾವು: ಪಡೆಯುವದು ಪಡಿಭತ್ತ :
Catching a large serpent, the business of astrologers. ಹುಡಿಕಿ ನೋಡುವದು ಪರಬೊಂಮು : ಜೊಯಿಸಗೆ
ಕೊಡುವದೊಂದಡಿಕೆ ; ಸರ್ವಜ್ಞ.

1. ಜೋಯಿಸರ ಕೆಲಸ ಬಹಳ ದೊಡ್ಡದು ತೋರುತ್ತದೆ ಆದರೆ ಪ್ರಾಪ್ತಿ ಸ್ವಲ್ಪ.

1111. ಗತವಾದ ಮಾಸವನು ಗತಿಯಿಂದ ದ್ವಿಗುಣಿಸೀ
Computation of constellations. ಪ್ರತಿಪದಾದಿಗಳನೊಡಗೂಡಲಾಕರಣ
ವತಿಶಯದಿ ಬಕ್ಕು ; ಸರ್ವಜ್ಞ.

ಬವ ಬಾಲವ ಕೌಲವ ತೈತುಲ ಗರಜ ವಣಿಜ ಭದ್ರ ಶಕುನಿ ಚತುಷ್ಪಾತ್ ನಾಗವಂ ಕಿಮಸ್ತುಘ್ನಂ ಎಂಬೀ ಹಂನೊಂದು ಕರಣಗಳು ಅವೆ. ದಿನ ಬಂದಕ್ಕೆ ಎರಡು ಅತೀತವಾಗುತ್ತವೆ, ಆದ್ದರಿಂದ ಐದುವರೆ ದಿವಸಕ್ಕೆ ಒಂದಾವರ್ತಿ ತೀರುತ್ತಾ ಬರುತ್ತವೆ.

1. ಉದ: ೧೮೬೨ ಇಸಿವಿ ೧ನೇ ಜೂಲೈ. ಚೈತ್ರ ವೈಶಾಖ ಜೇಷ್ಟ ಎಂಬೀ ಮೂರ ಮಾಸಗಳು ಹೋಗಿವೆ. ಹಾಗಾದರೆ ೩×೨ ದ್ವಿಗುಣಿಸಬೇಕು. ೩×೨=೬. ಪ್ರತಿಪದ=ಪಾಡ್ಯವೊದಲಾದ ತಿಥಿಗಳು. ಈ ದಿವಸಕ್ಕೆ ನಾಲ್ಕು ಆಗೆವೆ, ಹಾಗಾದರೆ ೬+೪=೧೦. ಈ ಪ್ರಕಾರ ಈ ದಿವಸಕ್ಕೆ ಇರುವ ಚತುಷ್ಪ ಕರ್ಣ ಹೊರಡುತ್ತದೆ.

2. ಉದ: ೧೮೬೨ ಇಸವಿ ೨೯ನೇ ಮಾರ್ಚಿ. ೧೧×೨=೨೨+೨೯ (ತಿಥಿಗಳು)= ೫೧−೪೪=೭

ಈ ಉದಾಹರಣೆಯಲ್ಲಿ ೫೧ ಎಂಬ ಸಂಖ್ಯದಲ್ಲಿ ೪೪ ಕಳೆಯ ಬೇಕಾಯಿತು, ಯಾಕಂದರೆ ೧೧ ಕರಣಗಳು ಮಾತ್ರ ಅವೆ.

1112. ಆದಿಯಾ ಮಾಸವನು ವೇದದಿಂದಲಿ[1] ಗುಣಿಸಿ
Computation of constellations. ಆದಿನದ ತಿಥಿಯನೊಡಗೂಡೆ ಯೋಗವು[2]
ಆದಿಯಲಿ ಬಕ್ಕು; ಸರ್ವಜ್ಞ.

1. ನಾಲ್ಕಕ್ಕೆ ಸಾಂಜ್ಞೆ. 2. ಯೋಗಗಳು ೨೭ ಅವೆ. ೧೬ನೇ ಯೋಗ ಹೊರಡುತ್ತದೆ.
1. ಉದ: ೧೮೬೨ ಇಸವಿ ೧ನೇ ಜುಲೈ. ೩×೪=೧೨+೪ (ತಿಥಿ)=೧೬.
2. ಉದ: ೧೮೬೨ ಇಸವಿ ೨೯ನೇ ಮಾರ್ಚಿ. ೧೧×೪=೪೪+೨೯ (ತಿಥಿ)=೭೩−೫೪=೧೯. ೧೯ನೇ ಯೋಗ ಹೊರಡುತ್ತದೆ.

೨೭ ಯೋಗಗಳು ಯಾವವೆಂದರೆ: ವಿಷ್ಕಂಭ ಪ್ರೀತಿ ಆಯುಷ್ಮಾನ್ ಸೌಭಾಗ್ಯ ಶೋಭನ ಅತಿಗಂಡ ಸುಕರ್ಮ ಧೃತಿ ಶೂಲ ಗಂಡ ವೃದ್ಧಿ ಧೃವ ವ್ಯಾಘಾತ ಹರ್ಷಣ ವಜ್ರ ಸಿದ್ಧಿ ವ್ಯತಿಪಾತ ವರಿಯ್ಯಾನ್ ಪರಿಘಾ ಶಿವ ಸಿದ್ಧ ಸಾಧ್ಯ ಶುಭ ಶುಕ್ಲ ಬ್ರಹ್ಮ ಐಂದ್ರ ವೈಧೃತಿ.

1113. ನಂದೆಯನು ಭದ್ರೆಯನು ಎಂದಾಗಿ ಯರ್ಧಿಸಿದು
Computation of eclipses. ಅಂದಿನ ತಿಥಿಗೆ ಸಮನಾಗೆ: ಗ್ರಹಣ ತಾ
ಮುಂದೆ ಬಂದಿಹುದು: ಸರ್ವಜ್ಞ.

ತಿಥಿಗಳಲ್ಲಿ ನಂದೆ ಭದ್ರೆ ರಿಕ್ತ ಪೂರ್ಣ ಜಯ ಎಂಬೀ ೫ ವಿಧಗಳವೆ. ಒಂದೊಂದು ವಿಧಕ್ಕೆ ಮೂರು ತಿಥಿಗಳು.

## RIDDLES.

### 20. ಒಗಟು.

1114. ಕಲ್ಲರಳಿ ಹುವ್ವಾಗಿ ಯಲ್ಲರಿಗೆ ಬೇಕಾಗಿ
Lime. ಮಲ್ಲಿಕಾರ್ಜುನನ ಸಿಖರಕೆ ಬೆಳಕಾಗಿ
ಬಲ್ಲವರು ಹೇಳಿ! ಸರ್ವಜ್ಞ.

1115. ಮರನೊತ್ತಿ ಬೇಯುವದು ! ಮರಿ ತಾಕಿ[1] ಬೇಯ್ಯದದು !
Lightning and thunder. ಪುರಗಳ ನುಂಗಿ ಬೊಗಳುವದು ! ಲೋಕದಲಿ
ನರನಿದೇನೆಂಬ ? ಸರ್ವಜ್ಞ.

1. ಉರಿಗೆ ತಾಕಿದರೆ.

1116. ಉರಿ ಬಂದು ಬೇಲಿಯನು ಹರಿದು ಹೊಕ್ಕದ ಕಂಡೆ ;
Sunshine. ಅರಿದಿದು ಬಗೆಗೆ; ಕವಿಕುಲದ ಶ್ರೇಷ್ಠರೇ !
ಅರಿತಿದನು ಪೇಳಿ ! ಸರ್ವಜ್ಞ.

1117. ಕಾಲಿಲ್ಲದಲೆ ಹರಿಗು ; ತೋಳಿಲ್ಲದತಿ ಹೊರುಗು ;
Flowing water. ನಾಲಿಗಿಲ್ಲದಕೆ ಯುಲಿವದು ; ಕವಿಕುಲದ
ಮೇಲುಗಳೆ ! ಪೇಳಿ ! ಸರ್ವಜ್ಞ.

1118. ಇರಿದರೆಯು ಯೇರಿಲ್ಲ ; ಹರಿದರೆಯು ಶೀಳಿಲ್ಲ ;
Fire. ತಿರಿಗೊಳ ಕೊಂಡ ರುಣವಿಲ್ಲ ; ಕವಿಗಳೆ !
ಅರಿದರಿದು ಹೇಳಿ ! ಸರ್ವಜ್ಞ.

1119. ಆಡಿದರೆ, ಅಡದದು ; ಮೋಡಿ : ಮರನೇರುವದು ;
Wire or string on a guitar. ಕೂಡದೆ ಕೊಂಕಿ ನಡೆಯುವದು ; ಕಡದರದು
ಬಾಡದು ; ಹೇಳಿ ! ಸರ್ವಜ್ಞ.

1. ಒಡಲಾಗಿ.

1120. ಕತ್ತಿಗ್ಗರಿವುತ್ತಿಹುದು ; ಸುತ್ತಿ ಬರುತ್ತೇಳುವದು ;
Hair. ಕಿತ್ತು ಬಿಸಾಡಲು, ನಡೆದದು[1] ; ಕವಿಜನರೆ !
ಅರ್ಥಿಯಿಂ ಹೇಳಿ ! ಸರ್ವಜ್ಞ.

1. ಭೂಮಿಯಲ್ಲಿ ನಡಲಿಕ್ಕಿಲ್ಲ.

1121. *Pepper.*

ಕಚ್ಚಿದರೆ, ಕಚ್ಚುವದು ; ಕಿಚ್ಚಲ್ಲ, ಚೇಳಲ್ಲ,
ಆಶ್ಚರ್ಯವಲ್ಲಅರಿದಲ್ಲ ಯೀಮಾತು
ನಿಶ್ಚಯವಲ್ಲೆ[1] ; ಸರ್ವಜ್ಞ.

1. ಬಲ್ಲೆ.

1122. *Peacock.*

ಹತ್ತು [1]ಸಾವಿರ ಕಂಣು; ನೆತ್ತಿಲಾದರು ಬಾಲ ;
ಹುತ್ತಿನ ಹುಳವ ಹಿಡಿದಿಹುದು ; ಕವಿಜನರ
ಮೊತ್ತವಿದೇನ್ಹೇಳಿ! ಸರ್ವಜ್ಞ.

1. ಸಹಸ್ರಾಕ್ಷ.

1123. *A split bamboo with ropes suspended from each end, &c., for carrying milk.*

ತಂನ ಸುತ್ತಲು ಮಣೆಯು ; ಜೆಂಣಿ ಕುಡಿವಾಲುಗಳ
ತಿಂನದೆ ಹಿಡದು ತರುತಿಹುದು ; ಕವಿಗಳಿದ
ನಂನಿಯಿಂ ಹೇಳಿ ! ಸರ್ವಜ್ಞ.

1124. *The sun.*

ಬಟ್ಟಲದ ಬಾಯ್ಯಂತೆ ಹುಟ್ಟುವದು; ಲೋಕದೊಳು
ಮುಟ್ಟದು ತನ್ನ ಹೆಂಡರನು ; ಕವಿಗಳೊಳು
ಧಿಟ್ಟರಿದನ್ಹೇಳಿ ! ಸರ್ವಜ್ಞ.

1125. *Net.*

ಹಲ್ಲು ನಾಲಿಗೆ ಯಿಲ್ಲ; ಸೊಲ್ಲು ಸೋಜಿಗವಲ್ಲ;
ಕೊಲ್ಲದೆ ಮೃಗವ ಹಿಡಿಯುವದು ಲೋಕದೊಳ
ಗೆಲ್ಲ ಠಾವಿನೊಳು; ಸರ್ವಜ್ಞ.

1126. *An artificial fountain*

ಆಸನದಲುಂಬುವದು; ಸೂಸುವದು ಬಾಯಲ್ಲಿ;
ಬೇಸರದೆ ಹೊತ್ತು ಕೊಲುವದು ; ಕವಿಗಳೊಳು
ಸಾಸಿಗಳು ಹೇಳಿ ! ಸರ್ವಜ್ಞ.

1127. ಹಲವು ಮಕ್ಕಳ ತಂದೆ ; ತಲೆಯಲ್ಲಿ ಜುಟ್ಟವಗೆ ;
Cock and hen. ಸಲೆ ಘಳಿಗೆ ಜಾವವರಿವನ ಹೆಂಡತಿಗೆ
ಮೊಲೆಯಿಲ್ಲ, ನೋಡು ! ಸರ್ವಜ್ಞ.

1128. ಮಲ್ಲಿಗೆಗೆ ಹುಳಿಯುಕ್ಕು ; ಕಲ್ಲಿಗೇ ಗಂಟಕ್ಕು ;
Quibble. ಹಲ್ಲಿಗೆ ನೊಣನುಸವಿ ಯುಕ್ಕು ; ಕನ್ನಡದ
ಸೊಲ್ಲುಗಳ ನೋಡು ! ಸರ್ವಜ್ಞ.

1. ಈಶಬ್ದಗಳಲ್ಲಿ ಒಂದೊಂದಕ್ಕೆ ಎರಡು ಅಭಿಃಪ್ರಾಯಗಳವೆ.

1129, ಮಣಿಯ ಮಾಡಿದನೊಬ್ಬ ; ಹೆಣದು ಕಟ್ಟಿದನೊಬ್ಬ ;
1. Loom; 2. warp; 3. weavers' shuttle; 4. cloth. ಕುಣಿದಾಡಿ ಸತ್ತವನೊಬ್ಬ ; ಸಂತೆಯೊಳು
ಹೆಣನ ಮಾರಿದನು ! ಸರ್ವಜ್ಞ.

1130. ಎಂಟು ಬಳ್ಳದ ನಾಮ ; ಗಂಟಲಲಿ ಮುಳ್ಳುಂಟು ;
Smith's tongs. ಒಂಟರನು ಹಿಡಿದು ಒಡಿಸುದು ; ಕವಿ ಯೆಂಬ
ತೊಂಟರಿದ ಹೇಳಿ ! ಸರ್ವಜ್ಞ.

---

## RAJASHEKHARA (A POEM.)

## ರಾಜಶೇಖರ.

### ಪೀಠಿಕೆ.

ಚೋಳದೇಶದ ಅರಸನಾದ ಸತ್ಯೇಂದ್ರನಿಗೆ ರಾಜಶೇಖರ ಎಂಬುವ ಮಗನು ಜನನವಾಗಿ ಬೆಳದಮೇಲೆ, ಶಿಂಹಳದೇಶದ ರಾಜನನ್ನು ಗೆದ್ದು ಅವನ ಮಗಳನ್ನು ಮದಿವೆ ಮಾಡಿಕೊಂಡು ರಾಜ್ಯ ಮಾಡುವಾಗ್ಯೆ, ಒಂದು ದಿವಸ ಕುದುರೆ ವೈಹಾಳಿಯ ವೇಳ್ಯಕ್ಕೆ ಪ್ರಧಾನಿಯ ಮಗನ ಕುದುರೆ ಒಬ್ಬ ಹುಡಗನನ್ನು ತುಳಿದದರಿಂದ, ಅವನು ಸತ್ತನು. ಸತ್ಯೇಂದ್ರನು, ತುಳಿದ ಕುದುರೆಯುವನ ತಲೆ ಹೊಡಿಸ ತಕ್ಕದ್ದು, ಅದಾರು ? ಅಂತ ವಿಚಾರ ಮಾಡುವಾಗ್ಯೆ, ನಾನು

ಮಾಡುವ ಕೆಲಸದಲ್ಲಿ ಯಾರು ಏನು ತಪ್ಪು ಮಾಡಿದಾಗ್ಯು, ನನ್ನದದೆ, ನನ್ನ ತಲೆಯನ್ನೆ ಕೊಡುತ್ತೇನೆ ಎಂದು ರಾಜಶೇಖರ ಹೇಳಿದಕ್ಕೆ, ಸತ್ಯೇಂದ್ರನು ತನ್ನ ಮಗನ ತಲೆ ಹೊಡಿಸಿದನು. ಆಮೇಲೆ ಪ್ರಧಾನಿಯ ಮಗನು ನನ್ನ ತಪ್ಪಿಗಾಗಿ ಹೀಗಾಯಿತೆಂದು ತಾನು ಕುತ್ತಿಗೆ ಕೊಯಿಕೊಂಡನು. ಇಂಥಾ ಮಕ್ಕಳು ಇಬ್ಬರು ಸತ್ತಮೇಲೆ, ನಾವು ಯಾಕಿರ ಬೇಕ ಎಂದು ಆರಾಜನೂ ಪ್ರಧಾನಿಯೂ ಜೀವ ಬಿಟ್ಟರು. ಆಮೇಲೆ ಈ ನಾಲ್ವರ ಹೆಂಡರು ಕುತ್ತಿಗೆ ಕೊಯಿಕೊಳ್ಳಬೇಕೆಂದು ಕೈಯೊಳಗೆ ಕತ್ತಿ ಹಿಡಕೊಂಡು ಸಿದ್ಧವಾಗೋಣ ಈಶ್ವರ ಮೆಚ್ಚಿ ಈ ನಾಲ್ವರನ್ನು ಮೊದಲು ತುಳಿಸಿಕೊಂಡು ಸತ್ತ ಹುಡುಗನು ಸಹಿತವಾಗಿ ಬದಕಿಸಿ ಅವರೆಲ್ಲರನ್ನು ಕೈಲಾಸಕ್ಕೆ ತಕ್ಕೊಂಡನು. ಈ ಕಥೆ ಸ್ಕಂದ ಪುರಾಣದಲ್ಲಿ ಇರುವಂಥಾದು. ಸಂಸ್ಕೃತದಿಂದ ಇದ್ದದನ್ನು ದ್ರವಿಳ ಕವಿಗಳು ತಮ್ಮ ಭಾಷೆಯಲ್ಲಿ ಮಾಡಿದರು. ಇದನ್ನು ಗುಬ್ಬಿ ಮಲ್ಲಣಾರ್ಯನೆಂಬ ಕವಿ ವಾರ್ಧಿಕಪದ್ಯರೂಪವಾಗಿ ಭಾವಚಿಂತಾರತ್ನ ಎಂಬ ಹೆಸರಿಟ್ಟು ಕನ್ನಡಿಸಿದನು. ಇತ್ತಕಡೆ ಶಾಲಿವಾಹನಶಕ ೧೫೭೫ನೇ ವರುಷದಲ್ಲಿ ಅಂದರೆ ೨೦೯ ವರುಷದ ಕೆಳಗೆ ಬಿದರೂರ ನಗರದಲ್ಲಿ ವಿರಕ್ತಮಠದಲ್ಲಿದ್ದ ಚಿಕ್ಕ ವೀರೈಯನ ಶಿಷ್ಯ ಷಡಕ್ಷರಿಯೈಯು ಎಂಬ ಕವಿ ಆ ನಗರದ ಅರಸಿನ ಹೇಳಿಕೆಯ ಮೇಲಿಂದ ವಸ್ತುಕರೂಪವಾಗಿ ರಾಜಶೇಖರವಿಲಾಸ ಎಂಬ ಹೆಸರಿಟ್ಟು ಅದನ್ನು ಹೊಸತಾಗಿ ರಚಿಸಿದನು.

ಈ ಕವಿ ಮೊದಲು ಬ್ರಾಹ್ಮಣನೆ ; ದೊಡ್ಡ ಪಂಡಿತನಾಗಿ ಬಿದರ ನಗರದ ರಾಜನಲ್ಲಿ ದೇಶಾವಾರಕ್ಕೆ ಹೋದಾಗ್ಯೆ, ಇವನ ವಿದ್ಯಕ್ಕೆ ಅಗಾಧ ಪಟ್ಟನು. ಆರಾಜನು ಲಿಂಗವಂತನು ತಮ್ಮ ಕುಲದಲ್ಲಿ ಇಂಥಾ ಪಂಡಿತನು ಇರಬೇಕು ಅಂತ ಆಶೆ ಹಿಡಿದು ಅವನಿಗೆ ಜುಲುಮೆ ಮಾಡಿ ತನ್ನ ಅರಸತನದ ಬಲದಿಂದ ಜಂಗಮ ದೀಕ್ಷೆ ಮಾಡಿಸಿ ಷಡಕ್ಷರಿ ಎಂಬ ಹೆಸರಂನಿಡಿಸಿ ತನ್ನ ನಗರದ ವಿರಕ್ತಮಠದ ಪಟ್ಟ ಕಟ್ಟಿಸಿದನು. ಹೀಗೆ ಜನರಲ್ಲಿ ಹೇಳುವದು ಉಂಟು.

## 1. ಪೀಠಿಕಾಶ್ವಾಸ.

### ಚಂಪಕಮಾಲಾ ವೃತ್ತ.

1131. ಬರೆಬರೆದಂತೆದಂ ತೊಡೆದು ತೊಟ್ಟನೆ ನಿಟ್ಟಿಸಿ ಮೇ[1]ಲನೊಂದಮಂ
ಸರಸಪದಾರ್ಥಮಂ ತಡಕಿ ಕಾಣದೆ, ಕಳ್ದು ಪರೋಕ್ತಿಯುಕ್ತಿಯಂ
ವಿರಚಿಸುತಂತುಮಿಂತುಮಳಿಗಬ್ಬಮನಾಗಿಸಿ ಕೇಳಿಸುತ್ತೆ, ಕಾ
ಲುರಿಚ[3]ರ ತೋರ್ಪದುಷ್ಕವಿಮಹಾಕವಿಮಧ್ಯದೊಳೊಪ್ಪಲಾರ್ಪನೆ?

A bad poet, who is a plagiarist.

ದುಷ್ಕವಿಯನ್ನು ವರ್ಣಿಸುತ್ತಾನೆ. 1. ಮೇಲೆ ನೋಡುವದು ಹ್ಯಾಗೆ ಮಾಡಲಿ ಎಂಬ ಆಲೋಚನ ಭಾವ. ಈಗ ಇದಕ್ಕೆ ಜಂತೆ ಎಣಿಸಿಕೊಳ್ಳುತ್ತಾ ಕುಳಿತಾನೆ ಅನ್ನುತ್ತಾರೆ.

3. ಷಷ್ಠಿ ಚತುರ್ಥ್ಯರ್ಥದಲ್ಲಿ ಬಂತು.

ಕಂದ.

1132. ಅಳಿಗಬ್ಬಿಗನೋರ್ವಂ ಮಂ

A bad poet a serpent having only one gem : a good poet like the sea full of gems.

ಜುಳಯುಕ್ತಿಯನೊಂದನೊಂದಿ ಸರಿ ವರ್ಪನೆ[1] ಯ

ರ್ಗಳ ಕವಿಗೆ? ರನ್ನಮೊಂದಂ

ದಳೆದಹಿ ರತ್ನಾಕರಕ್ಕೆ; ಸರಿವಂದಪುದೇ ?

1. ಸರಿಬರ್ಪನೆ (ಬರುತ್ತಾನೆ.) ಸರಿಬಂದಪುದೆ ? ಬಕಾರಹೋಗಿ ವಕಾರವಾಯಿತು.—ದುಷ್ಟ ವಿ ಒಂದು ರತ್ನ ಹೆಡೆಯಲ್ಲಿ ಧರಿಸಿ ಕೊಂಡಿರುವ ಸರ್ಪನಂತೆ, ಸುಕವಿ ಬಹಳ ರತ್ನವುಳ್ಳ ಸಮುದ್ರದ ಹಾಗೆ ಇರುತ್ತಾನೆ.

1133. ಸಕಳಕಳಾನಿಧಿ[1] ನಿಕಟದೆ

A good poet, the moon; a good poem, the sea.

ಸುಕರರಸಪ್ರಕಟ ಕಾವ್ಯಮೆಂಬಮೃತಪಯೋ

ಧಿ ಕರಂ ಪೆರ್ಚುಗುಮಲ್ಲದೆ ;

ಕುಕವಿಬುಧಪ್ರಭೃತಿ ಯಿದಿರೆದೇಂ ಪೆರ್ಚುಗುಮೋ ?

1. ಸಕಲ ಕಳೆಯುಳ್ಳ ಚಂದ್ರ, ಸಕಲ ಲಕ್ಷಣ ಬಲ್ಲಂಥವನು. ಇದು ಶ್ಲೇಷಾಲಂಕಾರ. 2. ಕವಿ=ಕವೀಶ್ವರ ಮತ್ತು ಶುಕ್ರ ಎಂಬ ಗ್ರಹ.–ಬುಧ=ಪಂಡಿತನು ಮತ್ತು ಒಂದು ಗ್ರಹ. ಒಳ್ಳೆ ನವರಸಗಳು ಪ್ರಕಟವಾಗಿರುವಂಥಾ ಕಾವ್ಯವೆ ಅಮೃತ ಸಮುದ್ರವು, ಚಮತ್ಕಾರವುಳ್ಳ ಕವಿ ಅದನ್ನು ಉಕ್ಕಿಸುವ ಚಂದ್ರನು ; ಕುಕವಿ, ಕುಬುಧ ಇಂಥಾವರೆ ಅದನ್ನು ಉಕ್ಕಿಸ ಲಾರದಂಥಾ ಶುಕ್ರ ಬುಧ ಮೊದಲಾದ ಗ್ರಹಗಳು.

1134. ಬೇರೆನಿಸಿ ಮಿಸುಗುವಲರ್ಗಳ

A good poet like a black bee.

ಬೀರುವ ನರುಗಂಪಿನೊಳ್ಪು ಶೇಷಮುನರಿವಂ

ತಾರಡಿ ನಾನಾ ಕೃತಿಯೊಳ್

ತೋರುವ ನವಭಾವಭೇದಮಂ ಬುಧನರಿವಂ

ಕಾವ್ಯಗಳೇ ಹುವುಗಳು, ಕಾವ್ಯದ ಭಾವವೆ ಸುಗಂಧ, ಅದನ್ನು ಅರಿವ ಬುಧನೇ ಭೃಂಗ.

1135. ಅರಾರೇರರ್ಶಾಸ್ತ್ರ )

The wonderful gem of good poems to be obtained only by the mercy of God.

ಶ್ರೀರೋಹಣ ಗಿರಿಯನಲ್ಲಿ ನವಕವಿತಾಚಿಂ
ತಾ ರತ್ನಂ ದೊರಗುಮೆ ? ಮಾ
ರಾರಿಯ ಕೃಪೆ ಯಿಲ್ಲದಂಗೆ ಧರಣೀತಳದೊಳ್ ?

1. ರೋಹಣಗಿರಿ ರತ್ನಮಯಮಾಗಿರುವಂಥಾದ್ದು.

1136. ನಿಂದಿಸುವರ್ದುರ್ಜನರೆಂ

A good poet is not afraid of criticism ; the sun not of giants.

ದೊಂದು ಭಯಂ ಬೆತ್ತು ನಿರ್ಮಿಸನೆ ಕವಿ ಕೃತಿಯಂ ?
ಮಂದೇಹರಭಯದಿಂದರ
ವಿಂದಸಖಂ ನಿಜಮಯೂಖಮಂ ಪಸರಿಸನೆ ?

1137. ಕಿರಿಯಕೃತಿ ಪಿರಿದೆನಿಕ್ಕು,

A small work, if not made by plagiarism, will be considered great.

ಪೆರರರ್ಥಕೆ ಕೈದುಡುಂ ಕದಿರೆ, ಸತ್ಕವಿಗಂ ?
ಕಿರಿಯಸಿರಿ ಪಿರಿದೆನಿಕ್ಕುಂ[1],
ಪೆರರರ್ಥಕೆ ಕೈದುಡುಂಕದಿರೆ ಮನುಜಂಗಂ.

1. ಅರ್ಥ=ಅಭಿಪ್ರಾಯ ಮತ್ತು ದ್ರವ್ಯ. 2. ಎನಿಸುಗುಂ. (ವ್ಯಾ. ಸೂ. )

1138. ಮಿಸುನಿ ಯದೊಂದಾದಡದೇಂ

Poetics—gold; poems—ornaments made of it.

ಪೊಸತೊಡವೆನಿಸುತ್ತು ಬೇರೆ ಬೇರೆನಿಸುವವೊಲ್,
ರಸವತ್[1]ಕವಿತಾಮಾರ್ಗಂ
ರಸೆಯಲ್ಲಿ ವಿಚಕ್ಷಣರ್ಕಳಿಂ ಪೊಸತೆನಿಕುಂ

1. ರಸವುಳ್ಳ ಕವಿತಾಮಾರ್ಗವೇ ಭಂಗಾರ, ಕಾವ್ಯಗಳೇ ಭಂಗಾರದ ಒಡವೆಗಳು.

ಚಂಪಕಮಾಲಾವೃತ್ತ.

1139. ಮೊದಲ ಕವೀಂದ್ರರೋಲ್ಪೊರದ ಸತ್ಕೃತಿ ಸಂಚಯಮೀಧರಿತ್ರಿ [ಯೊಳ್

Many poems have been written already, why more?

ಪುದಿದಿರೆ, ನೋಡಿ, ತುಷ್ಟಿ ವಡಲೊಲ್ಲದೆ, ಕಬ್ಬಿಗರೇಕೆ ಕಬ್ಬಮಂ
ಗದಿಪರೋ ? ಬೇರೆನುತ್ತ ಸುಡಿವಳ್ಕಜಕಾರನವಂಗೆ ಪುತ್ರಸಂ
ಪದಮುನದೇಕೆ ? ಬೇರೆ ಪರಪುತ್ರರನೀಕ್ಷಿಪ ತುಷ್ಟಿ ಸಾಲದೇ ?

1140. ಯುರವಿನ ಪಚ್ಚಮುಂ ತಳೆದಿದಕ್ಕೆಣೆ ವಾರದಿದೆಂದು ಲೋಗರಾ

A man borrowing jewels and praising them : a plagiarist extolling his work.

ಭರಣಮನೇಳಿಪಂತೆ, ತನಗಿಲ್ಲದೆ ಸಾರಕವಿತ್ವಮನ್ಯಕಾ
ವ್ಯರುಚಿರಪದ್ಯಮುಂ ಪರಿಸಿ ಸತ್ಕವಿ ನಿರ್ಮಿತಪದ್ಯಮಿಂತಿದ
ಕ್ಕೊರೆಯೆ ಯೆನುತ್ತ ಕಾಳ್ಗಿಡವನಂ ನಗದಿರ್ಪರೆ ಬಲ್ಲ ಕಬ್ಬಿಗರ್ ?

ಕುಕವಿ ಎರವು ತಕ್ಕೊಂಡು ಅದನ್ನು ಕೊಂಡಾಡಿ ಎರಡನೆಯುವರು ಸ್ವಥಾ ಮಾಡಿದ್ದನ್ನು ತಿರಸ್ಕಾರ ಮಾಡಿದ ಹಾಗಾಯಿತು.

ಕಂದ.

1141. ಕೃತಿಕಾದಂಬಿನಿರಸಮುಂ

The criticisms of men only a stimulus to a good poet to perfect his work.

ಕ್ಷಿತಿಪಸಭಾಕ್ಷಿತಿಗೆ ಸುರಿವ ಸಮಯದಿ ಖಲಗ
ರ್ಜಿತಘನಗರ್ಜಿತಮೊದವಿದೊ
ಡತಿ ರಸವಿಸರಪ್ರಸಾರಕಾರಣಮತ್ತೀ

ಕಾವ್ಯವೇ ಮೋಡ, ಅದರ ಸಾರವೆ ಮಳೆ, ಅರಸಿನ ಸಭೆಯೆ ಪೃಥಿವಿ, ನಿಂದಿಸುವ ಖಲರ ಮಾತೇ ಗುಡುಗು; ಗುಡುಗು ಹೆಚ್ಚಾದರೆ, ಮಳೆ ಹೆಚ್ಚು

1142. ಸ್ಥಿತಿಯೊಳ್ಸುಜನಂ ಸುಖದಂ,

Even a bad man a source of

ಮೃತಿಯೊಳ್ಕುಜನಂ ; ಜಗಜ್ಜನಾಘಕ್ಕಾದ್ಯಂ[1]

1. ಮೊದಲಿನವನು.

pleasure to men when he dies.

ಮೃತಿಯೊಳ್ದುಃಖದನಂತ್ಯಂ[2]
ಸ್ಥಿತಿಯೊಳ್ಪರರಿಪ್ಪೊಡೀರ್ವರುಂಸರಿ ಯಲ್ತೇ?

2. ಕಡೆಯುವನು, ಇರುವಾಗ ಸುಜನನು, ಸಾಯುವಾಗ ದುರ್ಜನನು ಸುಖದರಾಗುತ್ತಾರೆ; ಸಾಯುವಾಗ ಸುಜನನು, ಇರುವಾಗ ದುರ್ಜನನು ದುಖದರಾಗುತ್ತಾರೆ.

1143. ಘನಮಾರ್ಗಸುಭಗ ಸತ್ಕಾ

A good poem to bad men unpleasant as the sun is to owls.

ರ್ಯನಿಯುಕ್ತಂ ವಿಗತದೋಷಮಮೃತರುಚಿ ಸ್ಪ
ರ್ಧಿನವಕವಿಕಾವ್ಯರವಿ ದು
ರ್ಜನಘೂಕವ್ರಜಕಸಹ್ಯಮಂ ಪುಟ್ಟಿಸುಗುಂ.

ಅನ್ವಯ :ಘನ ಮಾರ್ಗದಲ್ಲಿ (ಒಳ್ಳೆ ಮಾರ್ಗದಲ್ಲಿ) ಮನೋಹರವಾದ ಒಳ್ಳೆ ಕಾಂತಿ ಯುಳ್ಳಂಥಾದ್ದು, ಕತ್ತಲು (ತಪ್ಪು) ಕಳೆದಂಥಾದ್ದು, ಹಾಗಿರುವ ಚಂದ್ರನ ಕಿರಣವನ್ನು (ಅಮೃತದ ಸವಿಯನ್ನು) ಗೆಲುವಂಥಾ, ನೂತನ ಕವಿಯಿಂದ ರಚನೆಯಾದ ಕಾವ್ಯ ಎಂಬ ಸೂರ್ಯನು=ಹುಟ್ಟಿಸುತ್ತಾನೆ.

1144. ಪಳಿಯಲ್ಬಲ್ಲಂ, ನೆಗಳಲ್

A good poem the sun: critics—clouds, which can only obscure

ಬಳನೇಂ ಬಲ್ಲನೆ, ನವೀನಕಾವ್ಯಮನಿಳೆಯೊಳ್?
ತೊಳಗುವ ರವಿಯಂ ಮುಸುಳಪ
ಜಳಧರಮದರಂತೆ ಜಗಮನೇಂ ಬೆಳಗುಗುಮೇ?

ಸುಕಾವ್ಯವೇ ಸೂರ್ಯ, ಹಳಿಯುವ ದುರ್ಜನರೇ ಮೋಡ.

GROVES DESCRIBED

2. ವನವರ್ಣನಂ (ಆಶ್ವಾಸ. 2.)

(ಮತ್ತೇಭವೃತ್ತಂ)

1145. ಅಲರ್ಗಂಪಿಗೆರಗಿರ್ದ ತುಂಬಿಗಳ ಬಂಬಲ್ಕಾರ್ಮುಗಿಲ್ಪಲ್ಲವಾ

A mango-tree in blossom described.

ವಳಿ ವಿದ್ಯುತ್ಪ್ರಚಯಂ ಪಿಕಪ್ರಕರನಾದಂ ಮೇಘನಾದಂ, ನಿರಾ

1. ಅನ್ವಯ: ಮಾಮರವು—ವೃಷ್ಟಿ ವ್ರಾತವನ್ನು ಏನು ಸೂಸಿದುದೊ? ಮಾವಿನ ಮರವನ್ನು ವರ್ಣಿಸುತ್ತಾನೆ. ಹೂವು ಬಿಟ್ಟ ಮಾವಿನ ಮರದಿಂದ ಪರಾಗ ಬೀಳುವದು ಮಳೆಯು ಹಾಗೆ ಕಾಣಿಸುತ್ತಿತ್ತು.

ಕುಳವೊಂದಿರ್ಪ ಶುಕಾಳಿ ಶಕ್ರಧನುವೆಂಬಂತಾಗೆ, ಮೇಘಾಗಮಂ
ಬೊಲದೇಂ ಸೂಸಿದುದೋ ಮರಂದರಸವೃಷ್ಟಿವ್ರಾತಮಂ ಮಾ
[ಮರಂ !

ಕಂದ.

1146. ಮಲ್ಲಿಗೆ ಮಾಮರದೆಳೆದಳಿ
ರಲ್ಲಿ ಮುಗುಳ್ತಡರೆ, ಮುಗುಳ್ಗಳೆಸೆದವು ಸಂಧ್ಯಾ
ಸಲ್ಲಲಿತತಾರಕಾಳಿಯೊ
ಲಲ್ಲಿಳಿವಾರಡಿಗಳಳಿವ ತಮಮೆನಿಸಿರ್ಕುಂ

The flowers of the jasmin shut up, the stars: the black bees on them, darkness.

ಮಾವಿನ ಗಿಡಕ್ಕೆ ಅಬ್ಬಿದ ಮಲ್ಲಿಗೆ ಹುವುಗಳ ನಕ್ಷತ್ರ. ಅವಕ್ಕೆ ರಗುವ ಭೃಂಗಗಳೆ ಕವಿಯುವ ಕತ್ತಲೆ.

1147. ಅಮರ್ದಿನಿದನಿದರಿನಿದನೆಲೆ
ಯಮರರೆ ! ಸರಿ ನೋಳ್ಪುದೆಂದು ನಿಜರಸಮುನಿಳಾ
ರಮೆ ಮರಕತಕಳಶದೆ ತುಂ
ಬಿ ಮೇಲೆ ನೀಡಿದಪಳೆಂಬ ಪೋಲ್ತೆಂಗೆಸಗುಂ

The cocoanut-tree.

ಅನ್ವಯ : ಅಮರರೆ ಅಮೃತದ ಸವಿಯನ್ನು ಇದರ ಸವಿಯನ್ನು ಸರಿನೋಡುವದು ಎಂದು ಭೂಸ್ತ್ರೀಯಳು ಮುಂತಾದ್ದು. ತೆಂಗಿನ ಗಿಡವನ್ನು ವರ್ಣಿಸುತ್ತಾನೆ.

1148. ಬಿಡದಾಲವಾಲಜಲದೊಳ್
ಕಡು ಗೆಂಪಿಡಿದಿಡಿದ ಬೀಜ ರದನದ ಚಲ್ವಂ
ನಡೆ ನೋಳ್ಪಂತಿರೆ, ತೋರ್ಕುಂ,
ಪಡಿನೆಳಲಿಂಬಾಗೆ, ಬಾಗಿ ರಸದಾಳಿಂಬಂ

The pomegranate-tree.

ದಾಳಿಂಬದಗಿಡವ ವರ್ಣಿಸುತ್ತಾನೆ. ದಾಳಿಂಬದ ಬೀಜವು ತನ್ನ ಮಡಿಯ ನೀರಿನಲ್ಲಿ ತನ್ನ ಹಲ್ಲಿನ ಚಲ್ವವನ್ನು ನೋಡುತ್ತದೆ ಎಂಬಂತೆ ಆಗಿಡ ಕಾಣಿಸುತ್ತಿತ್ತು.

1149. ಜಲದ ಜಲಕ್ಕೆ ಜಲವ

The plantain-tree. ತ್ಪಲಮೀವುದು ತೆಂಗಿದಕ್ಕೆ ಕುಡದಾಯ್ತೆನ್ನ[1]

ಸಲಪಿದಿಳೆಗೆಂದರಗಿ ನವ

ಫಲಂಗಳೀವಂತೆ, ಬಾಗಿ ಬಾಳೆಗಳೆಸಗುಂ.

ಬಾಳೆಗಿಡದ ವರ್ಣನೆ. 1. ತನಗೆ ನೀರು ಕೊಡುವ ಮೇಘದ ಹಂಗನ್ನಲ್ಲದೆ ತನ್ನನ್ನು ಸಲಹುವ ಭೂಮಿಯ ಹಂಗನ್ನು ಸಲ್ಲಿಸಲಿಲ್ಲ ತೆಂಗು; ಅದಕ್ಕೆ ನಾನು ಈ ಹಂಗನ್ನು ತೀರಿಸುತ್ತೇನೆಂಬ ಹಾಗೆ ಭೂಮಿಯ ಕಡೆಗೆ ತಮ್ಮ ಫಲ ಕೊಡುವ ಹಾಗೆ ಬಾಳೆ ಗಿಡಗಳು ಬಾಗಿ ಎಸೆದವು.

1150. ಬನಗಳ್ತ್ತಲೆಯುಂ ಕಮಳಾ

The darkness of woods, and the burning rays of the sun. ಪ್ತನ ಕದಿರುಂ ಕಾಡಿ ಮಡಿವುತಳಿಯುಂ ಚಾಂಪೇ

ಯನಿಕಾಯಮಾದುದಲ್ಲದೊ

ಡೆ ನಸುಂ ತದ್ವಯಕೆ ಪಗೆತನಂ ಸಮನಿಪುದೇ ?

ವನದ ಕತ್ತಲೆಯು ಸೂರ್ಯನ ಕಿರಣವು ಕಾದಿ ಸತ್ತು ಅದು ಭೃಂಗರೂಪವಾಗಿ ಇದು ಚಾಂಪೇಯ ರೂಪವಾಗಿ ತಿರಿಗಿ ಹುಟ್ಟಿ ತಮ್ಮ ಮುಂಚಿನ ವೈರತ್ವ ನೆನಸಿ ಇನ್ನು ಬಂದಕ್ಕೊಂದು ವರ್ಮ ಮಾಡುತ್ತವೆ. ಭೃಂಗ ಚಾಂಪೇಯದ ಮೇಲೆ ಕೂತರೆ ಸಾಯುವದು.

1151. ತಳಿರ್ಗಳೆ ದಳ್ಳುರಿ, ಮುಸುಕಿ

The Asóca-tree. ದರ್ಳಿಗಳೆ ಪೊಸಮಸಿಗಳಾಗೆ, ಮದನನ ಬಾಣಾ

ವಳಿಯಂ ಕಾಸಲ್ಚೈತ್ರೋ

ಜ್ವಳಕಾರುಕನಿಟ್ಟ ಕರ್ಮಟಂ ಬೊಲದೆಸಗುಂ.

ಚೈತ್ರಮಾಸವೇ ಕಮ್ಮರು ಅಶೋಕವೃಕ್ಷವೇ ಕುಲುಮೆ, ಅದರ ತ[illegible]ರುಗಳೆ ಚಿಂತೆ ಅದರ ಮೇಲೆ ಕೂತಿದ್ದ ಭೃಂಗಗಳೆ ಇದ್ದಲ್ಲಿ. ಈ ಚೈತ್ರ ಎಂಬ ಕಮ್ಮರ ಮನ್ಮಥನ ಬಾಣಗಳಂನು ಕಾಸುತ್ತಾನೆ ಎಂಬ ಹಾಗೆ ಅಶೋಕವೃಕ್ಷ ಕಾಣುತ್ತಿತ್ತು.

## 3. ಸಮುದ್ರವರ್ಣನ. (ಆಶ್ವಾಸ 1.)

*The corals in the sea.*

1152. ತನುಜನ[1] ತೇಜಮನಪಹರಿ
ಪನಿಪನೆನುತ್ತಬ್ಧಿ ಮುಳಿದು ಸಂಧ್ಯಾರುಣಸೂ
ರ್ಯನ ಕಿರಣಮನುರೆ ಸೆರೆ ಪಿಡಿ
ದನೆನೆ, ವಿರಾಜಿಪುದು ವಿದ್ರುಮಂ ಸದ್ರುಚಿಯಿಂ.

1. ಚಂದ್ರನು ಸಮುದ್ರದ ಮಗನು. ಸೂರ್ಯನು ತನ್ನ ಮಗನ ತೇಜವನ್ನು ಅಪಹರಿಸುತ್ತಾನೆ ಅಂತ ಸಮುದ್ರ ಸಿಟ್ಟು ಮಾಡಿ ಅವನ ಸಂಜೆಯ ಕಿರಣವನ್ನು ಸೆರೆಹಿಡಿದನೆಂಬಂತೆ ಹವಳವು ಪ್ರಕಾಶದಿಂದ ಒಪ್ಪುವದು.

*The sporting of the water-elephants.*

1153. ಜಲಕರಿನಿಕರಂ ಪುಷ್ಕರ
ಮಲರೆ, ಕರಂ ನಿಮಿರೆ, ಪೂತ್ಕರಿಸಿ ಸಿಡಿದ ಲಸ
ಜ್ಜಲ ಕಣಮನಮಳಮುಕ್ತಾ
ಫಳಮೆಂದುರೆ ಮುಗ್ಧಖಚರಿಯರ್ಕೈ ಯಿಡುವರ್

ನೀರಾನೆಯು ನೀರಾಟದಿಂದ ಮೇಲಕ್ಕೆ ಸಿಡಿದ ಹನಿಗಳು ಮುತ್ತುಗಳೆಂದು ನೆನಿಸಿ ಖಚರಿಯರು ಕೈಯಿಡುವರು.

*The spouting drops of water appeared like stars obtained by the moon, the son of the sea.*

1154. ಪಡೆದುದು ಗಡ! ಮೊದಲಿಂದುವ
ಕಡಲಿದು ಮೇಣಿಂದು ಪಡೆದುದುಡುವಿತತಿಯನೆಂ
ಬೆಡೆಗೆಡೆಯಾದುದು ಜಡನಿಧಿ
ಸಿಡಿದೆಡೆವಿಡದಿಡಿದ ವಾರಿಕಣಗಣದಿಂದಂ

ಅನ್ವಯ: ಕಡಲು ಪಡೆದುದು. ಮೇಣ್—ಎಂಬೆಡೆಗೆ (ಎಂಬುವದಕ್ಕೆ)—ಗಣದಿಂದ ಅನುವಾಯಿತು. ಸಿಡಿದ ಹನಿಗಳು ನಕ್ಷತ್ರಗಳಂತೆ ಕಂಡದರಿಂದ, ಚಂದ್ರನು ಅವನ್ನ ಪಡೆದ ಹಾಗೆ ಕಂಡಿತು.

1155. ಎಲೆ ಜಲಧಿ !ಜಿಷ್ಣು ಚಕಿತಾ
ಚಲಪಾಲಕ ! ಕಾವುದೆಂಮನೆನುತಂ ಕರ್ಗ
ಳ್ತಲೆ ಖರಕರಕರಭಯವಿಂ
ಹಲವಿರ್ಪಂತಿರ್ದ ತೀರದೊಳ್ಮುಗಿಲೆಸುಗುಂ.

The clouds resting on the sea shore, as if darkness from fear of the burning sun was asking its protection.

ಇಂದ್ರನಿಗೆ ಅಂಜಿ ಬಂದ ಗುಡ್ಡಗಳನ್ನು ಮರೆ ಮಾಡಿದವನೇ, ನನ್ನು ಕಾಯಬೇಕು ಅಂತ ಕಾರ್ಗತ್ತಲು ಸಮುದ್ರಕ್ಕೆ ಹೇಳಿಕೊಳ್ಳುತ್ತಾ ಸೂರ್ಯನಿಗೆ ಭಯಗೊಂಡಂತೆ ಮುಗಿಲು ಎಸೆಯುತ್ತಿತ್ತು

1156. ಜಲನಿಧಿ ಜಲಮಂ ಜಲಭೃ
ತ್ಕುಲಕ್ಕೆ ನಲಿದಿತ್ತುದತ್ತಮಿತ್ತಂ ನದಿನಿ
ರ್ಮಲ ಸಲಿಲಂ ದೊರೆದುದು[1], ಗಡ !
ನೆಲದೊಳ್ಕೊಟ್ಟಂಗೆ[2] ಬಡತನಂ ಬಂದಪುದೇ ?

The sea gave its water to the clouds, and got in return the sweet water of the rivers.

1. ತನ್ನಲ್ಲಿ ಕೂಡಿ ಬಂದ ನದಿಗಳಿಂದ ಚೆಲೋ ನೀರು ಸಿಕ್ಕಿತು. 2. ಕೃಲ್ಲಿಂಗ (ವ್ಯಾ. ಸೂ. ೨೪)

1157. ಘನದ ಬರವಪ್ರಯೋಜನ
ಮೆನುತರಿದುಂ ಜಡಧಿ ಜಡಮ—ನಿತ್ತುದದಂ ನೆ
ಟ್ಟನೆ ಪೊತ್ತುದು ಜಲದಂ ವ್ಯ
ರ್ಥನಿಯುಕ್ತಮಿದೆಂದು ಬಗೆವಡಿದು ಚಿತ್ರತರಂ

The clouds carrying off the water of the sea.

1. ಜಡ=ನೀರು, ತಡ, ಮೇಘ ನನ್ನ ಕಡೆಗೆ ಬರುವದು ಕೆಲಸವಿಲ್ಲವೆಂದು ಶಡಮಾಡಿತು, ಮೇಘ ನೀರಿನದೆಶೆಯಿಂದ (ಅಪ್ರಯೋಜನ=ಆಪ=ನೀರು+ಪ್ರಯೋಜನ) ಬರುತ್ತದೆಂದು ತಿಳಿದು ನೀರನ್ನು ಕೊಟ್ಟಿತು ಎಂಬಂತೆ ಎರಡು ಅರ್ಥ.

1158. ಯರಗಿದ ಗಿರಿಮುಗಿಲೊಳ್ನೆರೆ
ಮಿರಗುವ ಮಿಂಚುಗಳನುಡಿದು ಪಿಡಿದನೊ ? ಕಡುಪಿ

The red fishes in the ocean

like flashes of lightning, seized with the waves by the sea.

ತೊರೆಯುರೆಯಂ ತೆರೆಗೈಗಳಿ

ನರಿದೆನೆ, ಕೆಂಮಿನ್ಮಿನ್ಗಳೇಂ ಮನಂಗೊಳಿಸಿದಪ್ಪೋ !

1. ಗುಡ್ಡಗಳು ತನಗೆ ಮರೆಹೊಕ್ಕಿದ್ದವು; ಆದಮೇಲೆ, ಮುಗಿಲು ಮಿಂಚು ಮತ್ತು ಇಂದ್ರನ ಕಡೆಯಿಂದ ಬಂದು ನಾಶ ಮಾಡಿಯಾವೆಂದು ನದಿಗಳ ಯಜಮಾನ=ಸಮುದ್ರ ಶಿಟ್ಟು ಮಾಡಿ ತೆರೆ ಎಂಬ ಕೈಗಳಿಂದ ಮಿಂಚನ್ನು ಹಿಡಿದನೋ ಎಂಬ ಹಾಗೆ ಮೀನುಗಳು ಎಸೆಯುತ್ತಿದ್ದವು.

ಮತ್ತೇಭ ವೃತ್ತ.

1159. ಅಳಿಯಂ [1]ಪೂಗಂಣಿನೆಂನೀಮಗಳೆ [2]ಚಪಳೆ; ಪುತ್ರಂ ಕರಂ [3]ರಾಜ [ಯಕ್ಷ್ಮ

The sub-marine fire, the grief of the sea.

ಕುಳನೆಂನೈಶ್ವರ್ಯಮುಂ ನಿರ್ಜರರೆ [4]ಕವರ್ದರೆಂನೊಳ್ಬಸಂ ಪುಟ್ಟಿ [ತೆನ್ನಂ

[5]ಕಳಶಪ್ರೋದ್ಭೂತನಂದೀಂಟಿದನಕಟ ! ಮಹಾ[6]ಭಂಗಮುಂ ತಾಳ್ದಿನೆಂ [ದೆಂ

ದೊಳಗಂಭೋರಾಶಿ ಚಿಂತಾಗ್ನಿಯನೆ ತಳೆದ ಪ್ರೋಲೌರ್ವನಂತಸ್ [ಮಿರ್ಕುಂ.

1. ಕಮಲಾಕ್ಷನು=ಕೃಷ್ಣ, ಹೂವು ಬಿದ್ದ ಕಂಣಿನವನು. 2. ಲಕ್ಷ್ಮಿ, ಭಾಗ್ಯಸ್ಥಿರವಿಲ್ಲ, ಬೇಕಾದಲ್ಲಿ ತಿರುಗುವಾಕೆ. 3. ಕ್ಷಯವಾಗುವವನು=ಚಂದ್ರ, ರಾಜಯಕ್ಷ್ಮರೋಗದವನು. 4. ಮಥನಮಾಡುವ ಸಮಯದಲ್ಲಿ. 5. ಅಗಸ್ತ್ಯರಿಷಿ ಅವನ ಶಿಷ್ಯನು ಸಾಮಾನುಗಳನ್ನು ಸಮುದ್ರದ ದಂಡೆಯಲ್ಲಿ ತೊಳೆಯುತ್ತಿದ್ದನು. ಆವಾಗ ತೆರೆಗಳು ಬಂದು ಅವನ್ನು ತೆಕ್ಕೊಂಡು ಹೋದವು. ಆ ಶಿಷ್ಯ ಹೋಗಿ ಋಷಿಗೆ ತಿಳಿಸಿದಕ್ಕೆ ಇವನು ಬಂದು ಕೊಡು ಅಂತ ಬೇಡಿದನು. ಅದು ಕೊಡಲಿಲ್ಲದಕ್ಕೆ ಶಿಟ್ಟು ಬಂದು ಅಗಸ್ತ್ಯನು ಅದನ್ನು ಕುಡಿದು ತನ್ನ ಸಾಮಾನ ತೆಕ್ಕೊಂಡನು. ಆ ಸಮುದ್ರದ ನೀರನ್ನು ಮೂತ್ರದ್ವಾರದಿಂದ ಬಿಟ್ಟನಾದ ಕಾರಣ ಲವಣವಾಯಿತು. 6. ತೆರೆ, ಅಪಮಾನ.

ಚಂಪಕಮಾಲಾ ವೃತ್ತ.

1160. ಜಲನಿಧಿ[1] ! ಜಂಭವೈರಿ[2]ಗಿರಿಯಂ[3] ಗಿರಿಯಂ ಬಿಡು ಬೇಗವೆಂದು ಬಂ
ದುಲಿವ ವೊಲೊಪ್ಪಿ ಸುಸ್ತನಿತಮುಚ್ಚತಟಿತ್ಕರವಾಳನಾಂತತ
ಜ್ಜಲದಭಟಂಗದಂ ಕುಡದೆ, ತನ್ನಯ ಜೀವನವಿತ್ತುದಬ್ಧಿ ; ಭೂ
ತಲದೊಳ್ ಸತ್ವಶಾಲಿ ಪಗೆಗೇಂ ಮರೆವೊಕ್ಕನನೀಯಲಾಪನೆ ?

The warriors, the clouds, with their weapons, thunder and lightning, asking the sea.

1. ಸಂಬೋಧನ. 2. ಜಂಭ ಎಂಬ ರಾಕ್ಷಸನ ವೈರಿ=ಇಂದ್ರ. 3. ಗಿರಿ ಇಂದ್ರನಿಗೆ ವೈರಿ. ಮೇಘವೆ ಭಟನು, ಅದರೊಳಗಿಂದ ಹೊರಡುವ ಮಿಂಚೇ ಅವನ ಕತ್ತಿ, ಅದರಲ್ಲಿ ಆಗುವ ಗುಡುಗೇ ಅವನ ಮಾತು. ಈ ಭಟನು ಇಂದ್ರನ ಕಡೆಯಿಂದ ಒಂದು ಗಿರಿಯನ್ನು ಕೊಡಬೇಕೆಂದು ಸಮುದ್ರವನ್ನು ಕೇಳಿದನು. ಆದರೆ ಅದು ತನಗೆ ಮರೆಹೊಕ್ಕ ಗಿರಿಯನ್ನು ಕೊಡದೆ ತನ್ನ ಜೀವ=ನೀರ ಕೊಟ್ಟಿತು.

ಶಾರ್ದೂಲ ವೃತ್ತ.

1161. ಯೆಂನೋಳ್ಪುಟ್ಟಿದ ಚಂದ್ರನಿಂದೆ ಪಡೆಗುಂ ಸಸ್ಯಾಳಿ[1]ಸಂಪತ್ತನಂ
ತೆಂನೋಳ್ಪುಟ್ಟಿದ ಲಕ್ಷ್ಮಿಯಿಂದೆ ಪಡೆಗುಂ ಸೌಭಾಗ್ಯಮಂ ಧಾತ್ರಿ ; [ಮೇ
ಣೆಂನೋಳ್ಪುಟ್ಟಿದ ವಸ್ತುವಿಂದೆ ಪಡೆದಂ ಸರ್ವಾರ್ಥಮಂ ಜಿಷ್ಣು[2] ತಾ
ನೆಂನೋಳ್ಪೇಳ್ಸರಿಯಾವನೆಂದುಲಿವವೋಲುದ್ಘೋಷಿಕುಂ ಸಾಗರಂ.

The roaring of the sea, as if from joy, that it has not its equal.

1. ಸಸಿಗಳು ಚಂದ್ರನಿಂದ ಬೆಳೆಯುತ್ತವೆ. ಚಂದ್ರನು ಔಷಧೀಶ್ವರ. 2. ಇಂದ್ರನು ಸಮುದ್ರದಿಂದ ಶಿಕ್ಕಿದ ವಸ್ತುಗಳನ್ನು ಹೊಂದಿ ಭಾಗ್ಯವಂತನಾಗಿರುತ್ತಾನೆ.

## THE HOT SEASON.

### 4. ಗ್ರೀಷ್ಮರುತುವರ್ಣನ. (ಆಶ್ವಾಸ. 5.)

ಕಂದ.

1162. ದೆಸೆವೆ[1]ಣ್ಗಳ್ಬಿಸಿವಿಸಿಲಿಂ
ಬಸವಳಿದುಃಪೆಂದು ಸೂಯ್ದು ಬಿಸುಸುಯ್ಯಲರೆಂ

The hot winds the sighs of the

1. ಅಷ್ಟದಿಕ್ಕುಗಳೆಂಬ ಸ್ತ್ರೀಯರು.

goddesses of the eight points of the compass.

ಬಿಸಕಮನೊಡರ್ಚಿ ಬೀಸಿದು
ದಸದೃಶಶೋ[2]ಷ ಪ್ರಭಂಜನಂ ಬೇಸಗೆಯೊಳ್;

2. ಸ+ಉಷ್ಣ=ಸೋಷ್ಣ=ಬಹಳ ಉಷ್ಣ. ಆ ಬಿಸಿ ಘಾಳಿಯೇ ಆ ಸ್ತ್ರೀಯರು ಬಿಸಲಿಂದ ಬೇಸತ್ತು ಉಸುರು ಬಿಟ್ಟದ್ದು.

1163. ಪೊಡವಿ ಯರತಖಿಳಜಲಮಂ

The cracks in the grounds, as if gaping from thirst for the water of the mirage.

ಕುಡಿದುಂ, ತೃಷೆ ಯಡಗದಾಮರೀಚಿಯ ಜಲಮಂ
ತಡೆಯದೆ ಕುಡಿಯಲ್ಕೆಗೆ ಬಾಯಿ
ವಿಡುವಂತಿರೆ, ಬಿರಿದ ಬೀಡೆಗಳ್ಬಡದೆಸೆಗುಂ.

1164. ಪುಡಿ ತನಿಗೆಂಡದ ಬೂದಿಯ

The dust was like ashes with burning coals, &c. such was the burning heat.

ಪಡಿ, ನೆಲಮಟ್ಟೊಲೆಯ ತೊಲೆ, ಯಲರ್ಬಿರಯಿಯಬಾ
ಯಡೆಯಲರ್ಗಣೆ, ಯುರಿಗಿದು ಸರಿ,
ಕಡು ವಿಸಿಲೆನಿಸಿರೆ, ನಿದಾಘಮೇಂ ಪಸರಿಸಿತೋ !

ಹುಡಿಕೆಂಡದ ಬೂದಿಯಂತೆ, ನೆಲ ಅಟ್ಟ ಒಲೆಯಂತೆ, ಘಾಳಿ ವಿರಹಿಗಳ ಬಾಯಿಂದ ಬರುವ ಉಸರಿನಂತೆ ಬಿಸಲು ಉರಿಯಂತೆ ಇತ್ತು.

1165. ದಿನಮಣಿಮಣಿಶಾಣೋಪಲ

The burning rays, the sparks of the glittering blade of the sharp sword of the rays.

ವಿನಿಹಿತಘೃಷ್ಟಾರ್ಕಕಿರಣಖರಖಡ್ಗಲತಾ
ಜನಿತಸ್ಫುಲಿಂಗಸಂಘಮಿ
ದೆನೆ, ತದ್ವಿಸ್ಫುರಿತವಹ್ನಿಕಣ ತತಿಯಸೆಗುಂ,

1. ದಿನಮಣಿ–ಸಂಘಂ, ಇದು ಒಂದೇಸಮಾಸ ಶಬ್ದ. ಸೂರ್ಯನೆಂಬ ಮಣಿಖಚಿತವಾದ ಶಾಣೆಕಲ್ಲಿನ ಮೇಲೆ ತಿಕ್ಕಿಸಿ ಕೊಂಡಂಥಾ ಸೂರ್ಯನ ಕಿರಣ ಎಂಬ ಹದನವಾದ ಕತ್ತಿಯ ಅಲಗಿನಿಂದ ಪುಟ್ಟಿದ ಕಿಡಿಗಳ ಸಮೂಹ.

1166. ಬಾಯ್ವಿಡುತ್ತೈದಿದ ಮರಿಯಂ

The elephant grieved at seeing her young one pining away with thirst.

ತಾಯ್ವಿಡು[1] ನಡೆ ನೋಡಿ ಬಾಡಿ ತಾಪಂ ಮೊದಲಿಂ
ದಯ್ವಿಡಿ[2] ನೆಗೞ್ದರೆ, ತೆಗದೇಂ
ಕಯ್ವಿಡಿ[3]ದೂದಿದುದೊ ಸೋಷ್ಣಜಲಮಂ ಬಸುರಿಂ !

1. ತಾಯಾದ ಹೆಣ್ಣಾನೆ. 2. ಐದು ಪಾಲಷ್ಟು. 3. ಸೊಂಡಿಲ.

1167. ಅಗಶಿಖರಂ ಛಿಳ್ಛಿಟಿಲೆನೆ,

The summits of the mountains cracking, all animals languishing from the heat.

ಮಿಗೆ ಸಿಡಿದುದು; ಧಗಧಗಸ್ವನಮಿರೆ, ವನಂ ಭುಗಿ
ಭುಗಿಲನುರಿದು ಖಗವ್ರಜ
ಮೃಗತತಿ ಘರಿಘರಿಲನ್ನೈದೆ ಬೆಂದುದು ಬಿಸಿಲೋೞ್.

1168. ಕೊಳದಂಬು ಬತ್ತೆ ಚುಯ್ಯೆಂ

The mirage.

ದೊಳಗಣ ನಳಿನಾಳಿ ಕರಕುವರಿಗುಮೆನುತ್ತಂ
ಜಳಜಸಖಂ ಜಳಕಿರಣಾ[1]
ವಳಿಯಂ ಪಿಳಿದಂತೆ ಮೊಲ್ಮರೀಚಿಕೆ ಮೆರೆಗುಂ.

1. ಮರೀಚಿಕಾಜಲ.

1169. ನಡುನೆತ್ತಿ ಬಿರಿದು ಮುತ್ತುಗ

The pea-cock burning its beak, and lamenting.

ಳೊಡದುಚ್ಚಳಿಸುತ್ತಪಾರೆ, ಪನಿ ಗೆತ್ತುನವಿ
ಲ್ತುಡುಕೆ ನಿಜ ಚಂಚುವಂ, ಸುಡೆ,
ಮಿಡುಕಿದುದು ನಿದಾಘತಪ್ತಕರಿಸಂಕುಳದಾ

ಕರಿಸಂಕುಳದ ನಡುನೆತ್ತಿ ಮುಂತಾಗಿ ಅನ್ವಯಿಸ ಬೇಕು.

1170. ತಳಮಂ ಸುಡೆ ನೆಲನಡಿ ಯಿಡ

The lions seeking shelter from the heat in the shadow of the elephants.

ಉಳವಲ್ಲದೆ ನಿಂದ ಸಿಂಧುರಂಗಳ ನೆಳಲೊಳ್

ಬಳಗೊಂಡು ನಿಂದು ಬಿಸಿಲುಪ

ಟಳಮಂ ಕಳೆಗುಂ ಕ್ಷಣಂ ಮೃಗೇಂದ್ರಕದಂಬಂ.

ಬಿಸಿಲಿಂದ ಕಷ್ಟ ಪಟ್ಟು ಸಿಂಹನಾದರು ತನ್ನ ಸ್ವಭಾವವ ಬಿಟ್ಟು ಸಮಾಧಾನದಿಂದ ಆನೆಯ ನೆರಳಿನಲ್ಲಿ ನಿಂದಿತ್ತು.

1171. ಕಡುಗಾದ ಪೆಡೆವಣಿಗೆ[1] ತಲೆ

The serpent seeking shelter from the heat near the peacock.

ಗೊಡಪುತ್ತಂ ಭಯಮನುಳಿದು ಪುಗೆ ಸೋಗೆಯ ಸೊಂ

ಪಡರ್ದ ಪೊಸಪೀಲಿಯೊಳ್ಪಣಿ

ಬಿಡದುರಿದುದದೆಂದೊಡದನದಾರ್ಬಣ್ಣಿಸುವರ್ ?

1. ಹೆಡೆಮಣಿ. ಅದು ಬಹಳ ಕಾದದರಿಂದ ತಲೆ ಮುಂತಾದ್ದು ತಂನನ್ನು ನುಂಗುವ ನವಿಲಿನ ಸಮೀಪಕ್ಕೆ ಹೋಯಿತು.

1172. ಪೆಡೆಯಂ ಕೊಡೆಯಂತಿರೆ, ಪಿಡಿ

The serpent cooling her young ones.

ದಡಿಯೊಳ್ನಿರೆ ನಿಂದ ಮರಿಯನಾನನದೆಲರಿಂ

ಬಿಡದಾಶ್ವಾಸಿಸಿ ಮರುಕಂ

ಬಡೆದೋವುತ್ತಿರ್ದುದುರಗ ಪರ್ಬಿದ ಬಿಸಿಲೊಳ್.

1173. ಅಳುರ್ವ ಬಿಸಿವಿಸಿಲ ಬೇಗೆಯ

The dust going up to the sky, as if to dive in the celestial waters.

ನಿಳೆ ಸೈರಿಸಲಾರದಭ್ರಗಂಗಾ ಜಲದೊಳ್[1]

ಮುಳುಗಲಿರದೇಳ್ವ ವೊಲ್ಕಂ

ಗೊಳಿಸಿತು ಸಟ್ಟುರೆ ಸುರೇಣು[2] ಪಸರಿಸೆ ನಭದೊಳ್.

1. ಆಕಾಶದಲ್ಲಿ ಗಂಗಾಜಲವದೆ ಅಂತೆ. 2. ಧೂಳು ಆಕಾಶದ ಕಡೆಗೆ ಹಾರುತ್ತಿತ್ತು. ಅದು ಬಿಸಲು ತಾಳಲಾರದೆ ಆಕಾಶ ಗಂಗೆಯಲ್ಲಿ ಮುಳಗಲಿಕ್ಕೆ ಎದ್ದ ಹಾಗೆ ಕಾಣುತ್ತಿತ್ತು.

ಚಂಪಕಮಾಲಾ ವೃತ್ತ.

1174. ಸಿಡಿದುದು ದಂತಿದಂತಮದು ಸಂಗಡಮಾಗಿರೆ ಕುಂಭಮೌಕ್ತಿಕಂ
ಪಡೆವಣಿ ಪಾರೆ, ನೆತ್ತಿ ಬಿರಿದತ್ತಹಿವೃಂದದ[1] ; ಸಿಂಹಕೇಸರಂ
ಬಿಡದುರಿದತ್ತು ; ಪಕ್ಕಿಗಳ ನುಣ್ಗರಿ ಸೀದುದರಣ್ಯದಲ್ಲಿ ಸಂ
ಗಡಿಸಿದ ರುಕ್ಷರೋಮತತಿ ಬೆಂದುದು ; ಬೇಸಗೆ ಯುಗ್ರಮೆಂತು
[ಟೋ !

Bad effects of the heat on different creatures.

1. ಅಹಿವೃಂದದನೆತ್ತಿ.

ಮತ್ತೇಭವಿಕ್ರೀಡಿತ ವೃತ್ತ.

1175. ಇಳೆ ಕಾಯ್ವೇರಿದುದಬ್ಧಿ ನೀರ್ದೆಗೆದುದಾಶಾದಂತಿ ಬಾಯ್ವಿಟ್ಟುದು
ರ್ಕಳಿದರ್ದಿ ಗ್ವರರಂಜಿದರ್ದಿವಿಜರೂರ್ವೀಧ್ರವ್ರಜಂ ಸೀಳ್ದುದು
ಜ್ವಳಮಾದತ್ತಿನಬಿಂಬಮುಂಬುಚರಮೆಲ್ಲಂ ಬೇಗೆ ಗೊಂಡತ್ತು
[ಬಾಂ
ಬೊಳೆ ಬತ್ತಿತ್ತು ; ಮರೀಚಿ ಪೋಣ್ಮಿದುದರಣ್ಯಂ ಬೆಂದುದಾಗ್ರೀ
[ಷ್ಮದೊಳ್.

The earth became heated, &c.

ಉತ್ಪಲ ವೃತ್ತ.

1176. ನೋಡಿ ಮರೀಚಿಕಾಜಲಮನಂಬುವಿದೆಂದೆಳಸುತ್ತೆ ಬಂದು ಕೈ
ನೀಡಿ ಕಲಂಕಿ ಪೊಕ್ಕು ತೆಗೆದಿಕ್ಕುತೆ ಪುಷ್ಕರಮಂ ನಿಜಾಸ್ಯದೊಳ್
ಬಾಡಿ ಬಳಲ್ದು ಬಲ್ಪಳಿದು ಘೀಳಿಡುತಂಗದೊಳೆತ್ತಲುಂ ಪುಗು
ಳ್ಮಾಡಿರೆ, ಬೀಳ್ದುದರ್ಕಕರಕಲ್ಪಿತಸಂಜ್ವರನೊಂದು[1] ಕುಂಜರಂ.

Elephants dropping down from the heat.

1. ಸಂಜ್ವರವುಳ್ಳ ಆನೆ. ಸೂರ್ಯನ ಕಿರಣಗಳಿಂದ ಆದಂಥಾ ಸಂಜ್ವರನು.

## THE AUTUMNAL SEASON.

### 5. ಶರತ್ಕಾಲವರ್ಣನ. (ಆಶ್ವಾಸ. 6.)

ಕಂದ.

1177. ಅತಿನಿರ್ಮಲತೆಯನೀಮಲಿ
ನತೆ ಯಾಂತ ಪಯೋದಮಾಲೆಗಾಗಿಪ ಶರದಂ
ಪಿತತಸಿತದ್ಯುತಿತತಿರಂ
ಜಿತಚಂದ್ರಂಗೀವುದೆಂಬುದೊಂದಚ್ಚರಿಯೆ ?

No wonder, that Autumn, who makes the black clouds white, should give lustre to the moon.

ಕಪ್ಪಾದಮೋಡ ಬಿಳುಪು ಮಾಡುನ ಶರದನು ಮೊದಲೇ ಬಿಳುಪಾಗಿರುವ ಚಂದ್ರನಿಗೆ ಪ್ರಕಾಶ ಕೊಡುವದು ಅಚ್ಚರಿಯೆ ? ಈ ಋತುವಿನಲ್ಲಿ ಚಂದ್ರನು ಬಹಳ ಪ್ರಕಾಶವಂತನಾಗುತ್ತಾನೆ.

1178. ಅಡ್ಡಮಿರೆ ಕಾರಕಾರ್ಮುಗಿ
ಲೊಡ್ಡಣಮಿಳೆಗಿಳಿಯದೊತ್ತರಿಸಿ ಮುಂದೈಸು
ತ್ತೊಡ್ಡವಣೆ ನಿಂದ ಚಂದ್ರಿಕೆ
ಯೊಡ್ಡನೆ, ಬೆಳ್ಮುಗಿಲದೇಂ ಮನಂ ಗೊಳಿಸಿದುದೊ !

The white clouds gaining the upper hand against the dark clouds.

ಕಾರ್ಮುಗಿಲೇ ವೈರಿ, ಬೆಳ್ಮುಗಿಲೇ ಬೆಳದಿಂಗಳಿನ ಸೈನ್ಯ ಅದು ಆ ಕತ್ತಲೆಯನ್ನು ಬರಗೊಡುತ್ತಿದ್ದಿಲ್ಲ.

1179. ಬಾಂಬೊಳೆಯೊಳಗಿದು ಮುಳುಗಿ
ರ್ದಂಬುದಮದು ತೊಲಗೆ, ನಗೆದು ನಿಂದಂಚೆಯ ಪಿಂ
ಡೆಂಬಂತಿರೆ, ಬೆಳ್ಮುಗಿಲದ
ರಿಂ ಬೀಳ್ವ ತುಷಾರಮುದರ ಗರಿವನಿ ಯಕ್ಕುಂ.

The white clouds—a herd of swans.

ಬೆಳ್ಮುಗಿಲೇ ಅಂಚೆಯ ಹಿಂಡು, ಅದರಿಂದ ಉದರಿದ ಹನಿಯೇ ಆ ಅಂಚೆಗಳ ತೊಯಿದ ಗರಿಯಿಂದ ಬೀಳುವ ಹನಿ—ಆ ಅಂಚೆಗಳು ಮಳೆಕಾಲದ ಅಂಬುದವು ಹೋಗುವ ತನಕ ಆಕಾಶ ನದಿಯೊಳಗೆ ಅಂಜಿಕೆಯಿಂದ ಮುಳುಗಿದ್ದವು.

## ಮಹಾಸ್ರಗ್ಧರವೃತ್ತ.

The lotus budded, the ground was covered with crops, &c.

1180. ಮೊಳವೋ[1]ದತ್ತಬ್ಜಕಂದಂ ಕೊಳದೊಳ್; ಬೆಳೆದಾಳ್ದತ್ತಿಳಾ[2]ಮಂಡ[ಳಂ ; ಮಂ
ಡಳಿಗೊಂಡಾಗಳ್ಮರಾಳಾವಳಿ ನಗದ ಬಿಲದ್ವಾರದಿಂದೇಳ್ದು[3]ದಾಶಾ
ವಳಯಂ ತೋರ್ವ[4]ಟ್ಟುದಬ್ಜಂ ಪಳಚನಲರ್ದುದಬ್ಜಾರಿಬಿಂಬಂಕಳಂ[ಕಂ
ಕಳದತ್ತಂಬಂತೆ, ನೀಡುಂ ತೊಳಗಿ[5]ತು; ತಿಳಿದತ್ತಾಪಗಾವಾ[6]ರಿಪೂರಂ.

1. ಒದತ್ತು = ಪೋದತ್ತು = ಹೋಗಿತ್ತು = ಮೊಳೆಹೊರಡಿತು. 2. ಭೂಮಂಡಲವು ಬೆಳೆಯನ್ನು ಧರಿಸಿತು. 3. ಹಂಸಗಳು ಮಳೆಗಾಲದಲ್ಲಿ ಅಡಗಿಕೊಂಡಿದ್ದ ಗುಡ್ಡಗಳ ಗವಿಗಳಿಂದ ಹೊರಗೆ ಬಂದವು. 4. ಮೋಡದಿಂದ ಮುಸುಕಿಕೊಂಡಿದ್ದ ದಿಕ್ಕುಗಳು ಕಾಣಬಂದವು. 5. ಅನ್ವಯ: ಅಬ್ಜಾರಿಬಿಂಬವು—ತೊಳಗಿತು. 6. ಅನ್ವಯ: ಆಪಗಾವಾರಿ— ತಿಳಿದತ್ತು.

The clouds becoming white, pale from grief.

1181. ಘನನಾಮಂ ಲೋಕದೊಳ್ಪೇರ್ನಗೆಗೆಡೆಯೆನಿಸಿತ್ತಕ್ಕಟಾಕ್ಕೆಮ[ನ್ಮಿ[2]
ತ್ರನ ತೇಜಕ್ಕಡ್ಡಲಾದೆಂ; ದ್ವಿಜಗ[3]ತಿ ಗೆಡಿಸಿರ್ದೆಂ ; ಜಗ[4]ತ್ಪಂಕಮಂ[ನಿಂ
ಜನಿಸಿತ್ತಾ ರಾಜಹಂ[5]ಸಾಹಿತನೆನಿಸಿದೆನೆಂದುಂ ಜಡಗ್ರಾ[6]ಹಿ ಯಾನಾ
ದೆನೆನುತ್ತಂ ಚಿಂತೆಯಿಂ ಬೆಳ್ಪಡರ್ದುದೆನೆ, ತವಬ್ದಂ ಶರನ್ಮೇಘ[ಮಿರ್ಕುಂ.

ಶರತ್ಕಾಲದ ಮೇಘ ಬಿಳುಪಾಗಿದೆ. ನನ್ನ ವಿಚಾರ ಸುಮಾರಾಯಿತು ಎಂದು ಅದು ಚಿಂತೆ ಮಾಡಿ ಬೆಳಗಾಯಿತು ಎಂಬ ಹಾಗೆ ಕಾಣುತ್ತಿತ್ತು. 1. ಮೇಘ ಎಂಬ ನಾಮ, ಅಥವಾ ದೊಡ್ಡ ನಾಮ. 2. ಸೂರ್ಯ ಹಿತವಂತನು. 3. ನಕ್ಷತ್ರ, ಬ್ರಾಹ್ಮಣ. 4. ಕೆಸರು, ಪಾಪ. 5. ರಾಜೋತ್ತಮ, ರಾಜಹಂಸ ಎಂಬ ಪಕ್ಷಿ. 6. ನೀರು ಧರಿಸಿದಂಥಾದ್ದು, ದಡ್ಡತನ ಹಿಡಿದವನು.

ಉತ್ಸಾಹ ವೃತ್ತ.

The white clouds in the sky, an elephant scattering lotus flowers.

1182. ನಾಕಮತ್ತಹಸ್ತಿ[1] ಯಂಬರಾಪಗಾಪಯಸ್ಥಿತಾ
ಸ್ತೋಕಪುಂಡರೀಕರಾಜಿಯಂ[2] ಕರಾಗ್ರದಿಂದೆ ಕೀ
ಳ್ತೋಕಕಾಲದಲ್ಲಿ ಚೆಲ್ಲಿದಂತೆ ಪೋಲ್ಮ್ವನಾಳನಾ
ಳೀಕತಂತುದಂಭಶುಭ್ರಮಭ್ರದೊಳ್ವಿರಾಜಿಕುಂ.

1. ಐರಾವತ, ಈ ಶಬ್ದ ಚೆಲ್ಲಿದಂತೆ ಎಂಬ ಕ್ರಿಯಾಪದಕ್ಕೆ ಕರ್ತೃ. 2. ಯಂಬರ–ರಾಜಿಯಂ=ಒಂದೇ ಸಮಾಸಪದ. ಆಕಾಶದ ಹೊಳೆ ನೀರಿನಲ್ಲಿ ಇದ್ದ ಸಂಣ ಬಿಳಿ ಕಮಲದ ಸಮೂಹವನ್ನು ಮುಂತಾದ್ದು. 3. ಕಮಲದ ಹಾಗೂ ಅದರ ನಾರಿನ ದಂಭವುಳ್ಳ=(ದೊಡ್ಡ) ಶುಭ್ರವಾಗಿರುವ ಅಭ್ರವು (ಮೇಘ) ಮುಂತಾದ್ದು.

ಚಂಪಕಮಾಲಾ ವೃತ್ತ.

The cranes on the banks of lakes.

1183. ತಡಿವಿಡಿದೇಕಪಾದದೊಳ್ ನಿಂದತಿಗಂಣ್ಮುಗಿದಾತ್ಮಚಂಚುವಂ
ನಿಡುಗೊರಲಿಂ ಮರಳ್ಚಿ ನಿಜಪಕ್ಷದೊಳೊಯ್ಯನೆ ಸಾರ್ಚಿ ಮೌನ[ಮಂ
ಪಿಡಿದೆಡೆಗೈದಿದಂಬು ಚರಮಂ ಜವದಿಂ ತವೆ ನುಂಗಿ ಸಾರ್ದು ಸಾ
ಲ್ವಿಡಿದೆಡೆಗೊಂಡನೇಕಬಕಪಂಕ್ತಿಗಳಿಂ ಕೆರೆ ತಳ್ತು[1] ರಂಜಿಕುಂ.

ಕೆರೆ ಅನೇಕ ಬಕಪಂಕ್ತಿಗಳಿಂದ ರಂಜಿಸುತ್ತಿತ್ತು ಮುಂತಾದ್ದು. 1. ಧರಿಸಿ, ತಳೆ ಎಂಬ ಧಾತುವಿನ ಕ್ರಿಯಾನ್ಯೂನ.

ಮತ್ತೇಭವಿಕ್ರೀಡಿತ ವೃತ್ತ.

The autumnal lotus entertaining the swan.

1184. ಪರಿದೈತಂದರಸಂಚೆಯಂ[1] ಕರೆದು ಭೃಂಗೀನಾದದಿಂದಿತ್ತು ಗಂ
ಧರಜಃಪೂರ್ಣಮರಂದದರ್ಘ್ಯಮನಮರ್ಚುತ್ತಂಬುರುಟ್ಪೀಠಮಂ
ಮರುದಾನೀತದಳಾಂಬರಂ ಬೊದಿಸುಣಲ್ಕಿತ್ತಬ್ಜಬೀಜಗಳಂ
ಶರದಂಭೋಜನಿ[2] ಮಾಡಿದಳ್ ದ್ವಿಜವರಂ[3]ಗಾತಿಥ್ಯಸತ್ಕಾರಮಂ.

1. ರಾಜಹಂಸ, 2. ಶರತ್ಕಾಲದ ಕಮಲವನ್ನು ಒಬ್ಬ ಸ್ತ್ರೀಯಳಿಗೆ ಸಮಾನ ಮಾಡುತ್ತಾರೆ. (ಕಮಲಿನಿ=ಸ್ತ್ರೀ) 3. ಅರಸಂಚೆ ಎಂಬ ಪಕ್ಷಿ. (ದ್ವಿಜ=ಎರಡುಸರ್ತಿ ಹುಟ್ಟಿದವನು=(ಬ್ರಾಹ್ಮಣ, ಪಕ್ಷಿ.)

## THE RAINY SEASON.

### 6. ವರ್ಷರುತುವರ್ಣನ. (ಆಶ್ವಾಸ. 8.)

ಕಂದ.

1185. ಧೃತಚಂ[1]ಚಲಮತಿಚಪ[2]ಲ
ಸ್ಥಿತಿ ಜಡಭ[3]ರಿತಂ ಕಟು[4]ಸ್ವರಂ ಬರೆ ಮೇಘಂ
ನುತ[6]ಹಂಸ ತಳರ್ದುದು ; ಮಲಿ
ನತ[5]ರಂ ಬರೆ, ಶುಚಿಸು[7]ವೃತ್ತನೇನಿರ್ದಪನೆ ?

When dark clouds (bad men) come, the swans (good men) go.

1. ಚಂಚಲ ಬುದ್ಧಿಯವನು, ಮಿಂಚುಳ್ಳವನು. 2. ಹೋಗುವ ಸ್ಥಿತಿಯವನು, ಹೊಯ್ದಾಡುವ ಸ್ಥಿತಿಯವನು. 3. ಮೂರ್ಖತ್ವ ಭರಿತನು, ನೀರುಭರಿತನು. 4. ಕಠಿಣ ಮಾತಿನವನು, ದೊಡ್ಡ ಶಬ್ದವುಳ್ಳವನು. 5. ಬಹಳ ಪಾಪವುಳ್ಳವನು, ಕಪ್ಪಾದವನು. ಹೀಗೆ ಮೇಘವನ್ನು ಕೆಟ್ಟ ಮನುಷ್ಯನಿಗೆ ಸರಿಮಾಡಿ ವರ್ಣಿಸುತ್ತಾನೆ. 6. ಹಂಸಪಕ್ಷಿ ಸೂರ್ಯ. 7. ಬೆಳ್ಳಗೆ, ದುಂಡಗೆ ಆಗಿರುವವನು, ನಿರ್ಮಲ ಒಳ್ಳೆ ನಡಾವಳಿಯುಳ್ಳವನು. ಹೀಗೆ ಹಂಸವನ್ನು ಒಳ್ಳೆ ಮನುಷ್ಯನಿಗೆ ಜೋಡುಮಾಡಿ ವರ್ಣಿಸುತ್ತಾನೆ. ಮಳೆ ಗಾಲದಲ್ಲಿ ಹಂಸಗಳು ಸರೋವರ ಬಿಟ್ಟು ಎಲ್ಲಿಯಾದರೂ ಅಡಗಿಕೊಳ್ಳುವವು.

1186. ಗರಿ ನೆರೆಯದ ಕಿರುಮರಿಗಳ[1]
ನಿರುಂಕಿ ಪಕ್ಷದೊಳೆ ಪಾರಲಾರದೆ ಪಿರಿದುಂ
ಮರುಗುವ ಮರಾಳಿಗಳ ನು
ಣ್ಗರೆ[2]ವುತ್ತೆಡೆ ವಿಡದೆ ತಳರ್ದವಂಚೆಗಳಾಗಳ್.

The swans go to some hiding place before the rains set in.

1. ಮರಿಗಳನ್ನು. 2. ಗರೆಯುತ್ತ.

1187. ಗರಿ ಮೂಡಿದಂತೆ ಕೆಲದೊ
ಳ್ಕಿರುಮುಗಿಲಿರೆ, ಜಲ[1]ದನೀಲಗಿರಿ ನೆಗೆಯೆ, ಕೆ[2]ರೆ
ತ್ತೆರಗಿದ ವಜ್ರಿಯ ವಜ್ರದ
ಬಿರುವೊಯ್ಲರವಕ್ಕೆ ಬರಸಿಡಿಲ್ಸರಿಬರ್ಕುಂ.

The thunder like the noise of Indra's weapons.

1. ಸಣ್ಣ ಮುಗಿಲು ಎಂಬ ರೆಕ್ಕೆಯುಳ್ಳ ದೊಡ್ಡ ಮೇಘ ಎಂಬ ನೀಲಗಿರಿ ಹಾರಲಾಗಿ ವಜ್ರ ಇದ್ದ ಇಂದ್ರನು ಕೈಯೆತ್ತಿ ಹೊಡೆದ ಸಪ್ಪಳದಂತೆ ಸಿಡಿಲು ಆಗಿತ್ತು. 2. ಕರ ; ಪ್ರಕೃತಿ ಸ್ವರ ಲೋಪ (ವ್ಯಾ. ಸೂ. 10.)

1188. ಕಡಲವಿಷಮೀಂಟಿದೊಡೆ[1], ತಂ
ನೊಡಲಂ ಬಿಡದಡರೆ ಕರ್ಪುವೆತ್ತಂಗದಿನಾ
ಗಡೆ ಜೀವನಮಂ[2] ಬಿಟ್ಟುದು
ಜಡದಂ ಮೃಡನುಳಿದನೆಂದೊಡುಳಿದರ್ಗಳವೆ ?

The clouds drink the water of the sea and pouring it down, die : Rain.

1. ನೀರು, ವಿಷ. 2. ನೀರು, ಜೀವ.—ಮೇಘ ಸಮುದ್ರದ ನೀರು ಕುಡಿದು ಕಪ್ಪು ಶರೀರವುಳ್ಳದ್ದಾಗಿ ಮಳೆಯಲ್ಲಿ ನೀರು ಬಿಟ್ಟು ಸತ್ತು ಹೋಯಿತು. ಮೇಘವನ್ನು ಅಂದು ವಿಷ ಕುಡಿದ ಮೃಡನಿಗೆ ಸಮಾನ ಮಾಡುತ್ತಾನೆ.

1189. ನೆರೆದು ಘನಘನಮುದೇಭೋ[1]
ತ್ಕರಮೀಂಟಿ ಮರುತ್ತರಂಗಿಣೀಜಳಮಂ ಪೂ
ತ್ಕರಿಸೆ, ಸಿಡಿದಿಳಿವ ಕಣಗಣ
ದಿರವೆನಿಸಿದುದರರೆ ! ಸುರಿವ ಪೇರ್ಮಳೆ ನಭದಿಂ.

The elephants, (clouds) spouting forth from their trunks water, rain.

1. ಮೇಘವೆಂಬ ಮದಾನೆಗಳ ಸಮೂಹವು.

1190. ಸುರಚಾಪಚಂಪಕಸ್ರಜ[1]
ಕುರವಣಿಸುತ್ತಸಿತಜಳದಮದಮಧುಪಸಮು
ತ್ಕರಮೆರಗಿದಂತೆ, ಮೆರದುದು,
ಪರಿಕಿಸದಾತ್ಮೀಯಜೀವನವ್ಯಯಭಯಮಂ.

The black bees, the dark clouds without fearing for their life, on the (red) flowers, the rainbow.

ಮಳೆಬಿಲ್ಲೇ ಚಂಪಕಪುಷ್ಪ, ಮೇಘವೇ ಸೊಕ್ಕಿದ ಭೃಂಗ. ಇದು ಜೀವದ ಭಯ ಪರಿಕಿಸದೆ ಅದರ ಮೇಲೆ ಕೂತಿತು.

1191. ನುಂಗೆ ರವಿರುಚಿಯನದು ತಂ
ನಂಗಳ ಸುಡಲಸಿತಜಲವಿಧುಂತುದನುಗುಳ್ವಾ[1]
ಪಾಂಗನನುಕರಿಸಿ ಮಿಂಚುತ
ಡಂಗುವ ಸೆಳೆಮಿಂಚದೇಂ ಮನಂ ಗೊಳಿಸಿದುದೊ !

Rahu, the dark clouds, spitting out the rays of the sun, which he had devoured, lightning.

ಮೇಘವೇ ರಾಹು. ಮಿಂಚೇ ಅವನು ಮೊದಲು ನುಂಗಿ ಹಿಂದಗಡೆ ಬೆಂಕಿ ತಾಳಲಾರದಕ್ಕೆ ಕಾರಿದ ರವಿರುಚಿ. 2. ಕರೇ ಮೋಡ ಎಂಬ ವಿಧುಂತುದನು ಕರ್ತೃ.

1192. ಮೇಲ್ಸರಿ, ಸೂಳ್ಸರಿ, ಮುಗಿಲೋ
ಳ್ಗಲ್ಸರಿ, ತೆಳ್ಸರಿ, ಕರಂ ಪೊನಲ್ವರಿಯಿಪ ಬಂ
ಬಲ್ಸರಿ, ನಿಲುಪಿಲ್ಲದೆ, ಮಿಗೆ
ಕಾಲ್ಸರಿ ಸಲೆ ಸುರಿದು ಕರೆದವಿರುಳುಂ ಪಗಲುಂ.

Different kinds of rain, poured down day and night.

ನಾನಾಪ್ರಕಾರವಾಗಿ ಮಳೆ ಆಗುತ್ತಿತ್ತು.

1193. ಘುಡುಘುಡುಛಿಳಿಛಿಟಿಲೆಂದು
ಗ್ಗಡದ ಸಿಡಿಲ್ಧನಿಯೆ ಪೊಡಿಯೆ, ಗಗನಸ್ಥಳದಿಂ
ದುಡುಗಳ್ಪಳ ಪಳಸುದುರ್ವ ವೊ
ಲೆಡೆ ವಿಡದಿಳಿವಾಲಿವರಲ ಮಳೆ ಬಗೆ ಗೊಳಿಕುಂ

Hail-stones, as if the stars, had fallen from the sky.

1194. ಯೆಳಸಿ ನಿಜಚಂಚುಪುಟದೊ
ಳ್ತಳೆದಿನೆಯುಳ್ಗರೆದು ಮರಿಗಳಂ ತಣಿಪಿ ಮನಂ
ಗೊಳುತಳುಪಿ ಸೆಳೆದು ಜಲಕಣ
ಕುಳವಂ ಪೀರ್ದತ್ತು ಚಾತಕಂ ಚದುರಿಂದಂ.

The chátaka bird drinking the rain-drops.

ಚಾತಕಪಕ್ಷಿ ಮಳೆ ಹನಿಯನ್ನಲ್ಲದೆ ಬೇರೆ ನೀರು ಕುಡಿಯುವದಿಲ್ಲ.

1195. ಜಳಮಯಮಿಳೆ; ಜಳದಮಯಂ
ಜಳಧರಮಾರ್ಗಂ; ತಟಿನ್ಮಯಂ ದಿಗ್ವಳಯಂ;
ಕೆಳೆಗೊಳೆ, ನವಸೃಷ್ಟಿಯನೇಂ
ತಳೆದುದೊ ಭುವನಂ ಘನಾಗಮಾಂಬುಜಭವನಿಂ[1] !

What a new creation the world has put on by that creator, the rainy season!

1. ಮಳೆ ಕಾಲ ಎಂಬ ಬ್ರಹ್ಮ.

1196. ಫಣಿಯುಂ ತುಂಡಿಸಿ ವಿಷಮುಂ

The delight of the peacocks. ನೊಣೆದಾನುಂ ನೀಲಕಂಠನಾದೆನೆನುತ್ತಂ

ಕುಣಿವಂತೆ, ವಿಷಧರದ[1] ಮುಂ

ದಣಿಯುರದಿಂ ಕೇಗಿ ಕುಣಿವ ನವಿಲೆಸೆದಿರ್ಕುಂ.

1. ಮೇಘ.

1197. ಬೆಳೆದೆಳೆವು[1]ಲ್ಕುರಮೆಸೆದ

The ground wet and cold, by the shaking leaves, shivering ತ್ತಿಳೆ ಮಳೆಯಿಂ ನಾಂದು ಸೇಡುವಡದಿರೆ, ಮೊಳೆತ

ರ್ಗಳಪುಳಕಾಂಕುರಮನೆ, ಸಂ

ಚಳದಳವನದಿಂದೆ ಕಂಪಿಪಂತಿರೆ, ತೋರ್ಕುಂ.

1. ಎಳೇ ಹುಲ್ಲು. ಭೂಮಿ ಚಳಿಯಾಗಿ ನಡುಗುವ ಹಾಗೆ ಕಂಡಿತು.

ಚಂಪಕಮಾಲಾ ವೃತ್ತ.

1198. ಅಡಿಗಡಿಗುರ್ವಿ ಮಿಂಚುವಳೆಮಿಂಚು ಮರುದ್ಭಟನೆತ್ತಿ ಬೇಗದಿಂ

The rainy season a king, to vanquish the hot season, the wind his drummer. ಪೊಡೆವ ಸುವರ್ಣಕೋ[1]ಣಮೆನೆ, ತಳ್ತರೆ ತಾನೊಗೆದತ್ತು ಕಾರ್ಮುಗಿ

ಲ್ಗಡಣಮೆನಿಪ್ಪ ದಂತಿತತಿಯುಗ್ರದ ಡಿಂಡಿಮನಾದದಂತೆ ಪೇ

ರ್ಗುಡು[2]ಗು ನಿದಾಘನಂ ತಗುಳಲ್ಕೈದಿದ ನೀರದಕಾಲರಾ[3]ಜನಾ.

1. ಮಿಂಚೇ ಮರುದ್ಭಟನು ಎತ್ತಿ ಹೊಡೆಯುವ ಸುವರ್ಣದ ಗುಣಕು. 2. ಗುಡುಗೇ ಮೋಡವೆಂಬ ಆನೆಯ ಸಮೂಹದ ಮೇಲೆ ಹೇರಿದ ಭೇರಿನಾದ. 3. ಮೇಘ ಕಾಲ ರಾಜನ ಗುಡುಗು ಬಗೆದತ್ತು ಎಂಬಂತೆ ಅನ್ವಯಿಸ ಬೇಕು. ಮಳೆ ಕಾಲವೇ ಬೇಸಿಗೆ ಎಂಬ ವೈರಿಯ ನೂಕಿಸುವ ರಾಜನು.

ಮತ್ತೇಭ ವೃತ್ತ.

1199. ರವಿಚಂದ್ರಪ್ರಚುರಪ್ರಭಾಪ್ರಚಯಮಂ ಮೇಘಂ ಮುಸುಂಕು [ತ್ತಿ, ಕಾ

The clouds darkening the sky (bad poets) lightning (their bad poems.) ಷ್ಠ್ಯವಶಿಷ್ಟಂ ತಟಿದಂಕುರಾಲ್ಪರುಚಿಯಂ ಬೀರಿತ್ತುದಗ್ರಸ್ಫುರ

ತ್ಕವಿಕಾವ್ಯಪ್ರಕಟಪ್ರಭಾವಮನದಂ ಕೇಳ್ಕಬ್ಬಿಗಂ ಗುಪ್ತಗೈ
ದವರಾತ್ಮೀಯ ಕೃತಿಪ್ರಭಾವತೆಯನಾದಂ ತೋರ್ಪವೋಲ್ಧಾತ್ರಿ
[ಯೊಳ್.

ಮೇಘವೇ ಕೀಳ್ಕಬ್ಬಿಗನು, ರವಿಚಂದ್ರರೇ ಸುಕವಿಗಳು; ಇವರ ಪ್ರಕಾಶವೇ ಸುಕಾವ್ಯ; ಮೇಘದ ಮಿಂಚೇ ಕೀಳ್ಕಬ್ಬಿಗನ ಕೃತ್ಯ. ಅನ್ವಯ: ಮೇಘವು ಪ್ರಜೆಯುಮಂ ಮುಸುಕುತ್ತಾ ವಿಶಿಷ್ಟಂ ರುಚಿಯುಂ ಬೀರಿತ್ತು.

1200. ತರಳಕ್ಕಿಂದಡಿ ಯಿಟ್ಟು ಜಾರಿ ಜವದಿಂ ಕೈಯೂರಿ ಬೀಳ್ದೆಳ್ದು ಪಂ
Travellers on the muddy streets.
ಕಿಳಮಾದಂಶುಕಮಂ ಪೊನಲ್ವರಿವ ನೀರೊಳ್ಕರ್ಚಿ ಮೈ ಸಾರ್ಚಿ ಪ
ಲ್ಗಳ ನಾ[1]ದಂ ಪುಳಕಾಂಕುರಂ ಮೊಳೆಯೆ, ಮೇಣಾರೈದು ಕಾಲಿ
[ಟ್ಟು ಕೋ
ಲ್ಗಳನಾಂತೈದುವ ಪಾಂಥರಂ ನಗುವರಾಹವ್ಯಾಗ್ರದಬ್ಜಾಕ್ಷಿಯರ್.

1. ಚಳಿಯಿಂದ ಹಲ್ಲುಗಳು ಗಿಟಿಕಿರಿಯುತ್ತವೆ.

ಉತ್ಪಲ ವೃತ್ತ.

1201. ಎನ್ನ ಸಹಾಯದಿಂ ನೆರೆದು ತಾಳ್ದ ಘನತ್ವಮನಸ್ಮದಿಯ್ಯ ಮಿ
The wind beats the cloud, and its white teeth, (hail) fall out.
ತ್ರೋಂನ[1]ತತೇಜಮಂ ತವಿಪನೆಂದನಿಲಂಮುಗಿಲಂ ಕನಲ್ದು ಪೊ
ಯ್ದಂ; ನೆಗಳ್ಘನಧ್ವನಿ, ಕಳಲ್ದುದಿರ್ದತ್ತು ಘನೋಪಲಾಘದಂ
ತಂ; ನಿಜಮುಲ್ಲದಿರ್ದೊಡಿಳೆಯಲ್ಲಿದು ನೀರದನಾಮಮಾಂಪುದೇ?

1. ಜೆಂಕೆ.—ನಂನಿಂದ ಅದು ದೊಡ್ಡದಾಯಿತು. ಆದರೂ ಜೆಂಕೆ ಎಂಬ ನಂನ ಮಿತ್ರನನ್ನ ಕೆಡಿಸುತ್ತದೆ ಎಂದು ಅನಿಲನು ಶಿಟ್ಟುಮಾಡಿ ಮೇಘವನ್ನು ಹೊಡೆದನು, ಗುಡಗಾಯಿತು. ಈ ಹೊಡತದಿಂದ ಆನೆಕಲ್ಲು ಎಂಬ ಮೇಘನ ಹಲ್ಲುಗಳು ಉದರಿದವು. ಅದರಿಂದ ಮೇಘಕ್ಕೆ ನೀರದ (=ಮೋಡ ಅಥವಾ ನಿ+ರದ=ಹಲ್ಲಿಲ್ಲದವನು) ಎಂಬನಾಮ ಬಂತು.

1202. ಮಂಗಳವಾದ್ಯಮಬ್ಧರವಮುಣ್ಮುವ ಮಿಂಚದು ದೀಪಮಾಲೆಮು
ತ್ತುಂಗಪಯೋದಮಿಟ್ಟ ತೆರೆ, ತೋರಣಮಿಂದಿರವಿಲ್ಲುವೃಷ್ಟಿಯೇ
ಸಂಗತಧಾರೆ, ಯಾಲಿವರಲೊಪ್ಪುವ ಮುತ್ತಿನ ಸೇಸೆಯಾಗೆ ಕಾ
ರುಂ ಗಗನಸ್ಥಳೀರಮೆಯುಮೊಂದಿದರೊಂದು ವಿವಾಹಲೀಲೆಯಂ.

The rainy season and the sky, the bride, married.

1. ಮಳೆಕಾಲವೇ ವರ, ಗಗನ ಸ್ಥಳವೇ ವಧು.

1203. ಚಾದಗೆಯಂತೆ ಮುಂಬನಿಯನೇಂ ಬರೆ ಪೀರ್ದುದೆ ? ವಲ್ಲಿಯಂತಿದೇಂ
ತೋದುದೆ ವಾರಿಯಿಂ ? ಕಡವಿನಂ[1]ತೆ ಮುಗುಳ್ತುದೆ ತತ್ಸಹಾಯದಿಂ ?
ಕೇದಗೆಯಂತ ಪೂತುದೆ ? ಮುಗಿಲ್ಗಳ ಪಂಗಿನಿತುಂಟೆ ? ಕೇಕಿ[2] ಯಾ
ಹ್ಲಾದದೆ ಕಂಡು ನರ್ತಿಪುದಿದತ್ತಿ ಸಮಾನವಯಃಪ್ರವರ್ತನಂ ?

The peacock has no advantage from the clouds; yet it is delighted when they come.

1. ಈಗಿಡ ಮಳೆಗಾಲದಲ್ಲಿ ಯಲ್ಲದೆ ಬೇರೆಕಾಲದಲ್ಲಿ ಚಿಗುರುವದಿಲ್ಲ. 2. ನವಿಲು ಮೇಘ ಕಂಡರೆ ಕುಣಿದಾಡುತ್ತದೆ. ಮೇಘದಿಂದ ಅದಕ್ಕೆ ಪ್ರಯೋಜನವೇನಿಲ್ಲ. ತನಗೆ ಸಖನಾಗಿರುವ ಮೇಘದ ಪ್ರವರ್ತನವನ್ನು ಕಂಡು ಸಂತೋಷ ಪಟ್ಟು ಕುಣಿಯುತ್ತದೆ.

### ವಂಶಸ್ಥ ವೃತ್ತ.

1204. ಸ್ಫುರದ್ಧನು ಶ್ರೀಕರ ಚಂಚಲೇಕ್ಷಣಂ
ಶರದ್ವ್ಯಪಾತೋರುಶರಂ ಘನಸ್ವನಂ
ಹರಿಪ್ರಭಂ ನೀರದರಾಜನಟ್ಟಿದಂ
ಧರಾತಿಸಂತಾಪದನಂ ನಿದಾಘನಂ.

The king cloud chased the hot season.

ಮೇಘರಾಜನನ್ನು ವರ್ಣಿಸುತ್ತಾನೆ : ಸಂಪತ್ತನ್ನು ಸಂಪಾದಿಸುವ ಮಳೇಬಿಲ್ಲು ಇದ್ದವನು ; ಮಿಂಚೇ ಅವನ ಕಣ್ಣು, ಆಕಾಶದಿಂದ ಉದುರುವ ಹನಿಯೇ ಅವನ ದೊಡ್ಡ ಬಾಣ ; ಆಕಾಶದ ಪ್ರಭೆಯುಳ್ಳವನು. ಇವನು ಭೂಮಿಗೆ ಸಂತಾಪ ಕೊಟ್ಟ ಬೇಸಿಗೆಯನ್ನು ಅಟ್ಟಿದನು.

## THE COLD SEASON.

### 7. ಹಿಮಂತರುತುವರ್ಣನ. (ಆಶ್ವಾಸ. 9.)

ಮಾಲಿನಿ ವೃತ್ತ.

1205. ಸುರಕರಿಕರಮುಕ್ತಾಂಭಃಕಣಂ ಮಂಜಿದೆಂಬಂ
ತಿರೆ ತೆಳೆದು ಶಿಖಾವ[1]ದ್ಗರ್ವಮಂ ನುರ್ಗಿ ನೀಲಾಂ
ಬುರುಹಸುರಭಿ ಯೊಂದುತ್ತೈದಿದಂ, ಮಾಗೆ ಬರ್ಪಂ
ತಿರೆ, ಧೃತಘನಸಾರಾಮೋ[2]ದಸಾರಂ ಸಮೀರಂ.

The east wind with mists, devouring the heat, set in.

1. ಶೆಂಕಿಯ ಹಾಗೆ (ಸಂಸ್ಕೃತ) ಇಂದ್ರನ ಆನೇ ಸೊಂಡಿಲಿಂದ ಬಿಟ್ಟ ಹನಿಯೇ ಮಂಜು ; ಘಾಳಿ ಶಿಕೆಯನ್ನು ನುಂಗಿ ನೈದಿಲಹೂವಿನ ಮೇಲೆ ಹಾದು ಕರ್ಪುರ ಯುಕ್ತವಾದ ಗಂಧದಿಂದ ಬಂದು ಮಾಗೆಯಾದ ಹಾಗೆ ಆಯಿತು. 2. ಈ ಶಬ್ದ ಸಮೀರವೆಂಬ ಪದವನ್ನು ವಿಶೇಷಿಸುತ್ತದೆ. ಸಮೀರ ಐದಿದಂ ಎಂಬ ಕ್ರಿಯಾಪದಕ್ಕೆ ಕರ್ತೃ.

ಚಂಪಕಮಾಲಾ ವೃತ್ತ.

1206. ನೆಗೆದುಡುಜಾಲದಂತೆ ಪೊಸಮೊಲ್ಲೆಯ ಬಲ್ಮುಗುಳೊಪ್ಪೆ, ಪದ್ಮಮಂ
ಮಿಗೆ ತೊರೆದಲ್ಲಿ ಲಕ್ಷ್ಮಿ ನಿತಿ ನೈದಿಲೊಳುರ್ಬಿದ ಮರ್ಬು ಪಿಂಗಿದಂ
ತಗಲಿರೆ ಕಾರ್ಮುಗಿಲ್ಗಳೆ ಜೊನ್ನದ ಪೊಲ್ಪೊಸಮಂಜು ವಾ
[ರ್ಧಿ, ಪೆ
ರ್ಚುಗೆಯನಮರ್ಚೆ, ತಾಳ್ದನುದಿತೋದಯಮಂ ಹಿಮಕಾಲಚಂ
[ದ್ರಮಂ.

The moon, the cold season, rose, at which the sea of mists swelled, the moonlight, &c.

ಹಿಮಕಾಲವನ್ನು ಚಂದ್ರೋದಯಕ್ಕೆ ಸಮಾನಮಾಡಿ ವರ್ಣಿಸುತ್ತಾನೆ. ಮೊಲ್ಲೆಯ ಮೊಗ್ಗೆಗಳೇ ನಕ್ಷತ್ರಗಳು; ಕಮಲ ಮುಚ್ಚಿ ನೈದಿಲೆಗಳು ಅರಳಿದವು. (ಲಕ್ಷ್ಮಿ ನೈದಿಲೊಳು ನಿಂತಳು.) ಕಾರ್ಮುಗಿಲು ಹೋಗಿತ್ತು; ಮಂಜೇ ಬೆಳತಿಂಗಳು ಮುಂತಾದ್ದು.

ಮತ್ತೇಭ ವೃತ್ತ.

1207. ಇಳೆಯಂ ಮುಚ್ಚಿ ಮುಸುಂಕಿ [1]ನಿಶ್ಚಲತೆ ಇತ್ತಾಶಾಧಿಪಗೊರ್ಂಟು
[ಗೊಂ
ಟೊಳೆಸಾರ್ವಂತಿರೆ, ಮಾಡಿ, ವಹ್ನಿ ಸಖ ನಾನೆಂಬೊಂದಹಂಕಾರಮಂ
ತಳೆದಾಮಾರುತನಂ ಕರಂ ಪಿಡಿದು ತನ್ನೈಕಿಲ್ಗಳಿಂ ನಾಂದಿ ಸಂ
ಚಳನಂ ಮಾಡಿ [2]ತದಾಪ್ತನುರ್ಕು ಮುರಿದೇಂ ಪರ್ಬಿತ್ತೊ ಹೈಮಾ
[ಗಮಂ !

*The cold season humiliated; the wind and the fire its friend.*

1. ಒಬ್ಬರು ಮಿಸಕ್ಯಾಡದ ಹಾಗೆ ಮಾಡಿದನು ಹೈಮಾಗಮ ಎಂಬವನು. 2. ಘಾಳಿಯು ಆಪ್ತನು=ಬೆಂಕಿಯು ಸೊಕ್ಕು.

ಮಹಾಸ್ರಗ್ಧರ ವೃತ್ತ.

1208. ನಡುಕಂ ಕೈಮೀರೆ, ದಂತಚ್ಛದ ಪೊಡೆದು ಹುಹುಧ್ವಾನಮುಂ ಪೋ
[ಣ್ಮೆ, ಮೈಯ್ಯೊ
ಳ್ಬಿಡದೆತ್ತಂ ತೋರೆ ರೋಮೋದ್ಗಮಮುಮುರ್ದಿರೆ ಶೀತ್ಕಾರ ಮುಂ
[ಗ್ಗೈ[1]ವೆರಲ್ಕಾ
ಲ್ಕಡಿ ಮೆತ್ತಂತಾಗೆ, ತಳ್ತೈಕಿಲ ಭರದೆ ಪಡಲ್ಪಟ್ಟು ಗೇಣಾಗಿ ಪಾಂಥ
ರ್ತೊಡೆ ತೋಳ್ಗಳ್ಕೂಡಿ ಜಾನುಪ್ರಹಿತಶಿರರದೇನಿರ್ದರೊ ಶೀತಭೀ
[ತರ್ ?

*The effects of the cold on travellers.*

1. ಬೆರಳು ಕಾಲು ತುಂಡಾದ ಹಾಗಿದ್ದವು.

ಕಂದ.

1209. [1]ಪಗೆಯು ಕಳೆ ಯುಡುಗಿದುದು, ಗಡ !
ಪಗೆಯಂ ಕಳೆಗೊಂಡ ನಳಿನಿ ಕೊರಗಿದಳೆಂದೆ

*The water lily, fancying that*

1. ಸೂರ್ಯ, ಅವನು ನೈದಿಲೆಗೆ ವೈರಿ.

the cold was the moonlight, was open also in the day time.

ನಗುವುದೆನೆ, ನೈದಿಲೆ ಪಗ
ಲ್ಮುಗಿಯ[2]ದು ಬೆಳ್ದಿಂಗಳೆಂದು ಭಾವಿಸಿ ಹಿಮಮಂ.

2. ಹಿಮ ಬೆಳದಿಂಗಳೆಂದು ನೆನಸಿ ನೈದಿಲೆ ಹಗಲೊತ್ತಿನಲ್ಲಿ ಯಾದರೂ ಮುಚ್ಚಿಕೊಳ್ಳುತ್ತಿದ್ದಿಲ್ಲ.

1210. ಮಂಜಿರೆ, ನರೆ ಯೆನೆ, ಕೊರಗಿರೆ

The lady day became an old woman with gray hairs, &c.

ಕಂಜಂ, ತೆರೆವಿಡಿದು ಸುರ್ಕಿದಾನನಮೆನೆ, ಚ
ಕ್ರಂ ಜಗುಳ್ದಿರೆ, ಮೊಲೆ ಯೆನೆ, ಹಿಮ
ದಿಂ ಜರೆ ಗೊಂಡಂತೆ, ದಿವಸರಮೆ ಕಳೆ ಗೆಟ್ಟಳ್.

ಹಿಮಕಾಲದ ದಿನ ಒಬ್ಬ ಮುದಿಕಿಗೆ ಸಮಾನ ಮಾಡುತ್ತಾನೆ, ಮಂಜೇ ನರೆಕೂದಲು, ಬಾಡಿದ ಕಮಲವೇ ಬತ್ತಿದ ಮೋರೆ, ಜೋತುಬಿದ್ದ ಚಕ್ರಪಕ್ಷಿಗಳೇ ಮೊಲೆ.

1211. ಮರದೊಳೆಸೆವೆಂದು ನೆವದಿಂ

The fire and the sun confess themselves to be vanquished.

ಮರಸಡರ್ದ ಶಿಖಿ ; ದಿವಾಕರಂ ನೀರ್ಪೊ[1]ಕ್ಕಂ
ಪರಿಗತಬಿಂಬವ್ಯಾಜದಿ
ನರರೆ ! ಹಿಮಾಗಮಮಹೀಶನೇಂಕಡುಗಲಿಯೊ !

ಹಿಮ ಎಂಬ ಅರಸನು ಥಿಂಕೆಯನ್ನೂ ಸೂರ್ಯನನ್ನೂ ಗೆದ್ದನು. ಗಿತ ಹತ್ತುವದು ನೀರೊಳಗೆ ಬೀಳುವದು ಸೋತವರ ಲಕ್ಷಣ. 1. ಮುಣಗಿದನು ಸಮುದ್ರದಲ್ಲಿ.

1212. ರಯದಿಂ ಮುಸುಂಕುತಿರ್ಪತಿ

Sun and fire unable to lessen the cold.

ಶಯಹಿಮಮಂ ಕಳೆಯಲೆಂದಿನಂ ಶಿಖಿಯು ಸಮಾ
ಶ್ರಯಮೊಸಗಿ ಕಳೆಯೆ[1]ನೆನಲಾ
ಶ್ರಯಾ[2]ಶನಾಶ್ರಯದಿನಿಷ್ಟಮೇಂ ಸಮನಿಪುದೆ ?

1. ಕಳೆಯುವದಿಲ್ಲ. 2. ಜಿಂಕೆ, ತನ್ನ ಹೊಂದಿದ್ದನ್ನು ತಿನ್ನುವಂಥಾದ್ದು, ಹಿಮಕಾಲದಲ್ಲಿ ಸೂರ್ಯನು ಅಗ್ನಿದಿಕ್ಕಿನಲ್ಲಿ ಉದಯವಾಗುತ್ತಾನೆ.

1213. ಪುದಿದ ಹಿಮಮೊಡಲದೊಳತಂ
ದುದರಾಗ್ನಿಯನ್ನೈದೆ ನಂದೆ, ವೈದುದು ; ನಿಜಮ
ಲ್ಲದೊಡೆಂತು ತೋರ್ಪುದೋ ? ಪೇ
ಳ್ಕ್ರೊದಲಿಲ್ಲದ ಪೊಗೆ ಪೊದಳ್ದು ಜನದಾನ[1]ನದೊಳ್ ?

The cold has entered the body and quenched the fire in it.

1. ಜನರ ಬಾಯೊಳಗಿಂದ ಉಸರಿನ ಹೊಗೆ ಚಳಿಕಾಲದಲ್ಲಿ ಬಹಳ ಬರುತ್ತದೆ. ಇದು, ಹಿಮ ದೇಹದೊಳಗೆ ಹೊಕ್ಕು ಉದರಾಗ್ನಿಯು ನೊಂದಿಸಿದರಿಂದ, ಹೀಗೆ ಆಗುತ್ತಿತ್ತು ಎಂದು ವರ್ಣಿಸುತ್ತಾನೆ.

ಸ್ವಾಗತ ವೃತ್ತ.

1214. ಗೇರಪಂ[1]ಣನಿದು ಕೆಂಡಮೆನುತ್ತಂ
ಸಾರಿ ಮೇಲೆ ತೃಣಮಿಟ್ಟದನೂದಲ್,
ಸೇರಿ ಬಾಯು ಪೊಗೆ ತಳ್ತಿರೆ, ಕಂಡಾ
ದಾರಿಗಂ ಮುದದಿನೂದುತಮಿ[2]ರ್ದಂ.

A traveller making fire.

1. ಗೇರುಹಂಣು ಕೆಂಡದ ಹಾಗೆ ಕೆಂಪು ತೋರುತ್ತದೆ. 2. ತನ್ನ ಬಾಯ ಉಸರಿನ ಹೊಗೆ ಬೆಂಕಿ ಹೊಗೆ ಎಂದು ದಾರಿಗನು ಊದುತ್ತಿದ್ದನು.

ಕಂದ.

1215. ಚಳಿಗಾ[1]ರದೆ ಪೇರಾಲದ
ಕೆಳಗಿರ್ಪನಿತರೊಳ್ ಚಪಳಕಪಿ ನಿಡುಗೋಡಂ
ಸೆಳೆದಲುಗೆ, ಸೂಸುವೆಲೆವನಿ
ಗಳನೋರ್ವಂ ನೆನೆದು ನಡುಗಿ ಸಿಡಿಮಿಡಿ ಗೊಂಡಂ.

One became wet by the dew-drops, that fell from a tree.

1. ಸೈರಿಸಲಾರದೆ.

1216. ಇಡಿದಿಂಧನದೊಳ್ ಫಣಿ ಯೊಳ
ಗಡಂಗೆ, ಮಣಿ ಗಂಡು ಕೆಂಡಮೆಂದೊರ್ವಂ ಕೈ
ದುಡುಕೆ, ಮೊರೆದೇಳೆ, ಭಯದಿಂ
ಕಡು ಚಳಿಯಿಂದೊರ್ವ ಸೆಡೆದು ನಡುಗುತ್ತಿರ್ದಂ.

One mistakes the hood of a serpent concealed in wood, for fire, &c.

1217. ಹಾದಿಯೊಳೂದಿದನೋರ್ವಂ,
ಬೂದಿ ಕರಂ ಪಾರೆ, ಕೆಂಡಮಂ ಕಂಡಮಿದೆಂ
ದಾದರಿಸಿ ಕುಕ್ಕಿ ಕೊಕ್ಕಿಂ
ಮೋದುದದಂ ಕಾಗೆ; ಮಾಗೆ ಯೇನತಿಶಯಮೋ!

The crane seeks burning coals in the ashes.

1218. ಪುಲ್ಲಿಕ್ಕಿ ಪೋಗೆ ಪಥಿಕ
ಮೆರ್ಲ್ಲನೆ ಸುಡಲಾರದಗ್ನಿ ಹಿಮಸಮಯಮಹೀ
ವಲ್ಲಭನತ್ತಣಿನಗಿದೇಂ
ಪುಲ್ಲಂ ಕರ್ಚಿಪುದೊ?[1] ಪೇಳೆನಲ್ತಳ್ತಿಸೆಗುಂ.

The fire burns only slowly from fear of the king "Cold"

1. ಸೋತವರು ಹುಲ್ಲು ಕಚ್ಚುತ್ತಾರೆ. ಬೆಂಕೆ ಹಿಮಸಮಯ ಎಂಬ ಮಹೀವಲ್ಲಭನಿಗೆ ಅಂಜಿ ಸೋತ ಹಾಗಾಯಿತು.

1219. ಗರಿ ಗೆದರಿ ಬಿದಿರ್ದು ಕೊಕ್ಕಿಂ
ದಿರಿದಿರಿದೆಳೆ ವಿಸಿಲನೆಳಸಿ ಸೇಡುಂ ಗೊಂಡೇಂ
ತುರುಗಿರ್ದುವೊ ತುದಿಗೋಡೊಳ್?
ಮರಿ ಚಿರತಿರೆ, ನೋಡಿ ಬಾಡುತಂ ವಿಹಗಂಗಳ್.

The birds in the cold.

ಸ್ರಗ್ಧರ ವೃತ್ತ.

1220. ಯೇಳುತ್ತಂ ಮೆಲ್ಲನಲ್ಲಿಂ ಮರಿ ಯಮರ್ದಿರೆ ಕೇಳ್ಪೊಟ್ಟೆಯೊಳ್ಸ [ರ್ಕನೆತ್ತಾ
ಬಾಳಂ ಮೇಣ್ಬಕ್ಕೆ, ನೋಡುತ್ತಸವಸದೆ ಬಿಸಿಲ್ಗೆತ್ತು ಜೇರ್ಣಭ [ದಂಗಳ್

The monkey angry with the cold dew.

ಮೇಳಂಗೊಂಡೊಪ್ಪಿ ಶಾಖಾಗ್ರದೊಳಡರ್ದಲುಗಲ್ಪೊಸೆಮೇಲ್ವೈಕಿ
[ಲಿತ್ತಂ
ತೊಳ್ಗುಂಪುಂಗಂಕರಂ ಪಲ್ದೆರದು ನಡುಗಿ ಹರ್ದಿಂದು ಪುರ್ಬಿಕ್ಕಿತಾ
[ಗಳ್.

ಮಂಗ ಹೊಟ್ಟೆಯ ಕೆಳಗೆ ತನ್ನ ಮರಿ ಇಟ್ಟುಕೊಂಡು ಸುತ್ತಿದ ಬಾಲವನ್ನು ಮೇಲೆ ಬಳಕೆ ಕೆಂಪಗಾದ ಹಳೆ ಎಲೆಗಳು ಬಿಸಿಲಿಂದು ತೀಳಿದು ಗಿಡದ ಕೊಂಬೆಗಳನ್ನು ಹತ್ತಿ ಅಗಲಾಡಿಸುವಾಗ್ಯೆ, ಈಕಿಲು ತನ್ನ ಮೇಲೆ ಬಿತ್ತು. ಇದಕ್ಕೆ ಓಡಿ ಹೋಗಿ ಶಿಟ್ಟು ಮಾಡಿತು.

ಕಂದ.

1221. ಮೂಡಣಶೈಲರೂಢೆ, ಜವದಿಂ
ದೋಡುಗುಮೀಹಿಮಸುಧಾಬ್ಧಿಯಗ್ರದೊಳೆನಿಪ್ಪೊಂ
ದಾಡಂಬರಮಂ ಜನದೊ
ಳ್ಮಾಡಿ ಕರಂ ತರಣಿ ತಳೆದುರ್ದಂಬರತಳದೊಳ್.

The sun, a ship, driven on in the misty atmosphere, the sea.

1. ತರಣಿ=ಸೂರ್ಯ, ಹಡಗ—ಸೂರ್ಯನೆಂಬ ಹಡಗ ಹಿಮ ಎಂಬ ಸುಧೆ ತುಂಬಿದ ಸಮುದ್ರದ ಮೇಲೆ ಮೂಡಣ ಘಾಳ್ಯೆಯಿಂದ ಓಡಿಸಿ ಕೊಂಡು ಹೊರಟಿತು.

## THE SEASON OF SPRING.

### 8. ವಸಂತರುತುವರ್ಣನ. (ಆಶ್ವಾಸ 9.)

ಮತ್ತೇಭವಿಕ್ರೀಡಿತ ವೃತ್ತ.

1222 ಕಳಕಂಠೀಕಳನಾದಕಾಹಳೆ, ಮಿಳದ್ಭೃಂಗಾವಳೀರಾವಮಂ
ಜುಳಗೀತಂ, ಶುಕವಂದಿವೃಂದನಿನದಂ ಮಂದಾನಿಲಾಂದೋಳಿತೋ
ಜ್ವಳವಲ್ಲೀಮೃದುಲಾಸ್ಯಮೊಪ್ಪಿರೆ, ವನಶ್ರೀವಲ್ಲಭಂ ಸಮ್ಮದಂ
ದಳೆದೇಳ್ತಂದನಮಂದವೈಭವಯುತಂ ಚೈತ್ರಕ್ಷಮಾಧೀಶ್ವರಂ.

King spring with his Queen grove came.

ಕೋಗಿಲೆ ಸ್ವರವೇ ಕಾಹಳೆ, ಭೃಂಗರಾವವೇ ಗೀತ, ಗಿಳಿಗಳೇ ಹೊಗಳುವವರು, ಗಾಳಿಯಿಂದ ಬಳ್ಳಿ ಅಲ್ಲಾಡುವದೇ ನರ್ತನ. ಇಂಥಾ ವೈಭವದಿಂದ ವನ ಎಂಬ ಸ್ತ್ರೀಗೆ ಪತಿಯಾದಂಥಾ ವಸಂತ ಎಂಬ ಅರಸನು ಬಂದನು. ವಸಂತಾಗಮವನ್ನು ವರ್ಣಿಸುತ್ತಾನೆ.

ಚಂಪಕಮಾಲಾ ವೃತ್ತ.

1223. ತಳಿರ್ವೆಳೆಮಾವು ; ಪಲ್ಲವಿಪಶೋಕೆ ; ಮುಗುಳ್ತುದಿರ್ಮುತ್ತೆ ; ಮೊ [ಗ್ಗೆಯಂ
ತಳೆಯಲೊಡರ್ಚಿ ನಿಂದ ಪೊಸಮಲ್ಲಿಗೆ; ಪುಷ್ಪಮನಾಂತ ಚಂಪಕಂ
ಪಳೆಯಲೆ ಯಿಕ್ಕಿ ಸಂಣನನೆ ಯೇರಿದ ಪಾಟಳಿ ; ಪೂವನಾಂತು ಕಂ
ಗೊಳಿಸುವ ಕರ್ನಿಕಾರಮಲರ್ದೀ[1]ವುವ ಮುತ್ತುಗಮೆತ್ತ ನೋ[2]ಳ್ಪ [ಡಂ.

The flowers appear.

1. ಹೂವು ತುಂಬುವ. 2. ಎತ್ತ ನೋಡಿದರೂ ಇವೇ ಇದ್ದವು.

ಮತ್ತೇಭವಿಕ್ರೀಡಿತ ವೃತ್ತ.

1224. ಮದನಂ ಪೂಸರಲಿಂದೆ ಪೂಣ್ದಿಸೆ, ತಪಃಸಂಯುಕ್ತಕಾರ್ಕಶ್ಯಚಿ
ತ್ತದಿ ತಾಂ ಸಾಂಟದಿದೆಂದು ಬಂದು ಮಧುವೆಂ ದಂಭೋಜನಲ್ಲೊಟ್ಟೆ [ಮು
ತ್ತದ ಪೂಗೆಂಡಮನಲ್ಲಿ ಬಲ್ಸರಲ ಮಾಡಲ್ಕೇಲಯಃಪಿಂಡಖಂ
ಡದ ಸಾಲಿಟ್ಟದನೂದಿದಂತೆ ಮೆರಗುಂ ಭೃಂಗಾಳಿಯಿಂ ಗಾಳಿಯಿಂ.

Cupid gets new arrows made by the blacksmith spring.

ವಸಂತವೇ ಕಮ್ಮಾರ, ಮುತ್ತದ ಹೂವೇ ಕೆಂಡ, ಭೃಂಗವೇ ಉಕ್ಕಿನಗಟ್ಟಿ: ತನ್ನ ಹೂವಿನ ಬಾಣ ನಾಟುವದಿಲ್ಲವೆಂದು ಮದನನು ಹೊಸ ಬಾಣ ಮಾಡಿಸುತ್ತಾನೆ.

ಕಂದ.

1225. ಮಧು[1]ಸೇವನೆಯಿಂ ಸೊರ್ಕುತೆ,
ಮಧು[2]ಪಂ ಸುಮನಃ[3]ಪ್ರಚಯಮನಲೆದೊಡೆ, ಶಿಖಿಯೊಳ್
ಮಧುರಿಪುಜನ ಬೆಸದಿನದಂ
ಮಧು ದಂಡಿಪ ತೆರದೆ ಮುತ್ತದಲರೊಳದೆಸೆಗುಂ.

King cupid punishes by his minister spring the black bee, a drunkard.

1. ಹೆಂಡ, ಜೇನು.—2. ಪರಾಗ ಕುಡಿಯುವನು=ಭೃಂಗ, ಹೆಂಡ ಕುಡಿಯುವವನು. 3. ಹೂವು, ಒಳ್ಳೆ ಮನಸಿನವರು.—ಭೃಂಗ ಮುತ್ತದ ಹೂವಿನಲ್ಲಿ ಕೂತದ್ದು ಹೆಂಡ ಕುಡಿದು ಸೊಕ್ಕಿಗೆ ಬಂದು ಸುಜನರಿಗೆ ಉಪದ್ರ ಮಾಡಿದ ಭೃಂಗ ಎಂಬವನನ್ನು ವಸಂತ ಎಂಬವನು ಮನ್ಮಥನ ಆಜ್ಞೆಯಿಂದ ಬೆಂಕೆಯೊಳಗೆ ಹಾಕಿ ದಂಡಿಸುವ ಹಾಗೆ ಕಂಡಿತು.

ಉತ್ಪಲ ವೃತ್ತ.

1226. ಅಂಗಜಭೂಭುಜಂ ವಿಜಯಯಾತ್ರೆಗೆ ಪೋಗಲೊಡರ್ಚೆ, ಚೈ [ತ್ರನು
ತ್ತುಂಗಪಿಕಧ್ವನಿಸ್ಫುಟಮಹಾಪಟಹಧ್ವನಿ ಗೆಯ್ಯೆ, ಕೇಳ್ದು ಚೂ
ತಂಗಳೆನಿಪ್ಪ ವೀರಭಟರೇಳೆ ನವಾಂಕುರರೋಮರಾಜಿ, ಸ
ರ್ವಾಂಗದೊಳೆಂದು ಪಲ್ಲವ ಲಸತ್ಕವಚಾವಳಿ ದೊಟ್ಟು ತೋರಿದರ್.

King cupid going to war, his drummer spring calling his warriors, Mango-trees.

ಅಂಗಜನೇ ಅರಸನು, ಚೈತ್ರನೇ ಕೋಗಿಲೇಸ್ವರ ಎಂಬ ಭೇರಿ ಹೊಡಿಸುವವನು, ಮಾವಿನ ಗಿಡಗಳೇ ಭಟರು, ಅವುಗಳ ಪಲ್ಲವಗಳೇ ಕವಚಗಳು ;—ಅವುಗಳ ಮುಗುಳುಗಳೇ ಭೇರಿನಾದ ಕೇಳಿ ಆದ ರೋಮೋದ್ಗಮ.

## SUN-SET.

### 9. ಸೂರ್ಯಾಸ್ತವರ್ಣನ. (ಆಶ್ವಾಸ. 11)

ಮಹಾಸ್ರಗ್ಧರ ವೃತ್ತ.

1227. ಘನಸಂಧ್ಯಾರಾಗತೀವ್ರಾನಲನೊಳೊಲವಿನಿಂ ಕಾಸಿ ತಿಗ್ಮಾಂಶು [ವೆಂದೆಂ
ಬ ನವೀನಸ್ವರ್ಣಸತ್ಪಿಂಡಮನಮಳನಭಶ್ರೀಗಲಂಕಾರಮಂ ಮಾ
ಳ್ಪೆನೆನುತ್ತಿಪ್ಪೈಸಿ ಪೂರ್ವೇತರ[1]ಶರನಿಧಿಯೊಳ್ಕಾಲಮೆಂಬೋಜನಳ್ದ[2]
ಲ್ಜನಿಸುತ್ತುರ್ಬೇಳ್ದುದೋ ! ಕಾರ್ಬೊಗೆ[3] ಯೆನೆ, ದೆಸೆ ದೀವಿತ್ತು [ಘೋರಾಂಧಕಾರಂ.

The goldsmith time making an ornament from the golden sun for lady sky.

1. ಪೂರ್ವಕ್ಕೆ ಇತರ=ಪಶ್ಚಿಮ. 2. ಅದ್ದಲು. 3. ಕಾರ್‌ಹೊಗೆ ಸಂಧ್ಯಾರಾಗವೇ ಬೆಂಕಿ, ಮುಣುಗುವ ಸೂರ್ಯನೇ ಭಂಗಾರದ ಘಟ್ಟಿ, ಕಾಲವೇ ಅಕ್ಕಸಾಲಿಗನು. ರಾತ್ರಿಯ ಕತ್ತಲೇ, ಗಗನ ಎಂಬ ಸ್ತ್ರೀಗೆ ಅಲಂಕಾರ ಮಾಡಬೇಕೆಂದು ಇವನು ಆ ಭಂಗಾರದ ಘಟ್ಟಿಯನ್ನು ಕಾಸಿ ಪಶ್ಚಿಮ ಸಮುದ್ರದಲ್ಲಿ ಅದ್ದುವಾಗ, ಏಳುತ್ತಿದ್ದ ಹೊಗೆ.

ಚಂಪಕಮಾಲಾ ವೃತ್ತ.

1228. ನಿಜಕರ[1]ದಿಂದೆ ರಾಜವಸು[2]ವೆಲ್ಲಮನೊಯ್ಯನೆ ಕಳ್ದು ನೀಲನೀ
ರಜನಿಯ ಬಾಯ ಮುದ್ರಿಸಿ ಪಿಸುಣ್ಗೆಡೆಯಪ್ಪಳಿನುತ್ತೆ, ಮತ್ತೆ ನೀ
ರಜನಿಯೊಳೊಲ್ದು ಪುಷ್ಪ[3]ವತಿಯೊಳ್ದವದೋ[4]ಳ್ಬೆರೆದಿಂತು ಸತ್ಪಥ
ತ್ಯಜನಮನಾಳ್ದು ಬೀಳ್ದಳಿದ ಸೂರ್ಯನ ದುರ್ಯಶಮಪ್ಪುದೀ
[ತಮಂ.

Darkness, disreputation to the sun.

1. ಕಿರಣ, ಕೈ. 2. ರಾಜನದ್ರವ್ಯ, ಚಂದ್ರನ ಕಿರಣ. 3. ಹೂವು ಇದ್ದಾಕೆ, ಮುಟ್ಟು ಆದಾಕೆ. 4. ಆಕಾಶ, ಹಗಲು ಕತ್ತಲೆ ಸೂರ್ಯನ ದುಷ್ಕೀರ್ತಿ ಅದು ಹ್ಯಾಗಂದರೆ ಅವನು ತನ್ನ ಕೈಯಿಂದ (ಕಿರಣದಿಂದ) ರಾಜರ ಐಶ್ವರ್ಯವನ್ನು (ಚಂದ್ರನ ಕಿರಣವನ್ನು) ಕದು ನೈದಿಲೆಯ ಬಾಯಿ ಮುಚ್ಚಿ (ಚಾಡ ಹೇಳುತ್ತಾಳೆಂದು) ಕಮಲವನ್ನು ಹಗಲಲ್ಲಿ ಅರಳಿಸಿ (ಸ್ತ್ರೀಯನ್ನ ಅನುಭೋಗಿಸಿ) ಸನ್ಮಾರ್ಗವನ್ನು ಬಿಟ್ಟು ಕೆಟ್ಟನು.

## MOON-RISE.

### 10. ಚಂದ್ರೋದಯವರ್ಣನ. (ಆಶ್ವಾಸ. 11.)

ದ್ರುತವಿಲಂಬಿತ ವೃತ್ತ.

1229. ಭಗಣಮೌಕ್ತಿಕಧರಾಭ್ರಕೃಷ್ಣ[1]ನಂ
ದಗಿಯದಿಂ ಪ್ರಹರಿದದ್ರಿ[2] ಭಾಂಡದಿಂ
ತೆಗೆದು ತಾಳ್ದ ನವನೀತ ಪಿಂಡಮಂ
ಬಗೆಯೆ, ಪ್ರೋಲ್ಲುದಮೃತಾಂಶುಮಂಡಲಂ.

The orb of the moon, a lump of butter taken by the sky, Krishna.

1. ನಕ್ಷತ್ರಗಳೆಂಬ ಮುತ್ತುಗಳನ್ನ ಧರಿಸಿದಂಥಾ ಆಕಾಶ ಯೆಂಬ ಕೃಷ್ಣನು. 2. ಪೂರ್ವದಿಕ್ಕಿನ ಗುಡ್ಡವೆಂಬ ಗಡಿಗೆಯಿಂದ.

ರಥೋದ್ಧತ ವೃತ್ತ.

1230. ಚಂದ್ರಿಕಾಜಲಧಿ ತೀವಿ ಲೋಕಮಂ
ಸಾಂದ್ರಮಾಗಿ ನೆಗೆದುರ್ವೆ[1], ಭೀತಿಯಿಂ
ಚಂದ್ರಮಧ್ಯವಟಪತ್ರದಲ್ಲಿ ಲ
ಕ್ಷ್ಮೀಂದ್ರನಿರ್ದನೆನೆ ಲಕ್ಷ್ಯಮೊಪ್ಪುಗುಂ.

The moonlight a sea, the moon a leaf of the fig-tree, &c.

1. ಉರ್ವೆ=ಉಬ್ಬಲಾಗಿ. ಬೆಳದಿಂಗಳೇ ಸಮುದ್ರ, ಚಂದ್ರನೇ ಆಲದೆಲೆ, ಅವನೊಳಗಣ ಚಿನ್ನವೇ ಕೃಷ್ಣ.

ಚಂಪಕಮಾಲಾ ವೃತ್ತ.

1231. ಗಗನವೆನಿಪ್ಪ ಪಾೞ್ವೊಲದೊಳರ್ಕಸಮುದ್ಧೃತಿ ಗೈದು ಸಂಜೆ ಯಂ
ಬಗಿನಿಯನಿಟ್ಟು ಮುರ್ಚಿನಿಪ ಗೊಬ್ಬರಮಂ ತಳಿದಲ್ಲಿ ಚೆಲ್ಲಿ ತಾ
ರಗೆಗಳೆನಿಪ್ಪ ಬಿೞ್ತುಗಳನಂತವಕ್ಕೈಂದವಬಿಂಬರೌಪ್ಯಕುಂ
ಭಗತಸುಧಾಮರೀಚಿ ಜಲಮಂ ಸುರಿದಂ ಸಲೆ ಕಾಲಪಾಮರಂ

The farmer Time cultivating the waste field of the sky.

ಕಾಲವೇ ಪಾಮರನು (ಒಕ್ಕಲಿಗನು) ಗಗನವೇ ಹಾಳ ಹೊಲ, ಅದನ್ನು ಹಾದು ಹೋಗುವ ಸೂರ್ಯನಿಂದ ಬದಕು ಮಾಡಿಸಿ ಹುಲ್ಲು ತೆಗಸಿ ಸಂಜೆ ಎಂಬ ಬೆಂಕೆ ಇಟ್ಟು ಸುಟ್ಟು ಮೊಬ್ಬು ಎಂಬ ಗೊಬ್ಬರ ಹಾಕಿ ನಕ್ಷತ್ರ ಎಂಬ ಬೀಜ ಚಲ್ಲಿ ಚಂದ್ರಬಿಂಬ ಎಂಬ ಬೆಳ್ಳಿ ಕೊಡದಲ್ಲಿದ್ದ ಅಮೃತಕಿರಣ ಎಂಬ ನೀರನ್ನು ಹನಿಸಿದನು.

## SUN-RISE.

### 11. ಸೂರ್ಯೋದಯವರ್ಣನ. (ಆಶ್ವಾಸ. 12.)

ಕಂದ.

1232. ಜವದಿನುಷಃಕಾಲವೃಷಂ
ತವೆ ಕದಡಿದುದೆನಿಸಿ ಮುರ್ಬುವೆಳಗಂ ತಳೆದೊ
ಪ್ಪುವ ಬಾಂಗೆರೆಯೊಳ್ಮೀಂಗಳ್
ತವಕದೊಳೆ ಮುಳುಂಗುವಂತಡಂಗಿದವಾಗಳ್.

The dawn—a bullock in the lake of the sky, making the fishes, stars, disappear.

ಆಕಾಶವೇ ಕೆರೆ, ಉಷಃಕಾಲವೇ ಆಕೆರೆಯ ನೀರನ್ನು ಕಲಕು ಮಾಡಿದ ಎತ್ತು, ಆಕಾಶದ ನಕ್ಷತ್ರಗಳೇ ಆ ಕೆರೆಯಲ್ಲಿ ಮುಣುಗುವ ಮೀನುಗಳು.

1233. ಬೆಳ್ವೆಳಗಿನ ಬಾಳ್ವೆಳೆಯುಂ
ತಳ್ವದೆ ಬಾಂಬೊಲದೊಳರುಣಕ[1]ರಶಿಖಿಶಿಕೆ ಪಾ
ೞೇ[2]ೞ್ವನಮುಳುದುರ್ಚಿಂತೆಯ
ನಾಳ್ವಂತೆ [3]ಪೊಲೋಷಧೀಶ್ವರಂ ಕಳೆಗೆಟ್ಟಂ

The moon grew pale, seeing that his crop in the sky had been burnt.

1. ಸೂರ್ಯ, ಅನ್ವಯ: ಆಕಾಶ ಎಂಬ ಹೊಲದಲ್ಲಿ ಬೆಳೆದಿಂಗಳು ಎಂಬ ದೊಡ್ಡ ಬೆಳೆಯು ತಡವಿಲ್ಲದೆ ಉದಯಿಸುವ ಸೂರ್ಯನ ಕಿರಣಗಳ ಬೆಂಕೆ ಶಿಕೆಯಿಂದ ಹಾಳಾಗುವದರಿಂದ, ಚಂದ್ರನು ದುಖ್ಖ ಪಟ್ಟು ಚಿಂತೆಯೊಳಗೆ ಬಿದ್ದು ಕಳೆಗೆಟ್ಟನು. 2. ಪಾಳೆ ವ್ಯಾ. ಸೂ. 3. ಪಾನುರುಕ್ತದೋಷವಿಲ್ಲ.

ಮಾಲಿನೀವೃತ್ತ,

1234. ಬಿರಿಯೆ ಮೃದುಸರೋಜಂ, ಬಿಂಕಮಂ ಬಿಟ್ಟು ರಾಜಂ
ಜರಿಯೆ, ತಿಮಿರಪೂಗಂ ಜಾರೆ, ಜಾರಾನುರಾಗಂ
ಸರಿಯೆ, ಕುಮುದಬೃಂದಂ ಸಮ್ಮದಂ ಗುಂದೆ, ಬಂದಂ,
ನೆರೆಯೆ ಪಟುರಥಾಂಗಂ, ನಿರ್ಮಳಾಂಗಂ ಪತಂಗಂ.

Rising of the sun.

ಅನ್ವಯ: ಪತಂಗಂ–ಬಂದಂ.

ಚಂಪಕಮಾಲಾ ವೃತ್ತ.

1235. ಖರಕರಸಿದ್ಧನೇಳ್ದು ದಿವಿಜೇಂದ್ರದಿಶಾದ್ರಿಗುಹಾನಿವಾಸದಿಂ
ದುರು ತಿಮಿರಾಭಿಭೂತಭುವನೋನ್ನತಲೋಹಕೆ ತನ್ನ ವಿದ್ಯೆಯಂ
ಧರೆಗರಿಪಲ್ಕೆ, ಮುಟ್ಟಿಸೆ ಕರೋತ್ಕರಸಿದ್ಧರಸಪ್ರವಾಹಮಂ,
ಪಿರಿದುದು ಚಿನ್ನಮಾದುದೆನೆ, ಪೊಂಬಿಸಲೊಂದಿರೆ, ಕಣ್ಗೆ ರಂಜಿಕಂ.

The magician sun made iron, darkness, gold by touching it with quicksilver—his rays.

ಸೂರ್ಯನೇ ತೀಕ್ಷ್ಣ ಕೈಯುಳ್ಳ (ಕಿರಣ) ಸಿದ್ಧನು, ಕತ್ತಲೇ ಲೋಕದಲ್ಲಿ ಪ್ರಸಿದ್ಧವಾಗಿರುವ ಕಬ್ಬಿಣ, ಸೂರ್ಯನ ಕಿರಣ ಸಮೂಹವೇ ಅವನು ಭಂಗಾರ ಮಾಡುವ ಸಿದ್ಧರಸ; ಇದನ್ನು ಆ ಲೋಹಕ್ಕೆ ಮುಟ್ಟಿಸಲಾಗಿ, ಅದು ಬಿಸಲೆಂಬ ಭಂಗಾರವಾಯಿತು. ಅನ್ವಯ: ಸಿದ್ಧನು–ಪ್ರವಾಹಮಂ–ಲೋಹಕ್ಕೆ ಮುಟ್ಟಿಸೆ, ಅದು ಚಿನ್ನ ಮಾದುದು.

---

# III. LITERATURE OF THE JAINS.

## ಪೀಠಿಕೆ.

೨೪೦೦ ವರುಷಗಳ ಹಿಂದೆ ಬುದ್ಧನೆಂಬ ಒಬ್ಬ ರಾಜಪುತ್ರನು ಇದ್ದನು. ಅವನು ಈ ಪ್ರಪಂಚವ್ಯರ್ಥವೆಂದು ವನವಾಸಕ್ಕೆ ಹೋಗಿ ತಪಸಿಯಾಗಿ ಸರ್ವಕುಲದವರಲ್ಲಿ ಬೇರೆ ಬೇರೆ ಶಿಷ್ಯರನ್ನು ಮಾಡಿಕೊಂಡು ಕುಲಾಚಾರ ಸುಳ್ಳು ಎಲ್ಲಾ ಮನುಷ್ಯರು ಸಮವೆಂದು ಬೋಧಿಸಿ ಈ ಹಿಂದುಸ್ತಾನದ ಉತ್ತರ ಭಾಗದಲ್ಲಿ ಒಂದು ಮತವನ್ನು ಸ್ಥಾಪಿಸಿದನು. ಈ ಬೌದ್ಧ ಮತ ಆಮೇಲೆ ದಕ್ಷಿಣದ ಕಡೆಗೆ ಹಬ್ಬಿ ಬಹಳ ವಿಸ್ತಾರವಾಯಿತು, ಅದು ಲಂಕಾದ್ವೀಪದಲ್ಲಿಯೂ, ಹಿಂದುಸ್ತಾನದ ಪೂರ್ವದ ಕಡೆಯ ದೇಶಗಳಲ್ಲಿಯೂ, ಚೈನದೇಶದಲ್ಲಿಯೂ ಸ್ಥಾಪನೆಯಾಗಿ ಇಂದಿನ ತನಕ ಪ್ರಬಲವಾಗಿರುತ್ತದೆ, ಈ ಮತದವರು ವೇದಮುಂತಾದ ಶಾಸ್ತ್ರಗಳನ್ನು ತೆಗದು ಹಾಕಿ ಸ್ವಂತ ಶಾಸ್ತ್ರಗಳನ್ನು ಕಲ್ಪಿಸಿಕೊಂಡು ಮೊದಲು ಸಂಸ್ಕೃತದಲ್ಲಿ ಅವನ್ನು ರಚಿಸಿದರು. ಅವು ಯಾವವಂದರೆ: ಬುದ್ಧನು ನುಡಿದ ವಚನಗಳೂ, ಅವನು ತನ್ನ ಶಿಷ್ಯರ ಸಂಗಡ ಮಾಡಿದ ಸಂಭಾಷಣೆಗಳೂ ಇರುವ ಸೂತ್ರಗಳೂ, ಅವರ ಧರ್ಮಗಳನ್ನ ವಿವರಿಸುವ ವಿನಯಗಳೂ, ಅವರ ಬೋಧನೆಯನ್ನು ವಿಸ್ತರಿಸುವ ಅಭಿಧರ್ಮಗಳೂ. ಬೌದ್ಧರ ಮೂಲಶಾಸ್ತ್ರಗಳು ಸಾಂಖ್ಯದರ್ಶನವನ್ನು ಅನುಸರಿಸುತ್ತವೆ. ದೇವರನ್ನು ತಿಳಿಯಲಾಗದು, ದೃಶ್ಯವಾದ ಈ ಲೋಕವಾದರೂ ನಿಜವಲ್ಲ ಎಂಬಂತೆ ತೋರುತ್ತದೆ. ಆದ್ದರಿಂದ ಎಲ್ಲರೂ ಎಲ್ಲಾ ಬಿಟ್ಟು ವನವಾಸಕ್ಕೆ ಹೋಗಿ ದುಃಖದಲ್ಲಿ ಇರತಕ್ಕದ್ದು. ಆದರೆ ಪ್ರಪಂಚ ನಡೆಯ ಬೇಕಲ್ಲ. ಅದಕ್ಕೆ ಕೆಲವರು ಪ್ರಪಂಚವನ್ನು ಮಾಡಿ ಧರ್ಮ ಕೊಡೋಣದರಿಂದ ತಮ್ಮ ದೋಷ ಪರಿಹರಿಸ ಬೇಕು. ಬಲಿಗಳನ್ನು ಅರ್ಪಿಸುವದು ಪ್ರಯೋಜನವಿಲ್ಲ.–ಬೌದ್ಧರು ಬುದ್ಧನ ಮೂರ್ತಿಗೆ ವಿಶೇಷವಾಗಿ ಪೂಜೆ ಮಾಡುವರು. ಜೈನರು ಈ ಮತದ ಸಂಬಂಧದವರು. ಜಿನ ಎಂಬ ತಮ್ಮ ದೇವರಿಗೆ ಬುದ್ಧದೇವರು ಸಹಾ ಅನ್ನುತ್ತಾರೆ. ಆದರೆ ಮಾಂಸ ತಿಂನಬಾರದೆಂಬುವಂಥಾ, ಜನಿವಾರ ಹಾಕಿಕೊಳ್ಳುವಂಥಾ ಮೊದಲಾದ ಧರ್ಮಗಳು ಬೌದ್ಧರಲ್ಲಿ ಮೊದಲು ಇರಲಿಲ್ಲ. ಇಂದಾದರೂ ಚೀನಾದೇಶದಲ್ಲಿ ಬೌದ್ಧರಲ್ಲಿ ಇರುವದಿಲ್ಲ ಯಾಕಂದರೆ ಅವರೆಲ್ಲರು ಮಾಂಸ ಭೋಜನದವರು. ಜೈನರು ಬೌದ್ಧರ ಆದಿ ಮಾರ್ಗವ ಬಿಟ್ಟು ಇತ್ತಲಾಗಿ ಬ್ರಾಹ್ಮಣರಿಗೂ ಬೌದ್ಧರಿಗೂ ಹತ್ತಿದ ನ್ಯಾಯದಲ್ಲಿ ಸೋತು ಹೋಗುತ್ತಾ ಅವರಿಗೆ ಸ್ವಲ್ಪ ಅನುಸಾರವಾಗಬೇಕೆಂದು ಮತ್ತು ಕರ್ಮಕ್ಕೆ ಬಿದ್ದು ಬೇರೆಯಾದರು. ಶಂಕರಾಚಾರ್ಯನು ವಾದದಿಂದ ಗೆದ್ದು ಮತ್ತು ಅಧಿಕಾರಸ್ಥರಿಂದ ಬಾಧೆ ಕೊಡಿಸಿ ಬೌದ್ಧರ ಮತವನ್ನು ಈ ದೇಶದಲ್ಲಿ ಬಹಳ ಅಳಿದು ಬ್ರಾಹ್ಮಣರ ಮತವನ್ನು ತಿರಿಗಿ ಸ್ಥಾಪಿಸಿದನು. ಜೈನರೊಳಗೆ ಪೂರ್ವದಲ್ಲಿ ವಿದ್ಯ ಚಮತ್ಕಾರ ಬಹಳ ಇತ್ತು ಅವರು ಕಟ್ಟಿಸಿದ ಚೆಲೋಗುಡಿಗಳು ಇದಕ್ಕೆ ದೃಷ್ಟಾಂತ. ಅವರಲ್ಲಿ ಪುಷ್ಕರವಾಗಿದ್ದ ಕವೀಶ್ವರರು ಬಹಳ ಕೃತಿಗಳನ್ನು ಸಂಸ್ಕೃತದಲ್ಲಿಯಾಗಲಿ ಹಳೆ ಕನ್ನಡದಲ್ಲಿಯಾಗಲಿ ರಚಿಸಿ

ದರು.—ಆದರೆ ಅದು ವಿಶೇಷವಾಗಿ ಶಂಕರಾಚಾರ್ಯನ ಅತ್ತ ಆಯಿತು. ಯಾಕಂದರೆ ಶಂಕರಾಚಾರ್ಯನಿಂದಲೂ ಅವನ ಮೇಲೆ ಬಂದ ಕಲ್ಯಾಣದ ಬಸವನಿಂದಲೂ ಅವರ ಮತ ಮುರಿದ ಬಳಿಕ ಅಂಥಾ ಕೃತಿಗಳು ಅವರಲ್ಲಿ ಹುಟ್ಟಲಿಲ್ಲದ ಹಾಗೆ ತೋರುತ್ತದೆ.–

ಈ ಶಾಸ್ತ್ರಸಾರ ಎಂಬ ಕೃತಿ ಮೊದಲು ಸಂಸ್ಕೃತದಲ್ಲಿ ಇದ್ದದ್ದು; ಬಬ್ಬ ಕವಿ ಅದನ್ನು ಕನ್ನಡಿಸಿದನು.

## SHASTRA SARA.

## ಶಾಸ್ತ್ರಸಾರ.

### DESCRIPTION OF HELL.

### 1. ನರಕ ವಿಸ್ತಾರ.

ಮಹಾಸ್ರಗ್ಧರ ವೃತ್ತ.

1236. ಜರದಾಹಶ್ವಾಸಕಾಸಂವ್ರಣಪಿಟಕಶಿರೋರೋಗಸರ್ವಾಂಗಶೂಲಾ
ದಿರುಜಾಸಂದೋಹಪೀಡಾಭರದಿ ಭರದೊಳುಂ ಪಾರುತಂ, ಬೇನೆ [ಇಂದಂ
ಬಿರಿಯುತ್ತಂ, ನಾರಕರ್ಕಳ್ಬಿರಿಕಿನೆಡೆಗಳಂ ಶಸ್ತ್ರದಿಂ ಶೀ[1]ಳ್ವುದುಂ [ಗೋ
ಳ್ಗರೆಯುತ್ತಂ, ಕೂಗಿಡುತ್ತಂ, ಮೊರೆ ಇಡುತಮತಿಕ್ಲೇಶದಿಂ ಬೇವು [ತಿರ್ಪರ್.

The various pains of those who are in hell.

1. ಅನ್ವಯ: (ನರಕದಲ್ಲಿ ಬಿದ್ದ ಪಾಪಿಗಳು) ಜ್ವರ, ಪೀಡಾಭರದಿ, ಪಾರುತಂ, ಬೇವುತಿರ್ಪರು. ಯಮನವರು ಬಿರುಕು ಬಿಟ್ಟ ಸ್ಥಳಗಳನ್ನ ಶೀಳುವದು ಇವರು ಗೋಳ್ಗರೆಯುತ್ತಂ ಮುಂ.

ಮತ್ತೇಭವಿಕ್ರೀಡಿತ ವೃತ್ತ.

1237. ಉರಿಯಂ ಕಾರುತಮೈಕಿಲಿಂ ಕೆದರುತಂ, ತದ್ಧೂ[1]ಮಿಗಳ್ಪೇಸಿಸು
ತ್ತಿರೆಯುಂ, ಕ್ರೋಧದಿನಾಗಳುಂ ಮರುಗುತಂ, ಪ್ರಾಣಂಗಳಾವರ್ತಿ [ಸು

Though afflicted in the highest degree they cannot die.

1. ಕ್ಷುಧ ತೃಷೆ=ಹಸಿವೆ ನೀರಡಿಕೆ ಹೀಗೆ ಕಷ್ಟವಾದರೂ ಜೀವದ ಆಶೆ ಬಿಡುತ್ತಿದ್ದಿಲ್ಲ

ತ್ತಿರೆಯುಂ,ನಾರಸಶಸ್ತ್ರಮುಚ್ಚುತಿರೆಯುಂ, ಕ್ಷುತ್ತೃಡ್ಮಹಾಬಾಧೆ ತ
ಳ್ತಿರೆಯುಂ, ಕುತ್ತದವೊತ್ತವೊತ್ತುತಿರೆಯುಂ, ಮತ್ತಂ ಚಿರಂ
[ಜೀವಿಪರ್.

2. ಆ ನರಕದ ಭೂಮಿಗಳು ಹೇಸಿಸುತ್ತಿದ್ದವು.

ಚಂಪಕಮಾಲಾ ವೃತ್ತ.

1238. ನಲಿನಲಿದಾಡಿ ಪಾಪಮನುಪಾರ್ಜಿಸಿ ತತ್ಪರಿಪಾಕದಿಂದ ಕೋ
ಟಲೆಗೊಳಗಾಗಿ ಬಾಯ್ಬಿಡುವ ಮೂಢಜನಂಗಳಕೃತ್ಯಮರ್ಥಿಯಿಂ
ಜ್ವಲಜ್ವಲಿಪಾಗ್ನಿಯಂ ಪಿಡಿದು ಬೆಂದ ಬಳಿಕ್ಕ, ಕನಲ್ದೊಗಲ್ದು ಮ
ಲ್ಮಲಮರಗುತ್ತ ಬಾಯುಳಿವ ಬಾಲಕಜಾಲಕದಂದಮಲ್ಲವೇ ?

The damned in hell like boys taking fire and throwing it away.

ಕಂದ.

1239. ಇವರಿಂದಿವು ಸವಿ ! ಯನುತಂ
ಸವಿ ನೋಳ್ಪ್ಪ ! ಪಲವು ತೆರದಡಗನು ನಿವಿವಾ
ವವು ಸವಿ ? ಪೇಳೆನುತವನವ
ಯವಗಳ ಕೊಯ್ದಿಡುವರವರನಾನನದೊಳಗಂ.

The devils put raw meat in their mouths.

1240. ಮರೆಯೊಳವ ಮಧ್ಯಪಾನದ
ನರನೆಂದು ಮಧುವನೀಂಟಿಸಿ ತಲೆಯೊಳ್ತಳಯಿ
ಪ್ಪರಗುಲಿಗಳ, ತಲೆಯಿಂದಿಳೆ,
ಯೆರೆವರ್ತಳತಳಿಸಿ ಕುದಿವ ಲೋಹದ್ರವಮಂ.

Punishment of the drunkards.

1241. ಎಲವೆಲವೊ ! ನಿಂನನಗಲ್ದರೆ,
ನಿಲಲಾರದ ಪಾಣ್ಬೆ ಬಂದಿಳೀಗಿರ್ದಿದೆ ಬಾ !
ನಲಿದು ನೆರೆಯೆಂದು ಕಡು ಗಾ
ದ ಲೋಹಪುತ್ರಿಕೆಯನಾಗ್ರಹದಿನಪ್ಪಿಸುವರ್.

Punishment of adulterers.

1242. ಪೊಗ[1]ಲೊಡನಲ್ಲಿಯ ಮಕರಾ

The crocodiles in the sea of hell catching the damned.

ದಿಗೞ್ಬಗಿ ಮಾೞ್ಕುವಾಶೆಯ ವಿಷಜಲಮಂ
ಮೊಗೆದು ಕುಡಿಯಲೊಡನೆದೆ ಕರ
ಗುಗುಮರಿದಾಯ್ತೆಂದು ನಾರಕರ್ಪೇೞರುವಿನಂ.

1. ನರಕದಲ್ಲಿರುವ ಸಮುದ್ರದಲ್ಲಿ. 2. ಅನ್ವಯ: ಅರಿದಾಯಿತೆಂದು ನಾರಕರು ಪೇೞರುವ ಹಾಗೆ ಎದೆಕರಗುಗುಂ.

1243. ಧಾರುಣಿಯನ್ನೈದೆ ನುಂಗುವ

Their hunger and thirst.

ವಾರಾಸಿಯನ್ನೈದೆ ಪೀರ್ವ ತವಕದ ಪಸಿಯುಂ
ನೀರೞ್ಕೆಯುಮೊಂದುಂ ಕೆಡ
ದೋರೋರ್ವರ್ಗೆಯುಮಂನಪಾನಲವಮಂ ಪಡೆಯರ್.

1244. ಪಸಿದು ಲವಲವಿಸಿ ಬಸುರಂ
ಪೊಸೆಯುತ್ತಂ ಬಿರ್ದು ನೆಲನ ಮಂಣಂ ಕವರ್ವರ್;
ಬಸವೞಯುತಿರ್ಪರವರಾ
ರ್ಜಿಸಿದುತ್ಕಟಮಪ್ಪ ಪಾಪಮೇನಿನಿ ಯಿರದೊ !

1245. ಆವಿಷಮೃತ್ತಿಕೆಯಂ ತಂ

They are born again as trees, &c.

ದೀವಸುಧೆಯೊಳ್ತ್ರಲಾನುಮಿೞ[1]ಪಿದೊಡಿೞಗುಂ
ದಾವುದರೊಳಗಿರ್ದವೆನ್ನದೆ
ಸ್ಥಾವರಯೋನಿಯೊಳನಂತಜೀವನಿಕಾಯಂ.

ನಾರಕರು ಮೃತ್ತಿಕೆಯನ್ನು ಇೞಿಸುತ್ತಾರೆ, ಜೀವಿಗಳು ಅದರೊಳಗೆ ಇೞಿದು ವೃಕ್ಷಾದಿಯಾಗಿ ಹುಟ್ಟುತ್ತವೆ.

1246. ಉದಧಿಗೆಣೆ ಯೆನಿಸಿದಾಯು

They are fighting with each other.

ಷ್ಯದ ಕಡೆ ವರೆ[1]ಮೈದೆ ಪಟ್ಟುಗಾಳಗದವರಂ

1. ಸಮುದ್ರ ನೆಲೆಯಿಲ್ಲದ್ದು, ತೀರಿದ ಆಯುಷ್ಯದವುಂ.

ದದಶುಭಕರ್ಮದೊಳಾವ್ಯಸ

ನದಿನೋರ್ವರನೋರ್ವರಿರಿದು ನವೆಯುತ್ತಿರ್ಪರ್.

1247. ನರಕದ ವಿಚಿತ್ರದುಃಖೋ

They consume each other as a wild-fire.

ತ್ಕರಮಂ ತಾಮುಣುತಮವರಿರುವರ್ ಬಾಧಿಸುವ

ಪ್ಪುರಿವ[1] ದವಾಗ್ನಿಯಿನಡವಿಯ

ಮರಗಳನುರೆಯುತ್ತಮೊಂದನೊಂದುರಿಪುವ ಪೋಲ್.

1. ವಪ್ಪಿ ಉರಿವ.

1248. ಕೊಲೆಯುಂ ಪುಸಿಯುಂ ಕಳವುಂ

No wonder they become angry, when they were told that killing, &c, was a sin.

ಕುಲಟಾರತಿಯುಂ ವಿಮೋಹಮುಂ ಪಾತಕಮೆಂ

ದಲಸದೆ ತಿಳಿಸುವ ಮುನಿಸಂ

ಕುಲಕ್ಕೆ ಕಡು ಮುಳಿವ ಪಾಪಿಗೇನಮ ಪಿರಿದೇ !

1249. ಛಲದಿಂದನೇಕಜೀವಾ

They annoyed people in their former life.

ವಳಿಯಂ ಮುಂಬಾಳ್ವೆಯೊಳ್[1]ಘಾತಿಸುತಂ ಮ

ಲ್ಮಲ ಮರುಗಿಸಿದಘಬೀಜದ

ಫಲದಿಂ ಚಿರಕಾಲಮೇಕೆ ನವೆಯದೆ ಮಾಣ್ಬರ್?

1. ಮುಂಚಿನ ಬಾಳ್ವೆ, ಈ ದೇಹದಲ್ಲಿರುವಾಗ ಮಾಡಿದ್ದು.

1250. ನರತಿರ್ಯಗ್ಯೋನಿಯ ಜೀ

All the pain, which men and animals suffer together, not equal to a moment's pain in hell.

ವರುಗಳ್ತೀವ್ರದುಃಖಮೆನಿತುಳ್ಳವನಿತುಂ

ನೆರದೊಡಮೇಂ ನರಕದೊಳೋ

ರ್ವರ ನಿಮಿಷದ ದುಃಖಲವನದಂ ಪೋಲ್ತಪವೇ ?

1. ಮನುಷ್ಯರು ಜ್ಞಾನವಿಲ್ಲದ ಉಳಿದ ಜೀವರಾಶಿಗಳೆಲ್ಲಾ ಅವೆಲ್ಲ ಪಡುವ ದುಖ್ಖ ಕೂಡಿಸಿದರೂ ನರಕದಲ್ಲಿ ಬಿದ್ದ ಒಬ್ಬನು ಪಡುವ ಒಂದು ನಿಮಿಷದ ದುಖ್ಖಕ್ಕೆ ಸರಿಯಾಗುವದಿಲ್ಲ.

ವಚನ.

1251. ಅಂತ್ ಓರ್ವರೋರ್ವರಂ ಕರಗಸದಿಂ ಸೀೞ್ವ, ದೂದಿಗಿೞ್ಚಿನೋೞ್
ಪೂೞ್ವ, ಕತ್ತಿಗೆಯಿಂದ್ ಅರಿವ, ಕಾವಲೆಯೊೞ್ಯಿಕ್ಕಿರಿವ, ತಿದಿ
ಯುಗಿವ, ಬಸಿರಂ ಬಗೆವ, ಕರುಳನ್ವುಱ್ಚುವ, ಬೆರಳುಗಳೊಳು
ಸೂಜಿಯಂ ಚುಱ್ಚುವ, ಪಲ್ಗಳಂ ಕಳಱ್ಚಿ ಗುಟ್ಟುವ, ಗಾಣದೊೞ್
ಯಿಕ್ಕಿ ಪಿೞಿವ, ಕಾಸಿ ಸಾಸಿವೆಯಂ ಬೞಿವ, ಸತ್ತುವಿರಿವ, ತತ್ತರದಲ್
ಅರಿವ, ಪಲತೆಱದ ದಂಡನೆಗಳುಂ; ನರಕಭೂಮಿಗಳ ಸ್ವಭಾವದ್
ಅತ್ಯದ್ಭುತಂಗಳ್ಯೆನಿಪ ಮಹಾಶೀತೋಷ್ಣಂಗಳು ಸ್ಪರ್ಶೇಂದ್ರಿ
ಯಮ್ಅಹರ್ನಿಶಂ ಮಿಡಿಮಿಡಿಕಿಸುತ್ತಿರೆಯುಂ ; ಕೋಪದಿಂ ಕಿಡಿ
ಕಿಡಿಯಾಗುತ್ತಮ್ ಓರ್ವರ್ನ್ವೋರ್ವರ್ಪಿಡಿದು ಖಂಡಂಗೊಯ್ದು
ಬಾಯೊೞ್ಇಡಿದು ನಿಗ್ರಹಿಪ ನಾರಕರ್ಆಗ್ರಹದಿಂ ಸಮನಿಸುವ ವಿ
ಷಸದೃಶನಿಜಶರೀರಮಾಂಸಭಕ್ಷಣಮುಂ, ಲೋಹದ್ರವಕ್ಷಾರವಾರಿ
ಪಾನಮುಂ, ರಸನಇಂದ್ರಿಯಮನ್ಆಗಳುಂ ಮಲಮಲಂ ಮರಿಗಿಸು
ತ್ತಿರೆಯುಂ; ದೆಶೆಗೆಳೆಲ್ಲಮಂ ಪೊಡೆಯಪೊಲ್ ಇಡಿದು ತುಂಬಿದಂತ್ ಇ
ರ್ದ ನಾರಕರ ಮೈಯ್ಯ ಪೂತಿಗಂಧಂಗಳುಂ, ಕ್ಷೇತ್ರದುರ್ಗಂಧಂಗ
ಳುಮ್, ಉಸುರ ಬೞಿವಿಡಿದ್ಬೞಪೊಗುತ ಘ್ರಾಣೇಂದ್ರಿಯಮನ್ಅಡಿಗ್
ಅಡಿಗೆ ಬಿಕ್ಕನೆ ಬಿರಿಯಿಸುತ್ತಿರೆಯುಂ ; ಮುಳಿದ್ ಇದಿಯಲ್ಎಂದು
ಬರ್ಪ ನಾರಕರ ಭೀಕರಾಕಾರಂಗಳುಂ, ಮೇಲೆ ಬೀೞ್ವ ಸಿಡಿಲಂತೆ
ಬಂದ್ ಐದುವದುರ್ನಿರೀಕ್ಷಣತೀಕ್ಷ್ಣಾಯುಧಂಗಳ ಪೊಳಪುಗಳುಂ,
ಚಕ್ಷುರಿಂದ್ರಿಯಮಂ ಮಾಣದೆ ಗೂಡುಗೊಳಿಸುತ್ತಿರೆಯುಂ; ಗಜರು
ವ ಗರ್ಜಿಸುವ, ಬೈವ, ಮೂದಲಿಸುವನಿರಯಜನಿವಹನಿಸ್ಸ್ವರನಿ
ಷ್ಠುರಾಲಾಪಂಗಳುಂ, ಕಿಡಿವಿಡಿ ಪೞಂಚುವ ಕೈದುಗಳ ಖಣತ್ಕೃತಂ
ಗಳುಂ, ಶ್ರೋತ್ರೇಂದ್ರಿಯಮನ್ ಅನವರತ ಮುಗಿಬಗಿ ಮಾೞ್ಪಂತಿರೆ

Different kinds of tortures in hell.

ಯುಂ; ಮೇಗೆ ನೆನವಂತ್‌ವಡನೆ ಸಂದಣಿಸಿ ಪೊರಪೋಣ್ಮುವ ತೀವ್ರರುಜಾಕೋಟಿಗಳುಂ, ಪೇಳಲುಂ ಕೇಳಲುಂ ಅರಿಯದ್‌ಅಪ್ಪ ತೀವ್ರಬಲಕ್ಷುತ್ಪಿಪಾಸೆಗಳುಂ, ನೆರವಾಗಿ ಸರ್ವಾಂಗಮುನ್ ಬಳಗೊಳಗೆ ಬಿಡದ್‌ಅಲ್ಲರಿದು ದಳ್ಳರಿಸುತ್ತಿರೆಯುಂ; ಮತ್ತಮ್‌ಓರ್ವರನ್ ಓರ್ವರು ಕೋಪದಿನ್‌ಅಟ್ಟುತ್ತುಂ ಭಯದಿನ್‌ಓಡುತ್ತುಂ ದೇಹವ್ಯಥೆಗಳಿಂದ ಪುಯಲ್ ಯಿಡುತ್ತುಂ ದೆಸೆದೆಸೆಗೆ ಬಾಯ್ವಿಡುತ್ತುಂ ಬಸವಳಿಯುತ್ತುಂ ಬಿಡದೆ ನೆರಳುತ್ತುಂ ಪುಡಿಯೊಳ್ ಪೊರಳುತ್ತುಂ ಇರ್ವರ್ ಇಂತು.

## REFUTATION OF OTHER RELIGIONS.

### 2. ಅನ್ಯಮತ ಖಂಡನೆ.

ಚಂಪಕಮಾಲಾ ವೃತ್ತ.

1252. ಬಯಸಿ ನಿಧಾನಮಂ ಸುಕೃತಮಿಲ್ಲದವಂ ಭರದಿಂ ತದ[1]ಗ್ರಭೂ
ಮಿಯನಗುಳುತ್ತಮಿರ್ದು ನಿಧಿ ಗಾಣ್ಬೆಡೆಯೊಳ್ಮರುಳಾಗಿ ಪೋಪ [ಮಾ
ಳ್ಕೆಯೊಳಪವರ್ಗಮಾರ್ಗದೊಳವಿಂ ಪಲರುಂ ಪಿರಿದೋದಿ ತತ್ವನಿ
ರ್ಣಯಜನಿತೋಕ್ತಿಯಲ್ಲಿ ಜಡರಪ್ಪರಿದೇನಘಶಕ್ತಿ ಚಿತ್ರಮೋ!

Some, like a man digging up a treasure, but from fear running away.

1. ಆ ನಿಧಾನದ ಮೇಲಣ ಭೂಮಿಯನ್ನು ಮು.

ಕಂದ.

1253. ಹರಿಯಲ್ಲಂ ಹರನಲ್ಲಂ
ಸರಸಿಜಭವನಲ್ಲನಖಿಳಗತ[1]ತನುಮಲ್ಲಂ
ಪರಮಾತ್ಮಂ ಚಿಜ್ಜ್ಯೋತಿಃ
ಸ್ವರೂಪ ನಂನಾತ್ಮನೆಂಬ ಬಗೆ ಸಮ್ಯಕ್ತ್ವಂ.

The spirit God.

1. ಎಲ್ಲಾ ವ್ಯಾಪಿಸುವ ಶರೀರವುಳ್ಳವನು. ತನ್ನ ಆತ್ಮವೇ ದೇವರು ಅಂದಲ್ಲಿ ವೇದಾಂತ ಹಿಡಿದ ಹಾಗಾಯಿತು.

ಉತ್ಪಲಮಾಲಿಕಾ ವೃತ್ತ.

1254. ಪುಟ್ಟದ ಯೋನಿ ಮೆಟ್ಟದ ನೆಲಂ, ನೆರೆ ಕೊಳ್ಳದ ಕಾಲಮೊರ್ಮೆಯುಂ
ಮುಟ್ಟದ ಭಾವಮೊಂದದ ಭವಂ, ಪೆರತಿಲ್ಲೆನೆ,[1] ದುರ್ವಿಮೋಹದಿಂ
ತಿಟ್ಟನೆ ಬಂದಿ ನೀ ತಿಳಿಯದಕ್ಕಟ ! ನಿನ್ನ ನಿಜಸ್ವರೂಪಮಂ
ನೆಟ್ಟನೆ ನೋಡಿ ಕೂಡಿ ಪಡೆ ನಿತ್ಯನಿರಂಜನಮೋಕ್ಷಲಕ್ಷ್ಮಿಯಂ !

Obtain salvation.

1. ನೀನು ಹುಟ್ಟದ ಯೋನಿ—ಬಂದದ ಭವಂ ಉಳಿಯಲಿಲ್ಲ—ನೀನು ನಾನಾಪ್ರಕಾರವಾಗಿ ಹುಟ್ಟಿ ಬಂದಿ.

ಕಂದ.

1255. ನದಿವಾರ್ಧಿಗಳಂ ಮೀವುದು
ಮದಿರದೆ ಶಸ್ತ್ರಾಗ್ನಿಗಿರಿಗಳಂ ಪಾಯ್ವುದುಮಿಂ
ತಿದು ಲೋಕಮೂಢವೆಂಬುದು
ಮುದದಿಂದಂ ರಾಶಿ ಮಾಳ್ಪುಗುಂ ಕಲ್ಮಳಲಂ.

To perform ablutions is foolishness.

1. ಈ ಲೋಕ ಮೂಢವು ಕಲ್ಲುಮಳಲನ್ನು ರಾಶಿ ಮಾಡಿ ಅದಕ್ಕೆ ದೇವರು ಅನ್ನುತ್ತದೆ.

ವಚನ.

1256. ತೊರೆಗಳಂ ಸಮುದ್ರಂಗಳಂ ಕೊಣಂಗಳಂ ನಾಮತೀರ್ಥಂ ನಮಗೆ ಪುಣ್ಯಕಾರಣಮ್ ಎಂದು ಪೊಗದ ನಾಡಂ ಪೊಕ್ಕು ಮೀವುದು ನಾಮ ತೀರ್ಥಕರಮ್ ಅಲ್ಲದೆ ಭಾವತೀರ್ಥಕರಮ್ ಅಲ್ಲವು; ಸತ್ಯಮುಂ, ತಪಮುಂ, ಇಂದ್ರಿಯನಿಗ್ರಹಮುಂ, ಸರ್ವಜೀವದಯಾಪರತ್ವಮುಂ, ಯೊಂದ್ ಇವು ಭಾವತೀರ್ಥಮ್ ಎಂಬುದ್; ಇಂತೆಯೀ ಭಾವತೀರ್ಥಂಗಳೊಳ್ ಆತ್ಮನೊಳ್ ಏಕಭಾವಮ್ ಆಗಿರ್ದಡೆ, ಕರ್ಮಮಲ ಕಲಂಕಮಂ ಕರ್ಚಿ ಕಳದಂತೆ ಪೋರ್ಕುಂ; ಸ್ವರ್ಗ

To think that ablutions and such like outward performances will ensure salvation, is foolishness. Purity of heart is ablution, &c.

ಷಮುಂ ಅಪವರ್ಗಮುಮ್ ಅಕ್ಕುಂ; ನಾಮತೀರ್ಥಜಲಂಗಳಂ ಕರ್ಚಿ
ದೇವದತ್ತನ್ ಎಂಜಲಸಿಕೂಳಂ ಕರ್ಚಿದಡೆ, ಪೆರರ್ಗ್ಗ ಉಣಲ್ಕೆ
ಯೋಗ್ಯಮ್ ಅಪ್ಪಡ್ ಅಕ್ಕುಂ. ಉಚ್ಛಿಷ್ಟದೋಷಮಂ ಕೆಡಿಸಲಾ
ರದ ಜಲಮ್ ಎಂತ್ ಒಳಗಣ ಪಾಪಮಂ ಕಳಗುಂ ? ಮತ್ತಂ ಜಲಾ
ಶ್ರಯಂಗಳೊಳ್ ಅಲ್ಲಿಯೆ ಪುಟ್ಟಿ ಯಲ್ಲಯೆ ಬೆಳದ್ ಅಲ್ಲಿಯೆ ನೀರ
ನೆ ಕುಡಿದ್ ಅಲ್ಲಿಯೆ ಸಾವ ಮತ್ಸ್ಯಾದಿ ಮಕರಾದಿಗಳ್ ಅಂತ್ ಉಭ
ಯತಟವರ್ತಿಗಳ್ ಅಪ್ಪ ಕೊಂಕಣಿಕ ಸಿಂಹಳಿಕಬರ್ಬರಶಬರಲಾ
ಳಪ್ರಭೃತಿಗಳುಂ ಪಾಪಕ್ಷಯಂ ಪುಣ್ಯಬಂಧಮುಂ ಆಗವ್ ಏಕೆ ?
ಪುಣ್ಯಬಂಧಮ್ ಅಕ್ಕುಮ್ ಎಂಬ ಸಂಕಲ್ಪಮ್ ಇಲ್ಲದ್ ಏಕ್ ಅಕ್ಕು
ಮ್ ? ಎಂಬರೆ, ಸಂಕಲ್ಪಮಾತ್ರದೊಳೆ ತೈಲಾರ್ಥಮಾಗಿ ಮಳಲಂ
ಪಿಳದಡ್, ಎಣ್ಣೆಯಾಗದಂತೆ, ಪುಣ್ಯಕ್ಕೆ ಕಾರಣಮ್ ಅಲ್ಲದವಂ ನೆ
ಗಳ್ದರೆ, ನಿಷ್ಫಲಕ್ಲೇಶಂಗಳ್ ಅಕ್ಕುಂ; ಮತ್ತಂ ಶಸ್ತ್ರಾಗ್ನಿಗಿರಿನದಿ
ಗಳಂ ಪಾಯ್ಗು ಸತ್ತವರಿಗೆ ಪುಣ್ಯಮ್ ಎಂಬರೆ, ರಣದೊಳು ಕೈದು
ವಿನೊಳಂ ಸಾವುದುಂ, ಮೃಗಂಗಳ್ ಕಾಳಗಿಚ್ಚಿನೊಳು ಸಾವು
ದುಂ, ಗಿರಿಗಳನೇ ಯೇರಿ ಜಗುಳ್ದು ಸಾವುದುಂ,ತೊರೆಗಳ್ ಈಸ
ಲಾರದೆ ಸಾವುದುಂ, ಪೊರಗೋಲ್ ಅರ್ದಿ ಸಾವುದುಂ, ಇಂತ್ ಈ
ಯುಂದದಿಂ ಸತ್ತ ಪ್ರಾಣಿಗಳಿಗೆ ಪುಣ್ಯಮ್ ಆಗಲ್ ಪೇಳ್ಕುಮ್; ಇಲ್
ಎಂಬರೆ, ಮುಂನಿನ ನುಡಿ ಪುಶಿಯಾಗಲ್ ಪೇಳ್ಕುಂ; ಮತ್ತಂ ಪಿತ
ರನೂಡಿದಪೆಮ್, ಎಂಬರ್, ಅಂತಪ್ಪರೆ, ಪೆರರೊಳು ಪುಟ್ಟಿ ಬೆಳೆಯು
ತಿರ್ದ ಪಿತರನ್ ಊಡುವಡೆ, ಪಾರ್ವಿಕೆಯೊಳ್ ಇರ್ದ ಪಾರ್ವಂಗೆ
ಕೂಳನ್ ಒಯ್ವರೆ; ಮನೆಯೊಳ್ ಇರ್ದ್ದ ಊಡಲಾಗದೆ ? ಇಂತು
ನಂನಿಪುಶಿ ಎಂಬುದನ್ ಅರಿಯದೆ ಓರ್ವರಂ ಕಂಡು ನೆಗಳ್ದದ್ ಅದು
ಲೋಕಮೂಢಮ್ ಎಂಬುದಂ.

ಮಹಾಸ್ರಗ್ಧರ ವೃತ್ತ.

1257. ಪರಮಾರ್ಥಂ ಲೋಕಮೆಂಬೀಯರಡುಮನರಿಯಂ ; ಲೋಗರೋ
[ಳ್ತಾನುಮೊಂದಂ

To sacrifice his life in war, to get remission of sins, foolish.

ಭರದಿಂದಂ ಮಾಡುತಂ ಮಾಡುವನಘಹರಮೆಂದೈದೆ ಸಿಂಧುಪ್ರ
[ವಾಹೋ
ತ್ಕರದೊಳ್ಮೇವಂ ; ಕೃಶಾನೋದಕಮರಣದಿ, ಮೋಸ್ವೈರಿಯಂ
[ಬಾಯ್ದು, ಮೋಣ್ಸಂ
ಗರದೊಳ್ಸಂಹಾರಿಕುಂ ಪ್ರಾಣಮನೆನಿಪ ಜಡಂ ಲೋಕದೊಳ್ಲೋ
[ಕಮೂಢಂ.

1. ಮೋಕ್ಷವಾಗಬೇಕೆಂದು ಬೆಂಕೆಯಲ್ಲಿ ಅಥವಾ ನೀರಲ್ಲಿ ಬಿದ್ದು, ಅಥವಾ ಯುದ್ಧದಲ್ಲಿ ಕಡದಾಡಿ ಪ್ರಾಣ ಕಳಕೊಳ್ಳುತ್ತಾನೆ.

ಚಂಪಕಮಾಲಾ ವೃತ್ತ.

1258. ಒಗೆವ ದಿನೇಶನಂ, ಪರಿವ ಸಿಂಧುವನೂದುವ ಘಾಳಿಯಂ, ಧಗಂ
ಧಗಿಸುವ ಕಿಚ್ಚನುಳ್ವ ನೆಲನಂ, ಕರೆವಾಕಳನಿಪ್ಪ ಸದ್ಮಮಂ,
ಸೊಗಯಿಸಿ ನಿಂದ ಪೇರ್ಮರವನುಂಬಗಳಂ, ಬೆಸಗೈವ ತಂಮ ಮು
ಟ್ಟುಗಳನೆ ದೈವಮೆಂದೆರಗುವಾತನೆ ದೈವದ ಮೂಢನಲ್ಲವೇ ?

He who worships these things, is he not a fool?

ವಚನಂ.

1259. ನೆಲನುಂ ನೀರುಂ ಗಾಳಿಯುಂ ಕಿಚ್ಚುಂ ಮರಂಗಳ್ ಎಂಬ ಪಂಚ ಸ್ಥಾವರಂಗಳುಂ ದೈವಮ್ ಎಂಬುದುಂ ; ತಂಮ ಗೃಹಂಗಳುಮ್, ಆಯುಧಂಗಳುಂ, ತಂಮ ಬೆಸಗೈವ ಮುಟ್ಟುಗಳ್, ಉಂಬ ಕೂಳಮ್, ಎಂದ್ ಇವು ಮೊದಲಾದ ಅಚೇತನಂಗಳುಂ ದೈವಂಗಳ್ ಎಂಬುದು ; ಮತ್ತಂ ಪಶುಗಳುಂ, ಸರ್ಪಗಳುಂ, ಮೊದಲಾದ ತಿರ್ಯ

The five elements, &c., are not God.

ಗ್ಞಾತಿಗಳುಂ, ದೈವಮ್ ಎಂಬುದುಂ; ಮತ್ತಂ ಹರಿಹರಪಿತಾಮ ಹವಿಬುಧರ್ ಎಂಬ ಮನುಷ್ಯರ್ಕಳುಂ, ಚಂದ್ರಾದಿತ್ಯರ್ ಎಂಬ ಜ್ಯೋತಿರ್ಗಣಂ, ಕ್ಷೇತ್ರಪಾಲ ವಣಾರಭೈರವ ಮೈಲಾರ ಬೆನಕ ಕಾರ್ತಿಕೇಯ ಬಗವತಿ ಬಲಾರಿ ಕಾಳಿ, ಮಹಾಕಾಳಿ, ಚಂಡಿ, ಚಾ ಮುಂಡಿ ಮಾರಿ ಮಸಣಿ ಸೊಸಣಿ ಮೊದಲಾದ ದೈತ್ಯರಂಗಳುಂ, ವರವನ್ ಈಗುಮ್ ಎಂಬ ಆಶೆಯೊಳುಂ ಓರ್ವರಂ ಕಂಡು ಪೋರ್ವ್ರ್ ಎರಗುವದುಂ ; ಮೂಢಜನಂಗಳು ದೈವಮ್ ಎಂದು ಕೊಂಡಾಡು ವದುಂ ; ದೇವತಾಮೂಢಮ್ ಎಂತ್ ಅಂದುದ್ ಎಂತ್ ಎನ್ಲೈಲೌಕಿಕರು ದೈವಮ್ ಎಂದರೆ, ಪೂರ್ವಕಾಲದೊಳು ನಿರ್ವಾಣಕ್ಷೇತ್ರಂಗಳಂ ಭವಿ ಜನಗಳ್ ಮುಟ್ಟಿ ನಮಸ್ಕಾರಂ ಗೈದುದಂ ಕಂಡು ಮೂರ್ಖರು ಭೂ ಮಿ ದೈವಮ್ ಎಂದರು ; ಕಾಮಧೇನುವ್ ಎಂಬ ವಿದ್ಯಾಧೇನುರೂ ಪದಿಂ ಕಾಮಿಸಿದ ವಸ್ತುವಂ ಕೊಡೆ, ಸಾಧಕನ್ ಅದಂ ಪೂಜಿಸುವು ದಂ ಕಂಡು ಪಶುಗಳುಂ ದೈವಮ್ ಎಂದರು ; ಪಯೋದಧಿಯಂ ವಹ್ನಿವಾಯುವ್ ಎಂಬ ಲೋಕಪಾಲರಂ ನಾಗರ್ಕಳಂ ಪರಮಸ್ನ ಪನಕಾಲದೊಳು ತರ್ಪಣಂ ಗೈವುದಂ ಕಂಡು ನೀರುಂ ಕಿಚ್ಚುಂ ಗಾಳಿಯುಂ ಸರ್ಪಂಗಳುಂ ದೈವಮ್ ಎಂಬರು ; ತಮಗ್ ಅವು ದೈವಮ್ ಅಪ್ಪಡೆ, ಅವಂ ಬಾಧೆ ಬಡಿಸುವದ್ ಏಕೆ ? ಮತ್ತಂ ವಿಷ್ಣು ದೇವನೇ ಎಂಬರೆ, ಗೋವಂ ಕಾಯ್ದಂ ; ದೂರು ಪೋದಂ; ಸಾರಥಿ ಯಾದಂ ; ದಾನಂ ಬೇಡಿದಂ ; ಗೋವತೆಯೋಳ್ ಕೆಟ್ಟಂ ;

ಶ್ಲೋಕ.

1260. ಮತ್ಸ್ಯಕೂರ್ಮವರಹಶ್ಚ
ನಾರಶಿಂಹಶ್ಚವಾಮನಃ

ರಾಮೋರಾಮಶ್ಚ ಕೃಷ್ಣಶ್ಚ
ಬೌದ್ಧಃಕಲ್ಕಿದಶಾಕೃತಿಃ

ವಿಷ್ಣು ದಶಾವತಾರ ಮಾಡಿದನು. ಈ ದೂರು ಹೋದನು=ಹೊರಿಸಿಕೊಂಡನು.

ವಚನ.

1261. ಎಂಬ್ ಈ ದಶಾವತಾರಂ ಬಂದನ್ ಎಂಬುದೇಕೆ? ರುದ್ರ ದೇವನ್ ಎಂಬರೆ, ತ್ರಿಪುರಮಂ ಸುಟ್ಟಂ; ಅಂಧಕಾಸುರನಂ ಕೊಂದಂ; ದಾರುವನ ಕ್ರೀಡೆ ಮಾಡಿದಂ; ತೊಗಲಂ ಪೊದೆದಂ; ಎಲುವಂ ತೊಟ್ಟಂ; ಕಪಾಲದೋಳ್ ಉಂಡಂ; ಡಮರುಗಮಂ ಪೊಡಪಾಡಿದಂ; ಜಾನ್ಹವಿಯೋಳ್ ಇರ್ದಂ; ಸಾಪಂ[1] ಚಿತ್ತಂ ಬ್ರಹ್ಮೇತಿ ಯೋದನ್ ಎಂಬುದೇಕೆ? ಬ್ರಹ್ಮ ದೇವನ್ ಅಪ್ಪಡೆ, ಪೂರ್ವಶೆಯೋಳ್ ನೆರೆವ ಆಳಂ; ಮಹೇಶ್ವರಂಗೆ ಪುಸಿದಂ; ಸಾಪಂ ಚಿತ್ತಂ; ಕರಡಿಯೋಳ್ ಬೆರಸಿದಂ; ತಪದಿಂ ಕೆಟ್ಟಂ; ತನ್ನ ಸುತೆ ಯಪ್ಪ ಪದ್ಮಜಳಿಗ್ ಅಳ್ಪಿದನ್ ಎಂಬುದೇಕೆ? ಬುಧಂ ದೇವನ್ ಅಪ್ಪಡೆ, ತನ್ನ ಜನನಿಯಂ ಕೊಂದು ಪುಟ್ಟಿದಂ; ಆತ್ಮವಧೆಯಂ ಮಾಡಿಕೊಂಡನೆಂಬುದೇಕೆ? ಇಂತ್ ಇವರೆಲ್ಲರು ದೇವರ್ ಅಪ್ಪಡೆ, ಲೋಕದೋಳ್ ಕೊಲುವಂ, ಪುಸಿವನುಂ, ಕಳುವನುಂ, ಪರಸ್ತ್ರೀಗಮನಂ ಗೈದನುಂ, ಊರ್ಗಳ ಸುಟ್ಟನುಂ, ದನಗಾವನುಂ, ಮದ್ಯ ಮಾಂಸಂಗಳಂ ಸೇವಿಸುವನುಂ, ಇಂತ್ ಇವರ್ ಮೊದಲಾದವರು ದೇವರ್ ಅಗ ವೇಳ್ಕು; ಮತ್ತಂ ಆದಿತ್ಯಂ ದೇವನ್ ಅಪ್ಪಡೆ, ಕಶ್ಯಪಂಗೆ ಪುಟ್ಟಿದಂ; ಅಸುರರೊಡನೆ ಕಾದಿದಂ;

Vishnu, Shiva, Brahma, no gods, only men.

1. ಶಾಪ. 2. ಬುಧನ ತಾಯಿ.=ರೋಹಿಣಿ ನಕ್ಷತ್ರ; ಈಕೆ ಬೃಹಸ್ಪತಿಯ ಹೆಂಡತಿ, ಯಾದಾಗ್ಯೂ ಚಂದ್ರನಿಂದ ಬಸುರಾಗಿ, ಗಂಡನು ಗದರಿಸಿದ್ದಕ್ಕೆ ಗರ್ಭಪತನವಾಗಿ ಬುಧನನ್ನು ಹಡೆದು ಆ ವೇದನೆಗೆ ಸತ್ತಳು. ಆದರೆ ಹಿಂದಗಡೆ ಮತ್ತು ಬದುಕುವವಳಾದಳು.

ಕೋಡಗ ನುಂಗಲು[3] ಬರೆ, ಪ್ರೋಡಿ ಇಂದ್ರನ ಮರೆ ಸೊಕ್ಕು ಬದುಕಿದಂ; ಕುಂತಿಯೊಳ್ ಪೊಲ್ಲಕ್[4] ಐದಿದನೆಂಬುದೇಕೆ? ಅಗ್ನಿ ದೇವನ್ ಎಂಬರೆ, ಪಾಂಡುರೋಗಂ ಎಂಬ ಕುತ್ತಂ ಆದರೆ, ಅರ್ಜುನನಲ್ಲಿ ದಾನಂ ಬೇಡಿಕೊಂಡು ಖಾಂಡವನದ[5] ಸರ್ವೌಷಧಗಳ್ ಎಂಬ್ ಈ ವೃಕ್ಷಗಳ ರಸವನ್ ಉಂಡು ಬದುಕಿದನ್ ಏಂಬುದ್ ಅದೇಕೆ? ಅಂತು ಮತ್ತಮ್ ಅಜ್ಞಾನಿಗಳ್ ಇಟ್ಟ ಮರಗಳಂ, ಬಟ್ಟಿದ ಕಲ್ಗಳಂ, ದೈವಂ ಎಂದ್ ಅದಂ ಪೆಸರಂ ಇಟ್ಟು ಕೊಂಡಾಡೆ, ವರ ವರಮತಿಯೋಳ್ ಈಗುಂ ಎಂಬಾಶೆಯಿಂ ತಮ್ಮೋಳ್ ಅರ್ಥಮಂ ಬರೆಸೂರೆಗೈವರ್; ಆ ದೈವಂ ವರವನ್ ಈವ ಅಂದಂ ಎಂತುಂಟೆಂದರೆ, ಬಂಜೆಯ ಹೆಂಮಗ ಮೃಗತೃಷ್ಣಾಂಬುವಿಂ ಮಿಂದು, ಕಲ್ಲನಾರಸೀರಿಯನ್ ಉಟ್ಟು, ಆಕಾಶಪೂದುರುಂಬಿ, ಮೊಲದ ಕೋಡ ಬಿಲ್ವಿಡಿದು ಬರುತಿಪ್ಪುದಂ, ಪುಟ್ಟುಗುರುಡಂ ಅಂಧಕಾರದ ನಟ್ಟನಡು ಇರುಳನೊಳು ಕಂಡನೆಂಬಂತೆ[6] ನಿಷ್ಫಲಂ ಕ್ಲೇಶಂ ದುರ್ಗತಿ ದುಃಖಮೇ ಯಕ್ಕು; ಆ ದೈವ ಪೆರರ್ಗ್ಗ ಈವುದುಂ ಕಾವುದುಂ ಅಂತಿರ್ಕೆ! ತಮಗೆಂದು ಸಂಕಲ್ಪಿಸಿದ ವಸ್ತುವಂ ಕಾಯಲಾರರ್, ಅದ್ ಎಂತೆನೆ:

3. ಹನುಮಂತನು ಹುಟ್ಟಿದಾಕ್ಷಣವೇ ತನ್ನ ತಾಯಿ ಅಂಜನಾದೇವಿಯನ್ನ ಊಟವ ಬೇಡಿದರೆ, ಆಕೆ ಕುರಡಿಯಾದ ಕಾರಣದಿಂದ ತಂದು ಕೊಡಲಾರದಕ್ಕೆ ಹಣ್ಣು ತಿನ್ನು ಅಂದಳು. ಹಣ್ಣು ಹ್ಯಾಗಿರುತ್ತವೆಂದು ಇವನು ಕೇಳಿದರೆ, ಕೆಂಪಿಗಿರುತ್ತವೆ ಅಂಬೋಣ, ಆಗಲೇ ಉದಯಿಸುತ್ತಿದ್ದ ಕೆಂಪಾದ ಸೂರ್ಯಮಂಡಲ ಕಂಡು ಹಣ್ಣೆಂದು ನುಂಗಲಿಕ್ಕೆ ಹಾರಿದನು. 4. ಹೊಲ್ಲ ಕೆಲಸಕ್ಕೆ. 5. ಇಂದ್ರವನಂ. 6. ಅನ್ವಯ: ಬರುತ್ತಿಪ್ಪುದಂ ಪುಟ್ಟುಗುರುಡನು—ಕಂಡನು.

ಕಂದ.

1262. ಜಂನಿಗಿಯಾವಂ ಪರಕಿಯ

A dog more than such a god, ಪೊಂನಂಪರಿಯಣ[1]ಮನೊಯ್ವ ಕಳ್ಳ[2]ನನಂತಿಂ

1 ಹರಿವಾಣ. 2. ಇವನ್ನ ವೈಯುವ ಕಳ್ಳನಿಗೆ ಏನು ಅನ್ನುವದಿಲ್ಲ.

that does not stop the thief.

ತೆಱನದು ಗಡಮೆನೆ, ದೈವದ
ಸನ್ನಿಧಿಯುಂ ನೋಡೆ, ಮನೆಯ ಕುನ್ನಿ ವಿಶೇಷಂ.

ಚಂಪಕಮಾಲಾ ವೃತ್ತ.

1263. ಪರಕಿಯ ದೈವದಚ್ಚುಗಳನಚ್ಚರಿಯಾಗಿರೆ, ಕಟ್ಟುವರ್ಕಲ

Let these gods eat up the thieves, the goldsmiths and kings!

ಕೊರ್ಱರಳೊಳದೇಕೆ ? ಕಟ್ಟಿದೊಡೆ, ದೈವತೆ ತಿಂಗು[1]ಮೆ ? ಕಳ್ವ ಕ [ಳ್ಳರಂ,
ಕರಗಿಸುವಕ್ಕಸಾಲೆಯರನುರ್ಕುವಿನಿಂದೆ ಕೆ[2]ವರ್ತೆ ಗೊಂಡು ಪೋ
ಪರಸರವಂದಿರಂ ತೆಗದು ತಿಂದಡೆ, ಯುಳ್ತರೆ ತೋರಲಾಗದೇ ?

1. ತಿನ್ನುಗು. 2. ಕವರ್ದು (ಅವಧಾರಣಾರ್ಥವಾಗಿ ಕವರ್ತೆ ಅಂತಾಗುವದು.)

ಕಂದ.

1264. ಪಿಂಡಮನೀವುದು ; ತಡೆಯದೆ

Your goddess, will give you and protect you!

ಪಿಂಡಮನಿಡುವುದುವೆ ! ಕುರಿಯನಿಕ್ಕುವದೊಲವಿಂ
ಪಿಂಡನೊಳೈದಾರಂ ; ಮೋ
ಣ್ಕೊಂಡಾಟದ ನಿಮ್ಮ ದೇವಿ ಈಗುಂ, ಕಾಗುಂ.

ನೀವು ಹಿಂಡಿನಲ್ಲಿ ಐದಾರು ಕುರಿಗಳನ್ನ ನಿಮ್ಮ ದೇವಿಗೆ ಕೊಟ್ಟ ಮೇಲೆ, ಆಕೆ ಕೊಡುತ್ತಾಳೆ ಕಾಯುತ್ತಾಳೆ.

ಚಂಪಕಮಾಲಾ ವೃತ್ತ.

1265. ಮರುಗಿದೆ ನೋವು ಸೂತಿ ಮಸಗಿತ್ತೆ[1]ನಲಂತೆವಳೋ[2]ರ್ವಳಿರ್ದು [ಕೂ

The goddess asking a sheep.

ರ್ತಿರದೆ ಕುಕಿಲ್ದು ತೇಗಿದರೆ, ದೇವತೆ ನೀಂ ಬೆಸನಾ[3]ರ್ಗೆ ? ಮಾಣದೆ

1. ಸೂತಿ ಬೇನೆಯಲ್ಲಿರುವಾಕೆ ಒಬಾಕೆ. 2. ದೇವರು ಹೇಳುವಾಕೆ ಒಬ್ಬಾಕೆ. ಈಕೆ ತೇಗಿದರೆ,ದೇವರು ಬಂತೆಂದು ಮನೆಯಾಕೆ ಹೇಳ್ರಿ ಎಂದು ಬೇಡಿಕೊಳ್ಳುತ್ತಾಳೆ. ಆಗ ಆಕೆಯೊಳಗಣ ದೆವ್ವ ನಾನು ಅಡವಿಯಿಂದ ಮನೆಗೆ ಬಂದ ಕರುವಿನ ಸಂಗಡ ಬಂದೆ, ನನಗೆ ಒಂದು ಕುರಿ ಬೇಕು ಎಂದರೆ, ಕೊಡುತ್ತಾರೆ. 3. ಆಗಲಿ (ಅರ್ಗೆ ಎಂಬುದು ಆಗು ಎಂಬ ಧಾತುವಿನ ವಿಧಿರೂಪ.)

ಕರುವಿಗೆ ಕಾಳರಕ್ಕಸಿಯು ನಾಂ, ಕುರಿ ವೇಡಿದೆನೆಂದರಿಕ್ಕುವ
ಕರ್ಣರಿ ; ಕುರಿಪಟ್ಟಗೈದಿ ತಿನಲಾಗದೆ ? ದೇವಿಗೆ ಕುತ್ತ ಪೋಗದೇ ?

1266. ಕುರಿಗಳ ಪಿಂಡ ಪೊಕ್ಕು ತಿನಲಮ್ಮದೆ ? ಕಾಡಿಯೆ ಬೇಡುತಿಪ್ಪ ಕಾ
ಡೆರೆಯನ[1] ಕಾಳರಕ್ಕಸಿಯನಗ್ಗದ ಬೊಮ್ಮನ ದೈವಮೆಂಬರಾ[2]
ನರಿಯದ ದೈವಮೋ ? ಪರರ ಬೇಡದೆ ಕಾಡದೆ ಪಿಂಡು ಪೊಕ್ಕು ತಂ
ನುರುವುದನಾಯ್ದು ಕೊಂಡು ತಿನುತಿಪ್ಪುದು ತೋಳನು, ದೈವಮ
[ಲ್ಲವೇ ?

The wolf more of a god than those who are worshipped.

1. ಕಾಡಿನಲ್ಲಿ ದನಕರ ಮೇಯಿಸುವವರು ಬಂದು ಕಲ್ಲು ಇಟ್ಟು ಅದಕ್ಕೆ ಪೂಜೆ ಮಾಡಿ ದೇವರು ಅನ್ನುತ್ತಾರೆ. 2. ದ್ವಿತಿಯೆ. (ವ್ಯಾ. ಸೂ. 51.) ಹೀಗೆ ಅನ್ನುವವರನ್ನು ದೇವರು ಬಲ್ಲನು.

ಮತ್ತೇಭವಿಕ್ರೀಡಿತ ವೃತ್ತ.

1267. ಕುರಿಯಂ ಬೇಡಿದಡೀವನೊಂದು ಬಡವಂ ; ತನ್ನಿಚ್ಛೆಯಿಂ ದೈ
[ವಮಾ
ಕುರಿವಿಂಡಿರ್ದೆಡೆಗೈದಲೊಂದೆರಡು ಮೂರುಂ ನಾಲ್ಕುಮೈದಾರು ಬ
ಲ್ಗುರಿಯಂ ತಿಂದರೆ, ಕಾಪಿನರ್ಬಡಿಗುಮೊ ? ನಾಯ್ತಿಂಗುಮೊದೈ
[ವಮುಂ ?
ಪೆರರಂ ಬೇಡುವ ದೈವಮೇಕೆ ? ಗಡ ! ಪೇಳಾತೋಳನಿಂ ಕಷ್ಟ
[ಮೋ !

ಚಂಪಕಮಾಲಾ ವೃತ್ತ.

1268. ಕುರಿ ವೆರಸೀವುದೀವುದು[1]ಣಲೀವುದು[2] ಪೂಜೆಗಿದೆಂದು ಮುಂದ ತಂ
ದೆರಿಪುದು ಕಳ್ಳನಂ[3]ಮುವನ ಚಂಡಿಕಿ ಮಾರಿ ಬಲಾರಿ ಕಾಳಿ ಯಂ

Let them not be worshipped,

1. ಕೊಯಿದ ಕುರಿಯು ಸಂಗಡ ಬಲಿಯು ಕೊಡಬೇಕು. 2. ಈ ಮುವಂಥಾ ಕುರಿಯನ್ನು ಉಣ್ಣಲಿಕ್ಕೆ ಕೊಡಬೇಕು. 3. ಆ ಬಲಿಯು ಕೂಡೆ ನರಬಲಿಯಾಗಿ ಬಳ್ಳೆ ಕಳ್ಳನನ್ನ ಪ್ರಾಚೀನದಲ್ಲಿ ಕೊಡುತ್ತಿದ್ದರು.

if they cannot keep the sheep, devoted to them, from dying !

ಬರಿಕೆಯ[4] ದೇವತಾನಿಕರವಂತಕನೊಯ್ಯೆ, ಮೊಗಳ್ಬ[5]ಲಾರ್ಪಡೀ
ತೆರದೊಳು ಮೀವುದಲ್ಲದೊಡೆ, ಪಾಯುದು ಬಾಯೊಳು ಕಾಯ್ದು ಬೂ [ದಿಯಂ !

4. ಎಂಬ ಹರಿಕೆಯ ಮು.—5. ದೇವರಿಗೆ ನೇಮಿಸಿದ ಕಳ್ಳನನ್ನು ಕುರಿಯುಂನೂ ನಡುವಿನಲ್ಲಿ ಯಮನು ವೈದರೆ, ದೇವರು ಅವನ್ನು ಬಿಡಿಸುವ ಹಾಗಿದ್ದರೆ, ದೇವರು ಇಲ್ಲದಿದ್ದರೆ ಇಲ್ಲ.

ಉತ್ಪಲಮಾಲಿಕಾ ವೃತ್ತ.

By performing sacrifices people increase only their trouble.

1269. ಕರ್ಮಜಮೆಂದು ರೋಗಜಮುಮೆಂದೆರಡುಂ ತೆರದಿಂ ಶರೀರಿಯಂ
ನೆರ್ಮಿದ ಕುತ್ತಮೊತ್ತಿದರೆ, ಗಾಳಿಗರುಂ ನೆಲಮುಕ್ಕ ಜಕ್ಕಿಯುಂ
ಬೊರ್ಮನುನೆಂದು ಜೀವವಧೆಗೈದರೆ, ಕುತ್ತದ ದುಃಖದಿಂದ ಸಾ
ಸಿರ್ಮಡಿದುಃಖಮಂ ಪಡೆವ ನಾರಕದುಃಖಮನೈದದಿರ್ಪರೇ ?

1. ಗಾಳಿಗರು ಮೊದಲಾದವರೇ ಜನರು ತಮಗೆ ತಾವೇ ಕಲ್ಪಿಸಿಕೊಂಡ ದೇವರುಗಳು. ಕರ್ಮದಿಂದಾಗಲಿ ರೋಗದಿಂದಾಗಲಿ ಕಷ್ಟ ಬಂದರೆ, ಇವಕ್ಕೆ ಏನಾದರೂ ಕೊಯಿದು ಅರ್ಪಿಸುವರು.

ಶಾರ್ದೂಲವಿಕ್ರೀಡಿತ ವೃತ್ತ.

Men persevere in their ignorance.

1270. ಪೊಂಗಿಲ್ಖಂಡುಗಜೋಳದಿಂದೆರವನುಂ ಚಾಮುಂಡಿಯುಂ ಬೊಂ [ಮನುಂ
ಪೊಂಗೊಂಡೀಪರೆಕಳ್ಕ ಪೋದರು ? ಬಸುರ್ಗಿಲ್ಲಾಗಿ ಮೇಣ್ಸತ್ತರುಂ;
ಪೊಂಗಿಪ್ಪಾತನ ಕೇಳ್ದು ಕೂಳ್ಬಡಿಕದಿಂ ಮೇಣ್ಬಂದರುಂ, ಮೂಢ [ಲೋ
ಕಂಗಳ್ತಂಮ ಕುತತ್ವಮೆಂದರಿಯರಾರೇನೆಂದಡಂ, ನಂಬುವರ್.

ಯಾವನೊಬ್ಬನು ಸಂತೋಷದಿಂದ ಚಾಮುಂಡಿ ಬೊಂಮನು ಮೊದಲಾದ ಹರಕೆಯ ದೇವರಿಗೆ ಖಂಡುಗ ಜೋಳ ಕೊಟ್ಟು, ನಮಸ್ಕಾರ ಮಾಡುವನಾದರೂ, ತಾನು ಹೊಟ್ಟೆಗಿಲ್ಲವಾಗಿ ಸತ್ತಾಗ್ಯೂ, ತೃಪ್ತಿಯಾಗಿ ಹೋದವರು ಹೊನ್ನು ತಕ್ಕೊಂಡು ಕೊಟ್ಟಾರೆ? ಯಾವನೊಬ್ಬನು ಕೂಳ ಬಡಿಕತನದಿಂದ ಸಂತೋಷದಿಂದ ಇರುವಾತನನ್ನು ಕೇಳಿ ಮತ್ತು ಬಂದು ದೇವರಿಗೆ ಮಾಡಿಸಿ ಅಂತ ಹೇಳಿದರೂ ಲೋಕದವರು ತಂಮ ಅಜ್ಞಾನವೆಂದು ತಿಳಿಯುವದಿಲ್ಲ ಯಾರು ಯೇನು ಹೇಳಿದರೂ ನಂಬುವರು.

## EXAMINATION OF RELIGION.

## 2. ಧರ್ಮ ಪರಿಕ್ಷೆ.

### 1. ಪೀಠಿಕಾ ಶ್ವಾಸ.

ಶಾರ್ದೂಲವಿಕ್ರೀಡಿತ ವೃತ್ತ.

1271. ಪೊಂಬೆಟ್ಟಂ[1] ಪಲವಾದವೆಂಬ[2] ತೆರದಿಂ ನಾನಾಪ್ರಕಾರಂಗಳಿಂ,
ಚಂಬೊಂನಿಂ[5] ಸವೆದಂಬರಂ ಬೆಳೆದ[3] ಮಾನಸ್ತಂಭಸಂದೋಹದಿಂ
ಬಿಂಬಾದಂಬರರತ್ನಕೂಟ[4]ಜಿನಚೈತ್ಯಾವಾಸದಿಂದಲ್ಲಿ ಕಂ
ಣ್ಗಿಂಬಾಗಿಪ್ಪ ಗೃಹಂಗಳಿಂದ, ಮೆರಗುಂ ಶ್ರೀವೈಜಯಂತೀಪುರಂ.

The city of Veijayantipura.

1. ಮೇರು ಪರ್ವತ. 2. ಅದರಿಂದ ಕೆಲವು ಹೊಂನಿನ ಪರ್ವತಗಳಾದವು ಎಂಬ. 3. ಆಕಾಶದತನಕ. 4. ಸೂರ್ಯನನ್ನು ಮುಟ್ಟುವ ತುದಿಯುಳ್ಳ. 5. ವ್ಯಾ. ಸೂ. 78 ಈ ಕೃತಿ ಮೊದಲು ಸಂಸ್ಕೃತದಲ್ಲಿ ರಚನೆಯಾಗಿತ್ತು. ಇತ್ತಲಾಗಿ ವೃತ್ತವಿಲಾಸ ಎಂಬ ಕವಿ ಅದನ್ನು ಕನ್ನಡಿಸಿದನು.

ಕಂದ.

1272. ಆಪುರದಧಿಪತಿ ಜಿತರಿಪು
ಭೂಪತಿ ; ಯುವನರಶಿ ವಾಯುವೇಗೆನಿಸಿರ್ಪಳ್ ;
ರೂಪಿಂ ರತಿಗೆಣೆ; ಯಖಿಳಕ
ಳಾಪರಿಣತೆಯಿಂದೆ ವಾಣಿಗೆಣೆಯಿಂ ಮೆರದಳ್.

The king and Queen of that city.

ವಚನ.

1273. ಆಕೆಗೆ ಗರ್ಭಚಿನ್ಹಂ ಪ್ರಕಟಿಸಿ ವಿರಾಜಿಸೆ ಸಪ್ತಮಾಸಕ್ಕೆ ಕಂಠಿಕೆಯುಂ ಕಟ್ಟಿಸಿ ನವಮಾಸ ತೀವಿ ಬೆಸಲೆ ಯಪ್ಪುದುಂ, ಜಾತಕರ್ಮಮುಂ ಮಾಡಿ, ತದನಂತರಂ ಮನೋವೇಗನೆಂಬ ನಾಮಕರಣಂ ಗೈದು ಅಂನ ಪ್ರಾಶನಂ[1] ಚೌಲೋಪನಯನಾದಿ ಕ್ರಿಯಂಗಳಂ ನಿವರ್ತಿಸಿದ ಬಳಿಕ, ಯಳೆವಾಡಿವದ ಚಂದ್ರನಂತೆ ಬೆಳೆಯೆ ಯೆಳೆಯಂ.

A son, Manovéga, is born to them.

1. ಕೂಸಿಗೆ ಆರು ತಿಂಗಳು ತುಂಬಿದ ಮೇಲೆ, ಅನ್ನ ಉಣ್ಣಸಲಿಕ್ಕೆ ಪ್ರಾರಂಭ ಮಾಡುವಲ್ಲಿ ಉತ್ಸಹ ಮಾಡುತ್ತಾರೆ. ಇದಕ್ಕೆ ಅನ್ನಪ್ರಾಶನ ಅನ್ನುತ್ತಾರೆ. ಹುಡಗನಿಗೆ ಐದು ವರುಷ ಆಗುವಷ್ಟರೊಳಗೆ ಚಂಡಿಕೆ ಬಿಡಿಸುವದಕ್ಕೆ ಚೂಡಾಕರ್ಮ (ಚೌಲ) ಅನ್ನುತ್ತಾರೆ

ಕಂದ.

1274. ವಿಜಯಪುರಾಧೀಶಂ ನೆರೆ

The king and Queen of Vijayapura.

ತ್ರಿಜಗಸ್ತುತನೆನಿಸುವ ಪ್ರಭಾಶಂಕಮಹೀ
ಭುಜನಾಥನರಶಿ ವಂಸರ
ಸಿಜಲೋಚನೆ, ವಿಮಳಮತಿ, ಕರಂ ಸೊಗಯಿಸುವಳ್.

1275. ಮುರವೈರಿಗಮಿಂದಿರಿಗಂ

A son, Pavanavéga, is born to them.

ಸ್ಮರಕುವರನುದಯಿಸಿದೊಲ್ಪ್ರಭಾಶಂಕಂಗಂ
ಹರಿಣಾಕ್ಷಿವಿಮಳಮತಿಗಂ
ಸ್ಥಿರತೇಜಂ ಪವನವೇಗನುದಯಂ ಗೈದಂ.

ವಚನ.

1276. ಅಂತ್ ಉದಯಿಸಿ ಕೆಲವಾನುದಿವಸಕ್ಕೆ ಬೆಳದಂ; ಆ ಮನೋವೇಗಂ ಪೂರ್ವಭವದಮಿತ್ರತ್ವಕಾರಣವಾಗಿ ಪರಸ್ಪರ ಸ್ನೇಹದಿಂದಂ ಪುಷ್ಪದತ್ತರ್ ಎಂಬ್ ಉಪಾಧ್ಯರಲ್ಲಿ ವೋದುತ್ತಿರಲೂ.

ಮಹಾಸ್ರಗ್ಧರ ವೃತ್ತ.

1277. ಭರತಾರ್ಯಾ[1]ಖಂಡದೊಳ್ಶೋಭಿಪ ಜಿನವರರಂ ಪೂಜೆಯಂ ಮಾಡಿ [ಬೇಗಂ

These two princes great friends.

ಬರುತಿರ್ಪಾಗಳ್ವಿಮಾನಂ ನಡಿಯದಿರಲಿದೇನೆಂದು ತಾಂ ನೋಡಿ [ಯಾಖೇ
ಚರರಾ[2]ಜಂ ಚೋದ್ಯಮಾಗಲ್ಕ ಸಮಶರಣನಂ ಕಂಡುಮಲ್ಲಿಂದ ಬಂ [ದಾ
ದರದಿಂದಂ ಭಕ್ತಿಯಿಂದೊಂದಿಸುತ ಪರಕೆಯಂ ಗೊಂಡು ಕುಳ್ಳಿರ್ದು [ಮತ್ತಂ.

1. ಜಂಬುದ್ವೀಪದ ನವಖಂಡಗಳಲ್ಲಿ ಭರತ ಖಂಡ ಎಂಬದು ಒಂದು. ಅದರಲ್ಲಿರುವ ವಿಂಧ್ಯಾದ್ರಿಗೂ ಹಿಮಾಚಲಕ್ಕು ನಡುವಿನ ದೇಶದಲ್ಲಿ ಆರ್ಯರು ಪ್ರವರ್ತಿಸಿದರಿಂದ ಅದಕ್ಕೆ ಆರ್ಯಾವರ್ತ ಎಂಬ ಹೆಸರಾಯಿತು. 2. ಮನೋವೇಗ ದೇವತಾರಾಜನು. ಅವನ ರಥ ಮುಂದಕ್ಕೆ ನಡಿಯಲಿಲ್ಲ.

ಉತ್ಪಲಮಾಲಿಕಾ ವೃತ್ತ.

1278. ಎಂನ ಮಹಾಸಖಂ ಪವನವೇಗನು ಮಜ್ಜನಧರ್ಮವೆಂಬುದಂ

Manovéga asks a Jain saint: "give my friend understanding."

ಮುಂನಿಸನಾಲಿಸಂ ಪರಿದದೀಕ್ಷಿಸನಾತನ ಕರ್ಮಬಂಧ ತಾ
ಮಿಂನೆವರಂ ತೊಳಲ್ಚಿಸುವದೀಭವಮಾಲೆಯೊಳಾವನೇನುವಂ
ಸಂನುತಮಪ್ಪಿನಿಂ ಕಳೆವುಪಾಯುಮು ನೀಂ ಬೆಸಸ್ಸೈ ! ಮುನೀಶ್ವರಾ!

1. ನಂಮಜನಧರ್ಮ. 2. ಬಂದಿಪು ಸಂನುತನಾಗುವ ಹಾಗೆ.

ವಚನ.

1279. ಎಂದು ಮನೋವೇಗಂ ಭರದಿಂದ ತನ್ನಯ ಸಖಂಗೆ ಹಿತವಂ ಪಡೆ

Reply of the saint:

ಯಲ್ಕ್, ಆದರಧೈರ್ಯದಿಂ ಪಿರಿದ್ ಆನಂದದಿಂ ಬೆಸಗೊಳಲು, ಮುನಿ ನಿರಂತರದಿಂದ ಕರುಣಾಲೋಕನದಿಂ ಸುರುಚಿರದೇಹಮರೀಚಿ ನಿ ಮಿರ್ದು, ವರಭವ್ಯಜನೋತ್ಕರ ಚಿತ್ತತಿಮಿರವಮಂ ಪರಿಹರಿಸು ವದ್ ಎನೆ, ಮುನಿಲಲಾಮಂ ಇಂತೆಂದನು.

1. ನೆಟ್ಟಗಿದ್ದಂಥಾ ಸಾಖ್ಯದಿಂದಿದ್ದಂಥಾ ಜನರ ಸಮೂಹದ ಚಿತ್ತದ ಕತ್ತಲೆಯನ್ನು ಆ ಮುನಿಯು ದೇಹದ ಕಿರಣ ಪರಿಹರಿಸುವದೆಂಬ ಹಾಗೆ

ರಥೋದ್ಧತ ವೃತ್ತ.

1280. ಪಾಟಲೀಪುರದೊಳನ್ಯಶಾಸ್ತ್ರರೋ

"Go to the city of Pátlipura and refute their false religion"!

ದ್ಘಾಟ ಗೈದು ಕುಮತಾಗಮಂಗಳಾ
ಸ್ಫೋಟನಾಗಿಸೆ, ಮನೋರಥಂ, ಸದಾ
ನೀಟಸಮ್ಯಕುಮುದಕ್ಕು; ಕೇಳ್ನೃಪಾ !

ಕಂದ.

1281. ಎಂದು ಮುನೀಶ್ವರ ಮನದೊಲ

Joy of Manovéga.

ವಿಂದ ವೇಳಲ್ಕೆಂ, ಕೇಳ್ದು ಧರ್ಮಕ್ಕೆ ಸಖಂ

ಸಂದೇಹಿಲ್ಲದೆ ಬಂದಪ
ನೆಂದುತ್ಸಾಹವನು ತಾಳಿದಂ ಖಚರಸುತಂ[1].

1. ಮನೋವೇಗ (*the son of the gods*)

1282. ತಂನಯ ಸಖಿಂಗೆ ಸುಖ ಸಂ
ಪಂನತೆಯಂ ಕುಮತಕುಮತಿವೃತ್ತಿಯರಿದದ
ಕ್ಕುಂನತೆಯಂ ಮಾಳ್ಪೊಂದನು
ಮಂ ನೆನದಂ ಮುನಿಯ ಮತದಿ ವೃತ್ತ[1]ವಿಳಾಸಂ.

1. ಮನೋವೇಗ, ಮತ್ತು ಈ ಕೃತಿಯು ಮಾಡಿದ ಕವಿಯು ತನಗಿಟ್ಟುಕೊಂಡ ಹೆಸರು.

ವಚನ.

1283. *He returns home,* ಅಂತು ಮುನೀಶಂಗ್ ಬಲವಿಂದ್ ಜವಿ ಬೀಳ್ಕೊಂಡು ನಿಜಪುರಕ್ಕೆ ಬರುತ್ ಆನಂದದೋಳ್ ಮನೋವೇಗಂ ಮುನ್ನ ಬರಿತಿರ್ಪ ತನ್ನ ಸಖನಂ ಗಂಡು ಪರಸ್ಪರಾಲಿಂಗನಂ ಗೈಯೆ, ಎಲೆ ಮಿತ್ರಾ! ನಿನ್ನ ನಾಂ ಕೂಡಿ ನೋಡಿ ಕಾಣದೆ ಇನ್ನೆವರಂ ಚಿಂತಿಸುತಿರ್ದೆ; ನೀನ್ ಇನ್ನೆವರಂ ಎಲ್ಲಿಗೆ ಪೋಗಿರ್ದೆ? ಪೇಳೆಂದು ಪವನವೇಗಂ ಬೆಸಗೊಳೆ, ಮನೋವೇಗಂ ಇಂತೆಂದಂ :

ಕಂದ.

1284. ಭರತಾರ್ಯಾಖಂಡದ ಜಿನ
ವರರಂ ನಾಂ ಪಾದಪೂಜೆಯಂ ಮಾಡಿ ಬರು
ತ್ತಿರೆ, ಮುಂದೊಂದೆಡೆಯೊಳು ಪಲ
ತೆರದ ಮಣಿಯುತಮಾಟಕೂಟಪ್ರಾಸಾದದಿಂ

*and tells his friend Pavanavéga of the beauty of the city of Pátlipur.*

ವಚನ.

1285. ಒಪ್ಪುವ ಚಿತ್ತಹಾರಿಹಿರಣ್ಯಗರ್ಭಾಲಯಗಳಿಂದಿರೆ,[1] ಯೇಕದಂಡಿ[2] ತ್ರಿದಂಡಿ[3] ಹಂಸ[4] ಪರಮಹಂಸ[5] ಭೂತಿಕಾದಿ[6]ಲಿಂಗಿ[7]ಪ್ರಕಟಬ್ರಾಹ್ಮಣ್ಯ ವೇದಘೋಷವರಘೂರ್ಣಾಯಮಾನಪಾಟಳೀಪುತ್ರಪುರವಂ ನೋಡಿ ಸೋಲ್ತು ಪೊರಮಡಲಾರದೆ ಇರ್ದನ್ ಎನಲ್, ಆಗಪವನವೇಗನ್ ಇಂತ್ ಎಂದನು :

1. ಬ್ರಹ್ಮನ ಗುಡಿಗಳು. 2. ಒಂದು ದಂಡ ಹಿಡಕೊಂಡ. 3. ಮೂರು ಕೋಲು ಹಿಡಕೊಂಡ ಸನ್ಯಾಸಿಗಳು. 4. ತಪಸಿಗಳಲ್ಲಿ ಶ್ರೇಷ್ಠರು. 5. ಅವಧೂತರು ಅರಿವಿಮುಂತಾದದ್ದೆಲ್ಲಾ ಬಿಟ್ಟವರು. 6. ಶಾಸ್ತ್ರ ಹೇಳುವವರು. 7. ಲಿಂಗಧರಿಸಿದಂಥಾ ಆರಾಧ್ಯ ಬ್ರಾಹ್ಮಣರು.

ಕಂದ.

1286. ಈ ಚಲ್ವಮುಪ್ಪ ಪುರಮಂ
ಖೇಚರಪತಿ ! ನೋಡಲೆಂದು ಪೋಗುತ್ತಿನಗಂ
ಸೂಚಿಸದೆಜಗುಳ್ದೀವರ
ಲೋಚನಕಾನಂದವಾಗೆ, ತೋರೀಗಳದಂ !

Pavanavéga very anxious to see it also.

1287. ಎನೆ ಕೇಳ್ದು ಮನೋವೇಗಂ
ವಿನಯದೊಡನೆಂದನಾಗಳೆ ಮುದದಿಂ : ನೀವೇ
ಳ್ದನುನಯದಿಂ ರವಿ ಯೊಗೆವೊ
ತ್ತಿನೊಳೆ ನಾಳೆ ಯಲ್ಲಿಗೆ ನೀ ಸಹ ವೊರಮಡುವಂ !

Manovéga takes him to that city.

ವಚನ.

1288. ಎಂದು ವಡಂಬಡಿಸಿ ಪುರವ ಪೊಕ್ಕು ನೇಸರಿ ಮೂಡಲುಂ, ಮುನಿವರಂ ಪೇಳ್ದ ವೃತ್ತಾಂತಮಂ ಚಿತ್ತದೊಳ್ ನೆನದು ಪವನವೇಗನಂ ಕರಿಸಿ ಶುಭಮುಹೂರ್ತದೊಳ್ ಪಯಣಮಂ ಮಾಡಿ ಪೋಗುತ್ತಂ.

ಶಾರ್ದೂಲವಿಕ್ರೀಡಿತ ವೃತ್ತ.

1289. ಮಾರ್ತಾಂಡೋದಯಕಾಲದೊಳ್ಪವನವೇಗಂ ತಾನುಮುಂ ತೀ[ವ್ರದಿಂ
ಸಾರ್ತಂದರ್ಸಲೆ ಪಾಟಲೀಪುರವರೋದ್ಯಾನಕ್ಕೆ ತಾಮಿರ್ವರುಂ
ಕೀರ್ತಿಶ್ರೀಯುತರಲ್ಲಿ ಪುಷ್ಪಕವಿಮಾನದ್ವಂದ್ವಮಂ ಬೈತು ಸಂ
ಪೂರ್ತಿಪ್ರಾಯದಳಂ ಕೃತಿಪ್ರಕರವಸ್ತ್ರಾದ್ಯುದ್ಯಶೋಭಾನ್ವಿತರ್.

ಕಂದ.

1290. ತೃಣಕಾಷ್ಟಭಾರಮಂ ಪೊ
They enter, in the disguise of grass and wood-cutters, the temple of Brahma in that city.
ತ್ತಣಿಯರುದ್ಯಾನವನದಿಂ ಪೊರಮಟ್ಟಾಪ
ಟ್ಟಣದ ಕಮನೀಯತಱಮೂ
ಡಣದ ಗೋಪುರದಬ್ಜಭವನಗೃಹಮಂ ಪೊಕ್ಕರ್.

ವಚನ.

1291. ಅಂತು ಪೊಕ್ಕು ಪುಲ್ಲ ಕಟ್ಟಿಗೆಯ ಪೊರೆಯಂ ಇಳುಪಿ, ಭೇರಿಯಂ
Wonder of the brahmans at their appearance,
ಪೊಯಿದು ಕುಳ್ಳಿರಲ್ಕೆ, ಆ ಭೇರಿಯ ರವಂ ಕೇಳ್ದು ವೇದಪಾರಾ
ಯಣರುಂ, ಶಾಸ್ತ್ರ[1] ಚತುರ್ಮುಖರುಂ, ತರ್ಕಕರ್ಕಶರುಂ ಅಪ್ಪ ತ
ತ್ಪುರದ ವಿಪ್ರಜನಗಳೆಲ್ಲ ಬಂದು ಅವರ ತೇಜಮಂ ಕಂಡು ಇವರು
ಕಾರಣಪುರುಷರೆಂದು ವಿಷ್ಣುವಿಕಲ್ಪದಿ ನಮಸ್ಕಾರಂ ಗೈದು ಮ
ತ್ತಂ ಇಂತ್ ಎಂದರ್.

1. ಬ್ರಹ್ಮನಂತೆ ಶಾಸ್ತ್ರಬಲ್ಲವರು. 2. ವಿಷ್ಣುವೇನೋ ಎಂಬ ವಿಕಲ್ಪದಿಂದ.

ವಿಭೂತಿ ವೃತ್ತ.

1292. ಆವದೇಶ ನಿಮ್ಮದಿಂ
and conversation with them.
ನಾವಶಾಸ್ತ್ರ ಬಲ್ಲಿರೈ ?
ದಾವವಿದ್ಯ ಬರ್ಕುಗುಂ ?
ನೀವು ವೇಳಿ ಬೇಗದಿಂ !

ಕಂದ.

1293. ಎನಲವನಿತಳಮೆಲ್ಲಮು

Their answer. ಯಿನಿಸುಳಿಯದೆ ನೋಡುತ ಬಂದೆವೀಪ್ಪುರಮು ನೆ

ಟ್ಟನೆ ನೋಡಲೆಂದು ಶಾಸ್ತ್ರಮು

ನನಿಶಂ ಕೇಳ್ದರಿಯೆವಾವವಿದ್ಯದೊಳನಿತುಂ.

ವಚನ.

1294. ಎಂದಡ್, ಅವರ ಇಂತ್ ಎಂದರು : ವಿದ್ವಾಂಸರಾದವರು ವಾದಾರ್ಥ

Remonstrances of the brahmans. ದಿಂ ಬಂದು ಭೇರಿಯ ರವಂ ಮಾಡಿ ವಾದಂ ಗೆಲ್ದಲ್ಲದೆ ಸಿಂಹಾಸನ

ದೊಳು ಕುಳ್ಳಿರ ಬಾರದ್ ಎನೆ, ಯಾದಡೆ, ಮಾಣಲಿ ಯೆಂದು ಸಿಂ

ಹಾಸನದಿಂದ್ ಇಳಿದು ಕುಳ್ಳಿರೆ, ಮತ್ತೆ ಯಾವಿಪ್ರರ್ ಇಂತ್ ಎಂದರ್,

ಶಾರ್ದೂಲವಿಕ್ರೀಡಿತ ವೃತ್ತ.

1295. ಈರೂಪೀ ಬಲಿವೀರ್ಯಕಾರ್ಯ ಕಮನೀಯಂ ತೇಜಮೆಂಬೆಲ್ಲ

[ವಿಂ

ತಾರೆಯ್ವೆಲ್ತೃಣಭಾರಮಂ ತಳೆದು ನೀಚಾಚಾರದಿಂ ಬಾಳ್ವ ವಿ

ಸ್ತಾರಂ ಬೆರ್ಥ[1]ವಿದೇಕೆ? ಪೇಳ ! ಯೆನಲೇಂ ಧರ್ಮಾರ್ಥಕೀಯಂ

[ದದಿಂ

ದಾರುಂ ಬಾಳ್ದವರಿಲ್ಲ ನಿಂಮ ಮತದೊಳ್ನೀವೆಲ್ಲರುಂ ಪೇಳಿರೇ.

1. ಬೆರ್ಥ=ವ್ಯರ್ಥ(ತದ್ಭವ.)

ವಚನ.

1296. ಎನಲ್ ಇಂತಪ್ಪ ವಿಭವವನುಳ್ಳವರು ಯಿನಿತು ನೀಚಾಚಾರದಿಂ

ಬಾಳ್ದರ್ ಎಂಮ ಮತದೊಳ್ ಉಳ್ಳಡೆ, ಪೇಳಿಂ ಎನೇ.

ಚಂಪಕಮಾಲಾ ವೃತ್ತ.

1297. ಶಿರಿಯ ಮನಃಪ್ರಿಯಂ[1] ಭುವನಪಾಲಕನುಂನತಮೂರ್ತಿ, ಕಾಂ [ಸ್ತುಭಾ

Proof, that Vishnu cannot be god, if what is written of him in the Puránas, is true.

ಭರಣನೆನಿಪ್ಪ ವಿಷ್ಣು ದನ ಗಾಯನೆ? ನಂದನಕಂದನಾಗಿ ಕಿಂ
ಕರತೆಯ ಗೈಯ್ಯನೇ? ನರನ[2] ಸಾರಥಿಯಾಗಿ ಪೃಥಾತನೂಭವ
ನಿರವಿಸೆ, ಕೌರವೇಂದ್ರನ ಸಮಿಾಪಕೆ ಹೋರಿಗನಾಗಿ ಹೋಗನೇ?

1. ಲಕ್ಷ್ಮಿಯ ಗಂಡ. 2. ಅರ್ಜುನ.

ಕಂದ.

1298. ಶಿರಿ ತನಗೆ ಕಾಂತೆ, ಗಡ! ಲೋ
ಗರದನವ ಕಾಯಲೇಕೆ? ಸಕಲಜಗಮಂ ನೆರೆ
ಪರಿಪಾಲಿಸುವಾತಂ ತಾ
ನರನಾಗಿರ್ಪುದದೇತಕೆ? ಚೋದ್ಯಮಿದೆಲ್ಲಂ!

ವಚನ.

1299. ಮತ್ತಂ ಅಲ್ಲದೆ ನಿತ್ಯದೇವಂ ಜನನಮರಣವರ್ಜಿತಂ ಚಿನ್ಮಯಂ ಎಂಬಡೆ, ಅದು ಘಟಿಸಿದ; ಅದ್ ಎಂತೆನೆ,

ಅನುಷ್ಟುಪ್ ಶ್ಲೋಕ.

1300. ಮತ್ಸ್ಯಃಕೂರ್ಮವರಾಹಶ್ಚ
ನಾರಸಿಂಹಶ್ಚವಾಮನಃ
ರಾಮೋರಾಮಶ್ಚಕೃಷ್ಣಶ್ಚ
ಬೌದ್ಧಃಕಲ್ಕಿದಶಾಕೃತಿಃ.

ವಚನ.

1301. ಎಂದ್ ಇಂತು ಸಾವುಪುಟ್ಟುಂಗಳುಳ್ಳದರಿಂದ್, ಅನಿತ್ಯನುಂ, ಜರಾಮರಣಾನ್ವಿತನು; ತಿರ್ಯಗ್ಜಾತಿಯೋಳ್ ಪುಟ್ಟಿದರಿಂದ್, ಅಜ್ಞಾನಿಯುಂ

ಸಂದೇಹಮಿಲ್ಲ ; ಮತ್ತಂ ಇವು ಜನನಮರಣಂಗಳ್ ಅಲ್ಲದಿರ್ದಡೆ, ವಿನೋದವೊ? ನಿತ್ಯಕರ್ಮಾನುಷ್ಠಾನವೊ? ಪೇಳಿರಿ ! ಬರಿದೆ ನಂಮಂ ನೀಚಾಚಾರದೊಳ್ ನಡದಿರ್ ಎಂಬಿರ್ ಎನೆ, ವಿಪ್ರರೆಲ್ಲರ್ ನಿರುತ್ತರರಾಗಿ ಜಯವಾದಿಗಳ್ ನೀವೆಂದು ಜಯಪತ್ರಮಂ ಕೊಡೆ, ಕೊಂಡು ವಿಮಾನವ ನಿಕ್ಷಿಪ್ತಮಾಡ್ದ[1] ಉದ್ಯಾನಕ್ಕೆ ಬಂದು ನೇಸರ್ ಮುಳಿಗಿ ಮೂಡುವರಿಗೆ, ನಿದ್ರಾಮುದ್ರಿತರಾಗಿ ಉದಯವಾಗಲ್ ಎದ್ದರು.

1. ಭೂತಕಾಲದ ಶಬ್ದ ನ್ಯುನ, ಮಾಡಿದ. ವ್ಯಾ. ಸೂ.

## EXAMINATION OF ALL THE GODS.

### 3. ಸರ್ವದೇವತಾ ಪರಿಕ್ಷೆ. (3ನೇ ಆಶ್ವಾಸ.)

ಮಾಲ್ಯವೃತ್ತ.

1302. ಭರವಸಂ ಮರುದಿನಂ ಪಿರಿದಾಗಿ ನಟ್ಟನಾಭರಣಂಗಳೆಲ್ಲಮಂ ಬೈ
[ತು ತಾಂಬೇಗದಿಂ
ವರಸಖಂ ಬೆರಶಿ ಖೇಚರಚಕ್ರವರ್ತಿ ಬೇಡರ ರೂಪನಾಂತು ಬಿಲ್ಲಂ
[ಬು ತಾ ಹಸ್ತದಿಂ
ಧರಿಸಿ ಯುದ್ಧದ ಸಘಾಟದಲಿಂದಲೊಂದು ಬೆಕ್ಕನು ತಾ ವಿನೋದ
[ದಿಂದಿಕ್ಕಿ ಯಾ ಪಾಟಲೀ
ಪುರದುಮಾಪತಿದಿಶಾವರಕ್ಕೈದೆ ಬಂದು ಗೋಪುರದೊಳ್ವಿರಾಜಿಪ
[ಬ್ಜೋದ್ಭವಾವಾಸಮಂ.

They enter the temple of Brahma in the disguise of hunters,

ಕಳಾಭಾಷಣ ವೃತ್ತ.

1303. ಪೊಕ್ಕು ಭೇರಿಯನು ಪೊಯ್ದುರೆ ವುನ್ನತಪೀಠದೊ
ಳ್ಕುಕ್ಕಿರಲ್ಕದರ ಮಾ[1]ರವಮೋಣ್ದೆಶೆಯಲ್ಲಮಂ

through the north-eastern gate.

1. ಮಹಾರವ.

ತೆಕ್ಕನೊತ್ತರಿಶಿ ತೀವಿರೆ, ಕೇಳ್ದು ಪುರಾಣಸಂ
ಪೆರ್ಕಱೆಂಬ ವರವಿಪ್ರಜನ ನೆರದೆಲ್ಲರುಂ.

ಕಂದ.

1304. ಬಂದೊಳಗಂ ಪೊಕ್ಕೀಕ್ಷಿಸಿ
The learned brahmans come together.
ಯಂದಿರದೆ ಯೆಂತೆಂದು ಭೇರಿಯಂ ಪೊಯ್ದಿರಿ ? ಯೇ
ನೆಂದುನ್ನತಾಸನದೊಳಾ
ನಂದದಿ ಕುಳ್ಳಿರ್ದಿರಿದೇನೆನಲವರೆಂದರ್ :

1305. ಕುಡುಪಿರ್ದೊಡೆ, ದುಂದುಭಿಯಂ
Interrogations.
ಪೊಡೆದೆವು; ಜನವೆಲ್ಲಂ ಬಂದು ನಲುವಿಂ ಕುಳ್ಳಿರು
ವೆಡೆ ಯೆಂದು ಕುಳಿತೆವು; ಪೊಲ್ಲ
ದಡೆ, ಹೊಲ್ಲಮೇನೆಂದಡಾದ್ವಿಜರಿಂತೆಂದರ್ :

ವಚನ.

1306. ಮತ್ತಂ ಈ ಪುರದೊಳು ವಿದ್ವಾಂಸರಾದವರು ವಾದಾರ್ಥದಿಂ ಬಂದು ಭೇರಿಯಂ ಪೊಯ್ದು ವಾದಂ ಗೆಲ್ದಲ್ಲದೆ ಸಿಂಹಾಸನದೊಳ್ ಕುಳ್ಳಿರ ಬಾರದ್ ಎನೆ, ಯಾದಡ್ ಅದು ಮಾಣಲಿ ಯೆಂದು ಸಿಂಹಾಸನದಿಂದ್ ಇಳಿದು ಕುಳ್ಳಿರೆ, ನೀವು ಬಂದ ವೃತ್ತಾಂತವಂ ಪೇಳ್ ! ಎನೆ, ಈ ಬೆಕ್ಕಂ ಮಾರಲ್ ಬಂದೆವು ಎಂದೇ ಎನಲು, ಮತ್ತಂ ಅವರ್ ಇಂತ್ ಎಂದರ್ :

ಮಹಾಸ್ರಗ್ಧರ ವೃತ್ತ.

1307. ಬೆಲೆ ಯೇನೀಬೆಕ್ಕಿಗರ್ಘಂಬಗೆವಡೆದರ ಸಾಮರ್ಥ್ಯವೇನೆಂದು ವಿಪ್ರ
Explanations about the cat, they had brought with them.
ರ್ನಲುವಿಂದಂ ಕೇಳಲಾಗಾಕೃತಕಶಬರನೆಂದಂಮಸಂಖ್ಯಂ ! ಸಹ

[ಸ್ರಂ

ಬೆಲೆ ! ಈರೇಳ್ಯೋಜನಂ ಮೂಷಕವಿರಲಿದರೇಣಾಸೆಯೊಳ್ಸಾವು
[ಗುಂ ; ಕೇ
ವಲಮೇ ಸಾಮರ್ಥ್ಯವೆಂದುಂಮುಸರಲದರ ಸರ್ವಾಂಗಮುಂ ನೋ
[ಡುವಾಗಳ್.

ಕಂದ.

1308. ಅದರ ಕಿವಿ ಶೀಳ್ದೊಗೆವ ರ
ಕ್ತದ ಪನಿಯಂ ಕಂಡಿದೇನೆನಲ್ಮರದಿರೆ, ಕ
ಚ್ಚಿದುದೊಂದಾಖುವೆನಲ್ಕೇ
ಳಿದುವೆ ಯಸಂಭಾವ್ಯವೆಂದು[1] ವಿಪ್ರರ್ನಕ್ಕರ್.

1. ಆಗದು.

1309. ನಗುತಿರೆ, ಕಿರಾತರೆಂದ
By one defect many good qualities not spoiled in men.
ರ್ನಗಲೇಕವಗುಣದ ಲೇಶವಿರ್ದೊಡೆ, ನಿರುತಂ
ಸುಗಣ ಬ್ರಾತಂ ಕೆಡವುದೆ ?
ಜಗದೊಳಗಂ ನರನ[1]ದೇಕೆ ? ನೀವರಿಯೆ[2]ದರೇ ?

1. ಷಷ್ಠಿ.=ನರನ ಸುಗುಣವ್ರಾತ. 2. ಅರಿಯದವರೇ.

ವಚನ.

1310. ಎನೆ, ನಾವರಿಯೆವು ಅಂತಪ್ಪವರಂ; ನೀವ್ ಅರಿವರ್ ಅಪ್ಪೊಡೆ, ಪೇ
Speech of Manovéga.
ಳಿ ! ಯೆನೆ, ಮನೋವೇಗಂ ಪೇಳಲ್ ನೆಗಳ್ದಂ :

ಕಂದ.

1311. ವಸುಧಾವನಿತೆಯ ನಾಭಿ ಯ
*a.* the unbelieving frog;
ನಿಸುವ ಸರೋವರದೊಳೊಂದು ಮಂಡೂಕಂ ವ
ರ್ತಿಸುತಿರ್ಪುದದರ ಸೊರೆಗಂ
ಅಸವಸ ಸಿತಪಕ್ಷ[1]ನೊಂದು ಬರೆ, ಕಂಡಾಗಳ್,

1. ಬಿಳಿ ರೆಕ್ಕೆಯುಳ್ಳವನು=ಹಂಸ.

ಮತ್ತೇಭವಿಕ್ರೀಡಿತ ವೃತ್ತ.

1312. ಬರವೆಲ್ಲಿಂದ? ಮರಾಳ! ವಾರಿನಿಧಿಯಿಂ; ವಿಸ್ತಾರಮೇ ವಾರ್ಧಿ? ವಿ
ಸ್ತರವೀಕೂಪದ ಪಾಟ ಯಪ್ಪುದೆ? ಧಿಟಂ ಪೇಳೆಂದೆನ ಲ್ವಾರ್ಧಿಗಂ
ಮೆರವೀಚಾರುವಿಯತ್ತಳಿಕ್ಕೆ ಯೆಣೆ ಇಲ್ಲೆಂದೆಂಬುದಂ ಕೇಳ್ದು ದು
ರ್ಧರನಂದಾಗಳೆ ನಕ್ಕುದೆಂಬ ಕಥೆ ಯುಂಟೆಂತಪ್ಪರಿಲ್ಲಿಲ್ಲವೇ?

ವಚನ.

1313. ಅಂತ್ ಎನಲ್, ಇಂತಪ್ಪವರ್ ಎಮ್ಮ ಸಭೆಯೊಳ್ ಇಲ್ ಎನೆ, ಮತ್ತಂ ಆ ದುರಾಚಾರ ಕಥೆಯವರ್ ಉಳ್ಳಡೆ, ಪೇಳೆಂಮ್ಮೆವ್ ಎನೆ, ಯಾಕಥೆ ಯಂತ್ ಎನೆ, ಮನೋವೇಗಂ ಪೇಳ್ದಂ; ಸಾರಾಷ್ಟ್ರದೇಶದ ಕೋಟಿಗ್ರಾಮದೊಳು ಕಡುವಂಕರ್ ಎಂಬ್ ಈರ್ವರು ಗ್ರಾಮಿಗಳ್; ಅವರೋರ್ವರೋರ್ವರೊಳು ಸ್ಪರಿಸದಿರುತಿರೆ, ಆವಂಕಂ ವ್ಯಾಧಿಯಿಂ ಕಂಠಗತ[1]ಪ್ರಾಣನಾಗಿರೆ, ಪುತ್ರ ಬಂದು ಬೊಪ್ಪಾ! ಪರತ್ರಮಂ ಸಾಧಿಸಿಕೊಂಬುವದಕ್ಕೆ ದಾನಧರ್ಮಮಂ ಮಾಡುವದ್ ಎನೆ, ಕರದ್, ಎಲೆ ಮಗನೆ! ನೀನ್ ಯನಗೆ ಧರ್ಮಮಂ ಮಾಡಿ ಕೊಡುವೆ ಯಪ್ಪಡೆ, ನಾಂಪೇಳ್ದಂತೆ ಮಾಡು! ಎನೆ, ಕರಂ ಬಳಿತು ಪೇಳ! ಮಾಳ್ಪೆನ್; ಎನೆ, ನಾಂ ಸಾಯಲೊಡನೆ, ಉತ್ಸಹ ನೆಗಪಿ ಪೆಣನ್ ವೈದು ಕುಡುನ್ ಇರ್ದ ಕೈಮುಂಜಗಿಯ ಕಂಭದಲ್ಲಿರಿಸಿ ಪೊದಿಸಿ ಪಿಡಿಸು ಯೆಷ್ಟ್ಯಯ! ನೀ ಸಾರ್ದ್ ಅಡಂಗಿ ನೀನ್ ಇರಲ್, ಆಗ ಮುಗುಳ್ದು ಕುಡುವಂ ಭರದಿಂ ಬಂದು ಪೊಯ್ಯೆ, ಶವ ಪುರಳ್ದು ಬೀಳ್ವುದು.

1. ಪ್ರಾಣಕಂಠದ ತನಕ ಬಂದಿತ್ತು=ಪ್ರಾಣೋತ್ಕ್ರಮಣ ಸಮೀಪವಾಗಿತ್ತು.

ಕಂದ.

1314. ಕೊಂದನಿವನೆನ್ನ ತಂದೆಯ
ನೆಂದಬ್ಬರಿಸಲ್ಕೆ, ಕೇಳ್ದು ನರಪತಿ ಯವನಂ
ಬಂಧಿಸಿ ಧನಧಾನ್ಯವ ತಾ
ನೊಂದುಳಿಯದೆ ಕೊಂಡನಾದಡೆನಗದು ಮೋಕ್ಷಂ !

ವಚನ.

1315. ಎಂದು ಪೇಳೆ, ಪೇಳ್ದಂತೆ ಮಾಡೆ, ಸರ್ವಸ್ವಮಂ ಕವರ್ದು ಕೊಂಡರ್ ಎಂಬ ದುರ್ಜನನ ಕಥೆ ಯಂತ್ ಅಪ್ಪವರು ನಿಮ್ಮ ಸಭೆಯೊಳ್ ಇರ್ದಡೆ, ಪೇಳಲ್ ಅಮ್ಮೆವ್ ಎನೆ, ಯಂತವರ್ ಎಮ್ಮ ಸಭೆಯೊಳ್ ಇಲ್ಲ್ ಅಂಜದೆ ಪೇಳಿಮ್ ! ಎನೆ, ಮನೋವೇಗಂ ಪೇಳ್ದಂ:

ಮಹಾಸ್ರಗ್ಧರ ವೃತ್ತ.

1316. ನಿರುತಂ ಕಾಷ್ಟೋಷ್ಟನಾಮಂನಗರವವರೊಳುಂ ಭೂತಮಾತಾಖ್ಯ [ವಿಪ್ರಂ
ವರದಿಂದಂ ಮುಂಜಿಯಂ ಗಟ್ಟಿಸಿದ ಬಳಿಕವಂ ವೇದಮಂ ನೋಡಿ [ಮೂವ
ತ್ತೊರುಷಂ ತಾಂ ಪಾಠ ಗೈವುತ್ತಿರದೆ ಪರರೊಳುಂ ಪೇಳ್ದನಲ್ಲಿಂ ಬ [ಳಿಕ್ಕಂ
ವರಯುಗ್ನೀಕನ್ಯಯಂ ಜೆನ್ನಿಯನೆ ಮದುವೆ ಯಾದಂ ಮನೋರಾ [ಗದಿಂದಂ.

*b.* the story of the envious man ;
*c.* the story of the incredulous brahman.

ವಚನ.

1317. ಅಂತ್ ಇಷ್ಟಭೋಗ ಸುಖಮನ್ ಅನುಭವಿಸುತ್ತಂ ಇರೆ, ಕೆಲವಾನುದಿವಸಕ್ಕೆ ಅತ್ತಲ್ ಉಪಾದಾನಪುರಾಧಿಪತಿ ಯಾಗಮಮಾಡಂ

ಲೆಂದು ಯೋಗ್ಯರಂ ಬರ ವೇಳ್ಡ್ ಅಟ್ಟೆ, ಭೂತಮತಿ ಪೋಗಲ್ ಉ
ದ್ಯುಕ್ತನಾಗಿ ಯಗ್ನನ್ ಎಂಬ ಶಿಷ್ಯಗಂ ಸತಿಯಾದ ಯಗ್ನಿಯಂ
ವಳಮುಂದಿರದಿ ಬೈತಿರಿಸಿ ಕೊಂಡಿರ್ ಎಂದ್ ಆಜ್ಞೆ ಗೊಟ್ಟು ಪೋಗೆ
ಲೊಡನ್, ಇವಳ್ ಇತ್ತಲ್ ಎನ್ನ ವಿಳಾಸವ್, ಎನ್ನ ಸೌಭಾಗ್ಯವ್,
ಎನ್ನ ವಿವೇಕತೆ, ಯನ್ನ ರೂಪುಸಂಪನ್ನಯವ್ವನವತಿ, ಎನ್ ಅಂಗ
ದ ಗಾಡಿ ವ್ಯರ್ಥವಪ್ಪವ್, ಇವು; ನೀ ಎನ್ನೊಳ್ ಆತು ಕೂಡೆ, ಸ
ಫಲ ಸತಿ! ನೀನ್ ಎನ್ನೊಳ್ ಆಗದ್ ಎನ್ನದಿರು! ಪರತ್ರಸೌಖ್ಯವ್
ಎಮಗ್ ಆಂಪುದೆನೆ, ಯಗ್ನನ್ ಇಂತ್ ಎಂದಂ:

ಕಂದ.

1318. ನೀನಪ್ಪಡೆ, ಗುರುವಿನ ಸತಿ
ಗೀನುಡಿ ನಿನಗುಚಿತಮಲ್ಲ; ಲೋಕಂಪಳಿಗುಂ;
ಭೂನಾಥಂ ದಂಡಿಪನಭಿ
ಮಾನದ ಕೇಡಪ್ಪುದೈದೆ ನರಕಕ್ಕಿಳಿಗುಂ.

ವಚನ.

1319. ಎನಲ್, ಆಧೂರ್ತೆ ಖಿದಖಿದಿಸಿ ನಕ್ಕು, ಪಾಪಂ ಪುಣ್ಯಂ, ಸ್ವರ್ಗನ
ರಕವ್ ಎಂದ ಆಡಿದ ಧೂರ್ತನ ಮಾತಿಗೆ ಬೆರಗಾದ ಪರೆಯಿಂ ನೋ
ಡಾ! ಪಾಪಪುಣ್ಯವ್ ಎಂಬ್ ಎರಡರ ಬಣ್ಣಮು ಆವುದ್? ಅದಂ ಬ
ಲ್ಲವರ್ ಆರು? ಸ್ವರ್ಗನರಕವ್ ಎಂಬ್ ಅವ್ ಎಲ್ಲ್ ಇರ್ಪವ್? ಅವಂ
ಕಂಡು ಬಂದವರ಼ರು? ಬರಿಯ ಮಾತಿಂಗೆ ಬೆರಗು ಗೊಂಡಿರ್ಪ
ಮೂರ್ಖನ ಕಂಡೆನ್ ಈಗಳ್; ಈ ಕಠಿಣವೃತ್ತಿಯಿಂ ಸಂಸಾರಸು
ಖಕ್ಕೆ ಇತರನಾಗಿ ಜನ್ಮವಂ ವ್ಯರ್ಥ ಮಾಡಿ ಕೆಡಿಸದೆ ನನೆಗೆ ಅನು
ಕೂಲವಾಗಿ ನಿಶ್ಚಿಂತೆಯಾಗಿರದೆ ಭ್ರಮೆ ಗೊಂಡವರಂತೆ ಮರಗು
ಗೆಟ್ಟೆ ಉಸುರದಿರ್! ಎಂದು ಮತ್ತಮ್ ಇಂತೆಂದಳು.

ಕಂದ.

1320. ಈ ಪ್ರಾಯದಲ್ಲಿ ನವಯುವ
ತೀಪ್ರೀತಿಗಳೆಲ್ಲ ಗಡ ! ಬಳಕ್ಕಾವುದೊ ! ಹೀ
ನಪ್ರಾಯವಾಗೆ, ಸುರತವ
ದ ಪ್ರಸ್ತುತವೆಂದು ಪಿರಿದೊಡಂಬಡೆ, ನುಡಿದಳ್.

ವಚನ.

1321. ಅಂತ್ ಅನೇಕತೆರದಿಂದ ಬಡಬಡಿಸಿ ಸಂಭೋಗಕೇಳಿವಿನೋದದಿಂದ ಇತರರಿವಾಟವುಂ[1] ಬಗೆಯದೆ, ಕುರಿ ಬಾಳೆಹಂಣ ಮೆಚ್ಚಿದಂತೆ, ವ್ಯಸನದ್ ಎಸಕದಿಂ ಮೈ ಯರಿಯದೆ, ಮನೆಮನವಾರ್ತೆಯಂ ಮರದು, ಲಜ್ಜೆಯಂ ತೊರದು, ಯಿರುತ್ತಿರೆ, ಕೆಲವು ದಿವಸಕ್ಕೆ ವುಪಾಧ್ಯಯರು ಬಪ್ಪ ದಿನವಾಯ್ತು ಎಂದು ಕೈಪೊತ್ತಂ ಬಿದ್ದ್ ಐದಿದವರಂತೆ, ಲೆಖ್ಖವುಂ ಮರದರಂತೆ, ಮುಗಿಲ್ ಮೇಲೆ ಬಿದ್ದರಂತೆ, ಗಲ್ಲಕ್ಕೆ ಕೈಯನ್ ಇಟ್ಟು ಚಿಂತಾಕ್ರಾಂತನಾಗಿ ಯಗ್ನನು ಇರೆ, ಕಂಡು ಯಗ್ನಿ ಇಂತ್ ಎಂದಳ್.

1. ಬೇರೊಬ್ಬರು ತಿಳುಕೊಳ್ಳುವದು=ಅರಿವಾಟ.

ಕಂದ.

1322. ಬಾಯುಳಿದ ಬೆಂಕಿಯಿಂದಂ
ನೀ ಯಾಕಿರುವಿ ? ಯಂದಡವನಿಂತೆಂದನುಪಾ
ಧ್ಯೇಯರ ಬರವುಂ ಸಮೀಪ
ವಾಯಿತುಮೇನೇವೆನೆಂದಡವಳಿಂತೆಂದಳ್.

1323. ಇಂದಿನಿರುಳೆರಡು ಪೆಣನಂ
ತಂದೀವುದುಮವಗಳ ನಿನಗುಪಾಧ್ಯೇಯರ್ಪೋ

ಪಂದು ನಿಯಮಿಸಿದ ಠಾವಿನೊ
ಳೊಂದೊಂದಂಮಿರಶಿ ಬಳಿಕ ಸುಡುವುದು ಮನೆಯಂ !

ಕಳಾಭಾಷಣಿ ವೃತ್ತ.

1324. ಅಂತು ಗೈದು ಧನವೆಲ್ಲಮ ಕೊಂಡುರೆ ತೀವ್ರನಿ
ಶ್ಚಿಂತೆಯಿಂದೆ ಪರದೇಶಕೆ ಬೇಗಬೋಳೀರ್ವರುಂ
ನಿಂತ ಠಾವಿನೊಳು ನಿಲ್ಲದೆ, ಪೋಗಿ ವಿಲಾಸದಿಂ
ಕಂತು ಕೇಳಿಸುಖದಿಂದಿರುತಿರ್ಪರವಂದಿರುಂ.

ವಚನ.

1325. ಅಂತು ಪೋಗೆ, ಪಿಂದೆ ವಿಪ್ರಂ ಬಂದು ಚಿಂದಿರ್ದ ಮನೆಯಂ ಕಂಡು ಚಿಂತಾಕ್ರಾಂತನಾಗಿ ವಳಗಂ ಪೋಗಿ ನೋಡಿ, ಯಗ್ನಿಯಂ ಪೋರಮಡಸ ಬಾರದೆಂದು ನಿಯಮಿಸಿದೆ; ಪೋರಮಡದೆ ಇಲ್ಲಿಯೆ ಸತ್ತರ್, ಎಂದು ದುಃಖಿತನಾಗಿ ಕಿರಿದಾನುಂ ಬೇಗಂ ಅಳುತ್ ಇರ್ದು ತಂನೊಳು ತಾನೆ ಸಂತೈಸಿಕೊಂಡು ತನ್ನ ಮನದೊಳ್ ಇಂತ್ ಎಂದ.

ಶ್ಲೋಕ.

1326. ಯಾವದಸ್ಥಿಮನುಷ್ಯಾಣಾಂ
ಗಂಗಾತೋಯೆಷುತಿಷ್ಠತಿ
ತಾವದ್ವರ್ಷಸಹಸ್ರಾಣಿ
ಪಿತಾಸ್ವರ್ಗೆಮಹೀಯತೆ

ಟೀಕು: ಮನುಷ್ಯರ ಎಲವು ಗಂಗೋದಕದಲ್ಲಿ ಯೆಷ್ಟು ಸಾವಿರ ವರುಷ ಇರುತ್ತದೋ, ಅಷ್ಟು ಸಾವಿರ ವರುಷ ಪರಿಯಂತರ ತಂದೆಯು ಸ್ವರ್ಗದಲ್ಲಿ ಪೂಜಿಸಲ್ಪಡುತ್ತಾನೆ.

ವಚನ.

1327. ಎಂಬ ನೀತಿಯಂ ನೆನೆದು ಇವರ್ ಎಂನ್ ಆಜ್ಞೆಯುಮೀರದೆ ಸತ್ತರು. ಇವರ್ ಅಸ್ಥಿಯಂ ಗಂಗಾನದಿಯೊಳ್ ಇಟ್ಟೆ ಅವರ್ಗಳಿಗೆ ಪುಣ್ಯಮಂ ಮಾಡಿ ಕೊಡುವೆನೆಂದು ಪಿರಿದು ಭರಂಗೈದು

ಚಂಪಕಮಾಲಾ ವೃತ್ತ.

1328. ಎರಡೆಡೆ ಯಸ್ಥಿಯಂ ದ್ವಿತಯ ಕುಂಭದೊಳಿಕ್ಕಿ ಕರದ್ವಯಂಗಳಿಂ
ಧರಿಯಿಸಿ ಪೋಗುತಿರ್ಪೆಡೆಯೊಳುಂ ಬರೆ ಬಟ್ಟೆಯೊಳಗ್ನಿಯುಗ್ನಿಯಿ
ಬ್ಬರು ಭರದಿಂದ ಕಂಡರಿವನೆಂದು ಪದಾನತರಾಗಿ ಭೀತಿಯಿಂ
ಕರಕಮಳಂಗಳಂ ಮುಗಿದಿರಲ್ಬಿಡದೀಕ್ಷಿಸಿ ನೀವು ದಾರೆನಲ್.

ವಚನ.

1329. ಅಂತ್ ಎನೆ, ಕೇಳ್ದು ತಾವ್ ಆಗ ಧೂರ್ತತೆಯನ್ ಎರೆಯನ್ ಅರಿದ್ ಏನೆಂದಪನೊ! ಯಂದ್ ಅಂಜಿ, ಯಾಂ ನಿಂಮ ಧಾತ್ರಯುಗ್ನಂ ಈಕೆ ನಿಂನ ವಲ್ಲಭೆ, ಯೆಂದು ಪೇಳೆ, ಕೇಳ್ದು ವಿಪ್ರನ್ ಇಂತೆಂದ.

ಕಂದ.

1330. ನಾನವರಸ್ಥಿಯನುಂ ಗಂ
ಗಾನದಿಯೊಳಗಿಡುವ ಭರದಿ ಪೋಗುತ್ತಿರೆ, ಕಂ
ಡೇನೆಂದು ಧೂರ್ತನಾಡುವೆ ?
ನೀನೆಂನೊಡನೆಂದವ ಕೋಪಿಸುತಂ ಪೋದಂ.

ವಚನ.

1331. ಅಂತು ಪ್ರತ್ಯಕ್ಷವಾಗಿ ಕಂಡು, ತನ್ನ ಕಿವಿಯಾರೆ ಕೇಳ್ದು, ನಂಬದ ಮೂಢನಂತವರು ನಿಂಮ ಸಭೆಯಲ್ಲ್ ಇರ್ದರೆ, ಪೇಳಲಂಮೆವ್

ಎನೆ, ಇಂತಪ್ಪ ಮೂರ್ಖರ್ ಎಂದು ನಂಮ ಸಭೆಯೊಳ್ ಇಲ್; ಅಂಜ
ದೆ ಪೇಳಿಂ ! ಎನೆ, ಮನೋವೇಗಂ ಪೇಳಲ್ ನೆಗಳ್ದ :

ಸ್ವಾಗತ ವೃತ್ತ.

1332. ನೀತಿಶಾಸ್ತ್ರವಖಿಳಾಗಮತತ್ವ
ವ್ರಾತದೊಳ್ವರಕಳಾವಿದರಪ್ಪ
ಭೂತಿ ಕಪ್ರತತಿಗೋರ್ವಗೃಹಸ್ಥ
ಖ್ಯಾತಿಗಾತಣಿಸೆ[1], ಬಂದರದೆಲ್ಲಂ.

*d.* the story of Mándavya, the saint.

1. ಖ್ಯಾತಿ ಬರುವಂತೆ.

ಕಂದ.

1333. ಅಲ್ಲಿಗೆ ಮಾಂಡವ್ಯಂ ಬರ
ಲೆಲ್ಲಾ ಕೋಪಿಸುತೆ ಪೋಗಲಾಯುಜಮಾನಂ
ತಲ್ಲಣಿಸಿ ಪೋಗಿ ನೀವ್ಯಾ
ರೆಲ್ಲಿಂ ಪೋದಪ್ಪಿರೆಂದಡವರಿಂತೆಂದರ್.

ಶ್ಲೋಕ.

1334. ಅಪುತ್ರಸ್ಯ ಗತಿರ್ನಾಸ್ತಿ
ಸ್ವರ್ಗೋ ನೈವಚ ನೈವಚ
ತಸ್ಮಾತ್ಪುತ್ರಮುಖಂ ದೃಷ್ಟ್ವಾ
ಪಶ್ಚಾದ್ಭವತಿ ಭಿಕ್ಷುಕ :

ಟೀಕು : ಮಕ್ಕಳಿಲ್ಲದವನಿಗೆ ಗತಿ ಇಲ್ಲ, ಸ್ವರ್ಗ ಇಲ್ಲವೇ ಇಲ್ಲ–ಆದ್ದರಿಂದ ಪುತ್ರ ಮುಖ
ವನ್ನು ನೋಡಿ (ಮಗನನ್ನು ಕಂಡು) ಭಿಕ್ಷುಕನು ಆಗುತ್ತಾನೆ.

ವಚನ.

1335. ಎಂದ್ ಈ ಶಾಸ್ತ್ರಾರ್ಥಂ ಉಂಟ್ ಅಪ್ಪುದರಿಂ, ನಿನಗೆ ಮಕ್ಕಳಿಲ್ಲ;
ನೀನ್ ಎಂಮ ಪಂಥಿಗೆ ಸಲ್ಲೆ ಯೆಂದು ನುಡಿಯೆ, ಮಾಂಡವ್ಯನ್ ಎ

He is advised to marry.

ನಗ್ ಏನುಕೃತ್ಯವು? ಎನೆ, ನೀನ್ ಬಂದು ಮದುವೆಯಾಗಿ ಮಕ್ಕ
ಳಂ ಪಡೆವುದ್! ಎನೆ ಮಾಂಡವ್ಯನ್ ಇಂತ್ ಎಂದಂ:

ಚಂಪಕಮಾಲಾ ವೃತ್ತ.

1336. ನೆರೆದೆಲೆ, ಜೋಲ್ದ ಪುರ್ಬು, ಕುಳಿದಕ್ಷಿಯುಗಂ, ತುಟಿಯಾರ್ದ್ರ, [ಬೋಡುಬಾ
ಯ್ದೆರೆಮಸಗಿರ್ದ ಮೋರೆ, ಯುಡಗಿರ್ದರವಕ್ಕುಳಿಸಿರ್ದ ಪೊಟ್ಟೆ, [ಮೋ
ಲ್ಶಿರ ಮಸಗಿರ್ಪ ಕಾಲುರಿದ ಬೆಂನುರೆ ಕಂಪಿಪ ಹಸ್ತಮಸ್ತಕಂ
ಪರಿರೆಸೆ, ತಾಪಸಂಗೆ ನೆರೆ ಪೇಸದೆ ಕನ್ಯೆಯನೀಯ ಬಲ್ಲರೇ?

ಕಂದ.

1337. ಎಂದಡೆ, ಸಮಸ್ತಭೂತಿಕ
ರುಂ ಧರ್ಮಂ ಪೇಳ್ದ ವೇದವಾಕ್ಯಕ್ರಮದಿಂ
ದಂ ಧಿಟವೆ ಮದುವೆ! ನೀನಿ
ಲ್ಲೆಂದನಲಾವೇದವಾಕ್ಯ ಯೆಂತೆನೆ, ಪೇಳ್ದರ್.

ವೇದ ವಾಕ್ಯದ ಪ್ರಕಾರ ನಿನಗೆ ಮದಿವೆ ಆಗ ಬಹುದು.

ಶ್ಲೋಕ.

1338. ನಷ್ಟೇ ಪುತ್ರೇ ಪ್ರವರ್ಜಂತೆ
ಕ್ಲೀಬೇಚಪತಿತೇಪತೌ
ಪಂಚಸ್ವಾಪತ್ಸುನಾರೀಣಾಂ
ಪತಿರನ್ಯೋವಿಧೀಯತೆ.

1339. ಆಹವೀಚಿರ್ವಿವೆಕ್ತಚ್ಛ
ಯದಿಪೂರ್ವಂವರೋಮೃತಃ

ಸಾಚೇದಕ್ಷತಯೋನಿಶ್ಚ
ಪುನಃಸಂಸ್ಕಾರಮರ್ಹತೀ.

1340. ಅಷ್ಟವರ್ಷಾಣಿದೀಕ್ಷಾಚ
ಬ್ರಹ್ಮಾಣೀತೋಷಿತಂನರಃ
ಅಪ್ರಸೂತಾಚಚತ್ವಾರಿ
ಪರತನ್ಯೋಸಮಾಚರೇತ್.

1341. ಮಾತ್ರಾಪಿತ್ರಾಭಗಿನ್ಯಾಚ
ಪುತ್ರಾರ್ಥಂ ಪ್ರಾರ್ಥ್ಯತೇನರಃ
ಯೇಭ್ಯೋತಾನಭಜೇತ್ಪೂಜ್ಯಂ
ಸಂಭವೇದ್ಬ್ರಹ್ಮಹಾಪುನಃ

ಟೀಕು; ಗಂಡನು ಪುತ್ರಹೀನನಾದರೆ ಹಾಗೂ ವ್ಯಂಗನಾದರೆ ಮತ್ತು ನಪುಂಸನಾದರೆ ಹಾಗು ಪತಿತ ನಾದರೆ ಹಾಗು ಪೋಡಿಹೋಗಿ ಗೊತ್ತಿಲ್ಲದ್ದಾದರೆ ಈ ಐದು ಆಪತ್ತುಗಳು ಪ್ರಾಪ್ತವಾದರೆ ಸ್ತ್ರೀಯರಿಗೆ ಮತ್ತೊಬ್ಬ ಗಂಡನನ್ನು ಮಾಡತಕ್ಕದ್ದು.

ಬಬ್ಬಾಕೆಯ ಗಂಡನು ಕೂಡವದಕ್ಕಿಂತ ಮುಂದಾಗಿ ಸತ್ತರೆ, ಆಕೆಗೆ ತಿರಿಗಿ ಮದಿವೆ ಮಾಡ ಯೋಗ್ಯವದೆ.

ಹೆಂಣು ಹುಡಗರಿಗೆ ಎಂಟುವರುಷ ಪರಿಯಂತರ ದೀಕ್ಷೆ ಇರುತ್ತದೆ. ಆಮೇಲೆ ಅವರು ಪುರುಷನಿಗೆ ಸಂತೋಷ ಪಡಲಿಕ್ಕೆ ಯೋಗ್ಯವೆ. ಅವರು ನಾಲ್ಕು ವರುಷದಲ್ಲಿ ಪ್ರಸೂತವಾಗದೆ ಹೋದರೆ ಮತ್ತೊಬ್ಬಗಂಡನು ಆಗಬೇಕು.

ತಾಯಿಯಿಂದ, ತಂದೆಯಿಂದ, ಸಹೋದರಿಯಿಂದ ಮನುಷ್ಯನು ಪುತ್ರಾರ್ಥವಾಗಿ ಬೇಡಲ್ಪಡುತ್ತಾನೆ. ಮನೋರಥವನ್ನು ತೀರಿಸಲಿಕ್ಕಾಗದೆ ಇದ್ದರೆ, ಅವರಿಗೆ ಬ್ರಹ್ಮಹತ್ಯ ದೋಷ ಹತ್ತುತ್ತದೆ.

ವಚನ.

1342. ಎಂದು ಭೂತಿಕರ್ ಪೇಳೆ, ಕೇಳ್ದು, ತನಗೆ ತಕ್ಕ ವಲ್ಲಭೆಯಂ ಪಲವು ದೇಶದೋಳ್ ತಿರಿಗಿ ಪಡೆಯದೆ ಚಿಂತಿಸುತಿರ್ದ, ತನ್ನ ತಂಗಿಯಪ್ಪ ಡಿಂಡಿಭಿ ಯೆಂಬ ರಂಡೆಯಂ ಕಂಡು ಪಲವು ತೆರದಿಂ ಬಡಂಬಡಿ

Mándavya in his old age married to his younger sister. A daughter, Dáye, born to them.

Consultations, as to who shall be the guardian of their girl during their absence.

ಸಿ ಮದುವೆ ಯಾಗ್, ಇಷ್ಟಭೋಗಸುಖಮಂ ಅನುಭವಿಸುತ್ತಂ ಇರೆ, ಕೆಲವು ಕಾಲಕ್ಕೆ ಯಾಡಿಂಡಿಭಿಗೆ ಗರ್ಭಂ ಪುಟ್ಟೆ ನವಮಾಸಂ ತೀವಿ ಬೆಸತಿಯಾಗೆ, ಪೆಣ್ಗೂಸಂ ದಾಯಿ ಯಂಬ ನಾಮಗ್ರಹಣಂ ಗೈದು ಸಲಹುತ್ತಂ ಇರೆ; ಕೊಡಗೂಸಂ ಪ್ರಾಯಕ್ಕೆ ಬೆಳದು ಬರೆ; ತಾಯಿ ತಂದೆಯುಂ ತೀರ್ಥಸ್ನಾನಾರ್ಥವಾಗಿ ಪೋಗಲ್ ಉದ್ಯುಕ್ತರಾಗಿ ಚನ್ನೆಯಪ್ಪ ಕನ್ಯಯಂ ಇನ್ ಆರ ಸಮೀಪದೋಳ್ ಇರಿಸಿ ಪೋಪೆನ್ ? ಎಂದು ಚಿಂತಾಕ್ರಾಂತರಾಗಿರ್ದು ಮಾಂಡವ್ಯಂಗೆ ಡಿಂಡಿಭಿ ಇಂತ್ ಎಂದಳ್:

ಕಂದ.

1343. ಪರಮೇಶ್ವರನ ಸಮೀಪದೊ

a. Shiva not to be trusted in this respect.

ಳಿರಿಸುಗುವಿೞಾಸುತೆಯನೆನಲು, ಡಿಂಡಿಭಿಗೆಂದಂ:
ಮರುಳತನಂ ಬೇಡಾತನ
ಪರಿಯಂ ಕೇಳೆಂದು ಪೇಳಲುದ್ಯುತ್ತನಾದಂ.

ಲಲಿತರಗಳೆ.

1344. ಪೂರ್ವದೋಳ್ಕಾಮಿನಿಯ ರೂಪಿಲ್ಲದಿರಲೂ,
ಗೀರ್ವಾಣತತಿ ಕಾಮದಿಂ ಬೇವುತಿರಲೂ,
1345. ಬಂದುದಿನವಜ ದೇವರಣ್ಯದೊಳ್ನಲಿದೂ
ಸಂದಾಮೃತದ ರಸಭರಿತಫಲವ ಸವಿದೂ
1346. ಸ್ಮರವಿಕಾರದಿ ಕಳೆ ಸಡಲ್ಬಿತ್ತು; ನದಿಯಾಗೀ
ಪರಿಯಲದರೊಳಗ್ಗುಟ್ಟೆ ಸತಿಯು ಮೊದಲಾಗೀ
1347. ಮೂವತ್ತು ಮೂರ್ಕೋಟಿ ಕನ್ನಿಕೆಯರಿರಲೂ,
ದೇವತೆಯರಿಗೆ ಸತಿಯನೀಶಂಗೆ ಕೊಡಲೂ,

1348. ಸರಸಿರುಹಭವ ಮಾಂಸದಾಸಕ್ತನಾಗೀ
ಸುರಮುನೀಶ್ವರರೆಲ್ಲರೇಕಸ್ಥರಾಗೀ

1349. ಮೊಲಲು ದೂಷಿಕು ಜಗದಜನವೆಂದುಮರಿದೂ
ಸಲೆತ್ವರದಲದ ಪರಿಹರಿಪ ಮನವ ಬಗೆದೂ

1350. ನರಯಾಗಫಣಿಯಾಗಹಯದಗಜಯಾಗಾ
ಖರಯಾಗಗೋಯಾಗಮುಜಮೃಗಗಳ್ಯಾಗಾ

1351. ಆದಿಯಾದಖಿಳಯಾಗಗಳ ಸಾದರದೀ
ಸಾಧನಂ ಬೆರಸಿ ರಾಗದೊಳು ಸತ್ವರದೀ

1352. ಮಾಡಿದಡಭೀಷ್ಟಾರ್ಥವಂ ಪಡೆಗುಮೆಂದೂ
ರೂಢಿಗೆಪ್ಪತ್ತು ಸೂತ್ರಗಳ ಮಾಡ್ಯೆಂದೂ

1353. ವಿರಚಿಸಿದನಬ್ಜಜಾತಂ ಛಂದದಿಂದಾ
ಭರದಿಂದಯಾಗ ಮಾಳ್ಪಾನಂದದಿಂದಾ.

ವಚನ.

1354. ಮತ್ತ ಪೇಳ್ದ ಸೂತ್ರಂಗಳ್ಗೆ ವೇದವಾಕ್ಯಮ್ ಎಂದು ಪೆಸರಿಟ್ಟು ಆ ಸಕಲ ಜನಂಗಳ್ಗ್ ಅವಂ ಸ್ವಯಂಭು ಯೆಂದು ಪ್ರಸಿದ್ಧಿಯಂ ಮಾಡಿದನ್ ; ಅದ್ ಎಂತ್ ಎನೆ :

ಶ್ಲೋಕ.

1355. ಗೋಸಾವಿತ್ರೀಂಪ್ರವಕ್ಷ್ಯಾಮಿ
ಸರ್ವಪಾಪವಿನಾಶನೀಂ ;
ದಂಡಾಗ್ರೇಷುಮರುದ್ದೇವೋ ;
ಜಿಹ್ವಾಗ್ರೇಚಸರಸ್ವತೀ ;

1356. ಕರ್ಣಯೋರಶ್ವಿನೀದೇವೌ ;
ಚಕ್ಷುಷೋಶ್ಶಶಿಭಾಸ್ಕರೌ ;
ಗವಾಂಶೃಂಗಾಗ್ರಭಾಗೇಷು
ಸುರೇಂದ್ರಾವಿಷ್ಟಭೂಸ್ಥಿತಃ ;

1357. ಮುಖೇಬ್ರಹ್ಮೋರಸಿಸ್ಕಂದೋ ;
ಲಲಾಟೇಚಮಹೇಶ್ವರಃ ;
ಕಕುದೇಚಜಗತ್ಸರ್ವಂ
ನಕ್ಷತ್ರಗ್ರಹತಾರಕಾಃ ;

1358. ಋಷಯೋರೋಮಕೂಪೇಷು ;
ಕೂರ್ಮಃ ಪಾದೇಷು ಸರ್ವದಾ ;
ಅಪಾನೆಸರ್ವತೀರ್ಥಾನಿ ;
ಪ್ರಸ್ರವಾಯಾಂಚಜಾನ್ಹವೀ ;

1359. ರೋಮಜೇತುಕ್ರಿಯಾದೇವಿ
ರಾಪ್ರೊಲಾಂಗಲಮಾಶ್ರಿತಾ
ಚತ್ವಾರಃಸಾಗರಾಃಪೂರ್ಣಾಃ ;
ಗವಾಂಗೇಷುಪಯೋಗತಃ

1360. ಖುರೇಷುಜಂಬುಕೋದೇವಃ
ಖುರಾಗ್ರೇಷುಚಪನ್ನಗಾಃ
ಜಠರೇಪೃಥುವೀಸರ್ವಾ
ಸಶೈಲವನಕಾನನಾ

ಟೀಕು: ಎಲ್ಲಾ ಪಾಪಗಳನ್ನು ನಾಶ ಮಾಡುವಂಥಾ ಗೋಸಾವಿತ್ರಿದೇವಿಯ ಲಕ್ಷಣವನ್ನು ಹೇಳುತ್ತೇನೆ: ಆ ದೇವಿಯ ದಂಡಾಗ್ರದಲ್ಲಿ ವಾಯು ದೇವನು ಇರುತ್ತಾನೆ, ನಾಲಿಗೆ ತುದಿಯಲ್ಲಿ ಸರಸ್ವತಿ ದೇವಿ ಯಿರುತ್ತಾಳೆ.

ಕಿವಿಗಳಲ್ಲಿ ಅಶ್ವಿನಿ ದೇವತೆಗಳು ಇರುವರು. ಯರಡು ಕಂಣುಗಳಲ್ಲಿ ಸೂರ್ಯ ಚಂದ್ರರು ಯಿರುತ್ತಾರೆ. ಕೋಡುಗಳಲ್ಲಿ ದೇವೇಂದ್ರನು ಇರುತ್ತಾನೆ.

ಮುಖದಲ್ಲಿ ಬ್ರಹ್ಮನು ಯಿರುತ್ತಾನೆ. ಎದೆಯಲ್ಲಿ ಕುಮಾರಸ್ವಾಮಿಯು ಯಿರುತ್ತಾನೆ. ಹಣೆಯಲ್ಲಿ ಈಶ್ವರನು ಇರುತ್ತಾನೆ, ಇಣೆಯಲ್ಲಿ ಎಲ್ಲಾ ಜಗತ್ತು ಹಾಂಗು ನಕ್ಷತ್ರ ಗ್ರಹಗಳು ಇರುತ್ತವೆ.

ಕೂದಲಗಳ ಮೂಲದಲ್ಲಿ ಋಷಿಗಳು ಇರುತ್ತಾರೆ, ಕಾಲುಗಳಲ್ಲಿ ಪಾದಾಭಿಮಾನಿ ದೇವತೆ ಇರುವದು, ಅಪಾನದ್ವಾರದಲ್ಲಿ ಎಲ್ಲಾ ತೀರ್ಥಗಳು ಇರುತ್ತವೆ, ಮೂತ್ರ ದ್ವಾರದಲ್ಲಿ ಗಂಗಾದೇವತೆ ಇರುವದು.

ಗಂಗೆದೊಗಲದಲ್ಲಿ ಕ್ರಿಯಾದೇವಿಯು ಇರುತ್ತಾಳೆ, ಬಾಲದಲ್ಲಿ ಜಲದೇವತೆ ಇರುವದು, ಮೊಲೆಗಳಲ್ಲಿ ಸಮುದ್ರದೇವತೆ ಇರುವದು.

ಖುರಗಳಲ್ಲಿ ಜಂಬುಕದೇವನು ಇರುತ್ತಾನೆ, ಖುರಗಳ ತುದಿಯಲ್ಲಿ ಸರ್ಪ ದೇವತೆ ಇರುವದು, ಹೊಟ್ಟೆಯಲ್ಲಿ ಗುಡ್ಡಗಳಿಂದ ಹಾಗುವನಗಳಿಂದ ಯುಕ್ತವಾದ ಪೃಥ್ವಿ ಇರುವದು.

ವಚನ.

1361. ಇಂತು ಗೋಶರೀರದೊಳಗೆ ಇವಗಳ ಸ್ಥಾಪಿಸಿ ಕೊಳ್ಳುವದಕ್ಕೆ ಮಾಡಿದ ಸೂತ್ರವು ಎಂತ್ ಎನೆ.

ಶ್ಲೋಕ.

1362.
ಶತ್ರುಯಜ್ಞೋಸುರಾಪಾನೆ
ಗೋಸವೇಸವ್ಯಸಂಗಮೇ
ಗವಾಂಮುಹೆಪಹುಂಹನ್ಯ
ದ್ರಾಜಸೂಯಶ್ಚ ಭೂಭುಜಃ.

1363.
ಬ್ರಹ್ಮಾಣಂಜುಹುಯಾದ್ವೈಶ್ಯಂ
ಜಿತವಂಚವಿಜಾಹುಹುಃ

ಶೂದ್ರಾಣಾಂಚಜಪಂಮಂತ್ರಂ
ತತ್ತನ್ಮಂತ್ರಕ್ರಮಂವಿದುಃ.

1364. ಅವ್ಯಣೆಮ್ಯಗಶಾಖೆಚ
ಪ್ರತ್ಯಕ್ಷಮ್ಯತದರ್ಶನಂ
ತತ್ಭಕ್ಷಣಂಖಾತ್ತುಪುಣ್ಯಂಚ
ತತ್ತ್ಯಾಜ್ಯಂನರಕಂವ್ರಜೇತ್.

ಅರ್ಥ 1. ರಾಜರಾದವರು: ಶತ್ರುಯಜ್ಞದಲ್ಲಿ ಸುರಾಪಾನಯಜ್ಞದಲ್ಲಿ ಗೋಮೇಧರಾಜಸೂಯದಲ್ಲಿ ಪಶುಗಳನ್ನು ಹೊಡೆಯತಕ್ಕದ್ದು. 2. ವೈಶ್ಯಜಾತಿಯುವರು ಶತ್ರುಗಳನ್ನು ಜೈಸುವದಕ್ಕೆ ಉದ್ಯುಕ್ತರಾದರೆ ಬ್ರಾಹ್ಮಣರಿಗೆ ಆಹುತಿ ಕೊಟ್ಟು ಅಂದರೆ ಅವರ ಪರಿಮುಖದಿಂದ ಯಜ್ಞಗಳ ಮಾಡಿದರೆ, ಸಫಲವಾಗುತ್ತದೆ. ಮತ್ತು ಶೂದ್ರರಿಗೆ ಜಪಮಂತ್ರಗಳೆ ಯಜ್ಞ. 3. ಹುಣ್ಣಾಗದೆ ಇದ್ದ ಅವಯುವಗಳುಳ್ಳ ಮೃಗವು ಪ್ರತ್ಯಕ್ಷ ಮರಣವನ್ನು ಹೊಂದುತ್ತಿರಲಾಗಿ, ಅದನ್ನು ಅದೇಕ್ಷಣಕ್ಕೆ ತಿನ್ನುವದೆ ಪುಣ್ಯ, ಬಿಡುವದೆ ನರಕ.

ವಚನ.

1365. ಎಂದ್ ಇಂತ್ ಅನೇಕ ತೆರದ ಸೂತ್ರಂಗಳಂ ಮಾಡಿ ಯಾಗೋದ್ಯೋಗಮಂ ಪ್ರಕಟಿಸಿ ಸಕಲಸುರಸಮುದಯಮಂ ಕರೆಯಲ್ ಅಟ್ಟಿದರ್; ಎಲ್ಲರುಂ ತಂಮ ತಂಮ ಕಾಂತೆಯರು ಬೆರಸ್ ಎಲ್ಲರುಂ ಅನೇಕವಿಭವಂಗಳಿಂ ಬಂದು ಸರೋಜಸಂಭವನಂ ಕಂಡು ಯಾಗಮಂಟಪದೊಳಗಂ ಬೆರಸು ವಡ್ಡೋಲಗಂ ಗೊಟ್ಟು ಕುಳ್ಳಿರಲ್, ಅಲ್ಲಿಗೆ ಸತಿ ಸಮೇತಂ ಈಶ್ವರಂ ಸಕಲ ಶೃಂಗಾರಸುನೃತ್ಯಮಂ ಆಡುತ್ತುತ್ಸಹದಿಂ ಗಗನಮಾರ್ಗದಿಂ ಬರುತಿರ್ಪಾಗಳ್;

ಚಂಪಕಮಾಲಾ ವೃತ್ತ.

1366. ಸತಿಯ ಲಲಾಟದೊಳ್ಕದಪಿನೊಳ್ಕರಳೊಳ್ಭುಜಯುಗ್ಮದೊಳ್ನ
[ಖ
ಕ್ಷತಮಿರೆ, ದೇವಕೋಟಿಗಳಭೀಕ್ಷಿಸಿ ನಕ್ಕಡೆ, ಧಾತೃಕಂಡು ಲ

ಜ್ಜಿತಮನನಾಗಿ ಅಂತವರನೀರ್ವರಮಂತಗುಳ್ಳೊಂದುಪಾಯಮಂ,
ಶತದಳಸಂಭವಂ ನೆನದು ಮಾಡಿದನಲ್ಲಿಗೆ ತಕ್ಕ ಸೂತ್ರಮಂ.

ಶ್ಲೋಕ.

1367. ವಿದ್ಯಾವಿತ್ತವಿಹೀನಾಢ್ಯಾ
ಶ್ಯೂದ್ರಕರ್ಮೋಪಜೀವಿನಃ
ತೇಸಂತಿದೂಷಕಾಶ್ರದ್ಧಾ
ನಂಗಹೀನಗುಣಾನ್ವಿತಾಃ

ಅರ್ಥ: ವಿದ್ಯದ್ರವ್ಯವಿಲ್ಲದವರು, ಶೂದ್ರಕರ್ಮದಿಂದ ಉಪಜೀವನ ಮಾಡುವವರು ಇವರು ಗುಣವಂತರಾದರೂ ದೂಷಕರು ಅಶ್ರದ್ಧರು.

ವಚನ.

1368. ಪೋದ್ ಅಳಿಯನ ಮಗಳನವ್ ಅವಗ್ನಿ ಗೈದು ಪೋಗಲ್ವೀಳೆ, ಕೇಳ್ದು, ರೋಷಮಂತಾಳ್ದು ಸಭೆಯಂ ಪೊಕ್ಕು ತನ್ನ ತಂದೆಯಪ್ಪ ಅರವಿಂದಸಂಭವನ ಮೇಲೆ ನಾಲಿಗೆಯಂ ಕೀಳ್ತಿಕ್ಕಿ ಹೋಮಕುಂಡದೋಳ್ ಬಿದ್ದು ಉರಿದು ಭಸ್ಮವಾಗೆ, ಪ್ರಾಣವಲ್ಲಭೆಯ ಸಾವಂ ಶೂಲಿ ಕಂಡೂ.

ಉತ್ಪಲಮಾಲಿಕಾ ವೃತ್ತ.

1369. ಕೋಪಿಸಿ ಹೋಮಕುಂಡಶಿಖಿಯಂ ನೆರೆ ನಂದಿಸಿ ತನ್ನ ದೇಹದೋಳ್
ಲೇಪಿಸಿಕೊಂಡು ತದ್ಭಸಿತಮೆಲ್ಲಮನಾಗಳೆ ಯಲ್ಲಮೆಲ್ಲಮಂ
ಗೋಪತಿವಾಹನಂ[1] ಶಿರಕರಾಂಘ್ರಿಸುಕಂಠದೊಳಾಂತು ಕೊಂಡು ವೈ
ರೂಪನುಮಾಗಿ ಹಾಸತಿ ! ಮಹಾಸತಿ ! ಯುಂದೆನುತಂ ವಿಯೋಗ
[ದಿಂ

1. ಎತ್ತು ಎಂಬ ವಾಹನ ಇದ್ದವನು=ಶಿವ.

ಕಂದ.

Shiva, after losing his wife, behaves shamefully.

1370. ಅಳಲುತ್ತಂ ಬಳಲುತ್ತಂ
ಕಳವಳಿಸುತ್ತಳುತಾಯಾಸದೊಳುರೆ ವಿರಹಾ
ನಳದಿಂ ಬೇವುತ್ತಲ್ಲಿಂ
ತಳರ್ದನತನು[1]ಪ್ರತಾಪವೇಂ ಕೇವಳವೋ !

1. ಶರೀರವಿಲ್ಲದವನು=ಮನ್ಮಥ.

ವಚನ.

1371. ಅಂತು ತಳರ್ದು ತನುವಂ ತಾ ಮರೆದು ಸರ್ವಸುಖಮಂ ತೊರದು ಪೆರರಂ ನೋಡದೆ ದೆಶೆಯಂ ಕಾಣದೆ ಕಂಣ್ಗೆಟ್ಟು ಬಾಯಂ ಬಿಟ್ಟು ವಿಕಳನಾಗಿ ದೇವಾರಣ್ಯಮಂ ಪೊಕ್ಕು ಮುಂತೆ ಪೋಗೆ, ಕೆಲಂಬರ್ ತಾಪಸರ್ ಕಂಡ್ ಈತಂ ದಾರ್? ಎನೆ, ಕೆಲಂಬರ್ ಈತನ್ ಅಪೂರ್ವ ದರ್ಶಿನಿ, ಎನೆ, ಕೆಲಂಬರ್ ಈತ ಪಿಶಾಚನ್, ಎನೆ, ಕೆಲಂಬರ್ ಈತಂ ಮುಕ್ತಿಯ ಪಡೆಯಲ್ ಎಂದ್ ಉಗ್ರೋಗ್ರತಪಮಂ ತಾಳಿರ್ದನ್, ಎನೆ, ಮತ್ತೆ ಕೆಲಂಬರ್ ಎಂತ್ ಎಂದರ್.

ಕಂದ.

1372. ಈಯಾಕಾರವಿಕಾರದೆ
ಸಾಯೋಜ್ಯಮನೈದಲಾರ್ಪಡೆ, ನ್ಯಾಯಮೋ ? ತಾ
ನ್ಯಾಯಮದಪ್ಪಡೆ, ಸುತಪ
ನ್ಯಾಯಮದಿಂ ನಡೆವುದೆಂದು ಕೆಲಬರ್ನುಡಿದರ್.

ವಚನ.

1373. ಮತ್ತಂ ಇಂತ್ ಅಪ್ಪ ದುರಾಚಾರರುಂ ದುಶ್ಚರಿತರುಂ ಪಿಶಾಚರುಂ ಕೋಪಿಗಳುಂ ಕಾಮಿಗಳುಂ ಕಳವಳಿಗರುಂ ಕಷ್ಟರುಂ ಸರ್ಗಾಪವರ್ಗಮಂ ಪಡೆವಡೆ, ಪೂರ್ವೋಕ್ತಂ ಇಂತ್ ಎಂದುದತ್ತಿ ?

ಸ್ರಗ್ಧರ ವೃತ್ತ.

1374. ರಜ್ಜ್ವಾಬದ್ಧ್ನಾತಿವಾಯುಂಮೃಗಯತಿಸಜಲೇಮತ್ಸ್ಯಕಾನಾಂವಿಮಾ [ರ್ಗಂ,
ವಂಧ್ಯಾಸ್ತ್ರೀಷಂಡಕಾನಾಮಭಿಲಷಿತಸುತಂವಾಳುಕಾಭ್ಯಶ್ಚತೈಲಂ
ದೋರ್ಭ್ಯಾಂಗಂತುಂಪಯೋಧಿಂಝಷಕುಲಕಲಿತಂಗೋವಿಷಾಣೇನ [ದುಗ್ಧಂ
ಸರ್ವಾರಂಭೇಪ್ರಮತ್ತೋನರಪಶುರಿಹಯೋಮೋಕ್ಷಮಿಚ್ಛೇತ್ಸುಖಾನೀ

ಅರ್ಥ : ಇಹದಲ್ಲಿ ಮೋಕ್ಷವನ್ನು ಸುಖವನ್ನು ಹುಡುಕುವನು ಹಗ್ಗದಿಂದ ಘಾಳಿಯನ್ನು ಕಟ್ಟುತ್ತಾನೆ, ನೀರಲ್ಲಿ ಮೀನುಗಳ ಮಾರ್ಗವನ್ನು ಹುಡುಕುತ್ತಾನೆ, ಬಂಜೆ ನಪುಂಸಕನು ಇವರ ಶೋಕವುಳ್ಳ ಮಗನು ; ಉಸುಗಿನಿಂದ ಎಣ್ಣೆ, ತೋಳುಗಳಿಂದ ಮೀನ ಬಪ್ಪುವ ಸಮುದ್ರವನ್ನು ದಾಟುವದು ; ಆಕಳ ಕೋಡಿನಿಂದ ಹಾಲು ಇವನ್ನು ಹುಡಿಕಿದ ಹಾಗಾಯಿತು.

ವಚನ.

1375. ಇಂತ್ ಅಪ್ಪವರ್ಗೆ ಸರ್ಗಾಪವರ್ಗಂ ಅಪ್ಪಡೆ, ನರಪಶುಗಳೆಲ್ಲ ಸರಿಯೆನೆ, ಮತ್ತೆ ಕೆಲಂಬರ್ ಈತಂ ಕೃತಾರ್ಥಶಿವನ್, ಎನೆ ಕೆಲಂಬರ್ ಈತ ಶಿವನ್ ಆದಡೆ, ಶೈವಸಿದ್ಧಾಂತಕ್ಕೆ ವಿರೋಧಿ ಯಪ್ಪುದ್, ಎನೆ ಯಾಸಿದ್ಧಾಂತಂ ಎಂತ್ ಎನೆ :

ಸ್ರಗ್ಧರ ವೃತ್ತಂ.

1376. ಪಾತಾಳೇಚಾಂತರಿಕ್ಷೇ, ದಶದಿಶಭುವನೇ, ಸರ್ವಶೈಲೇ, ಸಮುದ್ರೇ,
ಕಾಷ್ಟೇ, ಲೋಷ್ಟೇಷ್ಟಕಾಭಸ್ಮಸುಜಲಪವನೇ, ಸ್ಥಾವರೇ, ಜಂ [ಗಮೇವಾ,
ಬೀಜಂ ಸರ್ವೌಷಧೀನಾಮಸುರಸುರನರೇ, ಪತ್ರಪುಷ್ಪೇ, ತೃಣಾ [ಗ್ರೇ,
ಸರ್ವ ವ್ಯಾಪಿಶಿವೋಯಂ ತ್ರಿಭುವನಭವನೇ, ನಾಸ್ತಿತೋಯನ್ಯ [ದೇವಃ.

ಅರ್ಥ : ಪಾತಾಳದಲ್ಲಿ, ಅಂತರಿಕ್ಷದಲ್ಲಿ, ದಶದಿಕ್ಕಿನ ಲೋಕದಲ್ಲಿ, ಸರ್ವಗುಡ್ಡಗಳಲ್ಲಿ, ಸಮುದ್ರದಲ್ಲಿ, ಕಟ್ಟಿಗೆಯಲ್ಲಿ, ಮಣ್ಣಿನಲ್ಲಿ, ಹೆಂಟೆಯಲ್ಲಿ, ಭಸ್ಮದಲ್ಲಿ, ಜಲದಲ್ಲಿ, ಘಾಳಿಯಲ್ಲಿ, ಸ್ಥಾವರಜಂಗಮಗಳಲ್ಲಿ, ದೇವದೈತ್ಯನರರಲ್ಲಿ, ಪತ್ರಪುಷ್ಪದಲ್ಲಿ, ತೃಣಾಗ್ರದಲ್ಲಿ, ಸರ್ವಗಿಡಗಳ ಬೀಜವು, ಶಿವನು ಸರ್ವವ್ಯಾಪಿಯಾಗಿದ್ಧಾನೆ—ಮೂರುಲೋಕದಲ್ಲಿ ಅನ್ಯದೇವರು ಇಲ್ಲ.

ವಚನ.

1377. ಇಂತು ಸರ್ವಂ ವ್ಯಾಪಿ ಯಪ್ಪ ಶಿವಂಗೆ ಗಮನಾಗಮನಂ ಅಸಂಭಾವ್ಯಂ, ಎಂದ್ ಅನೇಕವಿಕಲ್ಪಮಂ ನುಡಿವುತ್ತಮಿರೆ, ಯಲ್ಲಿಂ ತಳರ್ದು ಹಿಮವದ್ಗಿರಿಯ ಸಮೀಪಕ್ಕೆ ಪೋಗೆ; ಪಿಂತೆ ಸರ್ವಪರ್ವತಂಗಳ್ಗೆ ರೆಕ್ಕೆಯುಳ್ಳದರಿಂದ್, ಅಖಿಳಧಾತ್ರಿಯಂ ತೊಳಲ್ದು ಲೇಸಂ ಪಡಿಯದೆ ಖೇಚರತ್ವದಿಂ ತ್ರಿದಶಲೋಕಕ್ಕೆ ಪೋಗಿ.

ಕಂದ.

1378. ಅನಿತುಂ ಗಿರಿಗಳುಖಾಂಡವ
ವನಮಂ ಮೇಯುತ್ತಿರಲ್ಕೆ ಪವಿಯಿಂ ಸುರನಾ
ಥನುರೆಂಕೆಯ ಪೊಯ್ಯೆ, ಬಿದ್ದು
ದನುಪಮಮೈನಾಕವೆಂಬಪರ್ವತಮಾಗಳ್

1379. ಪುರುಷಮಹೀಧರಂ ಕೆಡಿಯೆ,
ಗಿರಿಯುಗ್ಮದ ಸಂಗದಿಂದಲ್ಲಿಯೆ ಶಂಕರನ
ವರವಧೂಟಿ ಸತ್ತ್ವಳುಂ
ಮಿರದದ್ರಿತನೂಭವೆಯಾಗಿ ತಾ ಪುಟ್ಟಿದಳ್.

ವಚನ.

1380. ಅಂತು ಪರ್ವತವ್ ಎರಡರ ಸಂಗದಿಂ ವಿಸ್ಫುಲಿಂಗಂ ಬೆರಸು ಪುಟ್ಟಿದುದರಿಂ, ಕಾಮಾಗ್ನಿಪ್ರಬಲೆಯುಂ[1] ಮಹೀಂದ್ರರೂಪಿಯುಂ ಆಗಿ ತ

1. ಪ್ರಬಲವುಳ್ಳಾಕೆ.

ಕ್ಷಣದೊಳ್ ನವಯವ್ವನಪ್ರಾಪ್ತಿಯಾಗಿ ತದ್ಗಿರಿನಿಕಟದೊಳು ವರ್ತಿಸುತ್ತಿರೆ, ಯಲ್ಲಿಗೆ ಪರಮೇಶ್ವರಂ ಬಂದ್ ಆಕೆಯಂ ಕಂಡು ಕರಂ ಸೋಲ್ತು ಸಮೀಪಕ್ಕೆ ಸಾರ್ತಂದ್ ಇಂತ್ ಎಂದಂ:

ಕಂದ.

1381. ನೀನಾರ ತನೂಭವೆಯುಂ ?
ಯೇನಿಲ್ಲಿರವೆಂದು ಬೆಸಗೊಳಲ್ಕಿಂತೆಂದ
ಳ್ಮಾಸುಮೆ, ಯದ್ರಿತನೂಭವೆ,
ಭೂನುತ ಮಪ್ಪೋರ್ವಪತಿಯ ದೀಕ್ಷೆ[1]ಯೊಳಿರ್ದೆಂ.

1. ಒಬ್ಬ ಒಳ್ಳೆ ಗಂಡನು ದೊರೆಯಬೇಕೆಂದು ದಿಕ್ಷೆಯೊಳಗೆ ಇರುತ್ತೇನೆ.

ವಚನ.

1382. ಎನೆ, ನಾನ್ ಈಶ್ವರ, ನೀನ್ ಎನಗೆ ವಲ್ಲಭೆ ಯಾದಡೆ, ಜಗದ್ವಂದ್ಯೆ[1]ಯಪ್ಪೆ, ಯೆಂದು ಪಲವು ತೆರದ ವಚನರಚನೆಯಂ ನುಡಿದಡ್, ಆಕನ್ಯೆ ನಾ ಒಪ್ಪೆ ಪಿತನ್ ಉಳ್ಳ ಶಿಶುವ್ ಅಪ್ಪದರಿಂ, ನೀನ್ ಎಮ್ಮ ತಂದೆಯಂ ಬೇಡ್ ! ಆತಂ ಕೊಟ್ಟಡೆ, ನಿನ್ನ ವಲ್ಲಭೆ ಯಪ್ಪೆನ್, ಎಂದು ನುಡಿಯೆ, ಯಂತೇ ಗೈವೆನ್ ಎಂದು ಈಶ ಗಿರೀಶನಲ್ಲಿಗೆ ಬಂದೂ.

1. ಲೋಕದಿಂದ ಸ್ತೋತ್ರ ಮಾಡಿಸಿಕೊಳ್ಳುವಾಕೆ.

ಕಂದ.

1383. ಎಂನ ಸತಿ ಯಾಗ ತಕ್ಕಳು
Shiva married to Párvati. ನಿಂನ ಸುತೆ, ಯಂದು ಪಿರಿದು ವಚನೋಕ್ತಿಗಳಿಂ
ಪಂನಗಭೂ[1]ಷಣ ಬೇಡಲು,
ಕಂನೆಯನೊಲಿದಿತ್ತನಾತಗಾಗಿರಿರಾಜಂ.

1. ಸರ್ಪಗಳನ್ನು ಆಭರಣ ಮಾಡಿಕೊಂಡವನು=ಶಿವ

ವಚನ.

1384. ಅಂತು ಶುಭದಿನಮೂಹೂರ್ತದೋಳ್ ಮದುವೆಯಾಗಿ ಗಿರಿರಾಜನಿಂ ಕಳುಹಿಸಿಕೊಂಡು ಗಿರಿಜೆ ಸಮೇತ ಪೋಗಿ ಕೈಲಾಸಗಿರಿಯೊಳ್ ಇಷ್ಟಭೋಗ ಸುಖಮಂ ಅನುಭವಿಸುತ್ತ ಸಾನಂದದಿಂ ಪಿರಿದಿರುತಿರೆ ಪಲವು ದಿವಸಂ ಪೋದ ಬಳಿಕ, ಮತ್ತೊಂದು ದಿನಂ ಸ್ನಾನಾರ್ಥಂಗಂಗೆಗೆ ಗಿರಿಜಾನಾಥಂ ಪೋಗುತಿರ್ದಂ ; ಕಟ್ಟೆದಿರೊಳು ಗಂಗಾನದಿ ಕನ್ಯರೂಪಿನಿಂ ನಾನಾಲಂಕೃತಸಮೇತವಾಗಿರೆ, ಕಂಡು ನೀನ್ ಆರ್ ಎಂದು ಬೆಸಗೊಳೆ, ನಾ ಗಂಗೆ ಯೆನೆ, ನಿನಗೆ ವಲ್ಲಭರ್ ಆರ್ ? ಎನೆ, ನನಗೆ ತಕ್ಕ ವಲ್ಲಭರ್ ಇಲ್ಲದೆ, ನಾ ನೋಡುತ್ತ ಬರುತಿರ್ಪನ್ ಎನೆ, ಯಾದಡ್ ಅನ್ ಈಶ್ವರಂ, ತ್ರಿಜಗದ್ವಂದ್ಯನು, ಎನಗೆ ನೀನು ವಲ್ಲಭೆಯಾಗ್, ಎಂದು ಪಲವು ತೆರದ ವಚನರಚನೆಗಳಿಂ ಪಡಂಬಡಿಸಿ ಮದುವೆಯಾಗಿ ಮತ್ತಂ ಈರ್ವರು ಕ್ರೀಡಾವಿನೋದದಿಂದ್ ಇರ್ದು ಕೈಲಾಸಗಿರಿಯನ್ ಐದೆ ಗೌರಿಗಂಗೆಯ ಸಂಭೋಗದಿಂದ್ ಇರ್ದ್ ಇಂತು ಆರು ಕೊಡಕೊಳದ ಗಂಗೆಯುಂ ಸ್ವೀಕೃತಂ ಮಾಡಿ ಜಡಿಯ ನಡುವೆ ಮಡುಗಿಶ್ ಇರಿಸ್ ಇಟ್ಟಂ ; ವೈದ್ ಇಟ್ಟಡೆ, ನಂಮ ಕನ್ಯಯುಂ ಬಿಡುವನಲ್ಲ್, ಎನೆ, ಕೇಳ್ದು ಡಿಂಡಿಭಿ ಮಾಂಡವ್ಯಗ್ ಇಂತ್ ಎಂದಳ್.

Shiva married to Gange.

ಕಂದ.

1385 ವನಜಜನ ಹೊರೆಯೊಳ್ಗ್ನಂ
ದನೆಯುಂ ಬೈಕಿರಸುಗು ತಕ್ಕುದೆನೆ, ಸತಿಗೆಂದಂ
ಮುನಿಮಾಂಡವ್ಯಂ : ಪ್ರಷ್ಕರ
ವನಜಭವಾಂಡ[1]ಪುರಾಣಮ ನೀ ಕೇಳ್ದರಿಯಾ ?

b. Brahma not fit, to be the guardian of our girl.

1. ಪದ್ಮ ಮತ್ತು ಬ್ರಹ್ಮಾಂಡ ಪುರಾಣಗಳು.

ವಚನ.

1386. ಎನಲ್, ಆಪುರಾಣಮಂ ಕೇಳ್ದರಿಯೆ, ಅದರ ವೃತ್ತಾಂತಮಂ ತಿಳಿದು
ಪೇಳ್? ಎಂದು ಡಿಂಡಿಭಿ ಬೆಸಗೊಳೆ, ಮಾಂಡವ್ಯ ಪೇಳಲ್ ನೆಗಳ್ದಂ

ಕಂದ.

1387. ಭವನ ಗಿರಿರಾಜಪುತ್ರಿಯ
ವಿವಾಹದೊಳುಂ ಬ್ರಹ್ಮನೆ ಪುರೋಹಿತನಾಗಿ
ರ್ದವರಮರಿ ಹೋಮಕುಂಡವ
ನವಯುವದಿಂದ ವರಪ್ರದಕ್ಷಣ ಬರಿಸುತ್ತಂ,

ವಚನ.

1388. ಅಂತು ಪ್ರದಕ್ಷಣಂ ಬರಸುತ್ತಂ, ಪಾರ್ವತಿಯ ನೂತನವಾಗಿರ್ದ
ನವರತ್ನಖಚಿತದಿವ್ಯಾಭರಣಂ ಮೆರಯೇ,

ಕಂದ.

1389. ಗಿರಿಜೆಯವಳ ದೊಡೆಚಲ್ವಂ
(Mean origin of Agastza-muni from Brahma,) ಪರಿಕಿಸಿ ಸರಸಿರುಹಸಂಭವಂ ಸೋಲ್ತು, ಕರಂ
ಪರವಶನಾಗಲ್ಕಳೆ ಸೋ
ರ್ದಿರೆ, ಕಳಸದೊಳಗಲ್ಲಿ ಕಲಶಜ ತಾನೊಗೆದಂ.

1. ಅಗಸ್ತ್ಯಮುನಿ.

1390. ಇಳೆ ಕಿರಿದಿಂದ್ರಿಯವದು ತಾ
(and of many saints,) ಕೆಳಗುಗೆ ವೃಷಭನೆ ಪೆಜ್ಜೆ ಯೊಂದರೊಳೆ, ಮತ್ತದ

ರೊಳು ವಾಲಿಖಿಲ್ಯಾದಿಮುನಿ
ಗಳ್ ಕೋಟಿಪ್ರಸಿದ್ಧರುದಯಿಸಿದರ್ಬಳಿಕಂ.

1. ರಾಕ್ಷಸರು ಬಂದು ಸೂರ್ಯನನ್ನು ಹಿಡಿಯದ ಹಾಗೆ ಇವರು ಕತ್ತಿ ಹಿಡಕೊಂಡು ಕಾಯುತ್ತಾರೆ.

1391. ಪಿರಿದುಂ ಲಜ್ಜಿಸಿ ಯಲ್ಲಿಂ
and of Válmíkí, ತೆರಳ್ದು ಪೋಪಲ್ಲಿ, ವಂದು ವಾಲ್ಮೀಕದ ಮೇ
ಲಿರದಿಂದ್ರಿಯವ್ರುಗೆ, ಯುದರೋ
ಳ್ನಿರುತಂ ವಾಲ್ಮೀಕಿ ಯೆಂಬ ಮುನಿ ವುದಯಿಸಿದಂ.

1392. ತಡಿಯದಲ್ಲಿಂ ಮುಂದಕ್ಕೆ
and of the king Burishravana, ನಡಿಯುತ್ತಿರೆ; ಭಸ್ಮದೊಳೊಗೆ ಕಿರಿದಿಂದ್ರಿಯ ವ
ಕ್ಕಡೆ, ಯುದರೊಳುದಯಿಸಿದ, ನೋ
ಳ್ಪಡೆ, ಭೂರಿಶ್ರವನೆನಿಪ್ಪನೋರ್ವ[1]ಸಮರ್ಥಂ.

1. ಒಬ್ಬ ಅರಸನು.

1393. ಮತ್ತಲ್ಲಿಂ ಮುಂದಕ್ಕೆ ನಡೆ
and of king Thálza, ಯುತ್ತಿರ್ಪೆಡೆಯಲ್ಲಿ, ನೆಲದೊಳ್ಕಳೆ ಸೋರಲು,
ಬಿತ್ತರದಿಂದದರೊಳು ಭೂ
ಪೋತ್ತಮನೊಗೆದ, ಪ್ರತಾಪಿಶಾಲ್ಯನೆನಿಪ್ಪಂ.

1394. ಮುಂದಕೆ ನಡಿಯುತ್ತಿರಲ
and of Urvasi, ಲ್ಲೊಂದೆಡೆಯೊಳು ಕಿರಿದಂಶ ವ್ರೊಗೆ, ಯೂರ್ವಶಿ ಯಾ
ನಂದದಿ ಯೊಗೆದಳ್ಮತ್ತಂ
ಲ್ಲಿಂದ ಮುಂದಕ್ಕೆ ಬೇಗದಿಂ ನಡೆಯುತ್ತಿರಲುಂ,

1395. ನಿಡುಲಿಂಗಮನೆಡಗೈಯಿಂ
and of the Rishi Shakuni,
ಪಿಡಿದುರೆ ನಡೆವಾಗಲಿಂದ್ರಿಯ ಮೇಗಣ್ಗೆಂ
ಶಿಡಿಯೆ, ಖಗ ವಂದು ನುಂಗಲು,
ಪೊಡವಿಯೊಳು ಶಕುನಿ[1] ಯೆಂಬವನುದಯಂ ಗೈದಂ.

1. ಬಬ್ಬು ರಿಷಿ.

ವಚನ.

1396. ಅಂತು ನಡೆಯುತ್ತಂ ಇರಲ್, ಅಂದ್ ಉದಯಿಸಿದರ್, ಪಲವು ಮು
and of a daughter Padmi.
ನೀಂದ್ರರ್ ; ಅಲ್ಲಿಂ ಮುಂದ್ ಬಂದು ಸರಸಿ ಯೆಡೆಯೊಳು ಲಿಂಗವ
ಪಿಡಿದು ಪಶಿಯಿಸಿ ಜಡಿಯಲು, ಮತ್ತ ಇಂದ್ರಿಯ ಪದ್ಮದೊಳ್ ಬ
ಕ್ಕಡೆ, ಸಲೆ ಪದ್ಮಿ ಯೆಂಬ್ ಆಸುತೆ ಉದಯಿಸಿದಳ್ ; ತಕ್ಕಳ್ ಇ
ವಳ್ ಎನ್ನ ಸುರತ ಸುಖಕೆ, ಎನುತ್ ಅವಳ ಕೈಯ ಪಿಡಿಯಲ್, ಆ
ಕ್ಷಣದೊಳೆ ನವಯುವ್ವನ ಪ್ರಾಪ್ತಿಯಾಗೆ, ಎಲೆ ಮಗಳೆ ! ಎಂನ್ ಬ
ಲವಿಂ ಕೂಡ್ ! ಎನೆ, ನೀಪಿತಂ, ನೀನ್ ಎಂನೊಳ್ ಎಂತು ಕೂಡಲ
ಕ್ಕುಮೆ ? ಎನೆ ಪುತ್ರಾರ್ಥದಿಂ ತಾಯ ತಂಗಿ ಶೊಶಿ ಯಾವಳನ ಆದ
ಡಂ, ಕೂಡಿದಡ್, ಏಂ ದೋಷಮಿಲ್ಲ ; ಎಂದು ಪೇಳ್ದ ವೇದವಾಕ್ಯ
Brahma commits incest.
ಕ್ರಮದಿಂ ಕೇಳ್ದ್ ಅರಿವುದಿಲ್ಲ್, ಅಕ್ಕುಂ ಎನೆ, ನಾಂ ಕೇಳ್ದ
ರಿದುದಿಲ್ಲ್ ; ಆವೇದಕ್ರಮಂ ಎಂತು ? ಪೇಳ್ ! ಎಂದ್ ಆಕಾಂತೆ ಬೆ
ಸಗೊಳೆ, ಸರೋಜಸಂಭವ ವೇದಮಂತ್ರವಂ ಉಚ್ಚರಿಸಿ ಯಾಚಂ
ನೆಯಂ ವಶೀಕರಣಮಂ ಮಾಡಿಕೊಂಡು ದಿವ್ಯಷಣ್ಮಾಸಂ ಸುರತ
ಸುಖಾರ್ಣವದೊಳ್ ಓಲ್ಯಾಡುತ್ತಂ, ತನ್ನ ತಾನ್ ಅರಿಯದೆ, ಆಸ
ಕ್ತಚಿತ್ತನಾಗಿ ಕೂಡಿರ್ದನ್ ; ಆಗ ಸರ್ವಗೀರ್ವಾಣರ್ ಅರಿದ್, ಎಲ್ಲ
ರುಂ ನೆರದ್ ಅಂಭೋಜಗರ್ಭ ನಿಕೃಷ್ಟಪೊಲ್ಲಮೆಯುಂ ಮಾಡಿದಂ,
ಎಂದು ಪಿರಿದುಂ ದೂಷಿಸಿ ಗಂಧರ್ವರಂ ಕರದು ನೀವ್ ಅಜನ ಸಂ
ಭೋಗವ ಕೆಡಿಸಿ ! ಎನೆ, ಯಾಗಲಿ ಯೆಂದು ಕೈಕೊಂಡು ಸುರತ

ಗೃಹಸಮೀಪಕ್ಕೆ ಬಂದು ಅಬ್ಬರಿಸಿ ಬೊಬ್ಬೆಯಂ ಕೊಟ್ಟೆ ಎಬ್ಬಿಸಿದಡೆ ಶಾಪಂ ಈಗುಂ ಎಂತ್ ಎನುತ್ತಂ, ಬೊಬ್ಬುಳಿ ಗೊಳುತಂ, ಬ್ರಹ್ಮನಂ ಎಬ್ಬಿಸುವ್ ಅನುಮಾನಮಂ ಮನಸಿನಿಂ ನೆನದು, ಹಾಡಿವಡೆ, ಸುರತಸುಖಮ ನಾಡೆ ಕರಂ ಮಾಣಿಸುಗುಂ ಎಂದು ಗೀತಮಂ ಬಂದಂ ಮಾಡಿ ಮನೋಮುದದಿಂದ ಪಾಡಿದರ್; ಆಗೀತಕ್ಕೆ ಗಾಯತ್ರಿ ಎಂಬ ಪೆಸರಂ ಇಟ್ಟು ಪಾಡೆ, ಕೇಳ್ದು, ಕರಂ ಲಜ್ಜಿಸಿ, ಸುರತಂ ಮಾಣ್ದು, ವನಿತೆಗೆ ಗರ್ಭವಾದುದ್ ಅರಿದು, ತನ್ನ ಮನದೊಳ್ ಪೂರ್ವೋಕ್ತಮಂ ನೆನದು, ಲೋಕಾಪವಾದಂ ಅಕ್ಕುಂ ಎಂದ್ ಅಂಜಿ ತನ್ನ ಲಿಂಗದಿಂ ಆಕೆಯುದರದ ಗರ್ಭಮಂ ಆಕರಿಸಿ ತನ್ನ ಅಂಡದೊಳ್ ತಳೆಯೆ, ಅಂದಿಂದ್ ಅಂಡವಾತನಾಗಲ್, ಅಂದ್ಆಸುರತಗೃಹಮಂ ಪೊರಮಟ್ಟು, ಸ್ಮರವಿಕಾರಂ ಲೋಕಭ್ರಮಣೆಯಿಂ ಬರುತ್ತಿರೆ;

ಚಂಪಕಮಾಲಾ ವೃತ್ತ.

1397. ಸುರಪುರಕ್ಕೈದೆ, ರಂಭೆ ಮೊದಲಾದ ಸುರಾಂಗನೆಯರ್ಕಳಂ ನಿರಂತರದೊಳ್ ನೋಡಿ ಸೋಲ್ತು ನೆರೆಯಲ್ಕನುವಿಲ್ಲದೆ ಚಿಂತಿಸುತ್ತೆ, ತಾನೆರೆಯೆ, ಕಳತ್ರದಾನಮುಮನೀವಡಿದಕ್ಕನುವೇನೆನುತ್ತೆ, ತಾಂ ಪಿರಿಕಿಶಿ, ಪದ್ಮಸೂನು ನೆನದಂ ತಪಶಿಂದಮ ಸಾಧ್ಯಮೆಂಬುದಂ.

Brahma captivated and overcome by Tilottame.

1. ಅನ್ವಯ : ಎಂಬುದಂ ಪದ್ಮಸೂನು ನೆನದಂ.

ಶ್ಲೋಕ.

1398. ಯದ್ದೂರಂ, ಯದ್ದುರಾರಾಧ್ಯಂ,
ಯಚ್ಚದೂರಂ, ವ್ಯವಸ್ಥಿತಂ,
ತತ್ಸರ್ವಂ ತಪಸಾಸಾಧ್ಯಂ
ತಪೋಹಿದುರಿತಕ್ಲವಂ.

ಅರ್ಥ: ಯಾವದು ದೂರವೋ, ಯಾವದು ದುರಾರಾಧ್ಯವೋ, ಯಾವದು ದೂರದಲ್ಲಿ ಇರುತ್ತದೋ ಅದು ತಪಸಿಗೆ ಸಾಧ್ಯ, ತಪಸು ಪಾಪವನ್ನು ಅಂಜಿಸುವಂಥಾದ್ದು

ವಚನ

1399. ಎಂದ್ ಆವುದ್ ಅನೊಂದು ಕಾರ್ಯಂ ಸಾಧ್ಯಮಾಗದಡೆ, ತಪಸಿಂ ಸಾಧ್ಯ ಮಾಡಿಕೊಳ್ವುದು ; ತಪಸಿಂ ಸಾಧ್ಯಂ ಅಗದ ಕಾರ್ಯಂ ಇಲ್ಲೆಂದು ತನ್ನ ಮನದೊಳ್ ನಿಶ್ಚೈಸಿ.

ಕಂದ.

1400. ತಪದುನ್ನತಿಯಿಂ ಸುರರಾ
ಜಪದವಿಯ ಪಡದು ದೇವಕಾಂತೆಯರೊಳ್ಭೋ
ಗಿಪೆನೆಂದು ಬ್ರಹ್ಮನಾಂತಂ
ತಪಮಂ ಮೂರುವರೆ ದಿವ್ಯಸಾಸಿರಯುಗಮಂ.

ವಚನ.

1401. ಅಂತು ತಪಂ ಬಡುತ್ತಿರೆ, ಇಂದ್ರಂ ಅರಿದು ಚಿಂತಾಕ್ರಾಂತನಾಗಿರೆ, ಬೃಹಸ್ಪತಿ ಕಂಡು, ನೀವ್ ಅದ್ ಯಾತಕೆ ಚಿಂತಿಸುತ್ತಿರ್ಪರ್? ಎನೆ, ಬ್ರಂಹ್ಮಂ ಎಂಬ್ ಈ ಪದವಿಯ ಪಡೆಯಲೆಂದು ತಪಂ ಬಡುತಿರ್ಪಂ ಎಂಬುದಕ್ಕೆ ಚಿಂತಿಸುತಿರ್ದಪ್ಪೆನ್, ಎನೆ, ಸುರಾಚಾರ್ಯಂ ಇಂತ್ ಎಂದಂ:

ಕಂದ.

1402. ತರುಣಿಯರೆ ತಪೋಗ್ರತೆಯಂ
ಪರಿಹರಿಸುವದಕ್ಕೆ ಕಾರಣಂ ಕೇಳೆಂದಾ
ಸುರಮಂತ್ರಿ ಪೇಳೆ, ಕೇಳ್ದಾ
ಸುರಪಂ ತತ್ಕ್ರಮದಿ ಕೆಡಿಸುವನುವಂ ಬಗೆವಂ.

ಚಂಪಕಮಾಲಾ ವೃತ್ತ.

1403. ಸತಿಯರೊಳೆಳ್ಳನಿಂತುಟುರೆ ಚೆಲ್ವಮನುಳ್ಳಡೆಮಲ್ಲಂ ಕೊಂಡುಮೊಂ
ದತಿಶಯವಪ್ಪಿನಿಂ[1] ಪಡದು ಮಾಡಿ ತಿಲೋತ್ತಮೆ ಯಂಬ ನಾಮವ
ನ್ವಿತಮೆನಲಿಟ್ಟು ದುರ್ಘನತಪಂ ಕೆಡುವಂತಿರೆ, ಮಾಳ್ಪುದೆಂದು [ತಾಂ
ಶತಮಖನೆಂದಡಾಕೆ ಪರಿದೈದಿದಳಬ್ಜಜನಿರ್ದ ತಾಣಮಂ.

1. ಅಪ್ಪುವ ಹಾಗೆ=ಆಗುವ ಹಾಗೆ.

ಕಂದ.

1404. ಅಂತೈಯ್ದಿ ಯಬ್ಜಗರ್ಭನ
ಮುಂತಿದಿರೊಳ್ನಿಂದು ನೋಡಿ ಕಣ್ದೆರಿಸುವೆನಾ
ನೆಂತೆಂದು ತನ್ನ ಮನದೊ
ಳ್ಚಿಂತಿಸುತಿದೊಂದುಪಾಯಮಂ ನೆರೆ ಬಗೆದಳ್.

ಉತ್ಪಲಮಾಲಿಕಾ ವೃತ್ತ.

1405. ಆವಧು ರಾಯಬಾಗುಮು[1]ಹಚಾಳಿಯುಮಂ ನೆರೆ ಮಾಡಿ ಕೊಂಡು ವೇ
ಳಾವಳಿದೇಶಿಗುರ್ಜರಿ[2]ವರಾಳಿಗಳಿಂದಮೆ ಯಾಡಿ ಪಾಡುತಂ
ಭಾವಮನೂನರೇಚಕಗತಿ[3]ತೀರ್ಪರಿಯುಂತಿರಿಪ್ರೋಜೆ ಜಾತಿನಾ
ನಾವಿಧಚಾಳಿಯುಂ ಮೆರೆಯೆ, ನರ್ತಿಸೆ, ನೋಡಿದನಬ್ಜಸಂಭವಂ.

1. ಇವು ನರ್ತನ ಭೇದಗಳು. 2. ಇವು ರಾಗ ಭೇದಗಳು. (32. ರಾಗಗಳಲ್ಲಿ.) 3. ಇವು ಅಭಿನಯ ಭೇದಗಳು.

ಕಂದ.

1406. ಅಂತೆವೆ ಯಿಕ್ಕದೆ ನೋಡ
ಲ್ಕಾಂತೆ ಇವಂ ಸೋಲ್ತನೆಂದು ಪರಿಕಿಸಲಲ್ಲಿಂ
ದಂ ತಿರುಗಿ ಬಲದ ದೆಶೆಗಿರ
ದಂತುಂ ಭರದಿಂದಲಂದು ನರ್ತಿಸುತಿರೆಯುಂ,

1407. ಈಕೆಯನೆ ತಿರಿಗಿ ನೋಡಲಿ
ರೇಕೆಳಗಣ[1] ಯತಿಗಳ್ನಗುಗುಂ ; ಪಿರಿದುಮಿಶ್ರಾ
ಲೋಕಾಪವಾದವೆಂದರಿ
ದಾಕಮುಳಜನೊಂದುಪಾಯಮಂ ಚಿಂತಿಸಿದಂ.

1. ಮರ್ತ್ಯಲೋಕದವರು.

1408. ಚಳಿಸದಲೆ ಮುನ್ನ ತಪಮಂ
ತಳೆದಾಮೂರುವರೆಸಾವಿರಬ್ದಮಂತಾ
ಫಲದೊಳ್ಸಾವಿರವರುಷದ
ಫಲಕ್ಕೆ ಮುಖ ವಂದು ಬಲಿದೊಳುದಯಿಸಲೆಂದಂ.

1409. ಎನೆ, ಬಲದೋಳ್ಜನಯಿಸಿ
ದಾನನದಿಂ ನೋಡುತ್ತಿರಲ್ಕೆ ಪಿಂತಣ ದೆಶೆಗಾ
ವನಿತೆ ಒರೆ, ಮುನ್ನಂವದೊಳೆ
ವನಜಜನಾದೆಶೆಯೊಳೊಂದು ಮುಖಮಂ ಪಡೆದಂ.

1410. ಆವದನದೊಳೀಕ್ಷಿಸುತಿರೆ,
ಯಾವಧುವಲ್ಲಿಂದೆ ತೆರಳ್ದು ವಾಮಕೆ ಬರ
ಲ್ಕಾವನಜಜನೀಕ್ಷಿಸಲೆಂ
ದೋವದೆ ಮುನ್ನಿನ ವೊಲಲ್ಲಿ ಪಡದಂ ಮುಖಮಂ.

ವಚನ.

1411. ಅಂತು ಪಡೆದ್ ಆನನದಿಂ ಈಕ್ಷಿಸುತ್ತಿರೆ, ಯಾಕೆ ಗಗನತಳಕ್ಕೆ ನೆಗದು ಮಸ್ತಕಾಗ್ರದೊಳ್ ನರ್ತಿಸುತ್ತಿರೆ, ನೋಡಲ್, ಆನನಮಂ ಕಾಣದೆ, ಮುಳಿದ್ ಐನೂರುವರುಷದ ತಪದ ಫಲಕ್ಕೆ ತಕ್ಕ ಮುಖಂ ಶಿರದೊಳ್ ಪುಟ್ಟಲಿ ಯೆಂದು ನೆನೆಯುಲ್, ಅಲ್ಲಿ ಯೊಂದು ಗಾರ್ಧಭ

ಮುಖಂ ಜನಯಿಸಿ, ಯಾಮುಖದಿಂ ನೋಡುತ್ತಿರೆ, ಯಾನರ್ತಿಸು
ವ ತಿಲೋತ್ತಮೆ ಯಲ್ಲಿಂದ್ ಅದೃಶ್ಯವಾಗಿ ಪೋಗೆ ಸುರಲೋಕ
ಕ್ಕೆ ; ಯಾಕೆಯಂ ಕಾಣದೆ, ಕಳವಳಿಸಿ ವಿಕಳಗೊಂಡು ದೆಶೆದೆಶೆಗೆ
ವಿಸುಟಂ—ಬರಿದು ಸುರವಿದ್ಯಾಧರರೆಲ್ಲರಂ ಗಗನತಳದೊಳ್ ಪರಿದು
ನುಂಗುತ್ತಿರೆ, ಇಂದ್ರಾದಿದೇವರ್ಕಳ್ ಉಪರೋಧಮಂ ಸದಾಶಿವಂ
ಅರಿದು ಬ್ರಹ್ಮನ ಶಿರಮಂ ಚಿವಟ ಕಳೆಯೆ, ಬೆಸನದ್ಎಸಕದಿಂ ಕ
ಣ್ಕಾಣದೆ, ಮೈಯರಿಯದೆ, ಲಜ್ಜೆಯಂ ತೊರೆದು ಹೊರೆಯೊಳಿರ್ದ
ಪೇಂಗರ್ರಡಿಯಂ ಕಂಡು ಕಾತುರತನದಿಂ ಪಿಡಿದು ಅದಂ ನೆರೆಯಲ್,
ಅದು ನಖದಿಂ ಶೀಳೆ, ಯದೆ ಕ್ರಮವೆಂದು ನರರ್ ಅಂದಿಂದ್ ಇತ್ತಲ್

Mean origin of Jámbuvanta from Brahma,

ಆಕ್ರಮದಿಂ ಆಚರಿಸುವರ್ ; ಆಭಲ್ಲೂಕೆಗಂ ಬ್ರಹ್ಮಗಂ ಜಾಂಬು
ವಂತನ್ ಆಂತ್ ಎಂಬ ಮಗಂ ಪುಟ್ಟಿದನ್ ; ಅದಂ ತ್ರಿದಶರೆಲ್ಲ ಕಂ

and of the Rishi Vasishta ;

ಡು ಪರಿಹಾಸ ಗೈಯೆ, ಲಜ್ಜಿಸಿ ಯಲ್ಲಿಂ ಪೊರಮಟ್ಟು ಭ್ರಮಣೆಯಿಂ
ಬರುತ್ತೆ, ಯಮರಾವತಿಯ ಬಹಿರ್ಭಾಗದೊಳ್ ಊರ್ವಶಿ ಎಂಬ
ಪಣ್ಯಾಂಗನೆಯಂ ಕಂಡು ಆಕೆಯ ಸಮೀಪಕ್ಕೆ ಪೋಗಿ ನಾನಾತರ
ದ ವಚನರಚನೆಯಿಂ ಒಡಂಬಡಿಸಿ ಯಾಕೆಯೊಳ್ನೆರದು ಮುಂನ್ದ
ಆಕರ್ಷಣಂ ಗೈದ್ ಅಂಡದೋಳ್ ಇಟ್ಟುಕೊಂಡಿರ್ದ ಗರ್ಭಮಂ ಆ
ಕೆಯ ವುದರದೊಳ್ ಇಕ್ಕಿದಡ್, ಅಲ್ಲಿ ವಶಿಷ್ಠ[1] ಹುಟ್ಟಿದಂ; ಆತಂಗೆ
ಬ್ರಹ್ಮ ತನ್ನ ಪದವಿಯಂ ಕೊಟ್ಟು ತಾಂ ತಪಕ್ಕೆ ಪೋದಂ ; ಇ
ತ್ತ ವಶಿಷ್ಠಂ ಸಕಲಶಾಸ್ತ್ರ ಕುಶಲನಾಗಿ ವಂದು ದಿನಂ ಕೆಲವು

This Rishi is not saluted by the brahmans as the son of a harlot.

ಭೂದೇವರ್ಗೆ ವಂದನೆಯಂ ಮಾಡಲ್, ಅವರು ತನಗೆ ಪ್ರತಿವಂದನೆ
ಯಂ ಮಾಡದಿರೆ, ಯಾಕೆ ನೀವ್ ಎನಗೆ ಪ್ರತಿವಂದನೆಯಂ ಮಾಡರಿ ?
ಎಂದು ಬೆಸಗೊಳೆ, ನೀ ವೇಶ್ಯಾಪುತ್ರನ್ಅಪ್ಪುದರಿಂ, ನಿನಗೆ ಪ್ರತಿವಂ

1. ಸಪ್ತ ಋಷಿಗಳಲ್ಲಿ ಒಬ ನು.

ದನೆಯಂ ಮಾಡೆವ್ ಎನೆ ಪಿರಿದು ಲಜ್ಜಿತನಾಗಿ ವೇದಪರ್ವತಕ್ಕೆ ಪೋಗಿ ತಪಂ ಗೈವುತ್ತಿಂ ಇರ್ದರ್.

ಕಂದ.

1412. ಆಗದು ತಪಕ್ಕೆ ವಿಘ್ನಂ;
ಬಾಗಿದ ಬೆನ್ನುಡಿಗಿದುರವಡಂಗಿದ ಜಘನಂ
ತೂಗುವ ತಲೆ ಕಂಪಿಸುವ ಕೈ,
ಬೀಗಿದ ಶಿರ, ಕವಿದ ಪುರ್ಬು, ಸುಗ್ಗಿದ ಪಲ್ಗಳ್,

ಶಾರ್ದೂಲವಿಕ್ರೀಡಿತ ವೃತ್ತ.

1413. ಅಂದಾಭೂಧರದಿಂ ತೆರಳ್ದು ಪಲವುಂ ದೇಶಂಗಳಂ ನೋಡುತಂ
ಬಂದೊಂದೂರೊಳಗಕ್ಷಮಾಳಿ ಯನಿಪಾಚಾಂಡಾಲಿ ದೂರಾಂತರಂ
ಮುಂದೈತಪ್ಪಳ ರೂಪನೀಕ್ಷಿಸಿ ಕರಂ ಸೋಲ್ತಾಕೆ ಯಿರ್ದಲ್ಲಿಗೈ
ತಂದಾಕಾಂತೆಯ ಹಸ್ತಮಂ ಪಿಡಿದನತ್ಯಾಸಕ್ತಿಯಿಂತಾಪಸಂ.

In his old age Vasishta has a son from a low caste woman;

ವಚನ.

1414. ಅಂತು ಕೈಪಿಡಿದು ಪಲವು ತೆರದ ವಚನಾಳಾಪದಿಂದ್ ಆಕೆಯಂ ಬಡಂಬಡಿಸಿ ಕೂಡಲು, ಆಕಿಗೆ ಶಕುನಿ ಯೆಂಬ ಮಗಂ ಪುಟ್ಟಿ ಯಾತಂ ತಂಮ ತಂದೆಯಂತೆ ಪರ್ವತಾಗ್ರದೋಳ್ ಅತ್ಯುಗ್ರತಪಮಂ ಗೈದುಕರಂ ವೃದ್ಧನಾಗಿ ಬಳಿಕ ದೇಶಭ್ರಮಣೆಯಿಂ ಬರುತ್ತೆ, ಗೌತಮಂ ಎಂಬ ಪೂರೊಳ್ ಓರ್ವಪೋಲತೆಯಂ ಕಂಡು ಆಸಕ್ತಚಿತ್ತನಾಗಿ ನೀನ್ ಎಂನೋಳ್ ಬಲಿದು ಕೂಡು! ನಿನಗ್ ಆಸಕ್ತನಾದೆನ್, ಎನಲ್, ಆಪೋಲತಿ ನಿಮಗೆ ಇದ್ ಅನುಚಿತಂ; ಎನಲಾತಂ ಪೂರ್ವದೊಳ್ ಪಲವು ಪುರಾಣದೊಳ್ ಸ್ತ್ರಿಯಳಿಗೆ ದುಃಕುಲಂ ಅಶುಚಿತ್ವಂ ಇಲ್ಲ್ ಎಂದು ಪೇಳ್ದುದಂ ಕೇಳ್ದುದಿಲ್ಲ್ ? ಅಕ್ಕುಂ, ಎನೆ, ಯಾಕೆ ನಾಂ ಕೇಳ್ದುದಿಲ್ಲಾ; ಅದ್ ಎಂತ್ ? ಎನೆ, ಶಕುನಿ ಇಂತ್ ಎಂದಂ :

This son Shakuni has also a son born to him from a low-caste woman Parásha-ra-muni.

ಶ್ಲೋಕ.

1415. ಅಜಾಶ್ವಮುಖತೋಮೇಧ್ಯಾಃ,
ಗಾವೋಮೇಧ್ಯಾಸ್ತುಪೃಷ್ಠತಃ,
ಬ್ರಾಹ್ಮಣೋವೇದತೋಮೇಧ್ಯಾಃ,
ಸ್ತ್ರೀಮೇಧ್ಯಂಚತುಸರ್ವತಃ.

ಅರ್ಥ : ಕುರಿಗಳು ಹಾಗು ಕುದರಿಗಳು ಮುಖದಿಂದಲೆ ಪವಿತ್ರ ; ಆಕಳವು ಬೆಂನಕಡೆಯ ಭಾಗದಿಂದಲೆ ಶುದ್ಧ, ಬ್ರಾಹ್ಮರು ವೇದವನ್ನು ಹೋದುವದರಿಂದಲೇ ಶುದ್ಧ ; ಸ್ತ್ರೀಯು ವಿಶಿಷ್ಟರಿಂದಲೇ ಶುದ್ಧ.

ವಚನ.

1416. ಎಂದ್ ಅನೇಕವಚನರಚನೆಯಿಂದ್ ಒಡಂಬಡಿಸಿ ಆಕೆಯೊಳ್ ಸುರತ ಸುಖಮಂ ಅನುಭವಿಸಿ ಆಕೆಗಂ ಪರಾಶರಂ ಪುಟ್ಟಿ ವಿಂಧ್ಯಗಿರಿಯೊಳ್ ತಂದೆಯಂದೆ ತಪಂ ಗೈವುತ್ತಂ ಇರ್ದು, ವೃದ್ಧನಾಗಿ ಕೆಲವಾನುದಿವಸಕ್ಕೆ ವಿಹರಿಸುತ್ತಂ ಬರುತ್ತೆ, ಗಂಗೆಯುಂ ಪಾಯ್ವಾಗಳ್, ಅಂಬಿಗರ ಮಗಳು ಮತ್ಸ್ಯಗಂಧಿ ಎಂಬ ಕಂನಿಕೆಗಂ, ನಾವಿಗೆ ಹುಟ್ಟಂ ಇಕ್ಕುವಲ್ಲಿ, ನಡುಹೊಳೆಯೊಳು ಆಸಕ್ತಚಿತ್ತನಾಗಿ ಆಕೆಯ ಕೈಯಂ ಪಿಡಿದು ಕೇಳಲ್ ಆಕೆಯು, ಎಲೆ ದೇವ ! ಇಲ್ಲಿ ಜನಸಂಕೀರ್ಣಂ ; ನಿನಗ್ ಉಚಿತವೆ ? ಯನೆ, ಮುನಿ ವಿಭೂತಿಯಂ ಅಭಿಮಂತ್ರಿಸಿ ತಳದು ತೀವಿದು ಮಂಜಂ ಪಡೆದು ಕಡಲ ನಡುವೆ ಮಂಜಿನ ಕತ್ತಲೆಯೊಳ್ ನೆರೆಯಲ್, ಅವರೀರ್ವರ ಸಂಗದಿಂ ವ್ಯಾಸಂಪುಟ್ಟಿದಂ ; ಆವ್ಯಾಸಂ ತಂಮ ತಾಯಿ ಯೋಜನಗಂಧಿ ಯೊಡಹುಟ್ಟಿದವನ ಮಕ್ಕಳು ಯಂಬಿ ಯಂಬಾಲೆ ಯಂಬಿಕೆ ಎಂಬ ಮೂರು ಕಂನಿಕೆಯರಂ ಮದುವೆಯಾಗಿ ಕೆಲವಾನುದಿವಸಕ್ಕೆ ಯಾಮೂವರು ಕಂನಿಕೆಯರೊಳ್ ಧೃತರಾಷ್ಟ್ರ ಪಾಂಡುರಾಜಂ ವಿದುರಂ ಎಂ

Parashara has a son Vyása from a fisher-woman, and Vyása has three sons from his nieces, namely Dhrutarashtra, Pándu, and Vidura.

ಬ ಮೂವರು ಮಕ್ಕಳಂ ಪಡೆದನ್ ಎಂದು ಪುಷ್ಕರ ಬ್ರಹ್ಮಾಂಡಪುರಾಣಂಗಳೊಳ್ ಪೇಳ್ವುದು; ಕಾರಣಂ ತಂನ ಮಗಳೊಳ್ ತಾ ನೆರದಂ ಅರವಿಂದ ಸಂಭವಂ; ನಾವ್ ಇಟ್ಟಡೆ, ಈ ಕನ್ಯಯುಂ ಬಿಡುವವನಲ್ಲೆಂದು ಪೇಳೆ, ಡಿಂಡಿಭೆ ಮತ್ತ್ ಇಂತ್ ಎಂದಳ್.

ಕಂದ.

1417. ಶ್ರೀಪತಿಯು ಹೊರೆಯೊಳಿರಸುವೆ
*c.* Vishnu not fit to be the guardian of our girl; ನೀಪುತ್ರಿಯನೆಂದೊಡಾಕಿಗಾಮಾಂಡವ್ಯಂ
ಕೋಪಿಸಿ ಯಿರಿಸದಿರವನ ಸ
ಮೀಪದೊಳೆನಲ್ಕವಳೇಕೆನಲು, ಕೇಳೆಂದಂ.

1418. ಮೊದಲೊಳು ದ್ವಾರಾವತಿಯೊಳು
ಪದಿನಾರು ಸಾವಿರ ಸಮಸ್ತಗೋಪಿಜನದೋ
ಳ್ಮುದದಿಂ ಕೂಡಿ ವಿಂಧ್ಯಾಟವಿ[1]
ತುದಿಯೊಳ್ಳೈದೆ ಸುತ್ತಿ ಮುತ್ತಿ ಬರುತ್ತಲಲ್ಲಿಂ.

1. ವಿಂಧ್ಯಾಪರ್ವತದ ಅಡವಿ.

ವಚನ.

1419. ಮತ್ತಂ ರಾಜಮತಿ ಚೆಂದ್ರಮತಿಯರ್ ಎಂಬ ಗೋಪಿಕಾಂತೆಯರಂ ಕಂಡು ಪಲವು ತೆರದ ವಚನರಚನೆಯಿಂ ಒಡಂಬಡಿಸಿ ಸಂಭೋಗ ಸುಖದಿಂ ಇರುತ್ತಂ, ಇಂತು ಪದಿನಾರುಸಾವಿರ ಕಾಂತೆಯರೊಳ್ ನೆರದು ತಣಿಯದ್ ಅಂನ್ಯಾಂಗನೆಯರೊಳ್ ಸಂತತ ವಿಳಾಸದಿಂ ಕೂಡಿದವಂ ಎಂತು ಈದಾಯಯ ಸ್ವರೂಪೆಯುಂ ಬಿಟ್ಟಪನೆ ?

ಕಂದ.

1420. ಎನೆ, ಡಿಂಡಿಭೆ ಭರದಿಂ ಚಂ
*d.* nor the Moon ದ್ರನ ಹೊರೆಯಲ್ಲೀಸುತೆಯುಂ ನಾನಿರಿಸುವೆನೆಂ

ದೆನೆ, ಮಾಂಡವ್ಯನದನುಚಿತ
ಮೆನಲೇನೆಂದು ಕೇಳಲ್ಪೇಳಲ್ನೆಗಳ್ದಂ.

1421. ಕಂಡಾವಿಶ್ವಾಮಿತ್ರನ[1]
ಹೆಂಡತಿಗೆ ಸೋಲ್ತುಂ ಸೊಗಯಿಪಾಕೃತಿಯಂ ಕೈ
ಕೊಂಡಾಲಿಸಿ ಕೂಡುವಾಗ,
ಗಂಡಂ ಬರಲರಿದದ ಪಾರ್ಬೆ ಪಾರ್ಬಗೆಂದಳ್.

1. ಸಪ್ತ ಋಷಿಗಳಲ್ಲಿ ಒಬ್ಬನು.

ಕಳಾಭಾಷಿಣಿ ವೃತ್ತ.

1422. ಬಂದನೆಂನ ಪತಿ, ಮಾಂಜರರೂಪದಿ ಪೋಗು ! ನೀ
ನೆಂದು ಪೇಳೆಮುವನಾಗ ತದಾಕೃತಿ ಗೊಂಡು ಬೇ
ಗಂದು ಪೋಗುತ್ತಿರೆ ; ತಾಪಸ ಕೋಪದಿ ಚರ್ಮಗೊಂ
ಡುಂ ಧಿಟಂಮೊಗೆಯೆ, ತಗಲ್ದುದಾತನ ವಕ್ಷಮಂ.

ವಚನ.

1423. ಅಂತು ತಾಗಲ್, ಆಕಲೆಯಂ ಕಳಂಕಾಂಕಂ[1] ಎಂಬುದ್ ಆತ್ ಆತಂ ; ರೋಹಿಣಿ ಮೊದಲಾದ್ ಅಪ್ಸರಸ್ತ್ರೀಯರ್[2] ಪಲಂಬರ್ ಇರ್ದು ತಾಪಸಪತ್ನಿಗ್ ಅಳುಪಿದಂ ಚಂದ್ರ, ದಾಯಯಂ ಬಿಡುವವನಲ್ಲೆಂದು ಪೇಳಲು, ಯಾದಡ್ ಈಕನ್ಯೆಯಂ ಶಕ್ರನ ಸಮೀಪದೊಳ್ ಇರಿಸುವೆಂ! ಎಂದಡೆ, ಮಾಂಡವ್ಯಂ ಅಲ್ಲ ಇರಸಲಾಗದು; ಆತನ ವೃತ್ತಾಂತಮಂ ಕೇಳೆಂದು ಪೇಳಲ್ ನೆಗಳ್ದಂ; ಅದ್ ಎಂತೆನೆ.

e nor Indra,

1. ಕಳಂಕ ಎಂಬ ಚಿನ್ಹವನ್ನು ಆತನು (ಧರಿಸಿ ಕೊಂಡನು). 2. ಇವರು ಚಂದ್ರನ ಹೆಂಡರು.

ಚಂಪಕಮಾಲಾ ವೃತ್ತ.

1424. ಸುರಪತಿ ಗೌತಮಾಖ್ಯಮುನಿನಾಥನ ಕಾಂತೆ ಯಹಲ್ಯೆಯಂ ವನಾಂ
ತರದೊಳ್ ಕಂಡೊಡಂಬಡಿಸಿ ಕೂಡುತಿರಲ್ಮುನಿ ಕಂಡು ಕೋಪದಿಂ
ಧರಿದು ಸಹಸ್ರಯೋನಿ ನಿಜಗಾತ್ರದಿ ಪುಟ್ಟಲಿ ! ಯೆಂದು ಶಾ
ಪಮುಂ ಭರವಸದಿಂ ಕೊಡಲ್ಕವನ ದೇಹದೊಳಾದವು ಯೋನಿ
ಸಾವಿರಂ.

ವಚನ.

1425. ಅಂತು ಜನಯಿಸಿದ ಯೋನಿಸಾವಿರಮುಂ ಕಂಡು ಲಜ್ಜಿತನಾಗಿ ತಲೆಯಂ ಬಾಗಿ ಮುನಿಪತಿಯ ಚರಣಸರಸಿರುಹದೊಳ್ ಕೆಡದು ಕರುಣ ಬಪ್ಪಂತೆ, ನುಡಿದು ಕ್ಷಮಿಸುವದ್ ಎಂದು ಬೇಡಿಕೊಳೆ, ಯಾ ಯೋನಿಗಳೆಲ್ಲಂ ನೇತ್ರಂಗಳ್ ಆಗಲಿ ! ಎಂದು ಮಾಡಿದಂ; ಆಗಲೆ ಶಕ್ರಂ ಸಹಸ್ರನೇತ್ರಂ ಆದಂ ; ಆತಂ ಅನೇಕದೇವಕಾಂತೆಯರ್ ಇ
f. nor the Sun, ರ್ದು ಮುನಿಪತ್ನಿಗ್ ಅಳುಪಿದಂ, ದಾಯಾಕನ್ಯೆಯಂ ಬಿಡುವನಲ್ಲೆಂದು ಪೇಳೆ, ಯಾದಡೆ ಸೂರ್ಯನ ಸಮೀಪದೊಳ್ ಇಡುವೆಂ! ಎನೆ, ಯಾ ಡಿಂಡಿಭಿಗೆ ಮಾಂಡವ್ಯಂ ಅಲ್ಲಿರಿಸುವದ್ ಅನುಚಿತಂ, ಎನೆ, ಯಾತ ಮಾಡಿದ ದೋಷಂ ಏಂ ? ಎಂದು, ಬೆಸಗೊಂಡಡೆ, ಇಂತ್ ಎಂದ.

ಕಂದ.

1426. ಕ್ಷಿತಿಯೊಳ್ಶೌರಿಪುರಕ್ಕಧಿ
ಪತಿ ಯಂಧಕವೃಷ್ಣಿ, ಕುಂತಿ ಯಾತನ ಸುತೆ, ಯಾ
ಸತಿ ನದಿಯೊಳು ಮ್ಮೈ ದೋಳವಾ
ಗತಿಶಯರೂಪಿಂದೆ ಬಂದು ನೆರದಾಸೂರ್ಯಂ.

1427. ಆರುಂ ಕೂಡದ ಕುಂತಿಯೊ
ಳೋರಂತಿರೆ, ನೆರದ ತರಣಿಯೊಳು ತರುಣಿಯು ನಾ
ವಾರ್ಯೈದಿಡೆ, ಬಿಡುವವನೇ ?
ವಾರಿಜಮುಖಿದಾಯಯನವ ? ಕೇಳೆಲೆ ಕಾಂತೇ !

ವಚನ.

1428. ಎನೆ; ಈಕಾಂತೆಯಂ ಯಮನ ಸಮೀಪದೊಳ್ ಇರಿಸುವೆಂ ! ಆತಂ ಬಾಲಬ್ರಹ್ಮಚಾರಿ, ಸಕಲವಿದೂಷಣವಿದೂರಂ, ಸತ್ಯಂ, ಎಂದು ಡಿಂಡಿಭಿ ಯೆನೆ, ಮಾಂಡವ್ಯಂ ಅದಕ್ ಒಡಂಬಟ್ಟು ಯಮಪುರಕ್ಕೆ ಪೋಗಿ ಯಾಕನ್ಯೆಯಂ ಕಾಲನ ಸಮೀಪದೊಳ್ ಇರಿಸಿ, ತೀರ್ಥಯಾತ್ರೆಗೆ ಪೋಗಲ್, ಆತಂ ಕನ್ಯೆಯ ರೂಪುಯೌವನವಂ ಕಂಡು ಸೋಲ್ತು ಕನ್ಯೆಯ ಸ್ವೀಕೃತಂ ಮಾಡಿ ತನಗೆ ಬ್ರಹ್ಮಚಾರಿ ಯೆಂಬ ಪ್ರಸಿದ್ಧಿ ಯುಳ್ಳದರಿಂ, ಜನಾಪವಾದಂ ಅಕ್ಕುಂ ಎಂದ್ ಅಂಜಿ ಯಾಕೆಯಂ ಪಗಲ್ ನುಂಗ್, ಇರಳಾಗಲ್, ಉಗಳಿ, ದಿನಂಪ್ರತಿ ಸಂಭೋಗಸುಖಮಂ ಅನುಭವಿಸುತ್ತಂ ಇರ್ದ್, ಒಂದು ದಿನಂ ಗಂಗಾಸ್ನಾನಕ್ಕೆ ಪೋಗಿ ಯಾಕನ್ಯೆಯ ಪೊಟ್ಟೆಯೊಳ್ ಇರ್ದಳಂ ಪೊರಡಿಸಿ ಲತಾಮಂಟಪದೊಳ್ ಇರಿಸಿ ಜಳಮಂ ಪೊಕ್ಕು ಅಘಮರ್ಷಣಮಂ ಗೈದು, ಅನುಷ್ಠಾನಮಂ ದಿನಂಪ್ರತಿಯಲ್ಲಿ ಮಾಡುತಿರ್ಪಲ್ಲಿ, ವಂದು ದಿನಂ ಅವಳ ವಹ್ನಿ ಕಂಡುಂ ಆಸಕ್ತಚಿತ್ತನಾಗಿ ತನ್ನ ಸಖಂ ಅಪ್ಪ ಅನಿಲನಂ ಕರದು ಎನಗ್ ಈ ಕಾಂತೆಯ ವಶಂ ಮಾಡಿ ಕೊಡುವುದ್ ! ಎನೆ, ಯಾತಂ ಇಂತ್ ಎಂದಂ :

*g. Yama, a proper guardian of our girl.*

*Disgrace of the girl.*

ಕಂದ.

1429. ಅಂತಕನತಿಬಲನಾತನ
ಕಾಂತೆಯಳಂ ತಪ್ಪು[1]ದೆನಗೆ ವಶವಲ್ಲಿಂತೀ

1. ತರುವದು. (ವ್ಯಾ. ಸೂ 95.)

ಭ್ರಾಂತೀಕೆನೆ ಯವಳೊಲಿದಡೆ,
ಯಂತಕನೇಗೈವನವಳನೊಡಬಡಿಸೆಂದಂ.

ವಚನ.

1430. ಎಂದ್ ಎನಲ್ ಆಕೆಯು ಹೊರೆಗ್ ಅಮಂದಾನಿಲಂ ಐದೆ, ಪಲವು ವಚನೋಕ್ತಗಳಿಂದೆ ಇಂದುಮುಖಿಯುಂ ಕಿರಿದ್ ಒಡಂಬಡೆಂದ್ ಒಡೆನುಡಿಸಿ ಕೊಡೆ, ಯಾಕೆಯೊಡನೆ ಕೂಡಿದಂ ಅವನ್ಹಿ; ಕಂಡ್ ಆಸಮಯದೊಳ್ ಆಸತಿ ಬೇಡ! ಯಮಂ ಬರ್ಪ ಪೊತ್ತಿಲ್ಲ ಇರದ್ ಇರ್ತೆ! ಯಂದ್ ಆಡಿದಡ್, ಅಗ್ನಿ ಯೇನಾದಡುಂ ನಿನಗ್ ಒಲ್ದೆಂ! ಅಬಲೆ! ಮಿಡುಕಲಾರೆ ಯೇಂ?

ಕಳಾಭಾಷಿಣಿ ವೃತ್ತ.

1431. ಎಂದರಾಸುದತಿ ನುಂಗಿದಳಗ್ನಿಯನಂತಕಂ
ಬಂದು ತತ್ಸತಿಯನೊಯ್ಯನೆ ನುಂಗಿ ನಿಜೋತ್ಸುಖಂ
ಪೊಂದಿರಲ್ಕವಳು ಯಗ್ನಿಯನಾಗಳೆ ಸಂಮುದ
ದಿಂದುಗುಳ್ದು ನೆರೆ ಕೂಡಿದಳಾತನ ಪೊಟ್ಟೆಯೊಳ್.

ವಚನ.

1432. ಅಂತ್ ಇರುತ್ತಿರೆ, ಲೋಕದೊಳ್ ಅಗ್ನಿ ಯಭಾವಂ ಆಗಿರೆ, ದ್ವಿಜೋತ್ತಮರ ಹೋಮಾದಿಕರ್ಮಂ ಕೆಡೆ, ತ್ರೈಲೋಕಕ್ ಎಲ್ಲಂ ಸಂತಾಪಂ ಪುಟ್ಟೆ ಸಕಳದೇವರ್ಕಳೆಲ್ಲ ಜ್ಞಾನದಿಂ ಅರಿದು ಮರುತನಂ ಕರದು ಯಗ್ನಿ ಯಲ್ಲಿಗೆ ಪೋದನೆಂದು ಬೆಸಗೊಳೆ, ನಾನ್ ಅರಿದುದಿಲ್ಲ್ ಎನೆ, ಯಾತಂ ಎಲ್ಲ್ ಇರ್ದಪಂ, ನೀನ್ ಅರಸಿ ತರ ಪೇಳುದ್! ಎನೆ, ಯಾತಂ ಅಗಲಿ ಯಂದ್ ಎಲ್ಲಾ ಸುರರ್ಗೆ ಬೌತಣಮಂ ಪೇ

ಳ್ದು ತಂನ ಮನೆಗ್ ಅವರೆಲ್ಲರಂ ಕರದು ಕೊಂಡು ಬಂದು ಪಾದಪ್ರ
ಕ್ಷಾಳನಂ ಗೈದು ಅವರೆಲ್ಲರ್ಗ್ಗ ಬಂದೊಂದಾಸನಮಂ ಇತ್ತು ಯಮಂ
ಗೆ ಮೂರಾಸನಮಂ ಇಕ್ಕೆ, ಯನಗೆ ಮೂರಾಸನಂ ಯಾಕ್?
ಎನೆ, ವಾಯುಂ ಇಂತ್ ಎಂದಂ:

ಕಂದ.

1433. ನಿನ್ನುದರದೊಳುಂ ಬೈತಾ
ಕನ್ಯಯನುಗುಳೆಂದಡೆ, ಯುಗಳ್ದನಂತಕನೆಲೆ
ಕನ್ಯಯೆ ! ನಿನ್ನುದರದ ಶಿಖಿ
ಯಂ ನೆರೆ ನೀನುಗುಳೆಂದೊಡೆ, ಯುಗಳ್ದಳ್ಬೇಗಂ.

1434. ಅಂತುಗಳಲ್ಕಾಗುರಿದವು
ಕಾಂತೆಯ ರಂಜಿಸುವ ಗಡ್ಡಮೀಸೆಗಳಂದಿಂ[1]
ದಂತಡಿಗಿ ಪೋದವೆಲ್ಲಾ
ಕಾಂತಾಳಿಯ ಗಡ್ಡಮೀಸೆ, ಇನಿತಿಲ್ಲದ ವೊಲ್.

1. ಪೂರ್ವದಲ್ಲಿ ಸ್ತ್ರೀಯರಿಗೂ ಮೀಸೆಗಳು ಇದ್ದವು ಅಂತೆ.

ಉತ್ಪಲಮಾಲಿಕಾ ವೃತ್ತ.

1435. ಅಂತಕನಾಗಳಗ್ನಿಯನಭೀಕ್ಷಿಸಿ ದಂಡಮನೆತ್ತಿ ಕೋಪದಿಂ
ದಂ ತಿತುಪುತ್ತಲೈಯ್ದಡವ ಸರ್ವರೊಳಂದಿರದೋಡಿ ಪ್ರೊಕ್ಕು ನಿ
ಶ್ಚಿಂತವಡಂಗಿ ಸರ್ವಗತನಾದನೆನಿಪ್ಪುದು ವೇದಶಾಸ್ತ್ರದೊ
ಳ್ಸಂಕೇತಮುಂಟೆ ? ಪೇಳ! ಯೆನೆ, ಯಾದ್ವಿಜರೆಂದರು ಸತ್ಯಮೆಂ

ವಚನ.

1436. ಅದಲ್ಲದೆಯು ಸರ್ವಗ್ನಂ, ಗಡ ! ಕಾಲನುದರದೊಳ್ ತಾನಿರ್ದುದ್ ಅರಿಯಂ ಗಡ ! ತಾಂ ಸರ್ವಜ್ಞತೆ ಘಟಿಸುವದ್ ಅಪ್ರೂರ್ವಂ, ಇದಂ ಪೇಳಿಂ! ಎಂದಡ್, ಅವರ್ ಇಂತ್ ಎಂದರ್ ಆತನ ಗುಣಂ ಕೆಡೆ, ದೇವತ್ವಮುಂ ವಂದ್ಯತ್ವಮುಂಕೆಡವುದೆ ? ಪೇಳಿಂ! ಏನೆ, ಆದರ್ ಎಂಮ ಮಾರ್ಜಾಲಂಗೆ ಕಿಂಚಿದ್ದೂಷಣೆ ಬರೆ, ಯುದರ ಸಾಮರ್ಥ್ಯ ಕೆಡವುದೆ ? ಪೇಳಿಂ ! ಎಂದು ವಾದಂ ಗೆಲ್ದು ಬೆಕ್ಕಂ ಮಾರಿ ಯುದ್ಯಾನಕ್ಕೆ ಬಂದರು.

---

## ON THE DIVINE WEAPONS OF ISHVARA AND THE OTHER GODS.

4. ಈಶ್ವರಾದಿ ಸಕಲ ದೇವಾಸುರಾರ್ಜುನ ಶಸ್ತ್ರಾಸ್ತ್ರ ಸಮರ್ಥ ಪರಿಕ್ಷಾವರ್ಣನ. (4ನೇ ಆಶ್ವಾಸ.)

ಕಂದ.

1437. ನೆರೆ ಭ್ರಮರ[1]ರತಿಪರಮಸಖ
ವರನುದಯದಿ ಸಂವರ[2]ಥನುವಂ ಗದೆ ಪಿಡಿದಾ
ದರದೊಳ್ ಬೇಡರ ರೂಪವ
ಧರಿಯಿಸಿ ತತ್ಕ್ಷಣದೊಳಗವರೊಲವಿಂ ನಡದರ್.

1. ಕಮಲ. 2. ಸಂ+ವರ=ಬಹಳ ಚಲೋದು.

ಚಂಪಕಮಾಲಾ ವೃತ್ತ.

1438. ನಿರುಪಮಪಾಟಲೀಪುರದ ಪಿತ್ತಪದಿಕ್ಕಿನ ಶೋಭೆ ವೆತ್ತ ಗೋ
ಪುರದೊಳುಮ್ರೊಯ್ದ್ಯೊ ಕಂಜಭವನಾಲಯಮುಂ ನೆರೆ ಪೊಕ್ಕು ಭೇ
[ರಿಯಂ
ತ್ವರದೊಳ್ ಪೊಯ್ದು ಕುಳ್ತಿರಲು ಯುಂನತಪೀಠದ ಮಧ್ಯದಲ್ಲಿ, ತ
ತ್ಪುರವರವಿಪ್ರರೈದೆ ನಡೆತಂದರನೂನಕಳಾಸುಕೋವಿದರ್.

Third meeting of these princes and the brahmans in the temple of Brahma.

ವಚನ.

1439. ಅಂತು ಬಂದವರಂ ಕಂಡು, ನೀವ್ ಯಾಕೆ ಭೇರಿಯ ಪೊಯ್ದಿರಿ ? ಸಿಂಹಾಸನದೊಳ್ ಯೇಕೆ ಕುಳಿತಿರಿ ? ಎನೆ, ವಿನೋದದಿಂ ಭೇರಿಯಂ ಪೊಯ್ದೆವತ್ತು ! ಕುಳ್ಳರ್ಪ ತಾಣಂ ಎಂದು ಕುಳ್ಳರ್ದೆವು ; ಇದು ದೋಷವೆ ? ಪೇಳ್ ! ಎನೆ, ಯಾದರೆ ವಿದ್ವಾಂಸರಾದವರು ವಾದ ಮಾಳ್ಪಡೆ, ಭೇರಿಯಂ ಪೊಯ್ದು ವಾದಂ ಗೆಲ್ದಲ್ಲದೆ, ಸಿಂಹಾಸನದೊಳ್ ಕುಳ್ಳರ ಬಾರದ್, ಎನೆ, ಆದಡೆ ಮಾಣಲಿ ಎಂದು ಕೆಳಗೆ ಕುಳ್ಳರೆ, ಮತ್ತು ವಿಪ್ರರ್ ಇಂತ್ ಎಂದರ್ :

ಕಂದ.

1440. ಇಲ್ಲಿಗೆ ಬಂದೀಕಾರ್ಯಮ
ನೆಲ್ಲಮನೆಮಗರುಪೆಂದಡೆ, ಯುವರಿಂತೆಂದರು.
ಬಿಲ್ಲಂ ಗದೆಯಂ ಮಾರುವ
ಡಿಳ್ಳಿಗಂ ಕೊಂಡು ಬಂದೆವು ನಾವಿವನೆಂದರ್.

1441. ಎನೆ ಯಿವಗಳ ಬೆಲೆಯ ಪೇಳಿ
ಮೆನೆ, ಪ್ರತ್ಯೇಕ[1]ದ್ವಾದಶಸಹಸ್ರದ್ರವ್ಯಂ !
ಯನೆಮಿವಗಳ ಸಾಮರ್ಥ್ಯೇ
ನೆನೆ, ಈಬಿಲ್ಲಿಂ ಬಾಣಮ ಪೊಡೆಚ್ಚಡೆಯುಂ,

1. ಬಂದೊಂದಕ್ಕೆ ಹಂನೆರಡು ಸಾವಿರ

ವಚನ.

1442. ಶತಯೋಜನಮಂ ಪೋಗಿ ಶತ್ರುಭೇದನಂ ಮಾಳ್ಪದ್ ; ಈಗದೆಯಂ ಮಹಾಪರ್ವತದೊಳ್ ಇರಿಸೆ, ಸಂಚೂರ್ಣಮಂ ಮಾಳ್ಪದ್, ಎನೆ, ಇವಂ ಏತರಿಂ ಮಾಡ್ದಿರ್ ? ಎನೆ, ಕೃತಕಕಿರಾತರ್ ಇಂತ್ ಎಂದರ್:

ಚಂಪಕಮಾಲಾ ವೃತ್ತ.

1443. ಅಡಿವೆಯೊಳಾಂ ತೊಳಲ್ದು ಬರುತೊಂದೆಡೆಯೊಳ್ಕೃತವಾದ ಮೂಷಿ [ಕಂ
ಕೆಡದಿರಲೀಗದಾಧನುವನಂತವರಸ್ಥಿಯಲಿಂದೆ ಮೂಡೆ ವೆಂ
ದೊಡೆ, ಬೆರಗಾಗಿ, ನಿಂಮ ಗುಣನಾಮಮದಾವುದು ? ಪೇಳಿಮೆಂದು [ಕೇ
ಳ್ದೊಡೆ, ಧರೆಯಲ್ಲಿ ಕೋಟಿಭಟರೆಂಬುದು[1] ನಂಮ ಗುಣಾಭಿಧಾನಕಂ.

ಕಂದ.

1444. ಎನಲೀಯಾಯುಧವೀಪೆಸ
ರಿನಿತನಾಂತು ನಿಮಗಿದ್ಯಾಕೆ ? ಯುಣಾಲುಡಲಿಲ್ಲಂ
ದೆನೆ, ಬರ್ಪ ಬಟ್ಟೆಯೊಳ್ಭೋಂ

1445. ಕನೆ ಕಳಸರ್ಲಕೊಂಡೆರೆನಲು, ಕೇಳ್ದಾಗಳ್
ನಗೆ ಘೊಳ್ಳನೆ ಸಭೆಯೆಲ್ಲಂ ;
ನಗಲೇತ[1]ಕ್ಕುಳ್ಳದನಿತು, ಪುಶಿ ಯುಂಟೆ ? ಪೇಳೀ !
ಜಗದೊಳಗೆ ನಿಂಮ ಮತದೊಳ್
ಬಗೆದರಿವುದು ನಿಮ್ಮ ಮತಪುರಾಣಕ್ರಮದೊಳ್ !

1. ಇದ್ದದ್ದು ಅಷ್ಟು=ಸುಳ್ಳಲ್ಲ.

1446. ಎಂದಡೆ, ಸಭೆಯೆಲ್ಲಂ ತಾ
ವೆಂದರಿಂತೊಂದು ಪುಶಿ ಪೇಳಲಂಮವೆನೆ, ಯಂ
ತೆಂದೊ[2]ಸುಮತಿಯುಮರರ್ಪೇ
ಳೆಂದುಂ ಬೆಸಗೊಳೆ, ಮನೋವೇಗ ಪೇಳ್ದಂ ತಾಂ:

1. ನಮ್ಮ ಮತ ಪುರಾಣಗಳು ಅಂಥಾ ಸುಳ್ಳು ಹೇಳಲಾರವು. 2. ವಸುಮತಿ.

1447. ಅಹಿರದೇಶದೊಳಗೊಪ್ಪುವ

*a.* the story of the fool.

ಮಹೂರಿ ಯಂದಿರವುದೊಂದು ಪುರವಾಪುರದೋ

ಳ್ಸಹನಿಲ್ಲದ ಕಡು ಮೂರ್ಖಂ

ಬಹುಬಳದೀರ್ಘಕಾಯನೆಂತೆಂಬತುಳ ಭಟಂ

ಚಂಪಕಮಾಲಾ ವೃತ್ತ.

1448. ತವಕದಿ ಬೆಲ್ಲವಂ ಮೆಲುತೆ ನಾಲಿಗೆಯಂ ಬಿಡವರ್ಧ ಕಚ್ಚಿಕೊಂ

ಡವ ಕಡು ನೊಂದು ತಾನುಮವಿವೇಕದೊಳುಂ ಮುರಕೊಂಡ ಪ [ಲ್ಗಳಿ

ಲ್ಲವನವ ಬೆಲ್ಲ ಮೆಲ್ದಡಧಿದೇವಿಯರಾಣೆ ! ಯನುತ್ತ ಭಾಷೆಯಿಂ

ದವನಿರದಾಣೆ ಕೊಟ್ಟು ತೊರದಂ ಕಡು ಕೋಪದಿ ಮೂರ್ಖನೆಂ [ಬವಂ.

ವಚನ.

1449. ಅಂತು ತನ್ನ ಯೋಗ್ಯತನಮಂ ಅರಿಯದೆ, ಬೆಲ್ಲಮಂ ತೊರದು ತ

ನ್ನ ಸುಖಕ್ಕೆ ತಾನೆ ಇತರನಾದ ಗುಡಭೀತಿ ಯಂಬ ಮೂರ್ಖನಂ

ತವರು ನಿಮ್ಮ ಸಭೆಯೊಳುಳ್ಳಡೆ, ಪೇಳೆಲಮ್ಮೆವೆನೆ, ಇಂತಪ್ಪವರ್

ಎಮ್ಮ ಸಭೆಯೊಳ್ ಇಲ್ಲ ಪೇಳಿಂ ಎನೆ, ಮನೋವೇಗಂ ಇಂತ್

ಎಂದಂ

ಕಂದ.

1450. ಉಂಡುಟ್ಟು ಬಾಳ್ವ ನರರಂ

*b.* the story of Chandavega.

ಕಂಡರೆ, ಸೈರಿಸದ ಚಂಡವೇಗನ ಕಥೆಗೋ

ರಂಡಲೆ[1] ಯನಿಪ್ಪತಿ ಭಯಂ

ಗೊಂಡಪ್ಪೆನಂತಪ್ಪರಿಲ್ಲನೆ ನಿಜಸಭೆಯೊಳ್ ?

1. ಆ ಕಥೆಗೆ ಮಿಕ್ಕದ್ದು ಎನಿಸುವ ಭಯ=ಆಚಂಡವೇಗನಿಗಿಂತ ಹೆಚ್ಚು ಸೈರಿಸಲಾರದವರು.

ವಚನ.

1451. ಎನಲ್, ಆಚಂಡವೇಗನ ಕಥೆ ಎಂತ್? ಎಂದು ವಿಪ್ರರ್ ಕೇಳೆ, ಮನೋವೇಗಂ ಪೇಳ್ದಂ:

ಕಂದ.

1452. ಧರೆಗೊಪ್ಪುವ ಪುಜ್ಜನಿಯಾ
ಪುರದೊಳು ವ್ಯವಹಾರಿಚಂಡವೇಗನೆನಿಪ್ಪಂ
ಪರದಾಡಿ ಪಲವು ಸೂಳೊಳು
ಪಿರಿದರ್ಥಂ ನಷ್ಟವಾಗಿ ಬಡತನವಾಗಲ್.

ಉತ್ಪಲಮಾಲಿಕಾ ವೃತ್ತ.

1453. ಅಂತು ದರಿದ್ರನಾಗಿ ಯುಣಲಿಲ್ಲುಡಲಿಲ್ಲೆನಗೆಂದು ದುಃಖದಿಂ
ಚಿಂತಿಸಿ ತಾಳದಂ ತಪವನೊಲ್ದು ಬಲಾರಿಯ ಮುಂದೆ; ಯಾಕೆ ಬೇ
ಳ್ಪಂ[1]ತುಟನೀವೆನುಂ! ಪಡೆದು[2] ಬೇಡುವೆನಾಂ; ನೆನೆದತ್ತು ಸಾಧ್ಯವ
ಪ್ಪಂತುಟನೀವುದಂ ದಯದಿಮೆಂದರವಂಗೆ ಬಲಾರಿ ಬೇಗದಿಂ

1. ಬೇಡುವಷ್ಟು. 2. ವ್ಯವಹಾರಿಯ ಮಾತು: ನೆನಿಸಿದ್ದು ಸಾಧ್ಯವಾಗುವಷ್ಟನ್ನು ಕೊಡುವದು.

ಕಂದ.

1454. ಮುನ್ನ ನೀ ಕೊಟ್ಟುರಿಸಿರ್ದ
ಪೊನ್ನಿನ ಫಲ[1]ವಿಲ್ಲದಾಗಿ ಯದೊಂದುಳಿಯಲುಂ,
ನಿನ್ನಭಿಮತಫಲವೀವೆನ
ದಂ ನೆಟ್ಟನೆ ಬೇಡನಲ್ಕೆ, ಯವನಿಂತೆಂದಂ:

1. ನೀನು ಮುಂಚೆ ಹೊನ್ನು ದೊರೆಯುವಂತೆ ದಾನ ಮಾಡಲಿಲ್ಲ—ಅದನ್ನು ಬಿಟ್ಟು ಬೇಡು.

1455. ಮುಂ ಕೊಟ್ಟಿಟ್ಟದನುಳ್ಳಡೆ,
ನೀಂ ಕೊಡಲ್ಯಾಕೆನೆ ತಾನೆ ಮಾಳ್ಪುದು ಫಲಮಂ !
ಮುಂ ಕೊಂಡಿರ್ದುದರಿಂ, ಪಲ
ವುಂ ಕಾಲಂ ನಿನ್ನ ಮುಂದೆ ತಪದೊಳ್ಸವ ದೇಂ.

ವಚನ.

1456. ಎನೆ, ಮೆಚ್ಚಿ, ನಿನಗೆ ಭಾಗ್ಯಂ ಇಲ್ಲದಡಂ, ನಿನ್ನ ನೆರೆಮನೆಯುವರ ಭಾಗ್ಯಮಂ ಪಚ್ಚಿ ಕೊಡುವೆನ್! ಎಂದು ಬಿರಿದ್ ಅಪ್ಪ ಜಾಗಟೆಯಂ ಕೊಟ್ಟು, ಇದಂ ನೀನ್ ಏನಾದಡಂ ನೆನದು ಬಾರಿಸಲಾಕ್ಷಣದೊಳ್ ಬರ್ಕುಂ; ಅದರ ಅರ್ಥಂ ನಿನ್ನ ನೆರೆಮನೆಯುವರ್ಗೆ ಬರ್ಕು; ಪೋಗ್! ಎಂದ್ ಎನಲು, ಯಾಜಾಗಟೆಯುಂ ಕೊಂಡು ಬಂದು ತನ್ನ ಮನೆಯೊಳ್ ಎಲ್ಲಧನಕನಕ ಸಮೃದ್ಧಿ ಯಾಗಲ್ ! ಎಂದು ಬಾರಿಸೆ, ಧನಕನಕ ಸಮೃದ್ಧಿಯಾಯ್ತು; ಅದರರ್ಥಂ ನೆರಮನೆಯುವರ್ಗೆ ಆಯ್ತುಂ; ಅದಂ ಕಂಡು ಸೈರಿಸಲಾರದೆ ಕರಂ ಶಿಡಿಮಿಡಿ ಗೊಂಡು ಮತ್ತೆ ತನ್ನಯ ವಿತ್ತವೆಲ್ಲಂ ಪೋಗಲಿ ! ಎಂದು ಬಾರಿಸೆ, ಯಲ್ಲಂ ಪೊಯ್ತು; ಆ ನೆರಮನೆಯುವರ್ ಅರ್ಥಂ ಅರ್ಥಂ ಪೋಯ್ತು; ಮತ್ತೆ ನಿತ್ತರಿಸದೆ ನನ್ನ ವೆರಡು ಕಂಣ್ ಒಡದು ಪೋಗಲಿ! ಎಂದು ಬಾರಿಸೆ, ತನ್ನ ವೆರಡು ನೆರಮನೆಯುವರದ್ ಬಂದು ಕಂಣ್ ಒಡದು ಪೋಯಿತು; ಮತ್ತೆ ತನ್ನ ಪೆರಡು ಕಾಲಂ ಮುರಿದು ಪೋಗಲಿ! ಯಂದು ಬಾರಿಸೆ, ತನ್ನ ವೆರಡು, ನೆರಮನೆಯುವರದ್ ಬಂದು ಕಾಲಂ ಮುರಿದು ಪೋದುದು; ಇಂತು ಪೆರರ್ ವುನ್ನತಿಯ ಸೈರಿಸದ್ ಅಸಂಖ್ಯರು ನಿಮ್ಮ ಸಭೆಯೊಳ್ ಉಳ್ಳಡೆ, ಪೇಳೆಲಂಮೆಂ, ಎನೆ, ಇಂತಪ್ಪವರ್ ಎಮ್ಮ ಸಭೆಯೋಳ್ ಇಲ್ಲ; ನೀವ್ ಅಂಜದೆ ಪೇಳಿಂ! ಎನೆ, ಮನೋವೇಗಂ ಪೇಳಲ್ ನೆಗಳ್ದಂ :

ಕಂದ.

1457. ಶತಬಲಿ ಯಂಬ ಮಹೀಪತಿ
ಯತಿಶೂರಂ ಮೋಹವಳಿದು ತಂನಯ ಪದಮಂ
ಸುತವೆನಿಪ ಸಹಸ್ರಬಲಿ
ಕ್ಷಿತಿಪತಿಗಿತ್ತೊಂದು ಗಿರಿಯೊಳಿರ್ದಂ ತಪದಿಂ.

Different divine weapons made of the bones of king Shatabali.

ವಚನ.

1458. ಅಂತು ತಪಂ ಬಡುತ್ತಿರೆ, ದೇವರ್ಕಳ್ ಅದಂ ಅರಿದು ಸಹಸ್ರಬಲಿ ಬಲಿಯದ ಮುನ್ನವೆ, ಕೊಲ್ಲದಿರ್ದಡೆ, ನಂಮ ದೆಶೆ ಗೆಡಿಸಿ ಕೊಲ್ದಪಂ; ಎಂದು ತಾವೆಲ್ಲರುಂ ನೆರದು ಪಿರಿದಾಲೋಚನೆ ಗೈವುತ್ತಿರೆ; ಮುನ್ನಲ್ ಈತನಂ ಕೊಲ್ಲದಡ್, ಆತಂ ಸಾಧ್ಯನಾಗಂ; ಈತಂ ತಾಪಸಂ; ಶಸ್ತ್ರದಿಂ ಕೊಲ್ಲಲು ಪಾಪಂ ಸಮನಿಸುಗುಂ; ಎಂದು ತಾವೆಲ್ಲರುಂ ಕೂಡಿ ವಜ್ರಕೂಟಾನ್ವಿತಂ ಅಪ್ಪ ಜಿಂಹೆಯ ಗೋವಂ ಪುಟ್ಟಿಸಿ ಯಾಗೋವಿಂ ನೆಕ್ಕಿಸಿ ಕೊಲ್ಲಲ್, ಆತನ ಮಸ್ತಕದ್ ಅಸ್ತಿಯೊಳ್ ಅರ್ಧಂ ಶಕ್ರಂಗೆ ವಜ್ರಾಯುಧವಾಯ್ತು; ಮತ್ತ್ ಅರ್ಧಂ ಹರಿಗೆ ಚಕ್ರವಾಯ್ತು; ಮತ್ ಆತನ ಪೃಷ್ಠದ್ ಅಸ್ತಿಯರ್ಧಂ ಹರಂಗೆ ಪಿನಾಕವಾಯ್ತು; ಮತ್ತ್ ಅರ್ಧ ಗಾಂಡೀವ ಎಂಬ ಬಿಲ್ಲಾಯ್ತು; ಮತ್ತ್ ಅದಂ ವರುಣಂಗೆ ಕೊಟ್ಟರ್; ಆತಂ ಅದಂ ಪಾರ್ಥಂಗೆ ಕೊಟ್ಟಂ; ಅಲ್ಲದೆಯುಂ.

ಕಂದ.

1459. ಉದರದೆಲುವುಗಳನಿತು ತಾಂ
ತ್ರಿದಶವ್ರಾತಕ್ಕೆ ಬಿಲ್ಗಳಾದವು; ಕೈಕಾ
ಲೊದವಿರ್ದಲ್ಲಿಯ ಎಲು ಬ
ಲ್ಗದೆ ಯಾದವು; ಸಪ್ರಸ[1]ಭನಭೀಕ್ಷಿಸಲದರೊಳ್.

1. ಬಹಳ ಬಲವುಳ್ಳದ್ದು.

1460. ನೀಲಮುಖಿ[1] ಕೌರುವಕ್ಷಿತಿ
ಪಾಲಂಗುದ್ದಂಡರುಧಿರೆ[2]ಮುಖಿ, ಭೀಮಂಗಾ
ಕಾಲಂಗೆ ಕಾಲದಂಡಂ[3]
ಮೇಲಾದೆಲುವುಳಿದ ಸುರಸಮೂಹಕ್ಕನಿತುಂ.

1. ಅವನ ಗದೆಯ ಹೆಸರು. 2. ಭೀಮನ ಗದೆಯ ಹೆಸರು. 3. ಕಾಲನಗದೆ.

1461. ಅಂದಾಮುನಿಪತಿಯುಸ್ತ್ರಿಗ
ಳಿಂದಂ ತೇಜತ್ರಯ[1] ತ್ರಿಂಶತ್ಕೋಟಿಸುರರ್ಗಾಯುಧ
ಸಂದಾಯುದಿಮಾದವು ; ನರ
ದಿಂದಾದುದು ಬಗವಡಬ್ಜಸಂಭವ[2]ಪಾಶಂ.

1. ಮೂರಕ್ಕೆ ಚಿಹ್ನವಾದ ತೇಜತ್ರಯ=33. 2. ಬ್ರಹ್ಮನು ಅದರಿಂದ ವೈರಿಗಳನ್ನು ಹಿಡಿಯುತ್ತಾನೆ ಅದನ್ನ ಎಸೆದರೆ, ಉರುಲು ಬಿಳುವದು.

1462. ದೇವಾಸುರಯುದ್ಧದಿ ಮಹ
ದೇವಂಗೆಲ್ದಂ ಪಿನಾಕದಿಂ ದಾನವರಂ ;
ದೇವೇಂದ್ರನ ಬನಮಂ ಗಾಂ
ಡೀವಾಸ್ತ್ರದಿ ಪಾರ್ಥನೈದೆ ಸುಟ್ಟಂ ಬಳಿಕಂ

1463. ಅರಿದಂ[1] ಶಲ್ಯದ ಬಾಣದಿ
ಧುರದೊಳು ಸೈಂಧವನ ತಲೆಯನವದರಿಂ ಬಳಿಕಾ
ಹಿರಿಯಣ್ಣನ ಯಾಗಕ್ಕತಿ
ಭರದಿಂದಂ ತಂದ ಮುಂದೆ ಲಂಕೆಯ[2] ಧನಮಂ.

1. ಅರ್ಜುನನು ಕರ್ತೃ. 2. ಪಾಂಡವರು ಲಂಕೆಗೆ ಹೋಗಿದ್ದರು.

ತರಳ ವೃತ್ತ.

1464. ಇಳೆಯನಾಃಶರದಿಂದ ಬೇಗದಿ ನಾಗಲೋಕಕೆ ಖಂಡಿಯಂ
ಕಳೆದು ಪೊಕ್ಕಡೆ, ಕಂಡು ವಾಸುಗಿ ಕಾದಿ ಸೋಲ್ತುತಿಮೆಚ್ಚಿ ತಂ
ನೊಳು ವಿಚಾರಿಸಿ ನಾಗದೂತಿ ಯನಿಪ್ಪ ತಂನಯ ಪುತ್ರಿ ಯಾ
ಗಳೆ ವಿವಾಹವ ಮಾಡಲಾಂತೊಲವಿಂದಲೊಪ್ಪಿದನರ್ಜುನಂ.

ವಚನ.

1465. ಆ ಸಮಯದೊಳು ಪ್ರತಿಸಂಧಿಸಿಂಹ[1]ಸಹಸ್ರಬಲಾನ್ವಿತಂ ಅಪ್ಪ ಭೀಮಂ, ಪಾರ್ಥಂ ನೋಡೆ, ನಕುಲಬಲಂ ಎಂಬ ರಾಕ್ಷಸಂಗೆ ಪಿಡಿವೆತ್ತ[2]ನಂ ತಂದಂ ; ಮತ್ತಂ ಆ ಸವ್ಯಸಾಚಿ ಇಂದ್ರಕೀಲದೊಳು ಅತ್ಯಾಯಾಸ ಸೂಕರ ನಿಮಿತ್ತಂ ಹರನೊ[3]ಳು ಕಾದಿ ಗೆಲ್ದಂ ; ಸಾಮಿನಿ ಯೆಂಬ ಬ್ರಾಹ್ಮಣಿಯಂ ವಿವಾಹಸಮಯಹಸೆಯ ಮೇಲ್ ಇರ್ದಳಂ ಯಮಂ ಯಮಪುರಕ್ ಒಯ್ಯೆ, ಯಾಕೆಯ ಭರ್ತಾರಂ ಪಿರಿದುಕ್ಲೇಶಂ ಗೈಯ್ಯೆ, ಕೇಳ್ದು ಪಾರ್ಥಯಮಪುರಕ್ಕೆ ಧಾಳಿ ಇಟ್ಟು ಕಾಲನೋಳ್ ಕಾದಿ ಗೆಲ್ದು ಅವನಂ ಕಟ್ಟಿ ಯುರಳ್ಚಿಯಾ ಬ್ರಾಹ್ಮಣಿಯ ಪ್ರಾಣಮ ತಂದಂ ; ಅಲ್ಲದೆ ತಂನ ಬಾಣದ ಗರಿನಿಮಿತ್ತ್ಯ ಗರುಡನ ಪಕ್ಷಮಂ ಕೊಳ್ವಾಗಲ್, ಅಡ್ಡಂ ಬಂದ ನಾರಾಯಣನಂ ಕಟ್ಟಿ ಯೇಳು ದಿನಂ ನೆಲಮಾಳಿಗೆಯೊಳ್ ಇರಿಶಿ ಬಿಟ್ಟಂ ; ಅದಲ್ಲದೆಯುಂ ಆ ಅರ್ಜುನಂ ತಾಯಿನೋಂಪಿಗೆ ದೇವೇಂದ್ರನೊಳು ಕಾದಿ

The exploits of Arjoona with his divine weapon; yet he is plundered on the road by hunters.

1. ಬಂದೊಂದುವೇಳೆ ಸಾವಿರ ಸಿಂಹಗಳ ಬಲವುಳ್ಳವನು. 2. ಅರ್ಜುನ ರಾಕ್ಷಸರಿಗೆ ಶೆರೆ ಬಿದ್ದಿದ್ದ ಭೀಮನನ್ನು ಬಿಡಿಸಿಕೊಂಡು ಬಂದನು. 3. ಅರ್ಜುನನು ಪಾಶುಪತಬಾಣ ದೊರಕಿಸಿ ಕೊಳ್ಳಲಿಕ್ಕೆ ಇಂದ್ರಕೀಲ ಪರ್ವತದಲ್ಲಿ ತಪಸಿಗೆ ಕೂತಿದ್ದನು—ಆಗ ಈಶ್ವರ ಅವನ ತಪಕ್ಕೆ ಮೆಚ್ಚಿ ಶಬರ ರೂಪದಿಂದ ಬಂದು ಇವನ ಸಾಮರ್ಥ್ಯ ನೋಡಬೇಕೆಂದು ಬಂದು ಹಂದಿಯ ನಿಮಿತ್ತ ಯುದ್ಧ ಮಾಡಿ ತನ್ನ ನಿಜರೂಪ ತೋರಿಸಿ ಆ ಬಾಣ ಕೊಟ್ಟನು.

ಐರಾವತಮುಂ ಶರಪಂಜರಮುಂ ಸ್ವರ್ಗಲೋಕದಿಂ ಇಳುಹಿ ತಂ[4]ದ
ಪರಾಕ್ರಮಿ ದಿವ್ಯಾಯುಧಸಮರ್ಥನಾಗಿರ್ದು ಬಟ್ಟೆಯೊಳ್ ಬರ್ಪ
ಲ್ಲಿ, ಬೇಡರಂ ಸುಲಿಸಿಕೊಂಡಂ ಎಂಬುದ್ ಇದು ನಿಂಮ ಮತಪುರಾ
ಣಶಾಸ್ತ್ರಂಗಳೊಳ್ ವುಂಟೋ? ಇಲ್ಲವ್ರೋ? ಪೇಳಿಂ! ಎನೆ, ಯಾ
ವಿಪ್ರರ್ ಉಂಟೆ ಎನೆ, ಯಾದಡ್ ಆವು ಸುಲಿಸಿಕೊಂಡೆವ್ ಎನೆ,
ಯುಂಮ ನುಡಿಯುಂ ಯಾಕೆ ಅಸತ್ಯಂ ಎಂಬಿರ್? ಎನೆ, ಆ ವಿಪ್ರರೆಲ್ಲ
ನಿರುತ್ತರರಾಗಿ ಮೌನ ಗೊಂಡಿರೆ; ವಾದಂ ಗೆಲ್ದು ಜಯಪತ್ರಮುಂ
ಕೊಂಡು ಮುಂನಿನಂತೆ ವುದ್ಯಾನವನಕ್ಕೆ ಬಂದು ಸುಖದಿಂದಿರುತ್ತಿರ
ಲ್, ಆ ಸಮಯದೊಳ್ ನೇಸರ್ ಪಡವುದು ನಿದ್ರಾಮುದ್ರಿತರಾದರು.

4. ಮಂಣಿನಿಂದ ಬಂದು ಆನೆ ಮಾಡಿ ಅದರ ಮೇಲೆ ಗೌರಿಯ ವಿಗ್ರಹ ಕುಳ್ಳಿರಿಸಿ ಪೂಜೆ ಮಾಡುವರು—ಕುಂತಿ ಅದನ್ನು ಮಾಡುವಾಗ, ನಾನು ಐರಾವತ ತಂದು ಕೊಡುತ್ತೇನೆಂದು ಅರ್ಜುನನು ಹೇಳಿ ಹೋಗಿ ತಂದನು.

ಕಂದ.

1466. ಮಿತ್ರಾ[1]ಭ್ಯುದಯಮನೀಕ್ಷಿಸಿ
ಮಿತ್ರಾ[2]ಭ್ಯುದಯಮನೆ ಮಾಳ್ಪ ಬಗೆಯಂ ಬಗೆದಂ
ಧಾತ್ರಿ ಮರುಭೂಪುರೆನುತಿರೆ,
ಗೋತ್ರಶಿರೋಮಣಿ ಯನಿಪ್ಪ ವೃತ್ತವಿಳಾಸಂ.

1. ಸೂರ್ಯ. 2. ಸ್ನೇಹಿತ.

## ON BRAHMA, THE CREATOR, &c.

5. ಬ್ರಹ್ಮನ ಜಗತ್ಕರ್ತೃತ್ವ, ವಿಷ್ಣುವಿನ ಪಾಲಕತ್ವ ಅಗಸ್ತ್ಯನ ಸಾಮರ್ಥ್ಯತ್ವ ನಿರೂಪಣಂ. (5ನೇ ಆಶ್ವಾಸ.)

ಚಂಪಕಮಾಲಾ ವೃತ್ತ.

1467. ಪರಮಸಖಾ[1]ನ್ವಿತಂ ವಿರ[2]ತಿರೂಪದಿ ಪೋಗಿ ಸರಾಗಪಾಟಲೀ
ಪುರದ ಸಮೀರಣಾಶೆಯೊಳು ರಾಜಿಪ ಗೋಪುರದಬ್ಜಜಾಲಯಾಂ

The fourth meeting of the

1. ಸಖನನ್ನು ಕೂಡಿ ಕೊಂಡಿರುವವನು. 2. ವಿರಕ್ತರ ರೂಪದಿಂದ.

princes and the brahmans.

ತರದೊಳ್ ಪೊಕ್ಕು ಭೇರಿಯನೆ ಬಾರಿಸಿಮುಂನತಪೀಠದಲ್ಲಿ ಕು
ಳ್ಳಿರೆ ಖಚರೇಂದ್ರನಾಪುರದ ವಿಪ್ರಜನಂ ಬರೆ ತೀವ್ರರಾಗದಿಂ;

3. ಮನೋವೇಗ.

ವಚನ.

1468. ಅಂತು ಬಂದು ಸಿಂಹಾಸನದೊಳ್ ಕುಳ್ಳಿರ್ದರಂ ಕಂಡು, ನೀಂ ಈ ಭೇರಿಯಂ ಪೊಯ್ದು ಸಿಂಹಾಸನದೊಳ್ ಕುಳ್ಳಿರ್ದರ್ ಯಾಕ್? ಎನೆ ಯವರ್ ಈ ಸಿಂಹಾಸನದೊಳು ಕುಳಿತರ್ ಯೇನು ದೋಷಂ? ಎನೆ, ಅವರ್ ಈ ಪುರದೊಳ್ ವಿದ್ವಾಂಸರಾದವರು ವಾದಾರ್ಥದಿಂ ಬಂದು ಭೇರಿಯಂ ಪೊಯ್ದು ವಾದಂ ಗೆಲ್ದಲ್ಲದೆ ಸಿಂಹಾಸನದೊಳ್ ಕುಳ್ಳಿರ ಬಾರದ್, ಎನೆ, ಯಾ ಮಾತಿಗೆ ಯವಂ ಮಾಣಲಿ ಯಂದು ಕೆಳಗೆ ಕುಳ್ಳಿರೆ, ಮತ್ತಂ ಇಂತ್ ಎಂದರು.

ಕಂದ.

1469. ಆರು ಗುರುವಾರದೆಶೆಯಿಂ
ವೈರಾಗ್ಯಂ ಬೆತ್ತು ತಪಮನಾಂತಿರಿ? ನೀವೀ
ಕಾರಣಮನೆಮಗೆ ತಿಳಿವ ವೊ
ಲೋರಂತಿರೆ, ಪೇಳಮೆಂದಡವರಿಂತೆಂದರ್:

1470. ಯಮಗೆ ಗುರುವಿಲ್ಲ; ವೈರಾ
ಗ್ಯಮು ದಾರಿಂ ಬಂದುದಿಲ್ಲಾ; ನಾವಾಗಿ ವೇ
ಷಮನಾಂತುದಿಲ್ಲಿದುಂ ತಾಂ
ಸಮನಿಸಿದುದು; ವಿಧಿಯನೇಂಮಾರು ಮಿಾರುವರೇ!

ವಚನ.

1471. ಎನಲ್, ಆವಿಧಿಯ ವೃತ್ತಾಂತಮಂ ಯಥಾಕ್ರಮದಿಂ ಪೇಳಿಂ ! ಎನೆ, ನಾವು ಪೇಳಲ್ ಅಂಜುವೆಂ, ಎನೆ, ಅಂಜಲ್ ಯಾಕ್ ? ಎನೆ, ಗುಣವರ್ಮನ ವೃತ್ತಾಂತದ್ ಅಂತವರ್ ಉಳ್ಳಡೆ, ಪೇಳಲ್ ಅಂಜುವೆಂ, ಎನೆ, ಆವೃತ್ತಾಂತಂ ಎಂತ್ ? ಅದಂ ಪೇಳಿಂ ! ಎನೆ, ಮನೋವೇಗಂ ಪೇಳಲ್ ನೆಗಳ್ದಂ:

ಕಂದ.

1472. ಕ್ಷಿತಿನುತಚಂಪಕಪುರದಧಿ
ಪತಿಗುಣವರ್ಮಂ ; ಪ್ರಧಾನಿಹಿರಿಯಾತಂ ಪೋ
ಗುತಲ್ಲೊಂದು ಸರಸಿಯೊಳ್ಸಲೆ
ಯತುಳನೀರೊಳಗೆ ಚಂಡುಂ ನೆಗದಿರೆ, ಕಂಡಂ.

The story of Gunavarma;

1473. ಅರಸಗದನರುಪಲೀತಂ
ಮರುಳಾಗದೆ ಮಾಣನೆಂದು ಭಾಧಿಸಿ ಕಟ್ಟು
ತ್ತಿರೆ, ಬೊಮ್ಮ[1]ರಕ್ಕಸಂ ನಿ
ತ್ತರಿಸೇ, ನಾಂ ಪೋಪೆನೆಂದು ನುಡಿದರೆ, ಬಿಟ್ಟರ್.

1. ನಾನು ಬೊಂಮರಕ್ಕಸನು, ತಾಳಲಾರೆವುಂ, ಪ್ರಧಾನಿಯ ಮಾತು.

ವಚನ.

1474. ಅಂತು ಬಿಡಿಸಿಕೊಂಡು ವೈರಮುಂ ಮನದೆ ಗೊಂಡು ಪುರದ ವುದ್ಯಾನ ವನದೊಳು ಮರ್ಕ[1]ಟಂಗಳ, ಮನುಷ್ಯರಂ ಕಾಣಲ್ ಬಡನೆ, ಗೀತಮಂ ಪಾಡುವ ವಾದ್ಯಮಂ ಬಾರಿಸುವ ನೃತ್ಯಮಂ ಆಡುವಂತೆ, ಶೀಕ್ಷಿಸಿರೆ ; ಅರಸಂ ಅವಶದಿಂದ್ ಅಲ್ಲಿಗೆ ಪೋಗೆ, ಯಾಮರ್ಕಟಂಗ

1. ಅನ್ವಯ: ಮರ್ಕಟಂಗಳನ್ನು ಪ್ರಧಾನಿ—ಶೀಕ್ಷಿಸಿರೆ.

ಳು ತೂರ್ಯತ್ರಯ[2]ಮುಮಂ ಎಸಗೆ, ಕಂಡು ಬಂದ್ ಅರಸಂ ಅದಂ ಮಂತ್ರಿಗೆ ಪೇಳ್, ಯರಸಂ ಗ್ರಹಚೇಷ್ಟಿತನಾದಂ ಎಂದ್ ಆತಂಗೆ ಧೂಪವಂ ಇಕ್ಕಿ ನಿಗ್ರಹಿಸಿ ಯಾತರಿಂದಂ ಪೋಪೆಂ ಎಂದು ಬಿಡಿಸಿ ಕೊಂಡರಸಂ ಮಂತ್ರಿವೆರಸ್ ಜಲಗದೊಳ್ ಇರ್ದಲ್ಲಿ, ವಾನರಸಂಗೀತವಂ ನಾಂ ಸಮಕ್ಷವಾಗಿ ಕಂಡೆ, ಪುಸಿಯಲ್ಲ, ಬರಿದ್ ಎಂನಂ ಯೇಕೆ ನಿಗ್ರಹಂ ಗೈಯ್ವೆ? ಪೇಳಿಂ! ಎನೆ ಮಂತ್ರಿ ಇಂತ್ ಎಂದಂ:

2. ಗೀತವಾದ್ಯ ನೃತ್ಯ ಎಂಬೀಮೂರು

ಶ್ಲೋಕ.

1475. ಅಶ್ರದ್ಧೆಯಂ ನ ವಕ್ತವ್ಯಂ
ಪ್ರತ್ಯಕ್ಷಮಪಿ ಯದ್ಭವೇತ್
ಯಥಾ ವಾನರಸಂಗೀತಂ
ತಥೈವ ಪ್ಲವತೆ ಶಿಲಾ.

ಅರ್ಥ: ನಂಬತಕ್ಕದ್ದಲ್ಲದು, ಪ್ರತ್ಯಕ್ಷವಾದರೂ, ಹೇಳತಕ್ಕದ್ದಲ್ಲ. ವಾನರ ಸಂಗೀತವು ಹ್ಯಾಗೋ ಹಾಗೆ ಕಲ್ಲು ತೇಲುತ್ತದೆ.

ವಚನ.

1476. ಎಂದು ಮಂತ್ರಿ ಯರಸಂಗೆ ಪೇಳ್ದಂ; ಅದರಿಂ ಪೇಳ್ದುದು ಪರೀಕ್ಷಿಸದೆ, ಮನೋದ್ವೇಷವಂ ತಾಳ್ವವರ್ ನಿಮ್ಮ ಸಭೆಯೊಳುಳ್ಳಡೆ, ಪೇಳಲಮ್ಮೆವೆನೆ, ಇಂತಪ್ಪವರ್ ಎಮ್ಮ ಸಭೆಯೊಳ್ ಇಲ್ಲ ಅಂಜದೆ ಪೇಳಿಂ! ಎನೆ, ಮತ್ತೆ ಮನೋವೇಗಂ ಇಂತ್ ಎಂದಂ:

ಕಂದ.

1477. ಯೇಕಾಂತಗ್ರಹಣನು ಯಂ
ಬಾಕಥೆಯಂಥವರುಳ್ಳಡೆ, ಪೇಳಲಂಮೆವೆನೆ,

The story of the foolish king.

ಆಕಥೆಯನರುಪಿ ಯೆನೆ, ಸಭೆ
ಭೂಕಾಂತನಾಗ ಪೇಳಲದ್ಯುಕ್ತನಾವಂ.

1478. ನಂದುರಬಾರಿಪುರಂ ರಾ
ಜಂ ದುರ್ಧರನಾತ್ಮಜನಾದನವಂಗಂ ಜಾ
ತ್ಯಂ[1]ಧಕ ; ಭಂಡಾರೇಶಂ
ತಂದಿಕ್ಕಿದನವಗೆ ರತ್ನಭೂಷಾಳಿಯುಂ.

1. ಹುಟ್ಟು ಕುರುಡನು.

1479. ಅಂಧಕಗರಸಂ ಬೆಸಸಿದ
ನಂದುಂ ; ಲೋಹದಾಭರಣವಿಕ್ರಯದಿರಾ
ರ್ಗಂದುಮಿ[1]ವ ನಂಮು ಕುಲದೇ[2]
ವಿಂ ದಿಟವೊಲಿದಿತ್ತ ದಿವ್ಯಭೂಷಣವೆಂದಂ.

1. ಇವನ್ನು, ಆಭರಣಗಳನ್ನು. 2. ದೇವಿಯು.

ವಚನ.

1480. ಅಂತು ಕುಮಾರಂಗೆ ನೇಮುವಂ ಕೊಟ್ಟು ಲೋಹದವೆಂದು ಪೇಳ್ದೊಡೆ, ನಾಶ ಮಾಡಂ ಎಂಬ್ ಅವಿವೇಕನೃಪನ ಕಥೆಯುಳ್ಳವರ್ ಉಳ್ಳಡೆ, ಪೇಳಲುಂ ಮತ್ತೆ ಮಾತಾಡಲ್ ಅಂಮೆವ್ ಎನೆ, ಇಂತಪ್ಪವರ್ ಎಂಮ ಸಭೆಯೊಳ್ ಇಲ್ಲ, ಅಂಜದೆ ಪೇಳಿಂ ! ಎನೆ, ವಿಪ್ರರ್ ಕೇಳೆ, ಮನೋವೇಗಂ ಪೇಳ್ದಂ.

ಕಂದ.

1481. ಕರಮ ಸೊಗಯಿಸುವಯೋಧ್ಯಾ
ಪುರವರನಿವಾಸಿ ವಣಿಕ್ಪತಿ ಸಮುದ್ರದತ್ತ

The fiction about their hav-

ing become ascetics.

ಪರದನ ಸುತರಾವೀರ್ರ್ವರು;
ಗುರುಗಳ ಹೊರೆಯಲ್ಲಿ ಪ್ರೋದುತಿರಲೊಂದು ದಿನಂ

1482. ಆಗುರುಗಳಮುಲಸಂಜೆಗೆ
ಪೋಗುತ್ತಂ ತುಂಬಿ ತಂನಿನೀರ್ಗುಂಡಿ ! ಯೆನ
ಲ್ಬೇಗದೊಳೆ ತುಂಬಿ ತರುತಿ
ರ್ಪಾಗಳ್ಮದದಾನೆ ಯೊಂದು ಭೂಪನದುಮುದುಂ

1483. ಹರಿದುದು ಹೊರಜೆಯಮಿಳಯುಂ;
ಮುರಿದುದು ಮಂದು ಸೊಕ್ಕಿ ಕಟ್ಟಿದಾಳದ ಮರಂ[1]
ತರಿದೊಡ್ಡಿಕೊಳುತ್ತೆ ಬರು
ತ್ತಿರೆ, ಯಟ್ಟಿ ನಂಮೀರ್ವರ, ನಾವ್ ಕಂಡಾಗಳ್;

1. ಆಲದ ಮರವನ್ನ.

ವಚನ.

1484. ಅಂತು ಬೆಂನ್ ಅಟ್ಟೆ ಬರೆ, ಪುರದ ಬಹಿಂರ್ಭಾಗದೊಳು ಕೊಗ್ಗಿನ ಗಿ
ಡದ ಶಾಖೆಯೋಳ್ ಗುಂಡಿಗೆಯ ನೆರೆ ಕಟ್ಟಿ ನಾವ್ ಈರ್ವರುಂ ಆ
ಗುಂಡಿಗೆಯೊಳ್ ಪೊಕ್ಕು ಮುಚ್ಚಳಮುಂ ಇಕ್ಕಿಕೊಂಡು ಪಿಪ್ಪಲೀ[1]
ದ್ವಾರಮುಂ ಮುಚ್ಚಲ್ ಮರದಿರೆ, ಆ ದ್ವಾರದಿಂ ಗಜಂ ಪೊಕ್ಕು
ಯುಂಮುಂ ಕಂಡು ಬೆಂನ್ ಅಟ್ಟಿ ಬರಲ್, ಆ ವೀರ್ವರ್ ಆ ಗುಂಡಿಗೆ
ಯೊಳ್ ಅಲ್ಲೆಯುಂ ಆರು ತಿಂಗಳ್ ಓಡ್ಯಾಡುತ್ತಿರಲ್, ಅದು ಬೆಂನ್
ಅಟ್ಟಿ ಬಿಡದಿರೆ, ನಿತ್ತರಿಸಲಾರದ್ ಆಪಿಪ್ಪಲ ದ್ವಾರದಿಂ ನಾಂ ಈರ್ವ
ರು ಪೊರಮಡೆ, ಯಾಗಜಂ ಪಿಂತಮೆ ಪೊರಮಡುವಾಗಳ್, ಅದರ
ಮೈಯಲ್ಲಂ ಪೊರಮಟ್ಟು ಪಿಂತಣ ಬಾಲದೊಳಗ್ ಬಂದು ರೋ

1. ಗುಂಡಿಗೆಗೆ ಹಚ್ಚಿರುವನಳಿ.

ಮಂ ಶಿಲ್ಕಿ ಯೂಗಂಧಗಜಂ ಅಲ್ಲಿಯೇ ನಿಂದುದ್; ಆಂ ಈರ್ವರು ನಿಲ್ಲದ್, ಓಡಿ ಯಡೆವಡವಿ ಬಿದ್ದ ಓಡಿ ಬಪ್ಪ ಆಗಳ್, ಮಂಡೆಗಳ್ ಸಿಕ್ಕಿ ಪರಿಪಟ್ಟುವಾದವ್; ಅದರಿಂ ತಾಪಸರೂಪದ್ ಇವ್ ಎಂಮ ತಪಶ್ಚರಣಕ್ಕೆ ಕಾರಣಂ ಎಂದು ಪೇಳೆ, ವಿಪ್ರರೆಲ್ಲ: ಇಂತಪ್ಪ ಅಸತ್ಯವಚನಮಂ ನಿಂಮಂತ ದರುಶನದವರ್ ಆಡಲಾಗದ್! ಎಂಬಿರಿ, ನಿಂಮಂತ ತಾಪಸರ್ ಆಡಲ್ ಅಕ್ಕುಮೆ ? ಯನೆ, ಯೂತಾಪಸರ್ ಇಂತ್ ಎಂದರ್.

1. ಗುಂಡಿಗೆಗೆ ಹಚ್ಚಿರುವ ನಳಿ.

ಕಂದ.

1485. ಉಳ್ಳಾತಂ ಕಾಲ್ಗೆಡದೊಡೆ,
ಯೊಳ್ಳಿತ್ತೆಂಬರ್ಬ್ಯೆಯ್ದೆ ಬಡವಂ ಪಿರಿದುಂ ತಾ
ನುಳ್ಳದ ನುಡಿದಡೆಯುವುದುಂ
ಹೊಲ್ಲೆಂಬರ್ಕಷ್ಟವಲ್ಲವೇ ದಾರಿದ್ರ್ಯಂ ?

Application of the fiction.

ವಚನ.

1486. ಎನೆ, ವಿಪ್ರರ್ ಇಂತ್ ಎಂದರ್: ಆಗುಂಡಿಗೆಯೊಳ್ ನೀವ್ ಯಿಬ್ಬರುಂ ಪೋಗುವದು ; ಪೊಕ್ಕದರ ಮುಚ್ಚಳವಂ ಇಕ್ಕಿಕೊಳಲು, ಪಿಪ್ಪಲದ್ವಾರಂ ತೆರದ್ ಇರಲ್, ಅಲ್ಲಿಗೆ ಗಜಂ ಬಂದು ಪೊಗುವುದುಂ ; ಇನಿತು ಭಾರವಂ ಆಶಾಖೆ ಯೂಂತ್ ಇರ್ಪುದು ; ನೀಂ ಆಗಜವಂ ಕಂಡ್ ಅದರೊಳ್ ಓಡುವದು; ಮತ್ತೆ ಅದು ಬೆಂನ್ ಅಟ್ಟುವದುಂ ; ನೀಂ ಅದರೊಳ್ ಆರು ತಿಂಗಳೊಳ್ ತಳಲುವದುಂ ; ಮತ್ತೆ ಅದರೊಳ್ ನಿತ್ತರಿಸದೆ, ನೀವ್ ಈರ್ವರು ಪೊರಮಡುವುದು ; ನಿಮ್ಮ ಪಿಂತಮೆ ಗಜಂ ಬಂದುದ್, ಅದು ಚೋದ್ಯಂ ; ಆದರುಂ ಆಗಲಿ ! ಯದರ ಶರೀರವೆಲ್ಲ ಪೊರಮಟ್ಟು ಅದರ ಬಾಲದ್ ಬಂದುರೋಮ

ಸಿಲ್ಕಿ ಯಲ್ಲಿಯೇ ನಿಲ್ಲುವದು ; ನೀಂ ಈರ್ವರು ಓಡಿ ಬಂದೆವು ಎಂ
ಬುದ್; ಇದುವೆ ವಿರುದ್ಧಂ, ಪಿರಿದು ಪುಸಿಯುನೆ, ಮನೋವೇಗಂ
ಇಂತ್ ಎಂದಂ: ನಿಮ್ಮ ಪುರಾಣದ ಪುಶಿ ಇದರ ಹವಣೆ? ಪೇಳಿಂ !
ಎನೆ, ನಮ್ಮ ಪುರಾಣದೊಳ್ ಅನಿತು ಪುಶಿ ಯುಂಟಾದರೆ, ಪೇಳಿಂ !
ಎನೆ, ಮನೋವೇಗಂ ಪೇಳಲ್ ನೆಗಳ್ದಂ:

ಮತ್ತೇಭವಿಕ್ರೀಡಿತ ವೃತ್ತ.

1487. ಜಗಮಂ ನಿರ್ಮ್ಮಿಸಿ, ರಕ್ಷಿಸೆಂದು ಹರಿಗಿತ್ತಂ ಕಂಜಜಂ ಪೇಳೆ; ಶಿ
ಕ್ಷೆಗೆ ರುದ್ರಂ ಬರೆ; ಕೊಲ್ಲುಗೆಮೆಂದುದರದೊಳ್ಬೈಚಿಟ್ಟು ಕೊಂಡಿ [ರ್ದ, ಮೆ
ಲ್ಲಗೆ ಕುಂಭೋದ್ಭವ[1]ನಲ್ಲಿಗೈದೆ, ಹರನಂ ತಾ ವಂಚಿ[2]ಪಾತಾವನಂ
ಜಗದಾನಂದದೊಳೀವುದೆಂದಡದಕಿಂತೆಂದಂ ಮುನೀಂದ್ರೋತ್ತಮಂ:

The whole creation in the belly of Vishnu.

1. ಅಗಸ್ತ್ಯಮುನಿ (ಕಳಶಜ). 2. ಹರ ತನ್ನ ನಾಶಮಾಡ್ಯಾನೆಂಬ ಭಯದಿಂದ.

ಕಂದ.

1488. ಹೋಗು ನೀ ಬೇಗದೊಳಾನಿ
ಪ್ಪಗಸೆಯ ಗೊಂದಣದ ಶಾಖೆಯೊಳ್ಕಟ್ಟಿದ ಗುಂ
ಡಿಗೆಯೊಳೆನೆ, ಪೊಕ್ಕು, ನೀರಿಂ
ಸೊಗಸುವ ಕಮಂಡಲದಿ ಕಂಡನಬ್ಧಿಗಳೇಳಂ.

Vishnu in the water vessel of Agastya.

1489. ಆಜಳರಾಶಿಗಳೊಳ್ವಿ
ಭ್ರಾಜಿಪ ವಿಂಗಡಲ ನಡುವೆ ಯುದಸಂಖ್ಯಾಮಿತ
ಯೋಜನದಗಲದಿ ನೆರೆ ವಟ
ಭೂಜವಿರಲ್ ಕಂಡು ಬಂದನಾಯಡಿಗೆ ಕೃಷ್ಣಂ.

1490. ಬಂದಾಭೂರುಹದೆರಡೆಲೆ
ಯೊಂದಿದ ಮಧ್ಯದೊಳೆ ಪೊಕ್ಕು, ಮರದೊರಗಿರೆ ಗೋ
ವಿಂದಂ ; ಮತ್ತತ್ತಲ್ಪರಿ
ತಂದಭೀಕ್ಷಿಸಲು ಪೋಗಿ ಸರಸಿರುಹಗರ್ಭಂ.

ಉತ್ಪಲಮಾಲಿಕಾ ವೃತ್ತ.

1491. ಬಂದು ಸರೋಜಜಂ ಹರಿಯನೀಕ್ಷಿಸಿ ಕಾಣದೆ, ಕೂಡೆ ನೋಳ್ಪೆನೆಂ
ತೆಂದು ಬರುತ್ತಗಸ್ತ್ಯಮುನಿಯಂ ನೆರೆ ಕಂಡು ವಿಚಾರಿಸಲ್ಕಗು
ತ್ತಂ ದಯದಿಂದಲೆನ್ನಯ ಕಮಂಡಲದೊಳ್ತವೆ ಪೊಕ್ಕು ನೋಡು ! [ಪೋ
ಗೆಂದಜೆ, ಯಾರು ತಿಂಗಳದರೊಳ್ನೆರೆ ಪೊಕ್ಕು ತೊಳಲ್ದು ನೋಡಿದಂ.

ವಚನ,

1492. ಅಂತು ನೋಡುತ್ತೆ ವಟವಿಟಪಿಯಂ ಕಂಡ್, ಅದರ ಮೇಲೆ ಎಲೆ ಎಲೆ ದಪ್ಪದೆ, ಕೂಡಿ ಶೋಧಿಸಿ ನೋಡುತ್ತ ಬಪ್ಪ ಆಗಳ್, ಎರಡ್ ಎಲೆಯ ಮಧ್ಯದೊಳು ನಿದ್ರಾಮುದ್ರಿತನಾಗಿರ್ದಂ ಎಂದು ಬಗೆದ್ ಅರಿದು ಪೊಟ್ಟೆಯಂ ಪೊಗಲ್ ಉಪಾಯಮಂ ಕಾಣದೆ, ಚಿಂತಿಸುತ್ ಇಪ್ಪ ಆಗಳ್, ಅಚ್ಯುತಂ ಆಕಳಿಸೆ, ಬ್ರಹ್ಮ ವಕ್ತ್ರದಿಂ ಪೊಕ್ಕು ಪೊಟ್ಟೆಯೊಳ್ ಇರ್ದ ಸೃಷ್ಟಿಯಂ ಕಂಡು ಇದಂ ಎಲ್ಲಿ ಪೊರಮಡಿಸುವೆಂ ! ಎಂದು ದೆಶೆದೆಶೆಯಂ ನೋಡಿ ನಾಭಿಕಮಳಮಂ ಕಂಡು ಕಮಲನಾಳದಿಂ ಸೃಷ್ಟಿಯಂ ಪೊರಮಡಿಸಿ ಪಿಂತನೆ ತಾನುಂ ಪೊರಮಡುವಾಗಳು, ಯಲ್ಲಾಸರ್ವಾಂಗಂ ಪೊರಮಟ್ಟು ವೃಷಣಂ ಶಿಲ್ಕಿ ಯಾ ಕಮಳಜಂ ಮೆಲ್ಲನೆ ಯಲ್ಲಿ ನಿಂದು ಕಮಳಾಸನಂ ಆದಂ ಎಂದು ನಿಮ್ಮ ಪುರಾಣದೊಳ್ ಉಂಟೋ ಇಲ್ಲವೋ ? ಪೇಳಂ ! ಎನೆ, ಇ

ದುಂಟೆ ಎನೆ, ಯಾದರ್, ಇದು ಪುಶಿಯಲ್ಲವೆ? ಪೇಳಿಂ ! ಎನೆ, ಇದ
ಲ್ಲದೆ ಮತ್ತೆ ಇಂತಪ್ಪ ಪುಶಿ ಪುರಾಣದೊಳ್ ಉಂಟೋ? ಪೇಳಿಂ!
ಎಂದು ವಿಪ್ರರ್ ಕೇಳೆ, ಇನ್ನು ಯಲ್ಲವುಂ ಪುಶಿಯುಂಟೆ ಎನೆ, ಅದಂ
ಪೇಳಿಂ! ಎನೆ, ಮನೋವೇಗಂ ಪೇಳಲ್ ನೆಗಳ್ದಂ.

ಕಂದ.

1493. ವಿದಿತಂ ಕುರುಜಾಂಗಣಮೆಂ
ಬುದು ನಾಡು ; ನಾಡೊಳಿರ್ಪುದು ಅತಿಶಯಶೋಭಾ
ಸ್ಪದಮಾಗಿ ಹಸ್ತಿನಾಪುರ
ದಧಿನಾಥಸತ್ಯನಿಧಿಯುಧಿಷ್ಠಿರನೆಂಬಂ

Arjuna descends with his great army into hell, through the hole which he had made with his arrow.

1494. ಆನರಪತಿ ಯೊಂದು ದಿನಂ
ನಾನಾಯಾಗಮನೆ ಮಾಳ್ಪ ಬಗೆಯಂ ಬಗೆದಂ
ದಾನೈಮಿತ್ಯ[1]ರನದರ ವಿ
ಧಾನಮನರಿಪಿಮೆಂದಡವರಾಗಿಂತೆಂದರ್.

1. ಯಾಗನೇಮ ಮುಂತಾದದ್ದ ಬಲ್ಲವರು.

ಶ್ಲೋಕ.

1495. ಅಶ್ವಮೇಧೆ ಹಯಂ ಹನ್ಯಾತ್
ಪುಂಡರೀಕೇಣ ದಂತಿನಾ
ವಾರಾಹಿಸೂಕರಂ ವಿಂದ್ಯಾತ್
ಗೊಸೂಯೇ ಕಪಿಲಾಂ ವಿದುಃ.

ಅರ್ಥ: ಅಶ್ವಮೇಧದಲ್ಲಿ ಕುದರೆಯನ್ನು, ಪುಂಡರೀಕಯಜ್ಞದಲ್ಲಿ ಆನೆಯನ್ನು ಕೊಲ್ಲಬಹುದು. ವಾರಾಹಿಯಜ್ಞದಲ್ಲಿ ಹಂದಿಯನ್ನು ಗೋಸೂಯದಲ್ಲಿ ಆಕಳನ್ನು ಕೊಲ್ಲಬಹುದು.

ವಚನ.

1496. ಎಂದ್ ಅನೇಕತೆರದ ಯಾಗಂಗಳಂ ವೇದೋಕ್ತಕ್ರಮದಿಂ ಸವಿಸ್ತಾರದಿಂ ಪೇಳ್ದು ಮತ್ತಂ ಇಂತ್ ಎಂದರ್ : ಈ ಯಾಗವಂ ಆವನೋರ್ವ ಮಾಡಲ್, ಆಫಲಮಂ ಸಾಮರ್ಥ್ಯದಿಂದ್ ಅನ್ಯರು ಕೊಳ್ವರ್; ಅದರಿಂ ಪೇಳ್ದರ್: ಆಕೊಳ್ಳದಂತಾಗಿ ಮಾಡಲ್ ವೇಳ್ಪುದ್; ಎನೆ, ಯುದಂ ಆರಂ ಕೊಳ್ಳದಂತಾಗಿ ಮಾಳ್ಪಡ್, ಉಪಾಯಂ ಏನ್ ಉಂಟ್? ಎಂದು ಯುಧಿಷ್ಠಿರಂ ಅನ್ಯಮಿತ್ಯಕರಂ ಬೆಸಗೊಳೆ, ಯವರ್ ಇಂತ್ ಎಂದರ್; ಪಾತಾಳದೊಳು ನಾಥದೇವಂ ಎಂಬ ಯೋಗೀಶ್ವರಂ ಇರ್ಪಂ; ಆತನಂ ಧರಣೀಧರಂ[1] ಬೆರಸು ವಡಗೊಂಡು ತಂದು ಯಾಗಮಂಟಪದೊಳ್ ಕುಳ್ಳಿರಿಸಲ್, ಆಫಲಮಂ ಆರುಂ ಕೊಳಲ್ ಪಡಿಯರೆಂದು ಪೇಳೆ, ಕೇಳ್ದು.

1. ಆದಿಶೇಷ.

ಸ್ರಗ್ಧರ ವೃತ್ತ.

1497. ಪಾತಾಳಂ ತಾನಭೇದ್ಯಂ, ಪೊಗುವಡರಿದು; ಮೋಕ್ಷೋಕ್ಕಡಂ ಬಾ[1]ರನಾರ್ಗಂ
ಖ್ಯಾತಂ ನಾಥಾಖ್ಯಯೋಗೀಶ್ವರನವನೊಲಿವಿಂ ಬಂದಡುಂ, ಬಾರನಾರ್ಗಂ
ಸೋತುಂ ನಾಗೇಂದ್ರನಾತಂ ಮತಿ ಬಳನವನಂ ತರ್ಪರಾರೆಂದು[2] ಚಿಂತಾ
ಚೇತಂ ತಾನಾಗೆ ಧರ್ಮಾತ್ಮಜನದನರಿಂದಾಪಾರ್ಥ ನಾಂ ತರ್ವೆನೆಂದಂ.

1. ಈ ಕ್ರಿಯಾಪದಕ್ಕೆ ನಾಥ ಎಂಬ ಶಬ್ದ ಕರ್ತೃ. 2. ತರುವವರು. ವ್ಯಾ. ಸೂ. 95.

ವಚನ.

1498. ಎಂದು ಧನಂಜಯಂ ಗಾಂಡೀವಮಂ ತಿರಿವಿ ತೊಟ್ಟು ನೀವೀ ತೊ
ಟ್ ಎಸೆಯೆ, ನೆಲಂ ರಸಾತಳಕೆ ಬಾದಣಂ ಅಪ್ಪಿ ನಿಂ, ಎಚ್ಚು ಪೊ
ಕ್ಕಂ; ಅಲ್ಲಿಂದಾ ಅಹಿಲೋಕಮಂ ಬಗೆಯದ್ ಐತಂದುದಂ ಈಕ್ಷಿಸಿ
ನಾಗರಾಜಂ ಐತಂದು ಪಳಂಚಿ ತಳ್ತಿರದೆ ಯಾತನ ಬಲಂ ಬೆರಸ್ ಆ
ಜಿರಂಗದೊಳ್ ಶಕ್ತಿಯಿಂದ್ ಅಶೇಷ[1]ನಾಳಿಗಳಿಂದ್ ಇಡೆ, ಸಬಳಂಗಳಿಂ
ದ್ ಇಡೆ, ತೋಮರದಿಂದ್ ಇಡೆ, ಪಿಂಡಿವಾಳದಿಂದ್ ಇಡೆ, ಕರಚಕ್ರ
ದಿಂ ಫಣಿಪಂ; ಅಂತ್ ಅನಿತಂ ತೆಗದ್ ಬಂದು ಬಾಣಿದಿ ಕಡಿಕಡಿಪಲ
ವುಂ ಗೆಡೆ, ಬೈಚಿದಂ ಇಂದ್ರನಂದನಂ; ಅಂತು ಬೈಚಿ ನಾಗೇಂದ್ರ
ನಂ ವಿರಥ[2]ನಂ ಮಾಡಿದಡೆ, ಪಾರ್ಥಂಗೆ ನಾಗಧರೆ ಯೆಂಬ ಕುಮಾರಿ
ಯಂ ಕೊಡೆ, ಶುಭದಿನಮುಹೂರ್ತದೊಳು ಮದುವೆಯಾಗಿ ಚತು
ರ್ಥಿಯಂ ಮಾಡಿ ಮದುವೆಯಿಂ ಕಳುಪೆ, ನೀಂ ಇಲ್ಲದೆ ಯಾಂ ಓರ್ವನೆ
ಪೋಗೆಂ, ಎಂದು ನಾಥದೇವನಂ ನಾಗೇಂದ್ರನಂ ದಶಕೋಟಿಬಲಚಿರ
ಸ್ ಆಛಿದ್ರದಿಂದವೆ ಪಾರ್ಥಂ ಬಡಗೊಂಡು ಬಂದು ಯಾಗಮಂಟಪ
ದೊಳ್ ಕುಳ್ಳಿರಿಸಿದಂ ಎಂಬುದು ನಿಂಮ ಪುರಾಣದೊಳ್ ಉಂಟೋ
ಇಲ್ಲೋ? ಎನೆ ಅವರ್ ಇದ್ ಉಂಟು, ಎನೆ, ಯಾದಡೆ ಮುನಿಯ
ಗುಂಡಿಗೆಯ ರಂಧ್ರದೊಳ್ ಎಂತು ಪೊಕ್ಕಿರ್? ಎಂದು ವೃಥಾ ಮರು
ಳ್ ಆಡುವಿರ್ ಯಾಕ್? ಎನೆ, ಯವರ್ ಇಂತ್ ಎಂದರ್: ಆದ್ವಾರದಿಂ
ಪೋಗಲಕ್ಕುಂ; ಆಗುಂಡಿಗೆಯೊಳು ನೀಂ ಇಬ್ಬರುಂ ಆಗಜಮಂ
ಸಿದ್ಧರು ಎಂತು? ಪೇಳಿಂ! ಎನೆ ಮನೋವೇಗಂ ಇಂತ್ ಎಂದಂ.

1. ತೀರದಂಥಾ (ಬಾಕೀ ಇಲ್ಲದ). 2. ರಥವಿಲ್ಲದವನನ್ನ.

ಕಂದ.

1499. ಕಿರುಕಣಿಕೆಯ ಬಟ್ಟಿದ್ದದ
ಕಿರಿಯನಗಸ್ತ್ಯಂ ಪಯೋಧಿಯಂ ಕುಡಿಯಲೊಡಂ,

ನೆರಮುದುವಕಕ್ಕುದರವೆನೆ,
ನೆರೆಯದೆ ಗುಂಡಿಗೆಯುಂ ಮದೇಭಕಂ ನಮಗಂ ?

1500. ಆಮುನಿಯ ಕಮಂಡಲದೊಳು
ಭೂಮಿನದಾದ್ರಿವ್ರಾತಾಖಿಳನದಿವಾರಾಸಿ
ಸ್ತೋಮಮಿರಲಕ್ಕು, ಗಡ ! ನಾ
ಮೀ ಮದಗಜವೆರಸು ಗುಂಡಿಗೆಯೊಳಿರಲರಿದೇ ?

ವಚನ.

1501. ಎಂದ್ ಅನೇಕದ್ ಉಪಮೆಯಂ ಕೊಟ್ಟು ನಿಮ್ಮ ಪುರಾಣಂ ಏನ್ ಅಸತ್ಯಮಂ ಆಡಿದಡಂ, ಸತ್ಯಂ ಎಂಬಿರಿ; ನಾವು ಸತ್ಯಮಂ ಆಡಿದಡಂ ಅಸತ್ಯಂ ಎಂಬಿರಿ; ಲಕ್ಷದೋಷಾನ್ನಪಶ್ಯತೆ ಯೆಂಬ್ ಆನೀತಿ ನಿಮ್ಮಲ್ಲಿಯೆ ಸಾರ್ಥಕವಾಯ್ತೆಂದು ನುಡಿದು ಮತ್ತಂ ಇಂತ್ ಎಂದಂ:

1. ಲಕ್ಷದೋಷ ತೋರುವದಿಲ್ಲ.

ಕಂದ.

1502. ತನಗುಳ್ಳವಗುಣಮಂ ಗುಣ
ವೆನುತಿರ್ಪರನ್ಯರ ಗುಣಂಗಳಂ ದುರ್ಗುಣಂ
ವೆನುತಿರ್ಪ ಪಾಪರ ಚಿತ್ತ
ವನಾವಂ ತಿಳಿಪಲಾರ್ಪನಾತನೇ ದೇವಂ.

1503. ಎನೆ, ಕೇಳ್ದು ವಿಪ್ರರೆಲ್ಲಾ
ಮನದೊಳ್ನೆರೆ ಮೆಚ್ಚುತ ಜಯವಾದಿಗಳೇ ಮೇ
ದಿನಿಯೊಳಗೆ ನೀವೆಂದಿತ್ತ
ರನರ್ಘ್ಯಗುಣನಿಳಯವಿಜಯಪತ್ರಮನೊಲವಿಂ.

ವಚನ.

1504. ಅಂತು ಜಯಪತ್ರಮಂ ಕೊಂಡು, ತಾಂ ಈರ್ವರು ವಿಮಾನಮಂ
ಬೈಚಿಟ್ಟು ವುದ್ಯಾನಕ್ಕೆ ಬಂದು ಸುಖದೊಳಿರುತ್ತಿರಲ್, ಆಸಮಯ
ದೊಳು ನೇಸರ್ ವಡವುದು; ನಿದ್ರಾಮುದ್ರಿತರಾಗಿ ನಿದ್ರೆತಿಳಿದ್ ಎದ್ದು
ಕುಳ್ಳಿರ್ದ ಸಮಯದೊಳ್ ನೇಸರ್ ಉದಯಂ ಆಗಲ್, ಆಗಳ್

## ON BRAHMA, VISHNU AND SHIVA.

6. ಬ್ರಹ್ಮ ವಿಷ್ಣು ಮಹೇಶ್ವರ ದೇವತಾ ಪರೀಕ್ಷೆ.
ನಿರೂಪಣ ವರ್ಣನ. (6ನೇ ಆಶ್ವಾಸ.

ಕಂದ.

1505. ಭೂಜನವಂ[1]ದ್ಯಂ ಘನತರ
ತೇಜಂ ತನ್ನಯ ಸಖಾನ್ವಿತಂ ನಡೆತಂದಂ
ರಾಜೀವಸಖೋದಯದೊಳು
ಭ್ರಾಜಿತರುಚಿರೂಪನಾಂತು ಭರವಸದಿಂದ.

1. ಮನೋವೇಗನನ್ನು ವಿಶೇಷಿಸುವ ವಿಶೇಷಣಗಳು.

ಉತ್ಪಲಮಾಲಿಕಾ ವೃತ್ತ.

1506. ಭಾಸುರಪಾಟಲೀಪುರದ ಪಶ್ಚಿಮಗೋಪುರದಬ್ಜಸಂಭವಾ
The fifth meeting of the princes and the brahmans.
ವಾಸಮನ್ಯೆಯ್ದಿ ಪೊಕ್ಕುತುಳದುಂದುಭಿಯಂ ಭರದಿಂದೆ ಪೊಯ್ದು ಸಿಂ
ಹಾಸನದಲ್ಲಿ ಕುಳ್ಳಿರಲು, ಭೇರಿಯ ನಾದಕೆ ತತ್ಪುರಾಧಿಪ
ಭೂಸುರರೈದೆ ಬಂದರಖಿಳಾಗಮತತ್ವಕಳಾಸುಕೋವಿದರ್.

ಕಂದ.

1507. ಬಂದವರಂ ಕಂಡು ದ್ವಿಜ
ರೆಂದರ್ನೀವಾರ ಮಕ್ಕಳೇಪರೆಯದೊಳೇ
ನೆಂದು ವಿರಕ್ತಿಯನಾಂತಿರೆ?
ಯೆಂದಡೆ, ಮೆಲ್ಲನೆ ನಗುತ್ತಲವರಿಂತೆಂದರ್:

ವಚನ.

1508. ನಾವ್ ಈವತ್ಸದೇಶದ ಕೌಸಂಬಿಪುರವಂ ಆಳ್ವ ಚಂದ್ರಶೇಖರಂ ಎಂಬ್ ಅರಸಂ, ಆತಂ ಅರಸಿಮೃಗಾವತಿ ಯಂಬಳ್, ಈರ್ವರ್ಗುಂ ನಾಂ ಮೊದಲಾಗಿ ಯಂಧಕಂ ವೃಷಭಂ ವಿಮಳಂ ಎಂಬ ನಾಲ್ವರ್ ಕುಮಾರರ್ ಅನ್ನಪಾಳಂ ಬಂದು ದಿನಂ ಬಡ್ಡೋಲಗಂ ಗೊಟ್ಟು ಕುಳ್ಳಿರಲ್, ಅಮೋಘ ಮಂಡಲಂ ಗಗನ ಮಂಡಲದೋಳ್ ಪಲವು ಬಂಣದಿಂ ನೆಗದು ನಿಮಿಷಕ್ಕೆ ನಾನಾರೂಪಾಗಿ ನಿಃಶೇಷವಾಗಿ ಕರಗಿ ಪೋಗೆ, ಪುದ್ಗಲಸ್ವಭಾವಂಗಳೆಲ್ಲಂ ಈಯಂದವು ಎಂದು ಸಂಸಾರಕ್ಕೆ ಪೇಶಿ ನಿರ್ಯೋಗಪರಾಯಣನಾಗಿ ಯಲ್ಲರಿಂ ಕಿರಿಯ ಮಗನಿಂಗೆ ಪಟ್ಟಮಂ ಕಟ್ಟಿ ದೀಕ್ಷಾಗ್ರಹಣಕ್ಕೆ ಪೋಗೆ, ಇತ್ತಲಾಂ ಜ್ಯೇಷ್ಟಂ ಇರೆ, ಕನಿಷ್ಟಗೆ ಪಟ್ಟಮಂ ಕಟ್ಟಿದ ಬಳಿಕ, ಮುನಿದು ವಿರಕ್ತನಾಗಿ ಯಮಧರರೆಂಬ ಋಷಿಗಳ ಸಮೀಪದೊಳು ದೀಕ್ಷೆಯ ಗೊಂಡು ಸಕಲ ಶಾಸ್ತ್ರವ್ಯಾಕರಣ ಛಂದೋಲಂಕಾರಕಾವ್ಯನಾಟಕಂಗಳೋಳ್ ಅತಿ ಪ್ರವೀಣನಾಗಿ ಗುರುಗಳ ಬೀಳ್ಕೊಂಡು ನಡೆವಾಗಳ್, ಪ್ರಖ್ಯಾತ ಪುರಂ ಎಂದು ಪಲಬರ್ ಪೊಗಳೆ, ಕೇಳ್ದು ನೋಡಲ್ ಎಂದು ಬಂದೆವ್ ಎನೆ, ಯೂವಿಪ್ರರೆಲ್ಲರ್ ಇಂತ್ ಎಂದರ್.

The fictitious story about their life.

ಕಂದ.

1509. ಆದರೆ ಪುರಮಂ ನೋಳ್ಪಂ
ದಾದರತೆಯಿಂ ಬಂದಡೆ, ಸರಿ ! ನೀವೀಭೇರಿ
ನಾದಮನೆಸಗಿದಿರ್ಯ್ಯಾಕೆನೆ ?
ವಾದಂ ಮಾಳ್ಪರ್ಥಿಯಿಂದವೆ ವೆಸಗಿದೆವೆಂದಂ.

1510. ಎಂದಡೆ, ಕೇಳ್ದವರಿವರುಂ
ಮಂದರಗಿರಿ[1]ಧೈರ್ಯರತುಳಕಾರಣಪುರುಷ
ರ್ಸಂದೇಹವೆ ? ಯೆನುತ ದ್ವಿಜ
ವೃಂದಂ ತಂಮಯ ಮನಸಿನೊಳ್ನೆರೆ ಬಗೆದರ್.

1. ಗುಡ್ಡದಂತೆ ಘಟ್ಟ ಧೈರ್ಯವುಳ್ಳವನು.

ವಚನ.

1511. ಅಂತು ಬಗೆದು ಪಿರಿದು ಪೊತ್ತು ಅವರೊಡನೆ ಗೋಷ್ಟಿಯಂ ಮಾಡಿ ಇವರ್ ಮಹಾವಿದ್ವಾಂಸರು ಕಾರಣಪುರುಷರ್ ಎಂದ್ ಅರಿದು ನೀವ್ ಎಂಮೊಡನೆ ವಾದಂ ಮಾಳ್ಪ ಬಗೆ ವುಳ್ಳಡೆ, ನಿಂಮ ಜಿನೇಶ್ವರಂ ನಂಬಿರ್ ಆರ್ಪೊಡೆ, ಸರ್ವಸಿದ್ಧಿಯಂ ಮಾಡಿ ! ಎನೆ, ಮನೋವೇಗಂ ಇಂತ್ ಎಂದಂ : ಚರಾಚರಾದಿಸರ್ವಸೃಷ್ಟಿ ಸರ್ವಜ್ಞಂ ಇಲ್ಲದ್ ಅವನಿಂದ್ ಆಗದ್ ಅಪ್ಪುದರಿಂ ಸರ್ವಜ್ಞಂ ಉಂಟ್, ಇದಂ ಜಗಕ್ ಅರಿಯೆ, ಜಿನೇಶ್ವರನೆ ಸರ್ವಜ್ಞ.

ಎನೆ, ವಿಪ್ರರ್ ಇಂತ್ ಎಂದರು.

ಮತ್ತೇಭವಿಕ್ರೀಡಿತ ವೃತ್ತ.

1512. ಅರುಹಂ[1] ತಪ್ಪಿಸಿ ಮಿಕ್ಕ ದೇವರೆನಿಪರ್ಸರ್ವಜ್ಞರಲ್ಲೆಂದು ಪೇ
ಳ್ದರಿ ; ನಾಂ ಪೇಳ್ವೆವು : ಕಂಜಜಂ ಹರಿಹರರ್ಸರ್ವಜ್ಞರೆಂದಂದು ವಿ
ಪ್ರರೆನಲ್ಕಾ ಖಚರೇಂದ್ರನೆಂತವರು ಸರ್ವಜ್ಞರ್ಕಳೆಂತೆಂದು ಪೇ
ಳ್ದರಿ ? ಮಾತೊಪ್ಪದದ್ಯಾಕೆ ? ನಿಂಮಯ ಪುರಾಣಂ ಕೇಳ್ದುದೇನಿ
[ಲ್ಲವೇ ?

1. ಅರುವಿಲ್ಲದ.

ಕಂದ.

1513. ಎಂಬ ನುಡಿ ಗೇಳ್ದು ವಿಪ್ರಜ
ನಂ ಬೇಗದಿ ಪೇಳಿ ಯಾಪುರಾಣಮನೆನೆ, ಭೂ
ಪಂ ಬಗೆದು ನೋಡಿ ಕಾಪಿಳ
ನೆಂಬನ ಕಥೆಯವರಿರ್ದಡೆ ಯಂಜುವೆನೆಂದಂ.

ಆ ಕಥೆ ಎಂತೆಂದು ವಿಪ್ರರ್ ಕೇಳೆ, ಮನೋವೇಗಂ ಪೇಳ್ಗಂ.

ಉತ್ಪಲಮಾಲಿಕಾ ವೃತ್ತ.

1514. ಮಾಳವದೇಶದೊಳ್ಮಥುರೆ ಯಂಬುದು ಪಟ್ಟಣಮಾಪುರೇಶ್ವರಂ
*a. The story of Kapila.* ಕಾಳಕರಾಳನೆಂಬವನದೊಂದು ದಿನಂ ಮನದರ್ಥಿಯಿಂದೆ ವೈ
ಯ್ಯಾಳಿಗೆ ಪೋಗುತಿರ್ದಡಿದಿರೋಳ್ಜಯನೆಂಬನ ಸೂನು ಕಾಪಿಳಂ
ಬಾಳಕನಾಡುತಿರ್ದರಿಯದಾಗಳೆ ಸೀತಡೆ, ಕೇಳ್ದು ಬೇಗದಿಂ

ಕಂದ.

1515. ಕೋಪಿಸಿ ಮೂಗಂ ಕೊಯಿಸಿದ
ಭೂಪತಿ ಶಿಶುವೆಂನದಂತದುಂ ಪ್ರಾಯಶ್ಚಿ
ತ್ತಾಪನಿತು ತಾಂ ಪಿಂತೆ ಮರ
ದಾಪುರದೋಳ್ವರ್ತಿಸುತ್ತಮಿರ್ದೊಂದು ದಿನಂ

1516. ಪಲಬರ ಗಡಣದಿ ಯಂಗಡಿ
ಯೊಳಗಂ ಬರುತಿರ್ದು, ಪಲವು ಕಂನಡಿಗಳರ
ಲ್ಪಲಬರವನೀಕ್ಷಿಸುತ್ತಿರೆ,
ಯೊಲವಿಂ ತಾನೊಂದು ಕಂನಡಿಯನೀಕ್ಷಿಸಿದಂ.

ವಚನ.

1517. ಅಂತು ನೋಡಿ ಮೂಗಿಲ್ಲುದದಂ, ಇದು ಮೂಕೊರೆಯ ಕಂನಡಿ ಇದಂ ಧೂರ್ತತೋರಿದೆ ಯಂದ್ ಅದಂ ಶಿಲೆಯ ಮೇಲ್ ಇಕ್ಕಿ ಚೂರ್ಣಂ ಮಾಡಿ ಕಳೆಯಲ್, ಆಕಂನಡಿಯೊಡೆಯಂ ಪಿಡಿದು ಮಹಾಕೋಪಿಸಿ ಧರ್ಮಾಧಿಕರಣರ್ಗೆ ಬಯ್ಯಲ್, ಅವರ್ ಆತನ ಕಂನಡಿಯಂ ಯಾಕ್ ಒಡೆವೆ ಯಂದು ಕೇಳೆ, ಇವಂ ಎನಗೆ ಮೂಗಿಲ್ಲದ ಕಂನಡಿಯ ಕೊಟ್ಟಪ್, ಆಂ ಕೋಪಿಸಿ ಒಡೆದೆನ್, ಎಂದೊಡ್, ಆವೇಳ್ವದಿ ಘೊಳ್ಳನೆ ನಗುತ್ ಅವನ ಅವಿವೇಕತೆಯಂ ಕ್ರಮದಿಂ ತಿಳುಪಿ, ಕನ್ನಡಿಯ ಬೆಲೆಯಂ ತೆರಸಿದರ್; ಇಂತು ತಮ್ಮ ಕುಂದು ತಾಪ್ ಅರಿಯದೆ, ಪೆರರೊಳ್ ವಾದಿಸುವ ಕಾಪಿಳನ ಕಥೆಯಂಥವರ್ ವುಳ್ಳಡೆ, ಪೇಳಲ್ ಅಂಜುವೆಂ, ಎನೆ, ಇಂತಪ್ಪವರ್ ಎಂಮ ಸಭೆಯೊಳ್ ಇಲ್ಲ; ಅಂಜದೆ ಪೇಳಿಂ! ಎನೆ, ಮನೋವೇಗಂ ಮತ್ತಂ ಇಂತ್ ಎಂದಂ: ಪಾಪಿ ಯಂಬ್ ಅರಸಿನ ಕಥೆಯವರ್ ವುಳ್ಳಡೆ, ಪೇಳಲ್ ಅಂಜುವೆಂ ಎನೆ, ಯಾಕಥೆಯುಂತ್ ಎಂದು ವಿಪ್ರರ್ ಕೇಳೆ, ಮನೋವೇಗಂ ಪೇಳ್ದಂ.

ಮತ್ತೇಭವಿಕ್ರೀಡಿತ ವೃತ್ತ.

b. The story of the king Papi.

1518. ಕ್ಷಿತಿಯೊಳ್ಕಂಸಿಕವೆಂಬ ಪಟ್ಟಣದಧೀಶಂ ಪಾಪಿ ಯಂತೆಂಬ ಭೂಪತಿ, ಯಂತಾತನ ಮಂತ್ರಿ ದುಷ್ಟನತಿಭೂತದ್ರೋಹ, ಯದ್ಭೂತನಲ್ಲಿ ತಳಾರಂ; ಹಳಿಕೋರ್ವಕಳ್ಳನಿರುಳೊಳ್ಬಂದೋರ್ವನಾವಾಸ [ದೊ
ಳ್ಕೃತಕಂ ಕಂನಮನಿಕ್ಕೆ, ಮೇಲ್ಗೆಡೆದುದಂ[1]ತಾಭಿತ್ತಿಯುಂ ಕಳ್ಳನಾ.

1. ಭಿತ್ತಿ ಕಳ್ಳನ ಮೇಲ್ಗೆ ಡದುದು.

ವಚನ.

1519. ಅಂತು ಗೋಡೆ ಬಿದ್ದು ಕಳ್ಳಂ ಸಾಯಲ್, ಅದಂ ಅರಸಂ ಕೇಳ್ದು ಶೆಟ್ಟಿಯಂ ಕರದು ನಿನ್ನ ಮನೆಯ ಗೋಡೆ ಕಳ್ಳನಂ ಕೊಂದುವದಕ್ಕೆ ನಿನ್ನ ಶೀಕ್ಷೆಯಂ ಮಾಡುವೆಂ, ಎನೆ, ಯಾಶೆಟ್ಟಿ ನಾಂ ಗೋಡೆಯ ಕೂಲಿಯಂ ಕೊಟ್ಟು ಇಕ್ಕಿಸಿದೆಂ, ಎನೆ, ಯಾದೊಡೆ ಇಕ್ಕಿದ ಕೂಲಿಯವರಂ ಕರೆಸಿ, ಕಳ್ಳಂ ಸಾವಂತೆ, ಗೋಡೆಯಂ ಇಕ್ಕಿದಿರಿ! ನಿಂಮಂ ಶೀಕ್ಷೆಯ ಮಾಡುವೆಂ! ಎನೆ, ಯವರ್ ಇಂತ್ ಎಂದರ್: ಸೂಳೆಯೋರ್ವಳ್ ಅಲ್ಲಿಯೇ ಪಲವು ಸೂಳ್ ಎಡೆಯಾಡುವಳಂ ಕಂಡು ಅಧಿಕವಾಗಿ ಸೋಲ್ತು

ಕಂದ.

1520. ತನು ಕೆಲಸಕ್ಕೆಳಸಿದಡಂ,
ಮನವವಳಂ ನೆನವುತಿರ್ಪುದದು ಕಾರಣದಿಂ
ದೆನಿಸುಂ ಮಾಡಿದ ಕೆಲಸಂ
ಮನದಂತಿರೆ, ಬಳಿಕವಾದುದಾಕೆಯದೆಶೆಯಿಂ.

ವಚನ.

1521. ಎಂದು ಬಿನ್ನವಿಸಲ್, ಸೂಳೆಯಂ ಕರದು ನೀಂ ಇವರ ಮುಂದ್ ಎಡೆಯಾಡೆ, ಯವರ ಸೋಲ್ತು ಮಾಡಿದ ಗೋಡೆಯಿಂ ಕಳ್ಳಂ ಸತ್ತಂ ಅದರಿಂ ನಿನ್ನ ಶೀಕ್ಷೆಯ ಮಾಡುವೆಂ! ಎನೆ, ಯವಳು ನಾಂ ಅಕ್ಕಸಾಲಿಗಗೆ ಭಂಗಾರವಂ ಕೊಡ ಪೇಳ್ದು ಪೊನ್ನ ಕೊಟ್ಟಡೆ, ಯವಂ ಭಂಗಾರವಂ ಕೊಟದ್ ಎಡೆಯಾಡಿಸಿದಂ; ಎನೆ, ಯಾಯಕ್ಕಸಾಲೆಯಂ ಕರಿಸಿ ನೀಂ ಈಕೆಯ ಯಡೆಯಾಡಿಸಿದ ಕಾರಣಕ್ ಆ ಗೋಡೆ ಬಿದ್ದು ಕಳ್ಳಂ ಸತ್ತಂ; ಅದಕ್ಕೆ ನಿನ್ನ ಶೀಕ್ಷೆ ಮಾಡುವೆಂ; ಎನೆ, ಯವಂ ನಾ ಭಂಗಾರವ ಕೊಳ್ಳಲು, ಸಂತೆಗೆ ಪೊನ್ನ ಕಟ್ಟಿ

ಕೊಂಡು ಪೋಗೆ, ಕಳ್ಳಂ ಚೇಲಮಂ ಕತ್ತರಿಸಿಕೊಂಡು ಪೋದಂ ; ಎನೆ, ಯರಸಂ ತಳವಾರನ ವಿಚಾರಿಸಿ ನೀಂ ಆಕಳ್ಳನಂ ಬೇಗದಿ ಪಿಡಿದು ತಾರ್! ಎನೆ, ತಳವಾರಂ ಪಿರಿದ್ ಆಕಳ್ಳನಂ ಕಾಣದೆ, ಸಂತಿಯ ಮಂದಿಯಲ್ಲರಂ ಪಿಡಿದು ತಂದ್ ಈಯೆ, ಸಚಿವಂ ಇಂತ್ ಎಂದಂ; ನೀಂ ಇವರೆಲ್ಲರಂ ಶಿಕ್ಷೆಯ ಮಾಡೆ ಕಳ್ಳಂ ಇವರೊಳ್, ಆವಂ ಆದಡುಂ, ಸಾವಂ, ಎನೆ, ಯರಸಂ ಅಂತ್ ಎಸಗಿದಂ; ಆಪಾಪಿಯರಸಿನ ಕಥೆಯವರು ನಿಮ್ಮ ಸಭೆಯೊಳ್ ಉಳ್ಳಡೆ, ಪೇಳಲ್ ಅಂಜುವೆಂ ಎನೆ, ಇಂತಪ್ಪವರ್ ಎಂಮ ಸಭೆಯೊಳಗ್ ಇಲ್ಲ ಅಂಜದೆ ಪೇಳಿಂ! ಎನೆ, ಮನೋವೇಗಂ ಪೇಳಲ್ ನೆಗಳ್ದಂ :

ಉತ್ಪಲಮಾಲಿಕಾ ವೃತ್ತ.

1522. ಒಂದು ದಿನಂ ಮನೋಜರಿಪು ದಾರುಕವೆಂಬ ಬನಕ್ಕೆ ಪೋಗಿ ಪೊ
*c.* The origin of all the worlds from Shiva, ಕ್ಕಿಂದುನಿಭಾಸ್ಯತಾಪಸವಧೂಟಿಯನೀಕ್ಷಿಸಿ ಮೋಹಿಸೊಂದು ಮಾ
ಸಂ ಧಿಟವಾಂತು ತಾನೊಲಿಸಿ ಯಾಕೆಯೊಳೊಂದಿರೆ ನಿಚ್ಚನಿಚ್ಚಕಂ;
ಪಿಂದಣ ಚಿತ್ತವಿಲ್ಲಿವಳ ಚಿತ್ತಮನೀಕ್ಷಿಪೆನೆಂದು ತಾಪಸಂ

ಕಂದ.

1523. ಸ್ನಾನಕ್ಕೆ ಪೋಗಿ ಬಂದಪೆ
ನಾನೆಂದಾಸತಿಗೆ ಪೇಳಿ ಪೋಗುತೆ, ಮಗುಳಾ
ಮಾನಿನಿಯಂ ವಂಚಿಸಿ ಬಂ
ದಾನಿಳಯಮನೈದೆ ಪೊಕ್ಕಡಂಗಿರ್ದಾಗಳ್

1524. ಒಂದು ಹರನಾವಧೂಟಿಯೊ
ಳೊಂದಿರೆ ಮುನಿ ಕಂಡು ಮುನಿದು ಈತನ ಲಿಂಗಂ
ಸಂದಿಳಗೆ ಪರಿದು ಬೀಳಲಿ!
ಯಂದಿತ್ತಂ ಕೋಪದಿಂದೆ ಶಾಪಮನಾಗಳ್.

ವಚನ.

1525. ಇಂತು ಕೋಪದಿಂ ಶಾಪಮಂ ಕೊಡೆ, ಲಿಂಗಂ ಪರಿದು ಬೀಳಲು ಶಂಕರಂ ಕಂಡು ರೋಷದಿಂ ಪರಿದು ಬಿದ್ದ ಲಿಂಗಂ ತಾಪಸನ ಪಣೆಯಂ ಪತ್ತಲಿ! ಯಂದು ನಿಯಮಂ ಗೊಡೆ, ಯದು ಪತ್ತಲುಂ, ಅವಂ ಈಶ್ವರಂ ಎಂದ್ ಅರಿದು ಪಾದಾಂಭೋಜದೊಳ್ ಕೆಡದ್ ಇದ್ಬಂಮೆ ಕ್ಷಮಿಸುವದ್! ಎಂದು ಲಜ್ಜೆ ಗೆಟ್ಟು ಬಾಯಂ ಬಿಟ್ಟು ಯಾ ಲಿಂಗಮಂ ಕಳೆದು ಕರುಣಿಸುವುದ್! ಎನೆ, ಈ ಲಿಂಗಮಂ ಪೊತ್ತು ಕೈಲಾಸಕ್ಕೆ ಬಂನಿ! ಕಳೆವೆಂ! ಎನೆ, ಯಂತೆ ಗೈದಪೆಂ ಎಂದು ಪೊತ್ತು ನಡೆಯಲ್, ಅನಿತನಿತು ಬೆಳಯೆ; ತಿಳಯೆ, ಪಲಂಬರ್ ತಾಪಸರ್ ಪೊತ್ತು ಪೋಗೆ, ಪಾರ್ವತಿ ಕಂಡ್ ಅಟ್ಟಹಾಸತೆಯಾಗಿ, ಯದಕ್ ಈಶ್ವರ ಸಂತುಷ್ಟಚಿತ್ತನಾಗಿ, ಹ್ಯಾಗೆ ಪೂಜಾರ್ಹಂ ಅಪ್ಪುದೋ, ಹಾಂಗೆ ಮಾಡುವದ್! ಎಂದ್ ಬಂದು ಭಾಗದಿಂ ಎಸಗಿದ ತ್ರಿಭಾಗಮಂ.

ಕಂದ.

1526. ಅದರ ಮೇಗಣ ಭಾಗದಿಂ
ದುದಯಿಸಿದವಾಸ್ವರ್ಗಲೋಕವೆಂಬನೇಕಂ;
ಪದಪಿ ಕೆಳಭಾಗದಿಂದೊ
ಗೆದವು ಧಾತ್ರಿಗಿರಿಚಯಂ ವನಂ ವಾರಿಧಿಗಳ್;

1527. ಅಂತಾಗದರ ನಡುವೆ ತಂ
ನಿಂ ತಾನೆ ಪುಟ್ಟಿದಂ ಸದಾಶಿವಂ ಮೇಣ್ದೆ
ಕುಂ ತಿರಿಗಿ ನೋಡಿ ಯಖಿಳದಿ
ಗಂತರಾಂಬರಂ ವಾರ್ಧಿಗಳರೆ, ಕಂಡಾಗಳ್.

ಉತ್ಪಲಮಾಲಿಕಾ ವೃತ್ತ.

1528. ಶಂಕಿಸಿ ಶಂಕರಂ ಬಲದ ತೋಳನದೀಕ್ಷಿಸಲಲ್ಲಿ ಪುಟ್ಟಿದಂ
ಪಂಕಜಗರ್ಭನಂದೆಡದ ಬಾಹುಮನೀಕ್ಷಿಸಲಲ್ಲಿ ತೀವ್ರದಿಂ
ದಂ ಕಮಳಾಂಬಕಂ ಜನಿಸಿ ಕಾಂತೆಯರಿಲ್ಲದೆ ತಾವನೇಕಕಾ
ಲಂ ಕಳೆವಂನಮಿರ್ದು, ಸತಿ ಸೈರಿಸಲಾರದೆ, ತಾವು ಮೂವರುಂ.

and of Brahma and Vishnu.

ಚಂಪಕಮಾಲಾ ವೃತ್ತ.

1529. ಸ್ಮರಪರಿತಾಪದಿಂ ಬೆವರಿ ಬೆಚ್ಚನೆ ಸೂಯ್ದು ಬಳಿಕ್ಕಳಲ್ದು ನಿ
ತ್ತರಿಸದೆ, ಧಾತ್ರಿಯೋಳ್ಬಳಪದಿಂ ಬರೆದಂ ಸತಿರೂಪ, ವಪ್ಪುವಂ
ತಿರೆ ಹರಿ, ಜೀವಮಂ ಪಡೆವನಬ್ಜಜನಂತದು ನಗ್ನರೂಪದಿಂ
ದಿರೆ, ನಡೆ ನೋಡಿ ತಂದುಡಿಸಿದಂ ವರವಸ್ತ್ರಮನುಗ್ರಲೋಚನಂ.

These three quarrel about one wife.

ಕಂದ.

1530. ಆಸುದತಿಗೆ ಕೂರ್ತು ಸರೋ
ಜಾಸನನಂಭೋಜನೇತ್ರನದ್ರಿತನೂಭವ
ಳೀಶರಿವರೆಮಗೆ ತಮಗೆಂ
ದೋಸರಿಸದೆ ತಳ್ತು ಮುಷ್ಟಿಯುದ್ಧಂ ಗೈದರ್.

ವಚನ.

1531. ಅಂತು ಯುದ್ಧಸಂನದ್ಧರಾಗಿರೆ, ಸಕಲಸುರಸಮಿತಿ ಬಂದ್ ಬ
ಬೊಕ್ಕಂ ಅವರಂ ಬಿಡಿಸಿ ಇಂತಪ್ಪ ಅನುಚಿತಮಂ ನೆಗಳಲಾಗ
ದು; ಯಥೋಚಿತಂ[1] ಎಂತ್, ಅಂತೆ ಮಾಳ್ಪುದ್! ಎನೆ ಯವರ್ ಎ
ಮಗೆ ನೀವೇ ಸಮರ್ಥರಾಗಿ ಇದಂ ತಿಳುಪಿ! ಎನೆ, ಯವರ್ ತಂ
ಮೊಳ್ ಆಲೋಚಿಸಿ ತಿಳಿದ್ ಇಂತ್ ಎಂದರ್:

1. ಯಥಾ+ಉಚಿತ, ಹ್ಯಾಗೆ ತಕ್ಕದ್ದು.

ಕಂದ.

1532. ಮುಂನೆ ಬರದವ ತಂದೆ; ಚ್ಯೈ
ತನ್ಯವ ಪಡದಾತಂ ತಾಯಿ ; ತಾನೊಸ್ತ್ರಮಂ
ಮುಂನಿಸಿ ಕೊಟ್ಟವ ಗಂಡಂ
ಕಂನಿಕೆಗೆಂದವಳ ಶಿವಂಗೆ ಕೊಟ್ಟರೊಲವಿಂ.

ವಚನ.

1533. ಅಂತು ಕೊಡೆ, ಸುಖದಿಂದ್ ಇರಲು, ನಿತ್ತರಿಸಲಾರದೆ, ಹರಿಬ್ರಹ್ಮರ್ ಈರ್ವರು ಬಂದು ಕನ್ಯೆಯಂ ಪಿಡಿದು ಚುಂಬಿಸಲ್, ಆಕೆ ಲಜ್ಜೆಯಿಂ ಕರಗಿ ನೀರಾಗಿ ಗಂಗೆ ಯಂಬ ನದಿಯಾಗಿ ಪೋದಳ್; ಆಕೆ ಪೋಗಲ್ ಬಡನೆ, ತಾಂ ಮೂವರುಂ, ಮುಂನಿನಂತೆ ಸ್ತ್ರೀರೂಪಂ ಬರೆ ಹರಿ, ಕಂಜಜಂ ಜೀವಮಂ ಪಡೆದು, ಈಶ್ವರ ವಸ್ತ್ರಮಂ ಕೊಟ್ಟು ಸುಖದಿಂದ್ ಇರುತ್ತಿರೆ, ಲೋಕೋಕ್ತಿ ಇಂತ್ ಎಂದುದು.

ಶ್ಲೋಕ.

1534. ಕಾರ್ಯಂವಿಷ್ಣುಃಕ್ರಿಯಾಬ್ರಹ್ಮಾ
ಕಾರಣಂತುಮಹೇಶ್ವರಃ
ಯೇಕೋಮೂರ್ತಿತ್ರಯೋಭಾಗಾ
ಬ್ರಹ್ಮಾವಿಷ್ಣುಮಹೇಶ್ವರಾಃ.

ಅರ್ಥ: ವಿಷ್ಣು ಬ್ರಹ್ಮರು ಕಾರ್ಯರೂಪವಾಗಿದ್ದಾರೆ. ಮಹೇಶ್ವರ ಕಾರಣರೂಪವಾಗಿದ್ದಾನೆ. ಒಂದೇ ಮೂರ್ತಿ ಬ್ರಹ್ಮ ವಿಷ್ಣು ಮಹೇಶ್ವರ ಎಂಬೀ ಮೂರು ಭಾಗವಾಗಿದೆ.

ವಚನ.

1535. ಇಂತು ಮೂವರಿಂದ್ ಉದಯಿಸಿತ್ ಇಂತ್ ಈಚರಾಚರ್; ಅನಂತರದಿಂದ ಅವು ಅಂತು ವರ್ತಿಸುತಿರ್ದುಂ ಅನಂತಯುಗಂ ಪೋದ ಬಳಿಕಂ, ಒಂದು ದಿನಂ.

ಚಂಪಕಮಾಲಾ ವೃತ್ತ.

1536. ಸರಸಿಜಗರ್ಭನಿಂದಧಿಕ ನಾನೆನೆ ವಿಷ್ಣು ಸಮಂತು ವಿಷ್ಣು ವಿಂ
ಸರಸಿಜಗರ್ಭ ನಾನಧಿಕನೆಂದು ವಿವಾದಿಸಿ ಯೋರ್ವರೋರ್ವರುಂ
ಪಿರಿದುರೆ ಗರ್ವದಿಂದೆ ಸೆಣಸುತ್ತಿರೆ, ನೋಡಿ ಸಮರ್ಥರಾರಿದಂ
ಪಿರಿಕಿಪೆನೆಂದು ತಾ ಬೆಸಸಿದಂ ಬೆಸನಂ ಫಣಿರಾಜಭೂಷಣಂ.

Quarrel of Brahma and Vishnu about superiority.

ಮತ್ತೇಭವಿಕ್ರೀಡಿತ ವೃತ್ತ.

1537. ಭರದಿಂದೀಕ್ಷಿಸಿ ಬಪ್ಪುದೆನ್ನ ಪದಮಂ, ಕಂಜಾಕ್ಷ ನೀ! ಪದ್ಮವಿ
ಷ್ಟರ! ನೀನೀಕ್ಷಿಸಿ ಬಪ್ಪುದೆನ್ನ ಶಿರಮಂ! ನಿಂಮಿರ್ವರೊಳ್ಮಂ [ದೆ ಬಂ
ದರದಾರಾತನೆ ಲೋಕವಂದ್ಯನಧಿಕಂ! ಕೇಳೆಂದುಮಾಚಂದ್ರಶೇ
ಖರನಿಂತೆಂದುಮವರ್ಗೆ ಪೇಳೆ, ಬೆಸನಂ ತಾಳ್ದರ್ಮನೋರಾಗದಿಂ.

ವಚನ.

1538. ಅಂತುಂ ಅವರ್ ಬೆಸನಂ ಕೈಕೊಂಬುದುಂ; ಶಂಕರಂ, ಸ್ವರ್ಗ ಲೋಕದೋಳ್ ಶಿರಂ, ಮಧ್ಯಮಲೋಕದೊಳ್ ಲಿಂಗಂ, ಪಾತಾಳ ಲೋಕದೊಳ್ ಪಾದಂ, ಈ ಪ್ರಕಾರಂ, ಬೆಳದು ನಿಂದಿರೆ, ಬ್ರಹ್ಮ ಲಿಂಗಪ್ರದೇಶದಿಂದೆ, ದಣಿಯೆ, ನಾನಾ ಕೃತೆಯಂ ತಳದು ಅನೇಕ ಕ್ಲೇಶಾಯಾಸದಿಂದೆ ತಾನುಂ ನಾಭಿಪ್ರದೇಶಮಂ ಐದಿ, ಮೇಗಣಿಂ ಬಪ್ಪ ಕೇತಕಿಕುಸುಮಮಂ ಕಂಡು, ಯೆಲ್ಲಿಂದ ಬಂದೆ? ಎಂದು ಅಜಂ ಬೆಸಗೊಳೆ, ನಾಂ ಈಶ್ವರನ ಪಿಂಗಳಜಟಾಜೂಟದಿಂ ಬಂದೆಂ, ಎನೆ, ಯಾದಡ್ ಅಲ್ಲಿಂ ಪೊರಮಟ್ ಎನಿತು ಕಾಲಂ ಉಂಟ್? ಎನೆ, ನಾಂ ಪೊರಮಟ್ಟು ದಿವ್ಯಷಣ್ಮಾಸಂ ವುಂಟ್; ಎನೆ, ಕೇಳ್ದು ಮನಗುಂದಿ, ಪೋಪಡ್, ಎಂನ್ ಅಳವ್ ಅಲ್ಲವ್, ಎಂದು ಕೇತಕೆಯಂ ನಾ

Brahma tells ie.

ನಾಪ್ರಕಾರದಿಂ ಪ್ರಾರ್ಥಿಸಿ, ನೀಂ ಈಶ್ವರನ ಮುಂದೆ ಈತನ ಪಿಂ
ಗಳ ಜಟಾಜೂಟದ ಸಮೀಪದೊಳ್ ಕಂಡೆಂ, ಎಂದ್ ಉಸರ್! ಎಂ
ದು ಪೇಳೆ, ತಾಂ ಅದಂ ಈಗ ಕಂಡೆಂ ಎಂದಂ.

ಉತ್ಪಲಮಾಲಿಕಾ ವೃತ್ತ.

1539. ವಾರಿಜನೇತ್ರಮೀಶ್ವರನ ಸಾರಿ ಸಮೀಪದೊಳಿರ್ದ್ದು, ಸೂಕರಾ
ಕಾರಮನಾಂತು ಜಂಘೆಯ[1]ನನೇಕದಿನಂ ಪರಿದೈದೆ, ಪೋಪರಿಂ
ನಾರುಮಿದೀಗಸಾಧ್ಯಮೆನುತಂ ತವೆ ನೋಡಿ ಸರಾಗದಿಂ ಮನೋ
ಜಾರಿಯ ಸಂನಿವೇಶವನು ಸಾರ್ದಿದಿರೊಳ್ಮಗಿದಂ ಕರಂಗಳಂ.

1. ಜಂಘೆಯು ತನಕ ಹೋದನು.

ಕಂದ.

1540. ಸಂನುತನಗಜಾ[1]ಧೀಶ್ವರ!
ನಿಂನಂಘ್ರಿಯನೀಕ್ಷಿಸಲ್ಕೆ ಪೋಪಡೆ, ಮುಗುಳ್ದು
ಮೆಂನಳವಲ್ಲದೆ, ಜಂಘಾ
ಸಂನಿಧಿಯಿಂ ಬಂದೆನೀಗಳವಧರಿಸೆಂದಂ.

1. ಗುಡ್ಡದ ಮಗಳ ಗಂಡ=ಶಿವ.

1541. ಎಂದೆನೆ, ಲಾಲಿಸಿ ಪುಸಿಯು
ಲ್ಲೆಂದು ಮನಂ ಮೆಚ್ಚಿ ರಾಜ್ಯಪೂಜ್ಯ[1]ತೆಯೊಳು ಬಾ
ಳೆಂದುಂಮೈಶ್ವರ್ಯ್ಯಮನಾ
ಗೆಂದಿತ್ತಂ ಕೇಶವಂಗುಮೇಶಂ ವರವಂ.

1. ರಾಜ್ಯದಲ್ಲಿ ಪೂಜೆ ಮಾಡಿಸಿ ಕೊಳ್ಳುವ ಯೋಗ್ಯತೆ. ಅಂತು ವರವಂ ಕೊಟ್ಟು ಕ
ಮಳ ಸಂಭವನ ಪುರಿಗೆ ಕಡು ಮುಳಿದು ಆತನ ಮೊಗನುಂ ನೋಡಿ.

ಶ್ಲೋಕ.

1542. ಸತ್ಯಾದುತ್ಪದ್ಯತೆ ಧರ್ಮಂ
ದಯಾದಾನೇನ ವರ್ಧತೇ
ಕ್ಷಮಾಯಾಂ ಸ್ಥಾಪಿತೊ ಧರ್ಮಃ
ಕ್ರೋಧಲೋಭಾದ್ವಿನಸ್ಯತೇ.

ಅರ್ಥ: ಸತ್ಯದಿಂದ ಧರ್ಮ ಉತ್ಪತ್ತಿ ಯಾಗುತ್ತದೆ; ದಯ ದಾನದಿಂದ ಬೆಳೆಯುತ್ತದೆ; ಕ್ಷಮೆಯಿಂದ ಧರ್ಮಸ್ಥಾಪನೆ ಆಗುತ್ತದೆ; ಸಿಟ್ಟು ಲೋಭದಿಂದ ವಿನಾಶವಾಗುತ್ತದೆ.

ಕಂದ.

1543. ಎಂದು ಪಲತೆರದೊಳಾಗೋ
ವಿಂದನನಾನಂದದಿಂದೆ ಯಾದರಿಸಿ ಬಳಿ
ಕ್ಕಂದು ಪರಮೂರ್ತಿ ಭರದಿಂ
ಮುಂದಿರ್ದ ಸರೋಜಭವನನೀಕ್ಷಿಸಿ ಬೇಗಂ

1544. ಪುಸಿದನಿವನೆಂದು ಕಡು ಕೋ
ಪಿಸಿ ಭಿಕ್ಷಾವೃತ್ತಿಯಾಗಿ ಬಾಳ್ಗುಂ ನೀಂ ! ಪೂ
ಜಿಸದಿರ್ಕೆ ನಿಂನನೆಂದಾ
ವಿಷಮಾಕ್ಷಂ[1] ವಿಷಜಜಂಗೆ ಶಾಪವನಿತ್ತಂ

1. ಸಮವಿಲ್ಲದ ಕಂಣಿನವನು=(ಹಣೆಯಲ್ಲಿರುವಕಂಣಿನವನು) ಶಿವ.

ವಚನ.

1545. ಅಂತು ಶಾಪವ ಕೊಟ್ಟ ಬಳಿಕ, ಪಕ್ಷ್ನಮಂ ಆಡಿದ ಗೇದಿಗೆಯಂ ಕಂಟಕ ವೃತ್ತಿಯಾಗಿ, ಯೆಂನ್ ಆಜಟಾಮುಕುಟಕ್ಕೆ ಯೋಗ್ಯಂ ಆಗದೆ ಪೋಗ್! ಎಂದು ಶಾಪಮಂ ಕೊಟ್ಟಂ; ಅಂದಿಂದ ಬಳಿಕ

ಗೇದಿಗೆ ಹರಂಗೆ ಹೊರಗಾದುದ್ ಎಂಬರ್ ಆಹರಂ ಬೆಳದ್ ಆಕ್ರಮದೊಳ್ ನಿಂದಂ; ಊರ್ಧ್ವಲೋಕದೊಳ್ ಶಿರಮಂ, ಮಧ್ಯಮಲೋಕದೊಳ್ ಲಿಂಗಮಂ, ಪಾತಾಳಲೋಕದೊಳ್ ಪಾದಮಂ ಪೂಜಿಸುವರು, ಯೆಂದು ಶೈವಸಿದ್ಧಾಂತದೊಳ್ ಪೇಳ್ದುದ್ ಅದರಿಂ, ಈಶ್ವರಂ ಸರ್ವಗತಂ ಎಂಬರ್; ಅದ್ ಎಂತ್ ಎನೆ :

ಶ್ಲೋಕ.

1546. ಸ್ಥಾವರಂ ಜಂಗಮಂ ಚೈವ
ತ್ರೈಲೋಕ್ಯಂ ಸಚರಾಚರಂ
ಯೇಕೋದೇವಃಶಿವೋಲೋಕೆ
ಪೂಜನೀಯೋನಸಂಶಯಃ.

Conclusion: these three cannot be omniscient, nor omnipotent.

1547. ಲಿಂಗಮಧ್ಯೆ ಜಗತ್ಸರ್ವಂ,
ತ್ರೈಲೋಕ್ಯಂ ಸಚರಾಚರಂ,
ಲಿಂಗಬಾಂಹ್ಯಾತ್ಪರಂ ನಾಸ್ತಿ;
ತಸ್ಮಾಲ್ಲಿಂಗಂಪ್ರಪೂಜಯೆತ್.

ಅರ್ಥ: ಸ್ಥಾವರಜಂಗಮಗಳು ಇವೆಲ್ಲ ಏಕದೇವರಾದ ಶಿವನೆ—ಲೋಕದಲ್ಲಿ ಅವನು ಪೂಜಿಸಿಕೊಳ್ಳತಕ್ಕವನು, ಇದಕ್ಕೆ ಸಂಶಯವಿಲ್ಲ.

ಲಿಂಗದ ಮಧ್ಯದಲ್ಲಿ ಎಲ್ಲಾ ಲೋಕವು ಅದೆ. ಲಿಂಗದ ಹೊರ್ತು ಬೇರೊಂದು ಇರುವದಿಲ್ಲ. ಆದಕಾರಣ ಲಿಂಗವ ಪೂಜಿಸ ಬಹುದು.

ತ್ರಿಪದಿ.

1548. ಆಹರಂ ತಂನುಭಯ ಬಾಹುವಿಂದೊಗೆದವರಾ
ಸಾಹಸದ ಹವಣಮರಿಯದೆ ಸರ್ವಜ್ಞ
ನೇ? ಹೇಳ! ನೀವು ಹುಶಿಯದೇ!

1549. ಹುಸಿಯು ದೇಹವ ನಂಮಿ, ಯುಸವಸದೆಂ ಪರಾ
ವಶರ್ಗೈದೆ ದೇವರ್ಮಪ್ಪಡೆ,[1] ಬೞಿಕ ಮಾ
ನಸರಾರೆಂಬಿರದ ಪೇೞೇ !

1. ದೇವರುಮಪ್ಪಡೆ.

ವಚನ.

1550. ಅಂತ್ ಅನೇಕವುಪಾಯದಿಂ ಮನುಷ್ಯಧರ್ಮದೊಳ್ ನಡೆವ ಮಾನವರ್ಗೆ ನಿರ್ಭರರುಂ ಅಪ್ಪರು ದೇವರ್ ಎಂದು ನುಡಿವಿರಿ ; ಅದು ದೇವರ್ ಅಲ್ಲ ! ಎಂದು ಮನೋವೇಗಂ ಪೇೞೆ, ಕೇಳ್ದು ವಿಪ್ರರ್ ಇಂತ್ ಎಂದರ್ :

ಕಂದ.

1551. ನೀವೆಂದಂದದೊಳಾಜಿನ
ದೇವಂ ಸರ್ವಜ್ಞನಪ್ಪನಾದೊಡಾವೆಲ್ಲಂ
ದೇವರ ಗುಣವ ಬಂಣಿಸುವ
ದೇ ವೇದಂ ಜನರನ್ಯಾಕೆ ಬಂಣಿಸದೆಂದರ್.[1]

1. ವೇದಗಳು ಈ ದೇವರುಗಳನ್ನು ಸ್ತುತಿಸುತ್ತವೆ. ನೀವು ಅವರಿಗೆ ಮನುಷ್ಯರು ಅನ್ನುತ್ತೀರಿ. ಹಾಗಾದರೆ ವೇದಗಳು ಇವರನ್ನಲ್ಲದೆ ಉಳಿದ ಮಂದಿಯನ್ನು ಯಾಕೆ ಸ್ತುತಿಸುವದಿಲ್ಲ.

ವಚನ.

1552. ಎನೆ, ವೇದಂ ಜನರಂ ಅನೇಕತೆರದಿಂ ಸ್ತುತಿಸುವದ್ ಒಂದು ಶಾಸ್ತ್ರವುಂಟುಂ; ಅದು ನೀಂ ಅರಿಯಲ್ ಅಕ್ಕುಂ ; ಮತ್ತಂ ಜೀವಾದಿ ಪದಾರ್ಥಂಗಳಂ ಪೂರ್ವಾಪರವಿರೋಧವಿಲ್ಲದೇ ಪೇಳ್ದುದೆ ವೇದಂ ; ಪೂರ್ವಾಪರವಿರೋಧಂ ಉಳ್ಳದೆ ವೇದಂ ಅಲ್ಲ ಎಂದು ನಿರುತ್ತರರಂ ಮಾಡಿ ವಾದಂ ಗೆಲ್ದು ಜಯಪತ್ರಮಂ ಕೊಂಡು ವುದ್ಯಾನಕ್ಕೆ ಬಂದು ಯಥೋಚಿತಕ್ರಮದಿಂದಿರ್ದರ್.

## ON THE ORIGIN OF THE KAURAVAS, &c.

### 7. ಕೌರವಭಗೀರಥನಭಿಮನ್ಯುವಿಂದ್ರಜಿತು ವೇದವ್ಯಾಸ ಕರ್ಣತೃಣಬಿಂದುಗಳ ಉತ್ಪತ್ತಿ ವರ್ಣನ. (7ನೇ ಆಶ್ವಾಸ)

ಉತ್ಪಲಮಾಲಿಕಾ ವೃತ್ತ.

The sixth meeting of the princes and the brahmans.

1553. ಮಿತ್ರಸಮನ್ವಿತಂ ಪದುಳಭೂತಿಕರಾಗಿ, ಯನೂನಪಾಟಲೀ
ಪುತ್ರಪುರಕ್ಕೆ ಬಂದದರ ಕೋಣಪದಿಕ್ಕಿನ ಗೋಪುರಾಂತದೊ
ಳ್ಛತ್ರಮೆನಿಪ್ಪ-ಕಂಜಭವನಾಲಯಮಿರ್ದುದನಾಗ ಪೊಕ್ಕು ಲೋ
ಕತ್ರಯಮೈದೆ ಕೇಳೆ, ಪೊಡೆದಂ ಖಚರಾಧಿಪನಲ್ಲಿ ಭೇರಿಯಂ.

ವಚನ.

1554. ಅಂತು ಭೇರಿಯಂ ಪೊಯ್ಯೆ, ಕೇಳ್ದು ಸಕಳಕಳಾಪ್ರವೀಣರ್ ಅಪ್ಪ ತತ್ಪುರದ ವಿಪ್ರರೆಲ್ಲಂ ನೆರದು ಬಂದ್ ಅವರಂ ಕಂಡು ಇಂತ್ ಎಂದರ್ ಅಲ್ಲಿ ಭೇರಿಯಂ ಪೊಯ್ದು ಸಿಂಹಾಸನದೊಳ್ ಏಕೆ ಕುಳ್ಳಿರ್ದಿರ್? ಇಲ್ಲಿ ವಿದ್ವಾಂಸರಾದವರು ವಾದಾರ್ಥದಿಂ ಬಂದು ಭೇರಿಯಂ ಪೊಯ್ದು ವಾದಂ ಗೆಲ್ದಲ್ಲದೆ ಸಿಂಹಾಸನದೊಳ್ ಕುಳ್ಳಿರ ಬಾರದ್! ಎನೆ, ಯಾದಡೆ ಮಾಣಲಿ! ಯೆಂದು ಅವರ್ ಇಳಿದು ಕುಳ್ಳಿರೆ, ಮತ್ತೆ ಇಂತ್ ಎಂದರ್.

ಕಂದ.

1555. ಆರು ಗುರು ನಿಮಗೆ? ಪೇಳೆನೆ,
ಆರು ಗುರುವಿಲ್ಲ ನಮಗೆನಲಾದ್ವಿಜರೆಂದರ್:
ಧಾರುಣಿಯೊಳು ಗುರುವಿಲ್ಲದ
ರಾರುಮುನ್ನತತಪವನಾಂತು ಬಾಳ್ದವರುಳರೇ?

ವಚನ.

1556. ಎನೆ, ಯುಂಮ ತಪದ ವೃತ್ತಾಂತಮುಂ ಪೇಳ್ದೊಡೆ, ಪಿತ್ತಜ್ವರವಿಾ
ತಂಗೆ ಪಾಲುಸಖರೆಯುಂ ಕೊಳ್ವುದ್ ! ಎಂದು ಪೇಳ್ದಡೆ, ಕೆರಳ್ವಂ
ಅಲ್ಲದೆ, ಕೈಕೊಳ್ವನಲ್ಲ್ ; ಅಂತು ನಮ್ಮ ವೃತ್ತಾಂತ ನಿಮ್ಮ ಮನ
ಕ್ಕೆ ಬಪ್ಪುದ್ ಅಲ್ಲ್, ಎನೆ, ಯುವರ್ ಆದರ ತೆರನಂ ಪೇಳಿ ! ಕೇಳ್ವೆಂ !
ಎನೆ, ಯುಮೃತಫಲದ ವೃತ್ತಾಂತದ್ ಅರಸಿನಂತ್ ಅಪ್ಪರುಂ ಇರ್ದ
ಡೆ, ಪೇಳಲಂಮೆವ್, ಎನೆ, ಯಾಯಮೃತಫಲದ ವೃತ್ತಾಂತಂ ಎಂತ್?
ಎಂದು ವಿಪ್ರರ್ ಕೇಳೆ, ಮನೋವೇಗಂ ಪೇಳ್ದಂ.

ಕಂದ.

1557. ಪಿರಿದೆನಿಸುವಂಗದೇಶಾಂ
*a. the story of the stupid king.* ತರದೊಳು ಶೋಭಿಪುದೊಂದು ಚಂಪಕಾಪುರವಾ
ಪುರದಧಿನಾಥಂ, ನೃಪಚೇ
ಚರನೆಂಬವ, ಪಲವು ಕಾಲಮರಸಾಗಿರ್ದಂ.

ವಚನ.

1558. ಅಂತು ರಾಜ್ಯಂ ಗೈವುತ್ತಂ ಇರಲ್, ಒಂದು ದಿನಂ ವಣಿಗ್ವರಂ ಒ
ರ್ವಂ ಅಮೃತಫಲದ ಬೀಜಮುಂ ತಂದು ಕಾಣಿಕೆಯುಂ ಕೊಟ್ಟುಂ
ಇದಂ ಬಿತ್ತಿದಡೆ, ಮಹಾವೃಕ್ಷಂ ಅಪ್ಪುದ್ ; ಅಲ್ಲಿ ಅತಿಸ್ವಾದುವಪ್ಪ
ಫಲಂಗಳ್ ಅಪ್ಪವು; ಮೆಲ್ಲಿದಡೆ, ಯಷ್ಟೋತ್ತರಶತಂ[1] ಆಯುಃರೋ
ಗಾದಿ ಪಿಂಗುಗು, ಎಂದ ಪೇಳೆ, ಕೇಳ್ದ್ ಅರಸಂ ವನಪಾಲಕನಂ ಕ
ರದು ಬೀಜಮುಂಬಿತ್ತಿ ಫಲಮುಂ ಪಡೆ; ಯೆಂದು ಕೊಡೆ, ಯುವಂ ಬಿ
ತ್ತಿ ಬೆಳದು ಫಲಭರಿತಮಾದ ಸಮಯದೊಳ್ ಬಂದು ಸರ್ಪನ ತಾ

1. ನೂರಾ ಎಂಟು. 2. ಬಳ್ಳೇಸ್ತಂಭವಾಗಿ.

ಕ್ಷ್ಯರ್ಂ ಪಿಡಿದು ಗಗನಕ್ಕೆ ನೆಗೆಯಲ್, ಆಹಾವಿನ ವದನದಿಂ ವಿಷಪೂರಮಟ್ಟು ಮರದ ಮೇಲ್ ಬಂದು ಕಾಯೊಳ್ ಬೀಳೆ, ಯಾ ವಿಷದ ವೂಷ್ಣದಿಂದೆ ಫಲಂ ತ್ವರದಿಂ ಪಕ್ವಮಾಗಲುಂ, ಅದಂ ವನಪಾಲಕಂ ತಂದು ಅರಸಂಗ್ ಈಯ್ಯಲ್, ಅದಂ ಓರ್ವವೃದ್ಧಂಗೆ ಕೊಟ್ಟು ಮೆಲ್ಲಿಸಲ್, ಆವಂ ಆವಿಷಪೂರದಿಂದ್ ಆಗಳೆ ಸಾಯಲ್, ಅದಕ್ ಅರಸಂ ಆಮರವಂ ಆಗಳೆ ಬೇರ್ವರಿಸಿ ಕಡಿಸಿ ಬಿಸುಡೆ, ಯಾಪುರದೊಳು ಸಾಯ ಬಯಸುವ ತೊಂನರುಂ ತುರಚರುಂ ಮಹಾರೋಗಿಗಳುಂ ಬಂದ್ ಆಮರದ ಫಲಮಂ ತಿಂನಲು ನಿರೋಗಿಗಳಾಗಿ ವಳಿಪಳಿಸ್ತಂಭವಾಗಿ ಸುಖಮಾಗೆ, ಕಂಡ್ ಅರಸಂ ಮಲಮಲಮರುಗಿದಂ; ಎಂಬ್ ಅವಿವೇಕಿಯರಸಿನ ಕಥೆಯವರ್ ನಿಮ್ಮ ಸಭೆಯೊಳ್ ಉಳ್ಳಡೆ, ಪೇಳಲ್ ಅಂಜುವೆಂ; ಎನೆ, ಇಂತಪ್ಪವರ್ ಎಂಮ ಸಭೆಯೊಳ್ ಇಲ್; ಅಂಜದೆ ಪೇಳಿಂ; ಎನೆ, ಮನೋವೇಗಂ ಪೇಳ್ದಂ.

ಕಂದ.

1559. ಘನವೆನಿಪಪಯೋಧ್ಯಪುರದೊಳು
ಧನದತ್ತನೆನಿಪ ವಾಣಿಗ್ವರನಂತು ತನ್ನ
ತನುಜಾತೆದೇವದತ್ತೆಯು
ನನುಪಮವಸುದತ್ತನೆಂಬ ಪರದಂಗಿತ್ತಂ.

*b.* Fictitious story of the birth &c., of Manovega.

ವಚನ.

1560. ಅಂತ್ ಇತ್ತು ಶುಭದಿನಮುಹೂರ್ತದೊಳು ಮದುವೆಯಂ ಮಾಡಲ್, ಎಂದು ವೇದಿಕಾಗ್ರದೊಳು ತೆರೆಶಾಲೆಯ ಪಿಡಿದು ವರನಂ ಕಂನಿಕೆಯಂ ಮನ್ನಿಸಿ ಕೆಲದೊಳ್ ಇರಿಸಿ ಮುಹೂರ್ತದೊಳು ಪಾಣಿಗ್ರಹಣಂ ಗೈವುತ್ತಿರಲ್; ಆಸಮಯದೊಳ್ ಬಂದು ರಾಜಹಸ್ತಿ ಮ

ದೊನ್ಮತ್ತವಾಗಿ ಬಂಧನವುಂ ಪರಿದು ಕೊಂಡು ಕೊಲ್ಲುತ್ತಂ ಬರೆ, ಕಂಡ್ ಓಡುವಾಗಳ್, ಆವಸುದತ್ತನ ಹಸ್ತ ದೇವದತ್ತೆಯುಂ ಸೊಂಕೆ, ಗರ್ಭಂ ಪುಟ್ಟೆ ನವಮಾಸಂ ತೀವಿದ್ ಆಸಮಯದೊಳು.

ಕಂದ.

1561. ದಕ್ಷಣದಿಂದಂ ಬಂದ
ಭಿಕ್ಷೆಗೆ ಧನದತ್ತನಾಲಯಕ್ಕೆ ಪಲಂಬ
ಭಿಕ್ಷುಕರವರಂ ಕಂಡ
ಬ್ಜಾಕ್ಷಿವರದೇವದತ್ತೆ ಯುವಗಿಂತೆಂದಳ್:

ಉತ್ಪಲಮಾಲಿಕಾ ವೃತ್ತ.

1562. ಆವೆಡೆಯಿಂದ ಬಪ್ಪ ಪರಿ? ಯಲ್ಲಿಗೆ ಪೋಪಿರಿ? ಬಂದ ಕಾರ್ಯಮಿ
ನ್ನಾವುದು? ಪೇಳಿಮೆಂದು ಬೆಸಗೊಂಡಡೆ, ಬಂದೆವು ದಕ್ಷಣಾಶೆಯಿಂ
ದಾವೆಡೆ, ಯರ್ಘವುಳ್ಳೆಡೆಗೆ ಪೋದಪೆವಿಲ್ಲಿರಲಾಗದಪ್ಪುದಿಂ
ನೀವಿಷಯಾಂತರಾಳದೊಳೆ ಬರ್ಕುಗು ಪಂನೆರಡೊತ್ಸರಂಬರಂ.

ವಚನ.

1563. ಎಂದು ಭಿಕ್ಷುಕರ್ಕಳ್ ಮಜ್ಜನನಿಗೆ[1] ಪೇಳೆ, ನಾಂ ಪೊಟ್ಟೆಯೊಳ್ ಇರ್ದು ಕೇಳ್ದು ಬರಕ್ ಅಂಜಿ ಪೊರಮಡಲಂಮದೆ ಪಂನೆರಡು ವರುಷ ಅಂನಬರಂ ಪೊಟ್ಟೆಯೊಳ್ ಇರೆ, ಯಾಭಿಕ್ಷುಕರ್ ಮರಳ್ದು ಬಂದು ಸುಭಿಕ್ಷೆಯಾಯಿತ್; ಎಂಮ ದೇಶಕ್ಕೆ ಪೋದಪೆವ್ ಎಂದು ಪೇಳೆ, ಕೇಳ್ದು ಯಂಮ ತಾಯಿಯ ವದನದಿಂ ಪೊರಮಟ್ಟ ಕ್ಷಣದೊಳಗೆ ತಲೆಯುಂ ಪಿಡಿದು ಭೋಜನಮುಂ ಮಾಡಿಸ! ಎಂದು ಬೇಡಿ

1. ನನ್ನ ತಾಯಿ.

ಕಾಡಿದೊಡೆ, ಶಂಕಿಸಿ ಇವಂ ರಾಕ್ಷಸಂ, ಎಂದ್ ಓಡಿ ಪೋಗಲ್, ಎಲ್ಲರುಂ ನೆರೆದು ವಿಚಾರಿಸಿ ನಿರ್ಧಾರಿಸಿ ಕಳೆಯೆ, ತಲೆಗ್ ಎಂಣೆಯುಂ ಪಡೆಯದೆ ಜಟಾಧಾರೆಯಾದೆ; ಕೆಲವು ದಿನಕ್ಕೆ ವಿಹರಿಸುತ್ತವೆ ಅಯೋಧ್ಯೆಗೆ ಬಂದ್ ಎಂಮ ತಾಯಿತಂದೆಯ ವಿವಾಹವಾಗುತ್ತಿರೆ, ನೋಡಿ ಬಂದೆವ್; ಇದು ನಂಮ ತಪಶ್ಚರಣಕ್ಕೆ ಕಾರಣಂ ಎನೆ, ಕೇಳ್ದು ವಿಪ್ರರ್ ಇಂತ್ ಎಂದರ್.

ಕಂದ.

1564. ಪುಸಿಯನಸತ್ಯಮನಿದೆ ತಾ
ಪಸರಾಡಲ್ತಕ್ಕದಲ್ಲವಲ್ಲದೆ ಕೇಳ್ವ
ರ್ಬಿಸುಡುಗು ಭಾಷೆಯನೆನಲ್ಕೆ,
ಪುಶಿ ಇದರೊಳಗಾವುದೆಂದಡಾದ್ವಿಜರೆಂದರ್:

1565. ಪುಟ್ಟಿದುದು ಪತಿಯ ಹಸ್ತಂ
ಮುಟ್ಟಲೊಡಂ ಸತಿಗೆ ಗರ್ಭವಾಗರ್ಭದೊಳುಂ
ಹೆಟ್ಟುಗೆಗೆ ಪೇಳ್ದ ಮಾತು
ಪೊಟ್ಟೆಯ ಶಿಶು ಕೇಳ್ದುದೆಂಬುದಿದು ವಿಪರೀತಂ.

ವಚನ.

1566. ಅದಲ್ಲದೆಯುಂ ಬರದ ಸುದ್ದಿಯ ಕೇಳ್ದುಂ ಅಂಜಿ ಪಂನೆರಡು ವರುಷ್ ಅಂನಬರಂ ಪೊಟ್ಟೆಯುಂ ಪೊರಮಡದ್ ಇರ್ದೆನ್ ಎಂಬುದಂ; ಪೊರಮಡುವಾಗಳ್ತಾಯ ಬಾಯಿಂ ಪೊರಮಟ್ಟೆನ್ ಎಂಬುದಂ; ತತ್ಕ್ಷಣದೊಳ್ ತಾಯಿತಲೆಯುಂ ಪಿಡಿದು ಉಣಲ್ ಬೇಡಿದೆ ಎಂಬುದಂ; ಮತ್ತಂ ತಾ ಮಗನಾಗಿ ತಾಯಿ ಕನ್ಯೆಯಾಗಿರ್ದಳ್ ಎಂಬುದಂ;

ವಿರುದ್ಧಂ ಅಪ್ಪ ಪುಶಿ ಯಲ್ಲದೆ, ಸತ್ಯಮಲ್ಲ ಎಂದುಪೇಳೆ, ನಿಂಮ
ಮತದೊಳ್ ಇಂತಪ್ಪ ಪುಶಿ ಇಲ್ಲವೆ? ಪೇಳಿಂ ! ಎನೆ, ಯವರ್
ಇಂತ್ ಅಪ್ಪ ಪುಶಿ ಯಂಮ ಮತದೊಳ್ ಉಳ್ಳಡೆ, ಪೇಳಿ ! ಎನೆ,
ಮನೋವೇಗಂ ಪೇಳಲ್ ನೆಗಳ್ದಂ.

ಕಂದ.

1567. ಕ್ಷಿತಿಗೆಸವಯೋಧ್ಯಾಪುರದ

*c.* Application of the story:

ತೃತಯುರಥನೆಂಬ ನೃಪನ ತನೂಜೆಯರೀರ್ವ
ರ್ಚತುರೆಯುರು ಶುದ್ಧನಿರುತಂ
ಸತತಂ ಮಿಂದೊಂದೆ ತಾಣದೊಳ್ಪವಡಿಸಲುಂ,

1568. ಓರ್ವಳೋರ್ವಳನು ಸೊಂಕಿಂ

*aa.* miraculous birth of Bhagiratha.

ದೋರ್ವಳಿಗೆ ಸಮಂತು ಗರ್ಭಮುದಯಿಸಿ ಲೋಕ
ಕ್ಕೋರ್ವನೆ ಸದ್ಘಟನೆನಿಸಿದ
ದೋರ್ವಳ[1]ನಪ್ರತಿಮನಹ ಭಗೀರಥನೊಗೆದಂ.

1 ತೋಳಿನ ಬಲವುಳ್ಳವನು.

1569. ಅತಿಶಯ ಶೌರಿಪುರಕ್ಕಧಿ
ಪತಿಯಂಧಕವೃಷ್ಟಿ ಯಂಬನಾತನ ತಂಮಂ
ಕ್ಷಿತಿಪತಿವೃಷ್ಟ್ಯಯು ಯಾತನ
ಸುತೆ ಗಾಂಧಾರಿ ಯಂದೆಂಬ ಕನ್ಯಾರತ್ನಂ;

1570. ಆಸುದತಿಗೆ ಪತಿಯಾದಂ

*bb.* birth of the Kaurava princes

ಬಾಸುತವರಹಸ್ತಿನಾಪುರಾಧೀಶಂ, ತಾ

by magic power.

ರೇಶಕು[1]ಲೇಶಂ, ಭವಗು[2]ಣ
ಕೋಶಂ ; ಧೃತರಾಷ್ಟ್ರನೆಂಬವಂ ಪುಟ್ಟುಗುರುಡಂ.

1. ನಕ್ಷತ್ರಗಳಿಗೆ ಒಡೆಯನು=ಚಂದ್ರ. ಚಂದ್ರಕುಲದ ಮುಖ್ಯನು. 2. ಪಾಪಗುಣಕ್ಕೆ ಕೋಶವಾದವನು

ವಚನ.

1571. ಅಂತೆ ಅವರ್ ಈರ್ವರ್ಗೆ ನೂರ್ವರ್ ಕುಮಾರರ್ ಇರ್ದರ್ ಎಂಬುದು ನಿಂಮ ಮತದೊಳುಂಟೋ? ಇಲ್ಲೋ? ಪೇಳಿಂ! ಎನೆ, ಯುವರ್ ಉಂಟ್ ಎನೆ, ಯಾದಡ್ ಅಸ್ತ್ರೀಸೊಂಕಿಂ ಮಂ[1]ತ್ರದಿಂ ಗರ್ಭವಾಗಲಕ್ಕು ಗಡ! ಎಂಮ ತಂದೆಯ ಸೊಂಕಿಂದಾ ಎಂಮ ಜನನಿಗೆ ಗರ್ಭವಾಗಲಾಗದೆ? ಪೇಳ್ದಂ! ಎನೆ, ಗರ್ಭವಾದರ್ ಆಗಲಿ! ಯಾ ಪೊಟ್ಟೆಯ ಶಿಶು ಮಾತಂ ಕೇಳ್ದುದು, ಇದು ನಂಮ ಮತಪುರಾಣದೊಳ್ ಇಲ್ಲ ; ಈಪುಶಿ ಯುಂಟಾದಡಂ, ಪೇಳಿಂ! ಎನೆ, ಮನೋವೇಗಂ ಪೇಳಲ್ ನೆಗಳ್ದಂ.

1. ಧೃರಾಷ್ಟ್ರನಿಗೆ ಮಂತ್ರದಿಂದ ಮಕ್ಕಳು ಹುಟ್ಟಿದರು.

ಕಂದ.

1572. ದ್ವಾರಾವತಿಯಧಿನಾಥಂ
ನಾರಾಯಣನಾತನನುಜೆ ಯಪ್ಪ ಸುಭದ್ರಾ
ನಾರಿಯನೊಲವಿಂದರ್ಜುನ
ವೀರಂಗೀಯ್ಯಲ್ಕೆ, ಮದುವೆಯಾಗಿರುತಿರ್ದಂ.

cc. birth of Abhimanju,

1573. ಅಂತಿರೆ, ಕೆಲವು ದಿವಸಕ್ಕೆ
ಕಾಂತಿಗೆ ಬಸುರಾಗಿ, ತೀವಿ ನವಮಾಸಂ ನಿ
ಶ್ಚಿಂತಂ ಬೆಸಲಾಗಲು, ಶ್ರೀ
ಕಾಂತಂ ತಂನಾಲಯಕ್ಕೆ ಕರಿಸಿದನಾಗಳ್.

ಮಹಾಸ್ರಗ್ಧರ ವೃತ್ತ.

1574. ಬೆಸಲಾಗಲ್ಕೆಂದು ಬಂದಿರ್ದನುಜೆಗೆ ಯೊಲವಿಂದೊಂದಿರುಳ್ಕೇಶವಂ [ಸಂ
ಚೆಸಿ ಚಕ್ರವ್ಯೂಹವೃತ್ತಾಂತಮನೊರೆಯಲದಂ ಕೇಳುತಾಕಾಂತೆ [ನಿದ್ರಾ
ವಶದಿಂ ಕಣ್ಮುಚ್ಚಿ ಚಿತ್ತಂ ಮರದಿರೆ, ಯರಿದಾಪೊಟ್ಟೆಯೊಳ್ಕೂಸೂ [ಹೂ ! ಯಂ
ದುಸರಲ್ಕಂ, ಶಂಕೆ ಗೊಂಡೀಸುದತಿಯುದರದೊಳ್ಪುಟ್ಟುಗುಂ ದೈ [ತ್ಯಂ, ಎಂದಂ.

ಕಂದ.

1575. ಎನಲಭಿಮನ್ಯುಕುಮಾರಂ
ಜನಿಸಿದನೆಂದೆಂಬುದುಂಟೆ ? ಪೇಳೆನಲವರುಂ
ಟೆನಲಾದಡೆ ನಾವೆಂಮ ಜ
ನನಿಯುದರದಿ ಕೇಳ್ದೆವೆಂದು ಪೇಳ್ವುದುಪುಸಿಯೇ ?

ವಚನ.

1576. ಎಂಬುದು, ಪೊಟ್ಟೆಯೊಳ್ ಇರ್ದು ಕೇಳಲ್ ಅಕ್ಕು ; ನವಮಾಸಂ ತೀವಿ ಬಳಿಕ್ ಅಪೊಟ್ಟೆಯೊಳ್ ಪಂನೆರಡು ವರುಷಂ ಇರ್ದೆವ್ ಎಂಬುದು ಯಂತ್ ಅಕ್ಕುಂ ? ಎನೆ, ಇದು ನಿಂಮ ಮತಪುರಾಣದೊಳುಂಟೊ ? ಯಿಲ್ಲೋ ? ಪೇಳಿಂ ! ಎನೆ, ಈಪುಸಿ ನಂಮ ಪುರಾಣದೊಳ್ ಇಲ್ಲಾ ; ನೀಂ ಅರಿದಡೆ, ಪೇಳಿ ! ಎನೆ, ಮನೋವೇಗಂ ಪೇಳ್ದಂ

ಚಂಪಕಮಾಲಾ ವೃತ್ತ.

1577. ಅನುಪಮುಪ್ಪ ಪೇರಡವಿಯೊೞ್ಮಯನೆಂಬ ತಪಸ್ವಿ ಯೊಂದಿರು
ೞ್ಕನಸಿನೊಳಿಂದ್ರಿಯಂ ಚಲಿಸಿ ಕೌಪದೊಳುಂ ಕೆಡೆ, ಪೋಗಿ ತಾ ಸ
ರಸ್ಸಿನೊಳೊಗೆದೊಂದು ಪಂಕಜದೊಳಾಗಲದೊಯ್ಯನೆ ಹಿಂಡಲಲ್ಲಿ
ನೆಟ್ಟನೆ ಪೊಳೆವುತ್ತಿರಲ್ಕೆ, ಪರಿದಲ್ಲಿಗೆ ಬಂದುದದೊಂದು ಮಂಡುಕಂ.

*dd.* birth of Indrajitu from Ravana.

ವಚನ.

1578. ಅಂತು ಬಂದ್ ಇಂದ್ರಿಯಂ ಕಂಡು ನುಂಗೆ, ಗರ್ಭೋತ್ಪತ್ತಿಯಾಗಿ ಪೆಣ್ಣೂಸಂ ಪೆತ್ತು ಮೊಗಮಂ ನೋಡಿ ನೀ ಮನುಷ್ಯಳಾದಿ; ನಿಮಗ್ ಎಮಗೆ ಸಂಮಂಧಂ ಇಲ್ಲೆಂದು ಕಮಳ ಕರ್ನಿಕೆಮಧ್ಯದೊಳ್ ಇರಿಸಿ ಪೋಗಲ್; ಆಶಿಶುಂ ಆರನಂ ಕಾಣದೆ ದೆಶೆದೆಶೆಗೆ ನೋೞ್ಪಾಗಂ;

ಕಂದ.

1579. ಮುನಿಪತಿ ಬರೆ, ಸಂಧ್ಯಾವಂ
ದನೆಗಲ್ಲಿಗೆ, ಕಮಲಮಧ್ಯದೊಳು ಶಿಶುವಿರೆ, ನೆ
ಟ್ಟನೆ ದಿವ್ಯಜ್ಞಾನದಿಂ ನಿಜ
ತನುಜೆಯಳೆಂದರಿದು ತಂನ ಮನೆಗೈದಾಗಳ್;

1580. ಪರಕಿಸಿ, ಯುವೞ್ಗೆ ಮಂಡೋ
ದರಿ ಯಂಬ ಪೆಸರನಿಟ್ಟು ಸಲಹಲ್ಕೆ, ನೆರದುಂ
ತರುಣಿ ಯೊಂದಿನ ಮುನಿಯುದಿಂ
ದರಕೌಪೀನವನಿಟ್ಟು ಮಿಾವವಸರದೊಳ್

1581. ರುಂದ್ರವೈದೆ ನೆನದುಂ ನೆರೆ
ಯಿಂದ್ರಿಯ ವಳುದರಂ ಬೊಕ್ಕು ಗರ್ಭವಾಗೆ; ಭರ
ದಿಂದವಳುದರವನಾಗ ಮು
ನೀಂದ್ರನೀಕ್ಷಿಸಿ ಭೂನುತಜ್ಞಾನದಿಂದರಿದಂ.

ವಚನ.

1582. ಅಂತ್ ಅರಿದು ಗಂಡಂ ಆದಲ್ಲದೆ, ಗರ್ಭ ಸತಿಗ್ ಬಪ್ಪುದು, ಯೆಂದು
ಗರ್ಭಮಂ ತಂಬಿಸಲ್, ಏಳು ನೂರು ವರುಷ್ ಅಂನಬರಂ ಇರಲ್;
ಅತ್ತಲ್ ಲಂಕೆಯೊಳ್ ರಾವಣಂ ಪುಟ್ಟಿ ಬೆಳದು ರಾಜನಾಗ್ ಬಂದು
ದಿನ ವಿಹಾರದ ನಿಮಿತ್ಯ ಕಾನನದೊಳು ತೊಳಲುತ್ತ ಬಂದ್ ಆ
ಮುನಿಯಾಶ್ರಮವಂ ಪೊರ್ದಿಯಲ್ ಇರ್ದ ಕಂನಿಕೆಯಂ ಕಂ
ಡು ಸೋಲ್ತು ಮುನಿಪತಿಯ ಬೇಡಲ್, ಆಮುನಿ ಯಾತಂಗೆ
ಕೊಡೆ, ಶುಭದಿನಮೂಹೂರ್ತದೊಳು ಮದುವೆಯಾಗಿ ಕಳುಹಿ
ಸಿಕೊಂಡು ಸತಿವೆರಸಿ ಲಂಕಾಪುರವಮಂ ಪೊಕ್ಕು ಸುಖದಿಂ ಇರ
ಲ್, ಅಂದು ಸ್ತಂಬಿಸಿದ ಗರ್ಭವು ಕ್ರಮದಿಂ ಬೆಳದು ಪ್ರಸೂತೆ
ಯಾಗಲ್, ಇಂದ್ರಜಿತ್ತು ಪುಟ್ಟಿದಂ ಎಂಬುದು ನಿಂಮ ಮತದೊಳ್
ಉಂಟೊ? ಇಲ್ಲನ್ರೋ? ಪೇಳಿಂ! ಎನಲ್, ಅವರ್: ವುಂಟ ಎನೆ,
ಯಾದಡ್ ಆತ ತಂನ ತಾಯಿಗರ್ಭದೊಳು ಯೇಳು ನೂರು ವರುಷ್
ಅಂನಬರಂ ಇರಲಕ್ಕು ಗಡ! ನಾಂ ಎಂಮ ತಾಯಿಗರ್ಭದೊಳು
ಪಂನೆರಡು ವರುಷಂ ಇರ್ದೆವ್, ಎಂದಡ್, ಅದ್ ಯಾಕೆ ಪುಸಿಯಂಬಿ
ರಿ? ಯನೆ, ಯೇನಾದಡ್ ಆಗಲಿ! ಪುಟ್ಟಿದಾಗಲ್, ಉಣಲಿಕ್ಕ ಎಂ
ದುದು; ಬಾಯೊಳು ಪುಟ್ಟಿದೆವ್ ಎಂಬುದು; ಬಹುಚೋದ್ಯಂ; ಇದ್
ಇಂತ್ ಅಕ್ಕುಂ? ಎನೆ, ಇದು ನಿಂಮ ಮತದೊಳ್ ಇಲ್ಲವೆ? ಪೇ

ಳಂ ! ಎನೆ, ಇಂತಪ್ಪ ಸಟೆ ಯುಂಮು ಮತದೊಳ್ ಇಲ್ಲ ; ನೀಂ ಅರಿ
ವಡೆ, ಪೇಳಿಂ ! ಎನೆ, ಮನೋವೇಗಂ ಪೇಳ್ದಂ.

ಮತ್ತೇಭವಿಕ್ರೀಡಿತ ವೃತ್ತ.

1583. ನಿರವದ್ಯಂ ಜಗದೊಳ್ಪರಾಶರಮುನೀಶಂ ಗಂಗೆಯಂ ಪಾಯ್ದುನಿ
ರ್ಭರದಿಂದಾತಡೆಗೈದಲಂಬಿಗರನೆಲ್ಲುಂ ಕಾಣದಾಲೋಕಿಸು
ತ್ತಿರಲೋರ್ವಂಬಿಗಪುತ್ರಿಕಂನಿಕೆ ಯಿರಲ್ಕಂಡಾಕೆಯುಂ ಬೇಗದಿಂ
ಕರದಾನಾವಿಗೆ ಪುಟ್ಟನಿಕ್ಕುವದೆನಲ್ಕಾಕೆಂದಳಾಶಂಕೆಯಿಂ.

*ee.* birth of Vyása, from Parashara and a fisherwoman.

ಕಂದ.

1584. ದೇವರುಷಿ ! ನೀ ವಿಚಾರಿಸೆ,
ನಾವೆಯು ನಾ ನಿಂಮು ಸರಿಯೊಳೇರಲ್ಬಹುದೆ ?
ದೇವ ! ಕುಲಹೀನೆ ಯಾನೆನೆ,
ನಾವೆಯೊಳಲ್ಲಿಲ್ಲದೋಷವಂಜದಿರೆಂದಂ.

1585. ಎನಲಂಜದವಳು ನಾವೆಯು
ಮುನಿಪತಿಯೊಡನೇರಿ ಹುಟ್ಟನಿಕ್ಕುತ್ತಿರೆ, ಯೋ
ಜನಗಂಧಿ ಯುಂಬಳಿಗಾಗ
ಮನಸಂದಂ ನದಿಯು ಮಧ್ಯದೊಳ್ಮುನಿನಾಥಂ.

1586. ಎಂನೊಡನೆ ಕೂಡು ನೀನೆಲೆ
ಕನ್ಯ ! ಯನಲ್ಯನ್ನ ಮೈಯ್ಯ ದುರ್ಗಂಧದ ನಾ
ತಂ ನಿಲ ಬಾರದದಂ ಕಳೆ !
ನಿಂನೊಳ್ಮೆರೆವೆನಿಲ್ಲಿದಿರ್ದಡೆ, ನೆರೆಯೆಂ ನಾಂ

1587. ಎಂದಡೆ, ಕಳದಂ ತತ್ಕ್ಷಣ
ದಿಂದಂ ದುರ್ಗಂಧಮ; ಸುಗಂಧಮುಂ ತನುವಿಂ
ದೊಂದಿರ್ಪಂತಿರೆ ಮಾಡಿದ
ನಂದಿಂದ ಸುಗಂಧೆ ಯೆಂಬ ಪೆಸರಂ ಪಡದಳ್.

ವಚನ.

1588. ಅಂತ್ ಆಕೆಯೊಳ್ ಕೂಡಲ್ ಉಜ್ಜುಗಂಗೈಯ್ಯಲ್, ಆಕನ್ಯ ಇಕ್ಕೆ ಲದತೀರಂ ಬಿಡದೆ ನೋಡುವ ಜನಗಳ್ ಕಂಡಡ್, ಅಪವಾದ ಬಕ್ಕು ಲಜ್ಜೆಯಕ್ಕು; ಇದಕ್ ಉಪಾಯಮುಂ ಮಾಡಿಂ! ಎನೆ, ಯದಕ್ಕೆ ವಿಭೂತಿಯಂ ಅಭಿಮಂತ್ರಿಸಿ ತಳೆದು ಮತ್ ಓರ್ವರ್ ಪರಿಕಿಸದಂತೆ, ಮಾಡಲ್, ಆನಾವೆ ನಿಲ್ಲುವದಕ್ ಉಪಾಯಮುಂ ಮಾಡಿ! ಎನೆ, ಬ ಳಿಕ್ಕಂ

ಕಂದ.

1589. ಅಲ್ಲಿಯೆ ಕುರುವಂ ಮಾಡಿಯೆ,
ನಿಲ್ಲಿಸಿ ನಾವೆಯನವಳಂ ಕೂಡಿದಂ; ಬಳಿ
ಕ್ಕಲ್ಲಿಂದಾತಡೆಗೈದ
ಲ್ಸಲ್ಲಲಿತಜಟೆಕೈಪಸಹಿತೊಗದಂ ವ್ಯಾಸಂ.

ವಚನ.

1590. ಅಂತು ಜನಿಸಿದ್ ಆಕ್ಷಣದೊಳ್ ಪರಿದ್ ಐದೆ ಬೊಪ್ಪ! ನಾಂ ಎಂ ತು ಬದುಕುವೆಂ? ಬೆಸಸುಂ? ಎಂದಡ್, ಎಂನಂತೆ ತಾಪಸನಾಗಿ ರುಂ! ಎನುತ್ತೆ ಪೋದಂ; ಇಂತ್ ಇದು ನಿಂಮ ಪುರಾಣಶಾಸ್ತ್ರ ದೊಳ್ ಸಂತತಂ ಉಳ್ಳುದು, ಪುಶಿಯೆ? ಪೇಳಿರ್! ಎನುತೆ, ಮನೋ ವೇಗಂ ಕೇಳ್ದಂ ಅದಲ್ಲದೆಯುಂ

ಕಂದ.

1591. ಕುಂತಿ ಗಡಾದಿತ್ಯಂಗಂ

*ff.* birth of Karna from the ear of Kunti.

ದುಂ ತಜೆಯದೆ ಪಡದು ಕರ್ಣನನಾಕೆ ಕನ್ನಿಕೆ[1]

ಎಂತೆಂಬುದು ಪುಶಿಯಲ್ಲವೆ ?

ಯಿಂತುಟು ಮುಂನೊಂದು ಕಥೆ; ಯದಂ ಕೇಳೆಂದಂ.

1. ಕರ್ಣದಿಂದ ಹುಟ್ಟಿದವನು.

ವಚನ.

1592. ಅದ್ ಎಂತ್ ಎಂತಡ್, ವೃದ್ದಾಲಕಂ ಎಂಬ ರುಷಿ ಯೊಂದು ದಿನಂ ಗಂಗೆಯೊಳ್ ಸ್ನಾನಂ ಮಾಡಿ ಕೌಪೀನಮಂ ಪ್ರಕ್ಷಾಲಿಸಿ ಕಮಳ ಕರ್ನಿಕೆಯೊಳು ನಿಪ್ಪೀಡನಂ ಗೈಯ್ಯಲ್ ಆ ಕೌಪೀನಮಂ ವರದ್ ಇಂದ್ರಿಯಂ ಕಮಳದೊಳ್ ಬೀಳಲ್, ಅಲ್ಲಿಗ್ ಓರ್ವಳ್ ಅಯೋಧ್ಯಾ ಪುರಪತಿಯಪ್ಪ ರಘುವಿನ ಮಗಳು ಚಂದ್ರಮತಿ ಯೆಂಬಳು ಬಂದು ಮಗಳ ಕರ್ನಿಕೆಯೊಳ್ ಇರ್ದ ಸುಕಲಮಂ ಕಂಡ್ ಅಘ್ರಾಣಿಸೆ, ಗರ್ಭಂ ಜನಯಿಸಿ ಮನಗೆ ಬರೆ, ಮಾತಾಪಿತರ್ ಕಂಡ್ ಎಲೆ ಮಗಳೆ! ನಿನಗ್ ಆವನಿಂ ಗರ್ಭ ಜನಯಿಸಿತ್ ? ಎನೆ, ನಾಂ ಅರಿಯೆಂ ; ಆರೊಳುಂ ಕೂಡಲಿಲ್ ; ಎನೆ, ವಿಸ್ಮಯಚಿತ್ತರಾಗ್ ಇರುತ್ತಿರೆ.

*gg.* birth of Trinabindu.

ಕಂದ.

1593. ನವಮಾಸಿಂ ತೀವಿತುಮಾ

ಗವಳುಂ ತೃಣಬಿಂದು ಯೆಂಬನಂ ಪಡೆ, ಜಾರೋ[1]

ದ್ಭವನಿವನೆನಲ್ಕೆ ಜನಮು

ತ್ತ್ವವ ಭಿಕ್ಷಕ್ಕೆ ಬಂದುಮುನಿಪತಿಯುಂ ಕಂಡಂ.

1. ಸೂಳೆ ಮಗನೆಂದು ಜನರು ಅಂದದರಿಂದ ಅವನು ಭಿಕ್ಷಕ್ಕೆ ಹೋಗಿದ್ದನು.

ವಚನ.

1594. ಅಂತು ಕಂಡ್ ಉದ್ದಾಲಕಮುನೀಶ್ವರಂ ತನ್ನ ಮಗಂ ಎಂದ್ ಅರಿ
ದು ರಘುಭೂಪನಲ್ಲಿಗೆ ಬಂದು ಕನ್ಯಯಂ ಬೇಡಿ ಮದುವೆ ಯಾದಂ
ಎಂಬುದು ಇದು ನಿಮ್ಮ ಮತಪುರಾಣದೊಳ್ ಉಂಟೋ ? ಇ
ಲ್ಲೋ ? ಪೇಳ್! ಎನೆ, ಯವರ್ ಇದ್ ಉಂಟು, ಎನೆ, ಯಾದಡ್ ಅ
ವರು ಕನ್ನೆಯರ್ ಆಗಲಕ್ಕು, ಗಡ! ಯಂಮ ತಾಯಿ ಕನ್ಯ
ಯಾಕ್ ಆಗಳು ? ಎನೆ, ಅನೇಕತೆರದಿಂದ ಹಿತವಚನದಿಂ ಉಪಮೆ
ಯಂ ಕೊಟ್ಟು ದೃಷ್ಟಾಂತೋತ್ತರಂ ಪೇಳ್ದು ವಾದಂಗೆಲ್ದು ಜಯಪ
ತ್ರಮಂ ಕೊಂಡು ವನಕ್ಕೆ ಬರೆ, ಇನಂ ಅಸ್ತಾಗ್ ಉದಯಿಸಲ್
ಆಗ.

THE POWER OF RAMA AND LAKSHMANA.

8. ರಾಮ ಲಕ್ಷ್ಮಣರ ಸಾಮರ್ಥ್ಯಂ (8ನೇ ಆಶ್ವಾಸ)

ಕಳಾಭಾಷಿಣಿ ವೃತ್ತ.

The seventh meeting of these princes and the brahmans.

1595. ಮಿತ್ರನಂ ಕರೆದು ಬೌದ್ಧತಪೋಧನರಾಗಿ ಲೋ
ಕತ್ರಯಂ ಪೊಗಳೆ, ಸಂಭ್ರಮದಿಂದವೆ ಪಾಟಲೀ
ಪುತ್ರಪಟ್ಟಣದ ದಕ್ಷಿಣಗೋಪುರದುಂನತಂ
ಚಿತ್ರಮಪ್ಪ ಚತುರಾಸ್ಯನಿವಾಸನೈದಿದರ್.

ಕಂದ.

1596. ಆನಿಳಯದೊಳ್ ಖಚರಮ
ಹೀನಾಥಂ ಪೊಕ್ಕುರೆ ಭೇರಿಯಂ ಪೊಯ್ಯು, ಯಾ
ಸ್ಥಾನದೊಳಿರೆ, ಈಭೇರಿಯ
ಧ್ವಾನಮಿದೇನೆಂದು ಬಂದರಲ್ಲಿಯ ವಿಪ್ರರ್.

ವಚನ.

1597. ಅಂತು ಬಂದ್ ಆನಿಳಯದೊಳಗಂ ಪೊಕ್ಕು ಸಿಂಹಾಸನದೊಳಗ್ ಇ
ರ್ದ ಬೌದ್ಧರಂ ಕಂಡು, ನೀಂ ಯಾಕೆ ಭೇರಿಯಂ ಪೊಯ್ದು ಸಿಂ
ಹಾಸನದೊಳು ಕುಳ್ಳಿರ್ದಿರೆ ? ಯೆಂದರೆ, ವಿನೋದದಿಂದೆ ಬಾರಿಸಿದಿ
ವಿ ; ಮತ್ತಂ ಕುಳ್ಳಿರುವ ಸ್ಥಾನಂ ಎಂದು ಕುಳ್ಳಿರ್ದೆವು, ಎನೆ, ವಿ
ದ್ವಾಂಸರಾದವರು ಪೊಯ್ದು ವಾದಂ ಗೆಲ್ದಲ್ಲದೆ ಈ ಸಿಂಹಾಸನ
ದೊಳ್ ಕುಳ್ಳಿರ ಬಾರದ್ ! ಎನೆ, ಯಾದಡೆ ಮಾಣಲಿ ಎಂದು ಸಿಂಹಾ
ಸನದಿಂ ಇಳಿದು ಕುಳ್ಳಿರೆಂ, ಇಂತ್ ಎಂದರು.

ಕಂದ.

1598. ಆರು ಗುರು ನಿಮಗೆ ? ತಪವೇಂ
ಕಾರಣವಿದೆಮಗೆ ತಿಳಿಯ ಪೇಳಿಮೆನೆ, ಖಚರೋ
ರ್ವೀರಮಣಂ[1] ನಗುತ್ತೆ, ನಮ
ಗಾರುಂ ಗುರುವಿಲ್ಲದಾದೆವೆನಲವರೆಂದರ್.

1. ಉರ್ವೀರಮಣ=ಅರಸ.

1599. ಗುರುವಿಲ್ಲದ ತಪಮುರ್ವೀ
ಶ್ವರನಿಲ್ಲದ ದೇಶಮುಮೃತಕರನಿಲ್ಲದ ಶಾ
ರ್ವರಿ, ಬೆಳಸಿಲ್ಲದ ಪೊಲ್ದಮದ
ಕರಿ ಯಿಲ್ಲದ ಸೇನೆ ಯೊಪ್ಪಲಾರ್ಕುಮೆ ? ಜಗದೊಳ್ ?

ವಚನ.

1600. ಇಂತು ಗುರುವಿಲ್ಲದ್ ಆರುಂ ತಪಂ ಬಟ್ಟವರ್ ಇಲ್ಲ; ನಿಮಗ್ ಯಾಕೆ
ಗುರುವಿಲ್ ಎಂಬುದಂ ಪೇಳಿ ! ಯೆನೆ, ನಾಂಪೇಳಲ್ ಅಂಜುವೆಂ ಎನೆ,
ಅಂಜಲ್ ಯಾಕೆ ? ಪೇಳಿ ! ಎನೆ, ಕ್ಷೀರಕಥಾಕಾರುಕಂ ಅಂತ್ ಅವರ

ಉಳ್ಳಡೆ, ಅಂಜುವೆಂ ಎನೆ, ಆ ಕಥೆಯು ಎಂತ್ ಎಂದು ವಿಪ್ರರ್ ಕೇ
ಳೆ, ಮನೋವೇಗಂ ಪೇೞಲ್ ನೆಗೞ್ದಂ.

ಮತ್ತೇಭವಿಕ್ರೀಡಿತ ವೃತ್ತ.

*a.* The story of the foolish Tomara.

1601. ಪರದಾಡಲ್ಪಲವಾಕಳಂ ಕರೆವವಂ ತಾ ಬೈತ್ರದಿಂದೊಯ್ಯೆ, ಸಾ
ಗರದತ್ತಂ ವರನಾರಿಕೇಳವಿಲಸದ್ವೀಪಕ್ಕೆ[1] ; ಯಲ್ಲಿರ್ಪ ತೋ
ಮರನಾಧೇನುಗಳಂ ನಿರೀಕ್ಷಿಸಿಮಿವಂಮೋನಂದಡಾವೀವವಾ
ಪರದಿಂ ಬೇಡೆ, ರಸಾಯನಂಗಳನೆನಲ್ತೋರೆಂತದಂ ನೋಡುವೇಂ.

1. ಅನ್ವಯ : (ಒಬ್ಬನು) ತೆಂಗಿನ ಕಾಯಿಂದ ಶೋಭಿಸುವ ದ್ವೀಪಕ್ಕೆ ಆಕಳಂ ಕರೆವವನ್ನ ವೈಯಿ 2. ಆವು, ಇವು ಕೊಡುವವು.

ವಚನ.

1602. ಕಂಪಿಸುವ ನೊರೆವಾಲಂ ಕೆನೆವೊಸರಂ ಸದ್ಯೋಘೃತಮುಂ ತ
ಕ್ರಮುಂ ಮನಂ ಬಸದ್ ಉಣಲ್ ಇಕ್ಕಲ್ಕೆ, ನೆಟ್ಟನೆ ತೋಮರಂ
ಉಂಡು ದಣಿದು ಮತ್ ಇಂತ್ ಎಂದಂ.

ಕಂದ.

1603. ನಿನಗಾವನಾರಿತ್ತರ್ವೇ
ಳೆನಲೆಂಮಯ ಕುಲದೇವಿ ಯಿತ್ತಳೆಂದೆನಲಿವ
ನನಗೀವುದೆಂದು ಬೇಡಿದ
ಧನಮಂ ಕೊಟ್ಟಾಗಳೊಯ್ಯೆನಾಗೋವುಗಳಂ

ವಚನ.

1604. ಅಂತ್ ಒಯ್ದು ತನ್ನ ಮನೆಯೊಳ್ ಅವಂ ಇರಿಸಿ ಭೋಜನ ಸಮ
ಯದೊಳು ಭಾಂಡಮುಂ ತಂದು ತೋರಿ ರಸಾಯನಮುಂ ಕೊಡು
ಧೇನುವೆ ! ಎಂದು ಬೇಡಲು, ಮೌನದಿಂ ಇರೆ, ಯವಂ ಬಂದ್ ಎ

ರಡು ಮೂರು ದಿವಸಂ ಸಂಧಿಸಿ ಬೇಡೆ, ಉಸರದ್ ಇರೆ, ಯಾಗೋ
ವುಗಳ ನಿಂದಿಸಿ ಹಿಂದಕ್ಕೆ ಬಿಟೆ ಆಮರುಳನ್ ಅಂತವರ್ ನಿಮ್ಮ ಸ
ಭೆಯೊಳ್ ಉಳ್ಳಡೆ, ಪೇಳಲಂಮೆವ್ ಎನೆ, ಯಂತವರ್ ನಮ್ಮ ಸಭೆ
ಯೊಳ್ ಇಲ್ಲಂ, ಅಂಜದೆ ಪೇಳಿಂ ! ಎನೆ, ಮನೋವೇಗಂ ಪೇಳ್ದಂ.

ಕಂದ.

*b. Fictitious story of their life.*

1605. ಕ್ಷಿತಿನುತಕವರ್ಮಾಪುರದೊಳು
ಮತಿಬಂಧನನೆಂಬ ಸೆಟ್ಟಿ ಯಾತನ ಸುತರಾ
ವತಿ ಬೌದ್ಧಭಕ್ತನೆಂಮಯ
ಪಿತನೋದಿಪರಲ್ಲಿ ಬುದ್ಧತಾಪಸರೆಂಮಂ

ಉತ್ಪಲಮಾಲಿಕಾ ವೃತ್ತ.

1606. ಬಂದು ದಿನಂ ಮುಗಿಲ್ಕವಿದಕಾಲದ ವೃಷ್ಟಿ ಸಮಗ್ರವಾಗಿ ಭೋ
ರೆಂದಿರುಳುಂ ಪಗಲ್ಸುರಿಯೆ, ಬೌದ್ಧಗೃಹಂ ನಿಲ ಬಾರದೆಂದೆನಿ
ಪ್ಪಂದದಿ ಸೋರಿ ನಾಣ್ದಿರೆ, ತಪೋಧನರೆಂಬರವಾರಿಸತ್ಕಿ ನಾ
ವೊಂದು ಮಹೀಧರಾಗ್ರಮುಮನೇರಿ ಯದಂ ಪಿರಿದಾರಿಸುತ್ತಿರಲ್ ;

1607. ಆಗಿರಿಯಂ ಸೃಗಾಲಯುಗಳಂ ಪಿಡಿದೊಯ್ಯೆನೆ ಕಿತ್ತು ಪೊತ್ತವುಂ
ಬೇಗದಿ ಬಂದು ಪಂನೆರಡು ಯೋಜನಮಂ ಕಳೆದೊಂದು ತಾಣದಿಂ
ಬಾಗಿರಲಿಟ್ಟೊಡಾಮುನಿಯ ಲಾಂಛನವಸ್ತ್ರಮನಾಂತು ಬೌದ್ಧರೂ
ಪಾಗಿ ದರಿದ್ರೆಯಿಂ ತಿರಗಿ ಬಂದಿವಿದೆಂಮ ತಪಕ್ಕೆ ಕಾರಣಂ.

ವಚನ.

1608. ಎನೆ, ವಿಪ್ರರ್ ಇಂತ್ ಎಂದರು : ರಕ್ತಾಂಬರಧಾರಿಗಳಪ್ಪ ತಾಪಸರ
ಮಾತು ವಿಚಿತ್ರಂ ಅಪ್ಪ ಪುಶಿ ; ಜಂಬುಕಂಗಳ್ ಎರಡ್ ಬಂದಾಗಿ ಪ
ರ್ವತಮಂ ಕಿತ್ತು ಪೊತ್ತು ದ್ವಾದಶಯೋಜನಮಂ ಕೊಂಡು ಪೋಗ್

ಇರಿಸಿದವು ಎಂಬೊದು ಯಂತು ಘಟಿಸುವದು ? ಇಂತಪ್ಪ ಪ್ರಶಿ
ಯಂ ಕಂಡು ಕೇಳ್ದುಂ ಅರಿದುದಿಲ್, ಎನೆ, ಇದು ನಿಮ್ಮ ಪುರಾಣ
ದೊಳ್ ಇಲ್ಲವೆ? ಪೇಳಿಂ ! ಎನೆ, ನಾಂ ಅರಿದುದಿಲ್ಲ; ನೀಂ ಅರಿಪಡೆ,
ಪೇಳಿಂ ಎನೆ, ಮನೋವೇಗಂ ಪೇಳಲ್ ನೆಗಳ್ದಂ,

ಕಂದ.

1609. ಸೀತೆಯನೊಯ್ಯೆ ದಶಾನನ
ನಾತನೊಳಾಂತು ರಣದೊಳ್ ಕಾದಿ ಗೆಲ್ದುಂ ಭೂ
ಜಾತೆಯ ತರಲಬ್ಧಿಗೆ ಚಿಂ
ತಾತುರನಾಗಿ ರಾಮ ನೆರೆ ಕಪಿನಾಯಕರಂ

*c.* Application of the story,

ವಚನ.

1610. ಕರೆದ್ ಅದ್ರಿಯಂ ತಂದು ಸೇತುವಂ ಕಟ್ಟಿ, ಕಟಕಂ ನೆಱವಂತೆ,
ಮಾಡು ! ಎನೆ, ಯವರು ಮಾಳ್ಪೆಂ ಅಬ್ಧಿಯಂ, ಎಂದು ಕಪಿವ್ರ
ಜಂ ಬೆಟ್ಟಗಳಂ ನೆರೆ ಕೀಳ್ತು ನೆತ್ತಿಯೊಳ್ ಸಂದಿಸಿ ಮೂರು
ನಾಲ್ಕಂ ಆಡಕಂ ಇಕ್ಕಿ ಆಗಿರಿಯಂ ಪೊತ್ತು ಬೇಗದಿಂ ತಂದು ಸ
ಮುದ್ರಮಂ ಸೇತುಗಟ್ಟಿದರ್ ಎಂಬುದು ನಿಂಮ ಶಾಸ್ತ್ರದೊಳ್ ಸಂ
ದ ಪುರಾಣದೊಳ್ ಪುದಿದಿಹುದು ; ಸತ್ಯವೊ ? ಅಸತ್ಯವೊ ? ಯದ್
ಎಲ್ಲಮಂ ಮನೋವೇಗಂ ಬೆಸಗೊಳೆ, ವಿಪ್ರರೆಲ್ಲಂ ಸತ್ಯಂ ಎನೆ,
ಯಾದಡ್ ಅಸತ್ವಂಗಳ್ ಅಪ್ಪ ವಾನರಂಗಳು ಗಡ ! ಗಿರಿಗಳಂ ಕಿತ್
ಬಂದೆ ಪೊತ್ತು ಪಲವು ಯೋಜನಮಂ ತರಲಕ್ಕು, ಗಡಂ! ಇವುಂ
ವನಚರ[1]ಂಗಳಿಂ ಸತ್ವಮುಳ್ಳ ಜಂಬುಕಂಗಳ್ ಎರಡ್ ಬಂದಾಗಿ ಮಂ
ದೆ ಗಿರಿಯಂ ಪೊತ್ತು ತಂದವ್ ಎಂದಡ್, ಎಮ್ಮ ನುಡಿಯಂ ಪ್ರಶಿ
ಮಾಳ್ಪರ್ ; ಎನೆ, ಯಾವಿಪ್ರರೆಲ್ಲರ್ ನಿರುತ್ತರರಾಗಿ ಇವರು ಕಾರ

Monkeys make a dridge for Rama,

1. ವನದಲ್ಲಿ ಆಡ್ಡಾಡುವಂಥಾವು=ಮಂಗ.

ಣಾಪುರುಷರ್ ಎದ್ ಅರಿದು ನೀವು ಜಯವಾದಿಗಳ್ ಎಂದು ಜಯಪ ತ್ರಮಂ ಕೊಡೆ, ತಾವೀರ್ವರುಂ ತಾವ್ ಇರ್ಪ ಉದ್ಯಾನಕ್ಕೆ ಬಂದು ರಮ್ಯಕ್ಷೇತ್ರದೊಳ್ ಕುಳ್ಳಿರೆ, ಪವನವೇಗಂ ಇಂತ್ ಎಂದಂ.

ಉತ್ಪಲಮಾಲಿಕಾ ವೃತ್ತ.

1611. ಖೇಚರನಪ್ಪ ರಾವಣನು ಭೂಮಿಜೆಯಂ ತೆಗದೊಯ್ಯೆ ಲಂಕೆಗಾ
ಭೂಚರ[1]ರಾಮಲಕ್ಷ್ಮರು ರಾಜಿಪಯೋಧಿಗದೆಂತು ಪೊಯ್ದು ರಾ
ತ್ರೀಚರರಾಜಿಯಂಗಣದೊಳೇ ತರಿದಿಕ್ಕಿದರೆಂಬ ಭೇದಮಂ
ಸೂಚಿಪುದೆಂದೊಳೆಂದಡರುಪಲ್ಲಗದಂ ಖಚರಾಧಿನಾಯಕಂ.

1. ಭೂಮಿಯ ಮೇಲೆ ಇರುವವರು=ಮನುಷ್ಯರು.

ಕಂದ.

1612. ಸತತಂ ಸೊಗಯಿಸುತಿಪ್ಪಂ
ರಥನೂಪುರಚಕ್ರವಾಳಪುರಧೀಶ್ವರ ವಿ
ದಿತಜಯ ಸಂಪೂರ್ಣಗುಣಾ
ನ್ವಿತಖ್ಯಾತನುಂನತನು ತೋಯನುದ್ವಾಹಂ.

ವಚನ.

1613. ಅಂತ್ ಆತಂಗೆ ಭೀಮಂ ಎಂಬ ರಾಕ್ಷಸಂ ಚಿತ್ರಸೇನಂ ಎಂಬ ದೇವಂ ಪೂರ್ವಭವಸ್ನೇಹಕಾರಣಂ ಲಂಕಾಪುರಕ್ ಬಯ್ದು ರಾಕ್ಷಸವಿದ್ಯಮಂ ಅರುಪಿನವಮುಖದ ಕಂಠಾಭರಣಮಂ ಕೊಟ್ಟಂದಿಂದ ತೋಯದಯನ ಕುಲರಾಕ್ಷಸಕುಲವಾದುದು; ಅಕುಲದೊಳ್ ಅನೇಕರು ಪುಟ್ಟಿ ರಾಜ್ಯಂಗೈದು ಪೋದ ಬಳಿಕಂ, ಧವಳಕೀರ್ತಿಯಂ ಬವನ್ ಅಬೀರದೊಳ್ ರಾಜ್ಯಂ ಗೈಯುತ್ತುಂ ಇರ್ದಂ; ಇತ್ತಲ್

ವಿಜಯಾರ್ಧಪರ್ವತದ ದಕ್ಷಿಣಶ್ರೇಣಿಯೊಳು ಮೇಘಪುರಾಧಿಪಂ ಅ
ಲೇಂದ್ರಂ ಎಂಬಂ; ಆತನ ಮಗಂ ಶ್ರೀಕಂಠಂ ಎಂಬಂ; ಆತನ ತಂಗಿ
ದೇವಿ ಯೆಂಬಳ್; ಆಕೆಯಂ ಆಧವಳಕೀರ್ತಿ ಮದುವೆಯಾಗಿ ದೇವಿ
ಯಗ್ರಜನಪ್ಪ ಶ್ರೀಕಂಠಂಗೆ ವಾನರದ್ವೀಪಮಂ ಕೊಡೆ, ಯಾದ್ವೀ
ಪದೊಳ್ ಅರಸಾಗಿ ಯಿದ್ದ ಕಾರಣಂ, ಶ್ರೀಕಂಠನ ಕುಲ ವಾನರಂ
ಎಂದ್ ಆದುದು ; ಆರಾವಣಂ ರಾಕ್ಷಸಕುಲದೊಳ್ ಪುಟ್ಟಿದಂ ಎಂಬರ್
ಆತಂ ಪಿಶಾಚನೇನಲ್ಲ ; ಸುಗ್ರೀವ ಹನುಮಾದಿಗಳು ಶ್ರೀಕಂಠನಕು
ಲದೊಳ್ ಉದ್ಭವರಾಗಿ ವಾನರದ್ವೀಪದೊಳ್ ಇರ್ದರ್ ; ಆದರಿಂ ವಾ
ನರ್ ಎಂಬರು ; ವಾನರರೇನಲ್ಲ; ಅವರ್ ಆಕಾಶಗಾಮಿ[2]ವಿದ್ಯಭಾವ
ದಿಂ ಲಂಕೆ ಮೊದಲಾದ್ ಅನೇಕದ್ವೀಪಂಗಳಿಗೆ ಪೋಪ ಸಾಮರ್ಥ್ಯಂ
ಉಂಟು ; ಸೇತುವಂ ಕಟ್ಟಲಿಲ್ಲ ; ಸಂಮಂಧವಿಲ್ಲ ಎಂದು ಸ್ವಸಮ
ಯಪ್ರಸಿದ್ಧಮಹಾಪುರಾಣೋಕ್ತಿಯಿಂ ರಾಮಾಯಣದೊಳು ಸುರ
ವಾನರಕುಲೋತ್ಪತ್ತಿಯಂ ತಿಳಿಯೆ, ಪೇಳ್ದು, ಮಿತ್ರನಂ ಸಂತುಷ್ಟ
ನಂ ಮಾಡಿ ಸುಖಸಂಕಥಾವಿನೋದದಿಂ ಇರಲ್, ಆಸಮಯದೊಳ್
ನೇಸರ್ ಪಡವುದು ; ನಿದ್ರಾಮುದ್ರಿತರಾಗಿ ಬೇಗದಿಂ ಬೆಳಗಾಗಿರೆ,

1. ಮೇರುಪರ್ವತ. 2. ಆಕಾಶದಲ್ಲಿ ಸಂಚರಿಸುವ ವಿದ್ಯ.

## RAVANA JARASANDRA, &c.

### 9. ರಾವಣನ ಶಿರವರಿದು ಪತ್ತಿದ್ದು ಜರಾಸಂಧನೋತ್ಪತ್ತಿ ವಾಲಿಯ ಸುತನ ಶಿರ ಪತ್ತಿರ್ದ ವರ್ಣನ. (9ನೇ ಆಶ್ವಾಸ)

ಕಂದ.

1614. ವರಸಖಸಮೇತಶ್ವೇತಾಂ
The eighth meeting. ಬರವೇಷಧಾರಿಯಾಗಿ ಯಸವಸದಿಂದಲ

ಜ್ಝರಿ ಯನಿಶಿರ್ಪ ಪಾಟಲೀ
ಪುರವರಕ್ಕೈತಂದನಾಗಳಾಖಚರೇದ್ರಂ.

1615. ಆಪುರದಾಗ್ನೆಯ ಕೋಣೆಯ
ಗೋಪುರದಬ್ಜಭವನ ನಿವಾಸಮಂ ಪೊಕ್ಕುಂ
ಭೂಪತಿ ದುಂದುಭಿಯುಂಮಾ
ಟೋಪದಿಂ ಪೋಯ್ದಿಳದಂ ಮೃಗೇಂದ್ರಾಸನದೊಳ್.

ಉತ್ಪಲಮಾಲಿಕಾ ವೃತ್ತ.

1616. ಆಗಳವರ್ಪೊಡರ್ದತುಳದುಂದುಭಿಯುಂನತಘೋಷವಷ್ಟದಿ
ಗ್ಭಾಗಮನೈದೆ ತೀವಿರಲು, ತತ್ಪುರವಿಪ್ರರು ಕೇಳ್ದು ವೇದಶಾ
ಸ್ತ್ರಾಗಮಕಾವ್ಯನಾಟಕವಿಚಕ್ಷಣರೆಂದೆನಿಸಿಪ್ಪರೆಲ್ಲಮೊಂ
ದಾಗಿ ಯಿದೇನೆನುತ್ತೆ ತಣೆಯಲ್ಕಮಲಾ[1]ಸನಿವಾಸಕ್ಕೈದಿದರ್.

1. ಕಮಲದ ಮೇಲೆ ಕೂತಿರುವವನು=ಬ್ರಹ್ಮ.

ವಚನ.

1617. ಅಂತ್ ಐತಂದು ವಳಪೊಕ್ಕು ಶ್ವೇತಾಂಬರರಂ ಕಂಡು ನೀವ್ ಎ
ತ್ತಣಿಂ ಬಂದಿರಿ ? ಇಲ್ಲಿಯ ಭೇರಿಯಂ ಪೊಯ್ದು ಸಿಂಹಾಸನದೊ
ಳು ಕುಳ್ಳಿರ್ದಿರಿ ! ದಾವ್ವಿಂಸರಾದವರು ವಾದಾರ್ಥದಿಂ ಬಂದು ಭೇರಿ
ಯೆಂ ಪೊಯ್ದು ವಾದಂ ಗೆಲ್ದಲ್ಲದೆ ಸಿಂಹಾಸನದೊಳ್ ಕುಳ್ಳಿರ ಬಾ
ರದ್ ! ಎನೆ, ಯಾದಡೆ ಮಾಣಲಿ ! ಯಂದವವರ್ ಇಳಿದು ಕುಳ್ಳಿರೆ,
ಮತ್ತೆ ಯಾವಿಪ್ರರು ನಿಮ್ಮ ಗುರುವ್ ಆರು ? ನೀವ್ ಏನು ಕಾರ
ಣ ತಪಂ ಗೊಂಡಿರ್ ? ಎನೆ, ಯಮಗ್ ಆರು ಗುರುವಿಲ್ಲ ; ಯೆಂ
ಮ ತಪದ ಕಾರಣಮಂ ಪೇಳ್ವಡೆ, ರಜಕಚಂದನ ಕಥೆಯವರ್ ಉ

ಳ್ಪಡೆ, ಪೇಳಲಂಮೆವ್, ಎನೆ, ಯಾಕಥೆ ಯಂತ್ ಎಂದು ವಿಪ್ರರ್ ಕೇ
ಳೆ, ಮನೋವೇಗಂಪೇಳ್ದಂ.

ಕಂದ.

1618. ಧರೆಗಧಿಕವೆನಿಪುಜ್ಜನೆಯ
ಪುರದಧಿಪಂ ಶಾಂತನೆಂಬನಾತಂಗಾಹ
ಜ್ವರೆಮಾಗಿ ವೈದ್ಯರಾರುಂ
ಪರಿಹರಿಸದಿರಲ್ಕೆ, ನಿತ್ತರಿಸದಿಂತೆಂದಂ

a. Story of the stupid washerman.

1619. ಎಂನಯ ದೇಹಜ್ವರಮಂ
ಸಂನುತಮಾಗಲ್ಕೆ, ಬೇಗದಿ ಕಳೆದಡಾನುಂ
ಮುಂನಣೆಯ ಮಾಡ್ಯವರ್ಗ
ತ್ಯಂನತಪದವಿಯನನೂನಮಿರಲಾನೀವೇಂ.

ಕಳಾಭಾಷಿಣಿ ವೃತ್ತ.

1620. ಎಂದವಂಮುಡಗೆರಿಟ್ಟದ ಕೇಳ್ದು ವಣಿಗ್ವರಂ
ಬಂದು ತಾ ಕಳೆವೆನೆಂದುರೆ ಸೀತಳವಸ್ತುಮಂ
ತಂದಪೇಂ, ನದಿಯ ತೀರದೊಳೀಕ್ಷಿಸಿ ಬೇಗದಿಂ
ದೆಂದು ಪೋದ ರಜಕವ್ರಜಮಿರ್ದೆಡೆಗಾಗಳುಂ.

ಕಂದ.

1621. ಆರಜಕನೋರ್ವ ಚಂದನ
ಭೂರುಹ[1] ಪ್ರವಾಹದಿ ಬಂದಾತೀರಮನೈಡಲ
ದಾರ್ಕೈಯ್ಯದೆ, ಕಾಷ್ಟವೆನು
ತ್ತೋರಂತೆ ಕಡಿವುತಲಿರ್ದನವನವಸರದೊಳ್.

1. ಭೂಮಿಯಿಂದ ಬೆಳೆಯುವಂಥಾದ್ದು = ಗಿಡ.

ಉತ್ಪಲಮಾಲಿಕಾ ವೃತ್ತ.

1622. ಅಲ್ಲಿಗೆ ಬಂದದಂ ಪರದನೀಕ್ಷಿಸಿ ಚಂದನವಪ್ಪುದೆಂದವಂ
ಮೆಲ್ಲನೆ ಚಿತ್ತದಿಂದರಿದು ನೀನಿದನಂ ಕಡುವಾಸೆ[1] ಯಾಕೆ ? ನೀ
ನೊಲ್ಲದಡೀವೆ ದೊಡ್ಡಪೊರೆಕಾಪ್ಪವ; ನೀನಿದಕಿನ್ನು ಚಿಂತೆಯಿಂ.
ತಲ್ಲಣವಾಗದೀವುದೆನೆ, ಯಾರಜಕಂ ಕೊಡೆ, ಕೊಂಡು ಬೇಗದಿಂ,

1. ಕಡಿಯುವ ಆಶೆ.

ಕಂದ.

1623. ಬಂದಾಪರದಂ ತೈದಾ
ಚಂದನಮಂ ನೃಪತಿಗಿದ್ದ ಚ್ಚಲ್ಯಾಕ್ಯಜ್ವರ ತಾ
ನೊಂದೆ ನಿಮಿಷ ವರಿಯಲಿ
ಕಂದಾತಂಗಿತ್ತನೊಲ್ದು ಬೇಡಿದ ಪದಮಂ.

ವಚನ.

1624. ಇಂತು ಪರೀಕ್ಷೆಯಂ ಅರಿಯದೆ, ಚಂದನಮಂ ಇಂಧನಂ ಎಂದು
*b.* Story of the four fools. ಕಡಿವ ರಜಕರ್ ಅಂತು ಅವರ್ ನಿಂಮ ಸಭೆಯೊಳ್ ಉಳ್ಳಡೆ, ಪೇಳ
ಲಂಮೆವ್, ಎನೆ, ಅಂತವರ್ ನಂಮ ಸಭೆಯೊಳ್ ಇಲ್ಲ್; ಅಂಜದೆ
ಪೇಳಿಂ! ಎನೆ, ಮನೋವೇಗಂ ಮತ್ತೆ ಮೂರ್ಖಚತುಷ್ಟಯದ
ವರ್ ಉಳ್ಳಡೆ, ಪೇಳಲಂಮೆವ್, ಎನೆ, ಯಾಕಥೆ ಯಂತೆಂದು ವಿಪ್ರರ್
ಕೇಳೆ, ಮನೋವೇಗಂ ಪೇಳ್ದಂ.

ಚಂಪಕಮಾಲಾ ವೃತ್ತ.

1625. ಬರುತಿರೆ, ಬಟ್ಟೆಯೋಳ್ಗುರುಗಳೋರ್ವರವರ್ಗಿದಿರಾಗಿ ನಾಲ್ವರೈ
ತರುತಿರಲೆಲ್ಲರೊಂಮಿಗೆ ನಮೋಸ್ತು[1]! ಯನಲ್ಕೆ, ಸುಧರ್ಮವೃದ್ಧಿ
[ಯಂ

1. ನಮಃ ಇರಲಿ (ಸಂಸ್ಕೃತ).

ದಿರದವರೊಂದೆ ಸೂಳ್ಪರಸಿ ಪೋಗುತಿರಲ್ಕವರೆಂದರಿಂತಿವರ್
ಪಱಸಿದುದೊಂದೆ ; ಯಾಪರಕೆ ನಮ್ಮೊಳದಾರ್ಗದನಿಂತು ಪೇಳಿರೇ.

ಕಂದ.

1626. ಎಂದು ವಿಚಾರಿಸುತೆಲ್ಲ
ರ್ನಿಂದಿರ್ದುಂ, ಪರಕೆಯಮಗೆ ತಮಗೆನುತಂ ಭೋ
ರೆಂದುಂ ಗುದ್ದಾಡುತಲುಂ
ನಿಂದು ಬಳಿಕ್ಕೈದೆ ತಂವೊಳು ತಾವಿಂತೆಂದರ್:

1627. ಆಗುರುಗಳು ಪೋಪಲ್ಲಿಗೆ
ಬೇಗಂ ಪರಿದೈದಿ ಕೇಳ್ವುದೀಪರಕೆಯೆ ನೀ
ವಾರ್ಗಿತ್ತಿರೆನುತ್ತಲ್ಲಿಗೆ
ಪೋಗಿ ಕೇಳೆ, ಮುನಿ ಇವರು ಮೂರ್ಖರೆಂದರಿದುಂ ;

1628. ನಾಲ್ವರೊಳೋರ್ವಂಗೆಂದಡೆ,
ತಾಳ್ವರ್ಮುನಿಸನು ಮೂವರುಮದರಿಂದೆಮಗಂ
ಸಲ್ವುದಲ್ಲಂ ; ಪೊಲ್ಲೆ ! ಯಂ
ದುಳ್ವಾ[1]ತ್ಮರಕ್ಷೋಪಾಯಮ ಮನದೊಳ್ಬಗದುಂ.

1. ಉಳಿವ.

ವಚನ.

1629. ಈ ನಾಲ್ವರೊಳತಿಮೂರ್ಖರಾದವರಿಗೆ ಪರಿಶಿದೆವ್, ಎಂದು ಮುನಿಪ ತಿ ಯತ್ತಲ್ ಪೋಗಲ್, ಆಚತುಷ್ಟಯಂ ಮಗುಳ್ದು ಬರುತ್ತಂ ಆ ಗೆಳ್ ಆಮೂರ್ಖ, ನಾ ಮೂರ್ಖಂ, ಎಂದು ವಾದಿಸಿ ಓರೋರ್ವರು ಕಾದುತ್ತ ಬರ್ಪ ಎಡೆಯೊಳ್

ಕಂದ.

1630. ಪಿರಿಯಪಟ್ಟಣಮಂ ಪೊಕ್ಕು
ವರಸಭೆಯಂ ಮೇಳೈಸಿ ನಾಲ್ವರೊಳಾರು ಮೂ
ರ್ಖರು ? ಪೇಳಿರಿ ನೀವೆನಲೆಂ
ದರು ನಿಂಮ ಮೂರ್ಖತೆಯ ಬೆಸಸಿ ಯನಲಿಂತೆಂದರ್.

ವಚನ.

1631. ಆನಾಲ್ವರೊಳಗ್ ಓರ್ವ ಸಭೆಗೆ ಯಭಿಮುಖವಾಗಿ ನಿಂದ್ ಇಂತ್
ಎಂದಂ:

ಕಂದ.

1632. ಎನಗೀರ್ವರ್ಪೆಂಡರು ; ನಾ
ನನುವಶನಾಗಿರ್ಪೆನವರ್ಗುಚಿತವು ಮುಂನಾ
ಮನವೊಸೆದಿಬ್ಬರಿಗುಂ ನೆ
ಟ್ಟನೆ ಸಮನಾಗಿಯೆ ಮಾಡುತ್ತಿರಲೊಂದು ದಿನಂ.

ಶಾರ್ದೂಲವಿಕ್ರೀಡಿತ ವೃತ್ತ.

1633. ನಿದ್ರಾಮುದ್ರಿತನಾಗಿರಲ್ಕಮಭುಜದ್ವಂದ್ವಂಗಳೊಳ್ಕಾಂತೆಯ
ರ್ನಿದ್ರಾಸಕ್ತಿಯರಾಗಿರಲ್ಕುರಿವುದೊಂದಂಬತ್ತಿಯಂಮೂಕು ತಾ
ನುದ್ರೇಕಂ ಬಡೆ, ಕಚ್ಚಿ ಪಾರಲದು ಬೀಳಲ್ಕೆಂನ ಮೇಲಾರಿಸ
ಲ್ನಿದ್ರಾಭಂಗಮವರ್ಗೆನುತ್ತೆ ಕರಮೆತ್ತಲ್ಬಿಟ್ಟೆ; ಕಂಣ್ಸುಟ್ಟುದೂ.

ಕಂದ.

1634. ಅದರಿಂದ ಬಳಿಕೆನಗಾ
ದುದು, ಭಾವಿಸಿಡೆ, ಸುಡಗಂಣನೆಂದು ನಾಮವಂ ;

ಪದಪಿಂದವಧರಿಸುವದಿಂ
ತಿದುವೆಂನ ಮೂರ್ಖತೆ ಯುಂದವಂ ಕೆಲದಗೆದಂ.

ವಚನ.

1635. ಅಂತು ಕೆಲದೆಗೆಯೆ, ಮತ್ತೊರ್ವರ್ ಬಂದ್ ಇಂತ್ ಎಂದಂ: ಎನಗೆ
ಕರಿದಿಭಿ ಯುಂಬರ್ ಈರ್ವರು ಪೆಂಡರುಂ; ಇರ್ದು ಅವರ್ ನಿಚ್ಚಲ್
ಬಂದೊಂದು ಕಾಲಂ ಬರಸುವರ್; ಬಂದು ದಿನ ಕರಿ ಯುಂಬ ಕಿರಿ
ಯುವಲ್ಲಭೆ ಬಲಗಾಲಂ ಪೂಸುತಿರ್ದು ಬಿಸಿನೀರಂ ತರಲ್ ಪೋಗೆ,
ದಿಭಿ ಯುಂಬ ಕಿರಿಯುವಲ್ಲಭೆ ಯಡಗಾಲಂ ಪೂಸುತಿರ್ದು ಕರಿ ಯೊ
ರಸಿದ ಬಲದ ಕಾಲ ಮೇಲೆ ಇರಿಸಿ ತಾನುಂ ಬಿಸಿನೀರಂ ತರಲ್
ಪೋಗಲ್, ಆಕರಿ ಬಿಸಿನೀರಂ ತಂದು ನೋಡಿ ಯಾನ್ ಬರಸಿದ ಕಾ
ಲ ಮೇಲೆ ತಾನ್ ಬರಸಿದ ಕಾಲಂ ಇರಿಸಿದಳ್ ಎಂದು ಕೋಪಿಸಿ ವ
ನಿಕೆಯಿಂ ಆಕಾಲಂ ಮುರಿದಳು; ಆದಿಭಿ ಪಿಂತನೆ ಬಂದು ಆನ್ ಬ
ರಸಿದ ಕಾಲ ಮುರಿದಳು, ಅವಳ್ ಬರಸಿದ ಕಾಲ ಮುರಿವೆನ್ ಎಂ
ದು ವನಿಕೆಯುಂ ತಂದು ಪೊಯ್ದು ಮುರಿವಳ್; ಅದರಿಂ ಖಂಜಂ
ಎಂಬ ಪೆಸರಾದುದು; ಇದ್ ಎಂನ ಮೂರ್ಖತ್ವಂ ಎಂದು ಬಿಂನವಿ
ಸಿ ಕೆಲಸಕ್ಕೆ ಸಾರೆ, ಮತ್ತೊರ್ವಂ ಬಂದ್ ಎಂನ ಬಿಂನಪವಂ ಅ
ವಧರಿಪ್ಪುದ್ ಎಂದಂ.

ಚಂಪಕಮಾಲಾ ವೃತ್ತ.

1636. ಪರಿಕಿಸೆ, ಪೆಂಡರೀರ್ವರೆನಗಂತವರೋಳ್ಸುಖಗೋಷ್ಠಿಯಿಂ ನಗು
ತ್ತಿರೆ, ಯುವರೆಂದರರ್ಕನುದಯುಂ ಬರೆಗಂ, ಸತಿ ಮೌನದಿಂದ ದಾ
ರಿರದಡೆ, ಪಂನೆರಡ್ಪಡಿಯ ಮುಂಡಿಗೆ, ಪೊಂಮುನತುಪ್ಪ ಕೆಂನೆವಾ
ಳ್ವೆರಸಿನಿತುಂ ತೆರುಂಗುಮೆನಲಾಗಲು ಮೌನದೊಳಿದ್ದವೆಲ್ಲರುಂ.

ಕಂದ.

1637. ಆಸಮಯದಲ್ಲಿ ತಸ್ಕರ
ಮೋಸದಿ ಕಂನವನಿಕ್ಕಿ ಮನೆಯೊಳ್ಪೊಕ್ಕರೆ
ಸಾಸಿಗನಾವಿರ್ದುದ ಕಂ
ಡೋಸರಿಸದೆ ವಡವೆ ಯಲ್ಲವ ತೆವರಿ ಕೊಂಡಂ.

1638. ಅದರಿಂ ನಿಲ್ಲದೆ ತಣಿವಂ
ದದಿನುಂಡ ಪಂಚಭಕ್ಷಪಾಯಸವಟ್ಟಿರ್ದರ್ಗಂ
ನದಕಳುಪಿ, ಬಳಿಕಲ್ಲೆ ವು
ಟ್ಟಿದಮಂ, ಪೆಂಡರ್ಗಳುಟ್ಟಿದಂ ಸೂಲಕೊಂಡಂ.

1639. ಮಡದಿಯ ಹಚ್ಚಡಮುಂ ಸುಲ
ದ ಡೆನ್ನಯ ಕಿವಿಯ ಕೊಪ್ಪನೀಮೂಗುತಿಯುಂ ಕೊ
ಳ್ವಡೆ, ನೋಯದಂತೆ, ತೆಗೆ! ಯುಂ
ದೊಡೆ, ಮೌನಗೆಟ್ಟಿಳಿವಳೆಂದು ನಾಂ ನೆರೆ ಕುಣಿದೆ.

ವಚನ.

1640. ಅಂತು ಸೋತಳ್ ಎಂದು ಪಂನೆರಡು ಪಡಿ ಮುಂಡಿಗೆ ಪೊಂಮಣ ತುಪ್ಪವಂ ಪಾಲು ಸಕ್ಕರೆಯುಂ ತಂದ್ ಈಗಳ್ ಕೊಡಲ್ ಬೇಕೆಂದು ನಾ ಕುಣಿದಾಡಿದೆ; ಪೋದ ಪೊಂನು ಭಂಗಾರವಂ ಈತೆರ ಕೆಡಿಸಿದೆ; ಈಬಗೆ ಎನ್ನ ಮೂರ್ಖತ್ವವೆಂದು ಪೇಳ್ದಾತಂ ಕೆಲಕ್ಕೆ ಸಾರೆ, ಮತ್ತೋರ್ವ ಕನ್ನಯ ಮೂರ್ಖತ್ವಮಂ ಪೇಳಲ್ ನೆಗಳ್ದಂ.

ಉತ್ಪಲಮಾಲಿಕಾ ವೃತ್ತ.

1641. ಎಂನ ಪಿತಂ ಮಹಾಪ್ರಭು; ಸಮಾನಗುರುಸ್ತನ ಪುತ್ರಿಯೋರ್ವಳಂ
ಚಂನೆಯನೋಲ್ದು ತಂದೆನಗೆ ಲಗ್ನವಮಾಡಲು, ಯಾವಧೂಟಿ ತಾ

ತೆಂನಯು ತಾಯಿತಂದೆಯನಗಲ್ದಿರಲಾರದೆ, ಯವ್ವನಂಬರ
ಲ್ಸಂನುತವಪ್ಪಿನಿಂ, ಸತಿ ತವರ್ಮನೆಯೊಳ್ಪಲಕಾಲಮಿರ್ದಳುಂ.

ಕಂದ.

1642. ಅಂತಿರೆ, ಕೆಲವು ದಿನಕ್ಕಾ
ಕಾಂತೆಯಳನೊಡಗೊಂಡು ಬಪ್ಪೆನೆಂಬ ಬಗೆ ಯೋ
ರಂತೆಂನ ಮನದೊಳುದಯಿಸ
ಲುಂ, ತಾಯಿತಂದೆ ಪೋಗುವಾಗಲವರೆಂದರ್ :

ವಚನ

1643. ಎಲೆ ಮಗನೆ! ನೀ ಬಹು ಅಶನಿ; ಯದರೊಳ್ ಹಶಿಯುಳ್ಳ[1] ಐದ್ ಆರು ಸೂಳ್ ಉಂಡಲ್ಲದೆ ನಿಲಲಾರೆ; ಬಿಯ್ಯಗರ ಮನೆಯುವರ್ ಇದಂ ಕಂಡರೆ, ಮರುಳಾಡುವರು; ಅದರಿಂ ಕಿರಿದಾಗಿಯುಂ ಬಂದ್ ಉಣ ಲರಿಯೆ; ಪಿರಿದುಂ ಪ್ರಾರ್ಥಿಸಿಕೊಂಬುದ್! ಎಂದು ಬುದ್ಧಿಯಂ ಪೇಳಲ್, ಅಂತೆ ಗೈವೆನ್ ಎಂದು ಪೋಗಿಯಾತೆರದಿಂ ಅವರು ಪ್ರಾರ್ಥಿಸೆ, ಹಶಿವಿಲ್ಲೆಂದು ವುಣದೆ, ಪಸಿದರೆ, ಯಾಸವುಯದೊಳುಂ ನೇಸರ್ ಪಡವುದು; ರಾತ್ರಿಯೊಳ್ ಉಣಲ್ ಎಬ್ಬಿಸಲ್ಕ, ಎನಗೆ ಪಶುವಿಲ್ಲವ್, ನಾ ಪಶಿದಾಗಲ್, ಅಡಿಗಿಯಂ ಮಾಡಿ ಉಣಲ್ ಇಕ್ಕ! ಎಂದ್ ಎನ್ನ ಪೆಂಡತಿಗೆ ಪೇಳೆ, ಕೊಟ್ಟ ಅಕ್ಕಿಯಂ ನೀರ್ಪಡಿಸಿ ನಾ ಮಲಗಿರ್ದ ಮಂಚದ ಸಮೀಪದೊಳ್ ಇರಿಸಿ ಯಲ್ಲಾ ನಿದ್ರಾಸಕ್ತರಾಗಿ ತಂಮ ತಂಮ ಶಯನಸ್ಥಳಕ್ಕೆ ಪ್ರೋಗೆ.

1. ಹಶಿವು ವುಳ್ಳವನು.

ಚಂಪಕಮಾಲಾ ವೃತ್ತ.

1644. ಸತಿ ಸಹಿತಂಮಿರುಳ್ಪರಿದು ನಿದ್ರೆಯೊಳಿರ್ದುದಯಕ್ಕೆ ಮುಂನವಾ
ಸತಿ ಪೊರಮಟ್ಟು ಪೋಗೆ, ಪಶಿವಿಂ ನಿಲಲಾರದೆ, ಕಂಡು ತನ್ನಪೆಂ

ಡತಿ ಸಮವಾಗಿ ನೀರ್ಪಡಿಸಿದಳಿ ಇರಲ್ಪಕ್ಕಿವಿಂ ಬಳಿಕ್ಕಲಾ
ರ್ತತೆ ಪಿರಿದಾಗಿ ತೀವಿ ಕೊಳಲಾಗಳ್ ಕಾಂತೆ ಮಗುಳ್ದು ಬೇಗದಿಂ

1. ಬಾಯೊಳಗೆ ಹಾಕಿಕೊಂಡನು.

ಕಂದ.

1645. ಬಂದಾಕಿ ನುಡಿಸೆ, ಬಾಯ್ಬಿರಿ
ವಂದದಿ ನೀರ್ಪಡಿಸಿದಕ್ಕಿ ತೀವಿರೆ, ನುಡಿಯುಂ
ಕುಂದಿರೆ, ಯಚ್ಚರಿ ಪಟ್ಟದೇ
ನೆಂದೆನ್ನ ಗಲ್ಲಮ ಬಾರಿಸಿ ನೋಡ್ಡಳಾಗಳ್

ಕಳಾಭಾಷಿಣಿ ವೃತ್ತ.

1646 ಕೆಟ್ಟೆನೆಂನ ಪತಿಗಾದುದು ರೋಗವೆನುತ್ತವ
ಳ್ಬಟ್ಟ ಚೀರಿ ವದರುತ್ತಳುವಾಗಲುಮೆಲ್ಲರುಂ
ತೊಟ್ಟನೆದ್ದು ಪರಿತಂದವರೀಕ್ಷಿಸಿ ಬೇಗದಿಂ
ಪುಟ್ಟಿದೀರುಜೆಗೆ ತಕ್ಕನುವಾವುದು ? ಯಂದರುಂ.

ವಚನ.

1647. ಅಗಳ್ ನೇಸರ್ ಮೂಡಲುಂ ಹಲಸಿಗಂ ಓರ್ವಂ ವಾತಪಿತ್ತಶ್ಲೇಷ್ಮ
ಕ್ಕ ಎಲ್ಲವಕ್ಕೆ ಬಲ್ಲಂ; ಕಳವೆನೆಂದು ಕೇರಿಕೇರಿಯುಂ ಸುತ್ತಿ ಬ
ರುತ್ತಿರೆ, ಕಂಡು ಕರದ್ ಅವೈದ್ಯಗೆ ತೋರೆ, ಕಂಡ್ ಅವೈದ್ಯಂ
ರೋಗವಲ್ಲೆಂದು ತಂನ ಮನದೊಳ್ ಅರಿದು ಇವಂ ಏನಾದರು ಮು
ಕ್ಕಿರ್ದ ಸಮಯದೊಳ್ ಅಲ್ಲಿ ಮನುಷ್ಯರ ಸುಳುವಂ ಕಂಡು ಬಾ
ಯಿ ಮುಚ್ಚಿದ; ಗಲ್ಲ ಬುಗುಟಾಯಿತು ಎಂದು ಪರೀಕ್ಷಿಸಿ ಮುಟ್ಟಿ
ನೋಡೆ, ತಂಡುಲಂ ಎಂದ್ ಅರಿದು ಈವ್ಯಾಧಿಗೆ ತಕ್ಕ ಔಷಧ ಕೊ

ಡದೆ ಪೋದರೆ, ಸಾವುದ್ ಎನೆ, ಯಾಮನೆಯವರೆಲ್ಲರುಂ ನೂರು ಗ
ದ್ಯಾಣ ಪೊಂನಂ ಅವನ್ ವಶಕೆ ಕೊಟ್ಟು ಪ್ರಾಣಮುಂ ಕಾವುದು!
ಎನೆ, ಹಾಗಾದರೆ ನೀವೆಲ್ಲರು ದೂರ ಪೋಗಿ ಸೆರಗುಬರಗು ನೋಂ
ಕಲು, ಕಷ್ಟಹಾಗೆಂದು ದೂರ ಮಾಡಿ ಶಸ್ತ್ರದಿಂ ಗಲ್ಲವಂ ಪೊಳಿಸಿ
ಬ್ರಣಪೆಸರಕ್ಕಿ[1]ಯುಂ ತೆಗದು ತತ್ತಿಯುಂದ್ ಎತ್ತಿ ತೋರಿ ಗುಪ್ತ
ದಿಂ ಬಂದು ಕಂಬಳಿಯುಂ ಮುಚ್ಚಿದಡ್, ಆನು ತಂಡುಲಮುಂ ಉಗು
ಳ ಕಳೆದೆನ್ ಅಂದಿಂದ ಎಲ್ಲರ್ ಎನಗೆ ಗಲ್ಲಪಾಟನೆಂದು ಪೆಸರಿಟ್ಟರು.
ಇದ್ ಎಂನ ಮೂರ್ಖತ್ವಂ ಎಂದು ಪೇಳೆ, ಕೇಳ್ದು ಧರ್ಮಾಧಿಕರ
ಣಂ ನೀವೆಲ್ಲ ಸಮಾನಮೂರ್ಖರ್; ಆಪರಕೆಯುಂ ಪಂಚಿ ಕೊಳ್ಳಿಂ
ಎಂದು ಪೇಳ್ದರು; ಇಂತಪ್ಪವರ್, ಆರ್ ಆದಡು, ನಿಂಮ ಸಭೆಯೊಳ್
ಉಳ್ಳಡೆ, ವಿಚಾರಿಸಿ ಪೇಳಿಂ! ಎನೆ, ಕೇಳಿ ವಿಪ್ರರೆಲ್ಲರ್ ಖದಖದಿಸಿ
ನಗುತ್ ಇಂತಪ್ಪ ಮೂರ್ಖದುರ್ಜನರು ನಂಮ ಪಟ್ಟಣದೊಳ್ ಇ
ಲ್ಲ; ನೀವ್ ಅಂಜದಲೆ ಪೇಳಿಂ! ಎನಲ್, ಆಗ ಖಗಕುಲತಿಲಕಂ
ಇಂತ್ ಎಂದಂ: ಅದ್ ಎಂತ್ ಎಂದರೆ: ಗುಜ್ಜರದೇಶದೊಳ್ ವಂಶಗ್ರಾ
ಮಂ ಎಂಬ ಪಟ್ಟಣದೊಳು ಶ್ವೇತ ಪಟನ್ವಯದಲ್ ಆವು ಗೌಡಂ
*c.* Fictitious story about their having become ascetics.
ಗಳ ಮಕ್ಕಳು; ನಾವು ಕುರಿಯ ಪರಿದಾಡಿಪಾಪನದೊಳ್ ಪುಟ್ಟಿವಂ
ಣಾದ ಬೆಳವಲಮರಸಂ ಕಂಡು ಮೊಲಲು ಬಯಸಿ ಮರಂ ಏರಲ್
ಅರಿಯದೆ, ಶಿಡಿಮಿಡಿಗೊಳುತ್ತಲ್ ಆಗ ಪೂರ್ವೋಕ್ತಮುಂ ನೆನದೆವ್;
ಅದ್ ಎಂತ್ ಎನೆ.

1. ಹುಂಣು ಎಂಬ ಹೆಸರುಳ್ಳ ಅಕ್ಕಿ.

ಇಂದ್ರವಜ್ರವೃತ್ತ.

1648. ಸರ್ವೌಷಧೀನಾಮಶನಂ ಪ್ರಧಾನಂ
ಸರ್ವೇಷು ಪಾನೇಷು ಜಲಂ ಪ್ರಧಾನಂ

ಸರ್ವೇಂದ್ರಿಯಾಣಾಂ ನಯನಂ ಪ್ರಧಾನಂ

ಸರ್ವೇಷು ಗಾತ್ರೇಷು ಶಿರಃ ಪ್ರಧಾನಂ.

ಟೀಕು: ಎಲ್ಲ ಔಷಧಿಗಳಲ್ಲಿ ಅಶನ ಮುಖ್ಯ ; ಎಲ್ಲ ಪಾನಗಳಲ್ಲಿ ನೀರು ಮುಖ್ಯ ; ಸರ್ವೇಂದ್ರಿಯಗಳಲ್ಲಿ ಕಂಣು ಮುಖ್ಯ ; ಸರ್ವ ಅವಯವಗಳಲ್ಲಿ ತಲೆ ಮುಖ್ಯ.

ವಚನ.

1649. ಎಂಬ ನೀತಿಶಾಸ್ತ್ರವಂ ಅರಿದ್ ಆಹುದ್ ಎಂದು ಪಿಡಿದಿರ್ದ ಕತ್ತ್ರಿಯಿಂದ ಶಿರವರಿಯ ಕೊರದು ಮೇಗಣ್ಗೆಡಲ್, ಆನಂದದಿಂ ತುದಿಗ್ ಅಡರ್ದು ಕೊಂಬಿಂದೆ ಕೊಂಬಿಂಗೆ ಪೊಯ್ದು ಬೇಗದಿಂ ಆಗಳ್;

ಮತ್ತೇಭವಿಕ್ರೀಡಿತ ವೃತ್ತ.

1650. ತನಿವಂಣಂ, ಹಸಿವಾರುವಂತೆ, ಬಸುರಂ ತೀವಲ್ಸಿರಂ ತಿಂದ ಭೋಂ
ಕನೆ ತಾವಾಗಿಳತಂದು ಭೂತಳದೊಳಿರ್ದೀಮುಂಡಮಂ ಪತ್ತೆ, ಮೆ
ಲ್ಲನೆ ನಾವೆದ್ದು ಬರುತ್ತಲೆಂಮ ಕುರಿ ಯಲ್ಲಂ ಕೆಟ್ಟು ಪೋಗಲ್ಕೆ ಕಾ
ನನದೊಳ್ಕೂಡೆ ತೊಳಲ್ದು ನೋಡಿ ಯವನೊಂದಂ ಕಾಣದಾವೀ
[ರ್ವರುಂ.

ಕಂದ.

1651. ಮನೆ ಯತ್ತಂ ಪೋಗೆ, ಪಿತಂ
ಕನಲ್ಗು ಮೆಂಪಂಜಿ ಪಲವು ನಾಡಂ ಕಳೆದೊ
ಯ್ಯನೆ ಬಂದೆವೀಪುರದ ಚೆ
ಲ್ವ ನೋಡುವದೆಂಬುದೆಂಮ ಬಗೆಯೊಳ್ಪುಟ್ಟಲೊಡಂ.

ವಚನ.

1652. ಬಂದೆವು ಯನಲ್, ಆದ್ವಿಜರ್ ಇದು ವಿಚಿತ್ರಂ ಎನೆ, ಯವರ್ಗೆ ಶ್ವೇತಾಂಬರರ್ ಇಂತ್ ಎಂದರ್ :

ಕಂದ.

1653. ನೀವಾಡಿದ ಪುಶಿ ಯಲ್ಲಂ
ಭಾವಿಸುವಡೆ, ಸತ್ಯಮೆಂಬಿರಿ ; ಯಾದಡೆಮಗಂ
ಚೋವಾಡುವಿರಿನಿತರೊಳಂ
ಗಾವುದು ಪುಶಿ ? ಪೇಳಮೆಂದಡವರಿಂತೆಂದರ್ :

1654. ಅರಿದೀಡಾಡಿದ ಮನುಜನ
ಶಿರಮುರ್ವೀರುಹಮನಡರಿ ತುದಿಗೊಂಬಿನಲ
ಜ್ಬರಿ ಯನಿಸುವ ತನಿವಂಣಂ
ಪಿರಿದಾಗಿರೆ, ತಿಂದು ತಣಿದುದೆಂಬುದಿದು ಚಿತ್ರಂ !

ವಚನ.

1655. ಅದಲ್ಲದೆಯುಂ ನೆಲದೊಳ್ ಇರ್ದ ತಂಪು ಅಟ್ಟೆಗಳ ಬಸುರ್ ತೀವಿದುದು ; ತೀವಲೊಡಂ, ಆಮರದಿಂ ಇಳಿದು ಬಂದ್ ಆತಂವ ಅಟ್ಟೆಯ ಕೊರಳೊಳ್ ಶಿರಪತ್ತಿತ್ ಎಂಬುದು ಪುಸಿಯುಂ, ಚೋದ್ಯಂ ಅಲ್ಲದೆ, ಸತ್ಯಂ ಉಂಟೆ ? ಪೇಳಿಂ ! ಎನೆ, ಶ್ವೇತಾಂಬರರ್ ಇಂತ್ ಎಂದರ್.

ಶಾರ್ದೂಲ ವಿಕ್ರೀಡಿತ ವೃತ್ತ.

1656. ನಾವಿಂದುಳ್ಳದನಾಡಲೈದೆ ಪುಶಿ ಯಂದೇ, ಹೇಳಣಂ ಗೈವಿರೈ !
*d.* Application of this story. ನೀವೆಲ್ಲಂ ನೆರೆ ಪೇಳ್ವ ಪುಣ್ಯಕಥನಂ ರಾಮಾಯಣಂ ಭಾರತಂ
ತಾವೆಲ್ಲಂ ಪುಶಿ ಯಂದು ನೀವರಿವಿರೇ ? ಪೇಳೆಂದಡೆಂದರ್ದ್ವಿಜ
ರ್ನೀವೆಂಬೀಪುಶಿ ಯಂಮ ಧರ್ಮಕಥೆಯೊಳಂತುಳ್ಳಡಂ, ಪೇಳಿರೇ.

ವಚನ.

1657. ಎನೆ, ಶ್ವೇತಾಂಬರಧಾರಿಗಳ್ ಇಂತ್ ಎಂದರು : ನಿಂಮ ರಾಮಾಯಣದೊಳು ರಾವಣಂ ಎಂಬ ರಾಕ್ಷಸಂ ದಿಗ್ವಿಜಯಕ್ಕೆ ಪೊರಮಟ್ಟು ಭೂಮಿಯಂ ಸುತ್ತಿ ಬರುತ್ತೆ ಕೈಲಾಸಮಂ ಕಂಡ್ ಈಗಿರಿ ಯಾವದ್ ? ಎಂದು ಸಮೀಪದೊಳ್ ಇರ್ದ ಶಚಿವರಂ ಕೇಳೆ, ಯವರ್ ಇದು ಕೈಲಾಸಗಿರಿ ಯಂಬುದು ಮಹಾಪಿರಿಯದ್ ; ಇಲ್ಲ್ ಈಶ್ವರಂ ಎಂಬ ನೆಲಸಿ ಪಿರಿಯದೇವಂ ಆಗ್ ಓರ್ವಂ ಉಂಟು, ಗಡಾ ! ಎಂದು ಪೇಳೆ, ಕೋಪಿಸಿ ಪುಷ್ಪಕದಿಂ ನೆಲಕ್ ಇಳದು, ತಂನ ಇಪ್ಪತ್ತು ತೋಳ್ಗಳಂ ಆಗಿರಿಯಂ ತಕ್ಕೈಸಿ ಯಲ್ಲಾಡೆ, ಗಿರಿಜೆ ನಡನಡುಗಿ ಭಯಂ ಗೊಂಡು ಹರನಂ ಆಲಿಂಗಿಸಲ್, ಇರದೆ ಹರಂ ಉಂಗುಟದಿಂ ಆಗಿರಿಯಂ ಬತ್ತಲ್, ಆಪರ್ವತಂ ಮಿಡುಕದಂತ್ ಆಗೆ ಯದಂ ಬಿಟ್ಟು ಚೋದ್ಯಬಟ್ಟು ಇಂನೇನು ಮಾಳ್ಪೆಂ ? ಎಂದು ಪೋಗಿ ತನ್ನ ದಶಶಿರದಿಂ ದಂಡೆಯ ಕಟ್ಟಿ ಪೂಜಿಸಿ ಚಂದ್ರಹಾಸಮಂ ಪಡೆದಂ ; ಆಶಿರಂಗಳಂ ಅರ್ಚಿಸಿದ್ ಏಳುದಿನಕ್ಕೆ ತಂಮ ತಂಮ ಕೊರಳೊಳ್ ಪತ್ತಿದವು ಎಂಬ್ ಇದು ನಿಂಮ ಮತದೊಳ್ ಉಂಟೊ ? ಇಲ್ಲೋ ? ಪೇಳಿಂ ! ಎನೆ, ಯವರ್ ಇದು ಪ್ರಸಿದ್ಧವಾಗ್ ಉಂಟೆ, ಎನೆ, ಎಂಮ ಶಿರ ವರಿದಾಗಳೆ, ನಂಮ ಅಟ್ಟಿಯೊಳ್ ಪತ್ತಿತ್ ಎಂದಡ್, ಎಂತು ಪುಶಿಯಂ ಚೋದ್ಯಂ ಎಂಬಿರಿ ? ಯಂದು ಮತ್ತಂ ಇರದ್ ಇಂತ್ ಎಂದರ್

*aa.* Ravana cuts off his ten heads and after seven days puts them on again;

ಕಂದ.

1658. ಪರಿಕಿಸಲುಂ, ಕಾಂತಾರಾಂ
ತರದೊಳು ಪೆಸರ್ವೆತ್ತ ವಾಲಿಸುಗ್ರೀವ ವಾ

*bb.* story of Angada;

ನರವಂಶರಾಜವಾಲಿಯು
ವರತನುಜನಂಗದನೆಂಬ ಪೆಸರುಳ್ಳನೋರ್ವಂ

1659. ರವಿವಂಶಜನೆನಿಸುವ ರಾ
ಘವನಲ್ಲಿಗೆ ಬಂದು ಕಂಡು ವಾಲಿಯ ತನಯಂ
ಸವಿನುಡಿಯಿಂದೆರಗಿ ಮನೋ
ತ್ಸವದಿಂದಂ ಬೆಸನನೀವುದೆನೆ, ಕೇಳ್ದಾಗಳ್ ;

ಉತ್ಪಲಮಾಲಿಕಾ ವೃತ್ತ.

1660. ಭೂಸುತೆಯಾಣ್ಮನೊಲ್ದು ಬೆಸನಂ ಕುಡೆ, ಲಂಕೆಗೆ ಪೋಗಿ ದಾನವಾ
ಧೀಶನ ರಾಜಮಂದಿರಮುಮಂಜದೆ ಪೊಕ್ಕವ ಕೈಕಶಾಂಗನೀ[1]
ಕೇಶಮು ಕೀಳ್ತು ತಾಂ ಪಿಡಿದು ಭಂಗಮನಾಗಿಸೆ, ಕಂಡು ರಾವಣಂ
ರೋಷಮನಾಂತು ಕೀಳ್ತು ಪೊಡೆದಂ ಪಿಡಿದೊಪ್ಪುವ ಚಂದ್ರಹಾಸ
[ದಿಂ.

1. ರಾವಣನ ತಾಯಿ.

ಕಂದ.

1661. ಪೊಡೆದಡೆ, ವಾಲಿಯ ಸುತನಿ
ಕ್ಕಡಿಯಾಗಿ ಬೀಳೆ ನೆಲಕಂ; ಹನುಮಂ ಕಂಡಾ
ಕಡಿಗಳನತಿಭರವಸದಿಂ
ಪಿಡಿದೆಳದು ತಂದು ತೋರಿಸೆ ರಘುಪತಿಗಾಗಳ್ ;

ವಚನ.

1662. ಅಂತು ತಂದ್ ಎರಡು ಕಡಿಗಳಂ ಆಗ ರಾಮಂ ಪತ್ತಿಸಿ ಸಂದಿಬಂ
ದವ್ ಎಂಬ ಮದ್ದ ತರಿಸಿ ಅರೆದು ಹಿಂಡಲ್, ಆಕಡಿಗಳ್ ಪತ್ತಿ ಜೀವ್
ಐದಿದ್ ಅಂಗದಂ ಬದುಕಿದಂ, ಎಂಬುದು ನಿಂಮ ಮತದ ರಾಮಾ

ಯುಣದೊಳ್ ಉಂಟೋ ಇಲ್ಲವೋ ? ಪೇಳಿಂ ! ಎನೆ, ಯವರ್ ಇ
ದು ಸುಪ್ರಸಿದ್ಧವಾಗ್ ಉಳ್ಳುದ್, ಎನೆ, ಯಾದಡ್ ಎಂಮ ಶಿರಂ ಪತ್ತಿತ್
ಎಂದು ಪೇಳೆ, ಪುಶಿ ಯುಂದು ಚೋದ್ಯ ಬಡುವಿರ್ ; ಇದಲ್ಲದೆ ಇಂ
ನೊಂದು ಕೇಳಿಂ ! ಎನುತ್ತೆ ಮತ್ತಂ ಇಂತ್ ಎಂದಂ :

ಕಂದ.

1663. ಸದಮಲಗರ್ಭಂ, ಕಾರ್ಗಾ
ಲದ ಮೇಘ ಮೊಳಗೆ, ನವಿಲಿಗೆ ಪುಟ್ಟುವ ಪೊಲ್ಪು
ಟ್ಟಿದುದೋರ್ವಸತಿಗೆ ಗರ್ಭಂ,
ಮುದದಿಂದಂ ಪುರುಷಮೇಘರವಮಂ ಕೇಳ್ದಂ.

*cc. story of the gardener of Sugríva.*

ಮಹಾಸ್ರಗ್ಧರ ವೃತ್ತ.

1664. ನವಮಾಸಂ ತೀವಿ ಪೆತ್ತಳ್ಬರಿಯದತಿಯನಾಕಾಂತೆ; ಯಾಮಸ್ತಕಂ [ಕಾ
ಡುವದುಂ, ತಾನೂರೊಳೆಲ್ಲಾ ಜನರ ಮನೆಗಳಂ ಕೂಡೆ ತಾಂ ಪೊ [ಕ್ಕು ಪೊಯಿದಾ
ಟವನಾಯ್ದುಂ ಪೊಯ್ದು ಮತ್ತಂ ನೆಲಹನಡರಿ ತಾನಾರ್ತದಿಂ ಪಾ [ಲ್ಮಸರ್ತು
ಪ್ಪವನೆಲ್ಲಂತಿಂದಡೆಂದರ್ದಧಿಮುಖನಿವನೆಂದೆಲ್ಲರೊಳ್ವ್ಯಕ್ತನಾಗಲ್.

ವಚನ.

1665. ಅಂತು ದಧಿಮುಖನಾಮದಿಂ ವರ್ತಿಸುತ್ತಿರೆ, ಕೆಲವು ದಿನಕ್ಕೆ ಆಯುಡೆಗ್ ಅಗಸ್ತ್ಯಂ ತೀರ್ಥಯಾತ್ರೆಗಂ ಪೋಗುತ್ತ ಬರೆ, ಯವರಂ ಕಂಡ್ ಎರಗಿ, ಯತ್ತಣಿಂ ಬಂದಿರ್ ? ಎಲ್ಲಿಗೆ ಪೋದಪಿರ್ ? ಎಂನ ಮನೆಯೊಳ್ ಇಂದ್ ಅಭ್ಯಾಗತರಾಗಿ ! ಯನೆ, ಯಾಮುನಿ ಇಂತ್ ಎಂದಂ

ಚಂಪಕಮಾಲಾ ವೃತ್ತ.

1666. ನಿನಗೆ ಕಳತ್ರಮಿಲ್ಲ; ಪೆಱರಿಕ್ಕಿದಡಂಮುಣಲಿಕ್ಕುಪಾಯಮಿ
ಲ್ಲಿನಿತಿರಲುಂಬೆವೇನ ಮನೆಯಿಲ್ಲವದೆಂತುಣಲಕ್ಕು ? ನೋಡೆ, ನೆ
ಟ್ಟನೆ ನಿನಗಂ ಗೃಹಂ ಸತಿಯುಳಿಲ್ಲವು; ದಾನವ ಮಾಡೆ, ಧರ್ಮವಾ
ಮನೆಯುವಗಪ್ಪುದತ್ತಿಮಿಳೆಯೊಳ್ತವೆ ದಾತೃಗದಿಲ್ಲ ನಿಶ್ಚಯಂ !

ವಚನ.

1667. ಅದರಿಂ ನಿನಗ್ ಓರ್ವ ಪೆಂಡತಿಯಂ ಮಾಡಿಕೊಂಡು ಗೃಹಸ್ತನಾಗಲ್ಲದೆ, ನಿಂನ ಮನೆಯೊಳ್ ಉಣಲಾಗದು ; ಎಂದು ಮುನಿ ಪೋದಂ; ಇತ್ತಲ್ ಆದಧಿಮುಖಂ ತಂಮ ತಾಯಲ್ಲಿಗೆ ಬಂದು ತನಗೆ ಮದುವೆಯಾಗಲ್ಲದೆ, ಮಾಡಿದ ದಾನ ಧರ್ಮ ಸಲ್ಲದು ಯೆಂದ್ ಅರುಪಿದರ್; ಎನಗ್ ಓರ್ವಪೆಂಡತಿಯಂ ಮಾಡ್! ಎನೆ, ಯಂತು ಗೈವೆನೆಂದು ಕೂಡೆ ನೋಡಿ ಯೋರ್ವನಿರ್ಧನಗೆ ಸಲ್ವನಿತು ಪೊಂನಂ ಕೊಟ್ಟು ಕೊಡಗೂಸಂ ತಂದು ಮದುವೆಯಂ ಮಾಡೆ, ಗ್ರಹಸ್ತನಾಗಿ ಕೆಲವಾನುದಿವಸಂ ಇರುತ್ತಿರೆ, ಯಾದಧಿಮುಖನ ತಾಯಿ ಇಂತ್ ಎಂದಳ್:

ಕಂದ.

1668. ಘಳಿಸಿರ್ದ ಧನವನೊಂದಂ
ಮುಳಿಸದೆ ನಿಂನಯ ವಿವಾಹದೊಳು ಪೋದುದು ; ನಾ
ಸಲಹಲ್ಕಾರೇಂ ; ನೀನೀ
ಗಳೆ ಪೋಪುದು ! ಬದುಕಲಾರ್ಪ ತಾಣಕ್ಕೆಂದಳ್.

ವಚನ.

1669. ಎನಲ್, ಅಂತೆ ಗೈವೆಂ ಎಂದು ದಧಿಮುಖಂ ತಂನ ಪೆಂಡತಿಯಂ ಪೋಪೆವ್ ಏಳ್! ಎನಲ್, ಆಕೆ ತಂನ ಗಂಡಂ ಅಪ್ಪ ತಲೆಯ ನೆಲಹಿ

ನೊಳಗ್ ಇಕ್ಕಿ ಪೆಗಲೋಳ್ ತಳೆದು ಪೋಗಿ ಯೊಂದು ಮಹಾಪಟ್ಟಣದೊಳ್ ಮನ್ನೆಯರ್ ಅಲ್ಲಿ ಜೂಜಾಡುತಿರ್ಪ ದೇಗುಲದ ತೊಲೆಯೊಳ್ ಆನೆಲಹಂ ಕಟ್ಟಿ ನೀರಿಗೆ ಪೋಗೆ, ಯಾದೇಗುಲದೊಳು ಜೂಜುಗಾರರ್ ಒರ್ವರೋರ್ವರು ಕಲಹಂಗೈದು ಕಡಿತಲೆಯಂ[1] ಕೊಂಡು ಕಡಿದಾಡಿ ವೋರ್ವನ ಶಿರಂ ಮರಳೆ ಪೊಯ್ಯಲ್, ಆಕಡಿದಲೆಯ ಕೊನೆ ತಾಗಿ ನೆಲ ಹರಿದು ನೆಲಹಿನೊಳಗ್ ಇರ್ದ ದಧಿಮುಖನ ಶಿರಂ ಬೀಳಲು, ಜೂಜುಗಾರನ ಮುಂಡದೊಳ್ ಪತ್ತಿ ಯದ್ದು ಕುಳ್ಳಿರ್ದ ಸಮಯದೊಳ್.

1. ಜಗಳದಲ್ಲಿ ಒಬ್ಬನ ತಲೆ ಕಡಿದಿದ್ದರು ಅದನ್ನು ಮುಂ.

ಕಂದ.

1670. ಪೋಗಿ ನೀರಿಂ ಮಗುಳೆ ಬಂ
ದಾಗಾಸಮಯದಿ ಲಲನೆ ಪರಿದೊಳಪೊಕ್ಕಾಗ
ದೇಗುಲವಾತಲೆಗವಯುವ
ವಾಗಿ ಕೆಳಗೆ ಕುಳ್ಳಿರ್ದುದ ಕಂಡಿಂತೆಂದಳ್ :

1671. ಅಪ್ಪುದನಜಹರಿರುದ್ರ
ರ್ತಪ್ಪಿಸಲಾರ್ತರ್[1]ಪರೆ ? ಬರಿಯ ರುಂಡಕ್ಕಂಗಂ
ವೊಪ್ಪುವದಕಟಿದು ಯಂನಯು
ಯೊಪ್ಪಕಿಂಮಡಿಸಿದಂತಾಯ್ತು ನಗೀಗೆಂದಳ್.

1. ತಪ್ಪಿಸಲಾಗುತ್ತಾರೆ.

ಮತ್ತೇಭವಿಕ್ರೀಡಿತ ವೃತ್ತ.

1672. ಎನುತಾಕಾಮಿನಿ ಕಾಂತನೊಂದಿ ಕೆಲದೊಳ್ಕ್ಕಳ್ಳಿರ್ಪುದುಂ ; ಜೂ [ಜುಗಾ
ರನ ಚಿತ್ತಪ್ರಿಯು ಕಾಂತೆ ಬಂದು ಭರದಿಂದೆಂನಾಣ್ಮನಿಂತೀತನೆಂ
ದೆನೆ, ಯಾಕಾಂತೆಯರೆಂನ ತಂನವನೆನುತ್ತೋರೋರ್ವರೊಳ್ಕಾ [1ದುತಿ
ರ್ಪಿನದಂ ಮಾಣಿಸಿ, ಯಿರ್ದನಾಲ್ವರವರಂ ಧರ್ಮಾಧಿಕರ್ಗಟ್ಟಿದರ್.

1. ಕಾದುತ್ತಿರುವಷ್ಟರಲ್ಲಿ.

ವಚನ.

1673. ಅಂತು ಕಳುಪೆ ಧರ್ಮಾಧಿಕರಣಂಗಳಲ್ಲಿಗೆ ಬಂದು ತಂಮ ತಂಮ ವೃತ್ತಾಂತಮಂ ಸವಿಸ್ತಾರಂ ಪೇಳೆ, ಕೇಳ್ದು ತಾವ್ ಅನಿಬರು ಪೂ[1]ರ್ವೋಕ್ತಿಯ ವಿಚಾರಿಸಿ ಇಂತ್ ಎಂದರ್ ;

1. ನೋಡು ೧೬೪೮-ನೇದು.

ವಚನ.

1674. ಎಂದು ಶಿರವ್ ಆರದ್, ಅವರ್ಗೆ ಪತಿ ಯಪ್ಪಂ, ಎಂದು ಧರ್ಮಾಧಿಕರಣಂ ಪೇಳ್ದ್ ಅನಂತರಂ ಪೋದರ್ ; ಎಂಬ್ ಇದು ನಿಂಮ ಪುರಾಣದೊಳ್ ಉಂಟೋ ಇಲ್ಲೋ ? ಪೇಳಿಂ ! ಎನೆ, ಯುವರ್ ಇದು ಪ್ರಸಿದ್ಧಮಾಗ್ ಉಳ್ಳದ್, ಆದಂ ಇಲ್ಲ್ ಎನಲ್ ಅಪ್ಪುದೆ ? ಯನೆ, ಯಾದಡೆ ಬರಿಯಶಿರಂ ಮತ್ತೊಂದು ಮುಂಡಮಂ ಪತ್ತಿತ್ ಎನಲ್, ಅಕ್ಕುಗಡ ! ಯೆಂಮ ಶಿರಂ ಯುಂಮ್ ಅಟ್ಟೆಯಂ ಪತ್ತಿತ್ ಎಂದಡೆ, ಪುಶಿಯುಂ ಚೋದ್ಯಂ ಎಂಬಿರ್ ; ಇಂತಪ್ಪ ಪುಶಿಯುಂ ಚೋದ್ಯಂಗಳು ನಿಂಮ ಮತದೊಳ್ ಅನೇಕಂ ಉಳ್ಳವ್ ಎನೆ, ಯಾವಿಪ್ರರ್ ಇಂತ್ ಎಂದರು :

ಮತ್ತಂ ನಂಮಲ್ಲಿ ಪುಶಿ ಯೇನ್ ಉಂಟು ? ನೀವು ಪೇೞಿಂ ! ಎನೆ,
ಮನೋವೇಗಂ ಪೇೞಲ್ ನೆಗೞ್ದಂ :

ಮಹಾಸ್ರಗ್ಧರ ವೃತ್ತ.

1675. ಪಿರಿದೊಂದುಗ್ರಾಜಿಯೊಳ್ದುಂದುಭಿಯ[1] ಶಿರವು ತಾನೊಂದು ಕೊಂ
[ಡುಗ್ರನೇತ್ರಂ
*dd.* story of Dundubhi the giant, who became Ghatodgaja.
ಗರುಡಂಗೊಲ್ದಿತ್ತನೆಂದುಂ ಪೞದೆನಿಸದಿದಾರ್ತಿಂಪಡಂ ತೀರದಂತೀ
ಸಿರಮಂ ನೀ ಕೊಂಡು ನಿಂನೀಬಸುರ ಹಸಿವಡಂಗಲ್ಕೆ ನೀ ನಿತ್ಯ
[ತಿಂದಿಂ
ತಿರು ! ಕೈಯಿಂದೆಲ್ಲಿಯುಂಮತ್ತಿಳುಪದೆ ಧರೆಯೊಳ್ವರ್ತಿಸೆಂದಿಂತು
[ಪೇೞ್ದಂ

1. ಈ ರಾಕ್ಷಸನ ತಲೆ ವಾಲಿ ಹೊಡೆದನು. 2. ಶಿವ.

ವಚನ.

1676. ಎಂದು ಪೇೞೆ, ಕೇೞ್ದ ಆವಾೞ್ಕೆಯೊಳಗೆ ಗರುಡಂ ವರ್ತಿಸುತ್ತಿರೆ ;
ಇತ್ತಲ್ ಆದುಂದುಭಿ ಇರದೆ ಭೀಮಸೇನನ ವಲ್ಲಭೆ ಯಪ್ಪ ಹಿಡಂ
ಬಿಯ ಗರ್ಭದೊಳ್ ಜನಯಿಸಿ ನವಮಾಸಂ ತೀವಿ ಬರಿಯಮುಂಡ
ಮಂ ಬೆಸಲಾಗಿರೆ ; ಯದಂ ಕಂಡು ಪೇಶಿ ಹೆಕ್ಕಾಡಿನೊಳ್ ಬಿಸುಟು
ಕಳೆಯೆ, ಅಲ್ಲಿಗೆ ಗರುಡಂ ತೊೞಲುತ್ತ ಬಂದು, ಬಿದ್ದಿರ್ದ ಮುಂಡ
ಮಂ ಕಂಡು ಪಿಡಿದಿರ್ದ ಶಿರವ್ ಆಕಡೆಯೋೞ್ಬೀೞಲಿಕೆ, ಮುಂಡವ್
ಅತ್ತಲ್ ಗರುಡ ನಡಿಯಲ್, ಅದರಿಂ ಮುಂನವೆ ನಡದು ಶಿರಂ ಪ
ತ್ತಿತ್ ಐದೆ ಮುಂಡವಮುಂ ಆಗಳ್ ;

ಉತ್ಪಲಮಾಲಿಕಾ ವೃತ್ತ.

1677. ಸತ್ತ ಶಿರಂ ಪೊರಳು ಕೆಲನಂ ಬಲನಂ ನೆರೆ ನೋಡುತಿರ್ದು ಪೋ
ಗುತ್ತಿರೆ, ಕಂಡು ಚಿತ್ತದೊಳ್ ಶಂಕಿಸಿ ಕಶ್ಯಪನಾತ್ಮಸಂಭವಂ[1]
ಚಿತ್ತಜವೈರಿ ಯಿರ್ದ್ದೆಡೆಗೆ ಪೋಗಿ ಪದಾನತನಾಗಿ ದೇವ! ನೀ
ನಿತ್ತ ಶಿರಂ ಕರಂ ಪರಿದು ಪತ್ತಿದುದೊಂದು ಮಹೋಗ್ರಮುಂಡ [ಮಂ.

1. ಕಶ್ಯಪನ ಮಗನು ಗರುಡನು.

1678. ಎಂದು ವಿಚಿತ್ರಮಾಗಿ ವಿನುತಾತ್ಮಭವಂ[1] ಕ್ರಮದಿಂದೆ ಪೇಳೆ, ಕೇ
ಳ್ದಿಂದುಧರಂ ನಗುತ್ತೆ ಬೆರಗಾಗಿರಲಿತ್ತ ಸಿರಸ್ಸು ಮುಂಡಮಂ
ಸಂದಿಸಿದಾಗಳೈದೆ ನಿಜಗೇಹಮನಾತನ ಮಾತೆ ನೀನು ದಾ
ರೆಂದು ಹಿಡಂಬಿ ಕೇಳದಡೆ, ನಿಂನ ತನೂಭವನೆಂದು ಪೇಳದಂ.

1 ವಿನುತೆ ಎಂಬ ಕಸ್ಯಪನ ಹೆಂಡತಿಯು ಮಗ=ಗರುಡ.

ವಚನ.

1679. ಅಂತು ಪೇಳೆ, ಕೇಳ್ದು, ನಿಂನ್ ಆಶಿರಂ ಪುಟ್ಟಿದ ವೃತ್ತಾಂತಂ ಎಂತ್? ಎಂದು ಬೆಸಗೊಳೆ, ಯದಂ ವಿಸ್ತಾರದಿಂ ಪೇಳೆ, ಕೇಳ್ದು ಸಂತೋಷಂ ಬಟ್ಟು ತಾಂ ಪುಟ್ಟಿದಕ್ ಅನ್ವಯಾರ್ಥಂ ಅಪ್ಪ ಘಟೋದ್ಗಜನೆಂಬ ಹೆಸರು ಕೊಟ್ಟರ್; ಇತ್ತಲ್ ಈಶ್ವರಂ ಇಂತ್ ಎಂದಂ: ಆತಂ ಸಮರ್ಥಪುರುಷನ್, ಆತಂಗೆ ನೀ ಧ್ವಜಮಾಗಿರೆಂದು ಗರುಡಂಗೆ ನಿಯಮಂ ಕೊಡಲ್, ಅಂತೆ ಗೈವೆನೆಂದ್ ಅರಸುತ್ತೆ ಪೋಗಿ ಘಟೋದ್ಗಜಂಗೆ ಧ್ವಜಮಾಗಿರ್ದನ್, ಅದರಿಂ ಪದ್ದಿನ ಧ್ವಜಂ ಆದುದ್; ಆತಂ ಪಲವು ಕಾಲಂ ಇರ್ದಂ ಎಂಬುದ್ ಇದ್ ಉಂಟೋ ಇಲ್ಲೋ? ನೀಂ ಪೇಳಿಂ! ಎನೆ, ಇದು ಲೋಕಪ್ರಸಿದ್ಧಿಯಾಗ್ ಉಳ್ಳದ್, ಇದ್ ಇಲ್ಲ್ ಎನಲ್ ಎಂತ್ ಅಪ್ಪುದೆಂದು ವಿಪ್ರರ್ ಎನೆ, ಯಾದಡ್ ಬಂದು

ಭವದ ಶಿರಂ ಮತ್ತೊಂದು ಭವದ ಮುಂಡಮಂ, ಪತ್ತಲ್‌ಅಕ್ಕುಗ
ಡಂ ! ಎಂಬ ಶಿರವ್ ಒಂದು ಭವದ ಮುಂಡಮಂ ಪರಿದಾಗಳೆ, ಪ
ತ್ತಿತ್ ಎಂದಡೆ, ಪುಶಿಯುಂ ಚೋದ್ಯಂ ಆದುದ್ ಎಂಬಿರಿ ; ಇಂತ್ ಅ
ಪ್ಪ ಪುಶಿಯಂ ಇಂನೊಂದು ಕೇಳಿಂ ! ಎಂದು ಮನೋವೇಗಂ ಪೇ
ಳಲ್ ನೆಗಳ್ದಂ :

ಕಂದ.

1680. ಆದಿಯ ಕ್ಷತ್ರಿಯನೋರ್ವಂ
ಮಾದೇವನನೊಲಿಸಿ ದಿವ್ಯಪಿಂಡಮನೊಂದಂ
ಸಾಧಿಸಿ ಭರವಸದಿಂದೈ
ದ್ಯಾದರದಿಂ ಪಂಚಿ ಪೆಂಡರೀರ್ವರ್ಗಿತ್ತಂ.

ಮಹಾಸ್ರಗ್ಧರ ವೃತ್ತ.

1681. ಅದನಿಬ್ಬರ್ನುಂಗಿ ಗರ್ಭಂ ಜನಿಸಿ, ಬಳಿಕ ವೊಂಭತ್ತು ಮಾಸಕ್ಕೆ [ಪೆತ್ತ
ರ್ಪುದಿದರ್ಧಾರ್ಧಾಂಗಮಂ ; ಕಂಡೊಗೆವುದಿವಮದ್ಯಾಕೆಂಮಗೆಂದೊ [ಲ್ಲದೀಡಾ
ಡಿದರಾಗಳ್ತಪ್ಪೆಯತ್ತಲ್ಜ[1]ರಿ ಯನಿಸುವಳುಂ ಕಂಡು ಕೊಂಡೊಯಿದು [ಸಂದಿ
ಕ್ಕಿದಡಂ, ತಾ ಸಂದುವೊಂದಿಲ್ಲೆನಿಪ ತೆರದಿ ಪತ್ತಿತ್ತಿಳಾಸೇವ್ಯಮಾ [ಗಲೆ

1. ಒಬ್ಬ ರಾಕ್ಷಸಿ.

ಕಂದ.

1682. ಸಂದಿಶಿದಳು ಜರೆ ಯಂಬುದ
ರಿಂದೆ ಜರಾಸಂಧನೆಂಬನ್ವರ್ಥದ ನಾಮ

ವಂ ಧಿಟದಲಿಕ್ಕಲವನಾ
ನಂದದೆ ಪಲಕಾಲಮುರಸುಯೊಗಿರುತಿರ್ದಂ.

ಚಂಪಕಮಾಲಾ ವೃತ್ತ.

1683. ಇರದೆ ಭುಜಪ್ರತಾಪದ ಸಗರ್ವದಿನುರ್ವಿ ಕಡಂಗಿ ಭೀಮನೋ
ಳ್ಧುರದೊಳದಿರ್ಚಿ ತಳ್ಕಿದೊಡವಂ ಮಗುಳೊತ್ತಿ ಮಗುಳ್ದು ಮೇಲೆ [ವಾ
ಯ್ದುರವಣಿಯಿಂದೆ ಕುಟ್ಟಿ ಪಿಡಿದೊತ್ತುತೆ ಸೀಳ್ದು ಬಿಸುಟಡೂ [ರ್ವಿಗ
ಜ್ಜರಿ ಯೆನಿಪಂತೆ, ಸೀಳ್ಗಳೆರಡುಂ ನೆರೆ ಪತ್ತಿದವೈದೆ ಬೇಗದಿಂ.

ವಚನ.

1684. ಅಂತು ಪತ್ತಿ ಬೇಗಂ ಭೀಮನೋಳ್ ಕಾದಲ್ ಎಂದ್ ಇರ್ದಂ ಎಂಬ್ ಇದು ನಿಂಮ ಮತದ ಭಾರತಕಾವ್ಯದೊಳ್ ಉಂಟೊ ಇಲ್ಲೋ? ಪೇಳಿಂ! ಎನೆ, ವಿಪ್ರರ್ ಇದು ಜಗತ್ಪ್ರಸಿದ್ಧಮಾಗ್ ಉಂಟು ಯೆನೆ, ಯಾದಡೆ ಈರ್ವರ್ ಅಂಗನೆಯರ್ ಉದರದೊಳು ಬೇರೆಬೇರೆ ಪುಟ್ಟಿದವ್ ಎರಡು ಭಾಗಂಗಳು ಪತ್ತಿ ಭೀಮನೋಳ್ ಕಾದೆ ಸೀಳಲ್, ಆ ಶೀಳ್ ಪತ್ತಿ ಕಾದಲ್ ಅಕ್ಕು, ಗಡ? ಎಂಮ ಶಿರವ್ ಎಂಮ್ ಅಟ್ಟಿಯೋಳ್ ಪತ್ತಿತ್ ಎನೆ, ಪುಶಿಯುಂ ಚೋದ್ಯಂ ಎಂಬಿರಿ; ಯಂದಡ್, ಆದ್ವಿಜರ್ ಶಿರಂ ಪತ್ತಲ್! ಅದ್ ಅಂತ್ ಅಲ್ಲದೆಯುಂ.

ಕಂದ.

1685. ಶಿರಮುಂ ತೊರರದೀಡಾಡ
ಲ್ಕರನಂ ಪರಿದೇರಿ ಪಣ್ಗಳಂ ತಿನಲಿತ್ತ
ಲ್ದರೆಗೊರಗಿರ್ದ ಮುಂಡಗಳು
ದರವದುಂ ತೀವಿದೆಂಬುವ ಪುಶಿಯೆ ವಿಚಿತ್ರಂ.

1686. ಎಂದರಾದ್ವಿಜರೆನೆ, ಖೇಚರ
ರೆಂದರ್ನಿಜಮತದ ವೇದಶಾಸ್ತ್ರಪುರಾಣಂ
ಸಂದೇಹಮಿರದೆ ಪುಶಿದೊಂ
ದಂದದ ಪುಶಿಯಲ್ಲದೆಂವೊಳುಂಟೆ ? ವಿಚಿತ್ರಂ.

ಚಂಪಕಮಾಲಾ ವೃತ್ತ.

1687. ಎನಲವರಿಂತು ಪೇೞ್ಬುೞಿಯು ಯಂಮಯ ವೇದಪುರಾಣಶಾಸ್ತ್ರದೊ
ಳನಿತಿರಲೆಂವೊಳುಂ ತಿಳಿಪುದೆಂದು ವಿಪ್ರರೆಲ್ಲರಿಂಗೆ ತಾ
ಮನಮುದದಿಂದೆ ಸೂಚಿಪ ವೊಲಂತದನಾಗಳೆ ತೀವ್ರಖೇಚರಾ
ವನಿಪತಿ ಪೇಳಲುಜ್ಜುಗಿಶಿದಂ, ಸಭೆ ಭಾಪುರೆ ಭಾಪೆನಿಪ್ಪಿನಿಂ.

ವಚನ.

1688. ಅದ್ ಎಂತ್ ಎಂದಡೆ: ಮುಂನ ಪಿತಪಿತಾಮಹರ್ಕಳ್ಗೆ ಎಂದು ಮಾಳಪಕ್ಷದೊಳ್ ಪಂಚಭಕ್ಷ್ಯಪಾಯಸತುಪ್ಪಮಂ ಪೆರರ್ಗೆ ಇಕ್ಕೆ, ಸ್ವರ್ಗ ಮೊದಲಾದ್ ಅನೇಕಗತಿಯೊಳ್ ಇರ್ದ ಪಿತಪಿತಾಮಹರ್ಕಳ್ ಬಸುರಂ ತೀವಲ್ ಅಕ್ಕು ಗಡ ! ಎಂಮ ಶಿರಂ ಮರದ ಮೇಲ್ ಇರ್ದು ತಿಂದಡೆ, ಕೆಳಗಿರ್ದ್ದ ಅಟ್ಟೆಯ ಬಸುರು ತೀವಿತ್ ಎಂದೊಡೆ, ನಿಮಗೆ ಪುಶಿ ಚೋದ್ಯಮು ಯುಂತ್ ಆದದು ? ಪೇಳಿಂ ! ಎನೆ, ಯಾ ಪರವಾದಿಗಳ್ ಅದಕ್ಕೆ ಮಾರುತ್ತರಂ ಕೊಡದ್ ಇರೆ ಶ್ವೇತಭಟರ್ ಇಂತೆಂದರ್ :

ಕಂದ.

1689. ಸ್ಥಳಚರಜಲಚರಖಗಸಂ
ಕುಳದಡಗಿಂದ ಪಂಚಭಕ್ಷ್ಯಪಾಯಸಮು ಕಾ

ಲ್ತೊಳದು ತಣಿ[1] ಯೂಡೆ ವಿಪ್ರಾ

ವಳಗಂ, ತಣಿವರ್ಸಮಸ್ತಪಿತರ ಪ್ರಕರಂ.

1. ತೃಪ್ತಿಯಾಗುವಂತೆ.

ವಚನ.

1690. ಎಂಬುದು ನಿಂಮ ಮತದೊಳ್ ಉಂಟೊ? ಇಲ್ಲನ್ರೊ? ಪೇಳ ! ಎನೆ, ಯವರ್ ಇದು ಜನಪ್ರಸಿದ್ಧವಾಗುಂಟು ; ಇಲ್ಲವ್ ಎಂದ್ ಯಾಕೆ ಸಂದೇಹದಿಂ ನುಡಿವಿರ್ ? ಎನೆ, ಹಿಂದೆ ಯೊಂದಾನೊಂದು ಕಾಲದಲ್ಲಿ ಸತ್ತು ಪರತ್ರವಂ ಐದಿದ ಪಿತಪಿತಾಮಹರೆಲ್ಲಂ ಈ ಲೋಕದೊಳ್ ಪಾರ್ವರ್ ಉಂಡರೆ, ತಣಿದರ್, ಎಂದು ಪೇಳ್ವುದು ನಿಶ್ಚಯವ್ ಎಂಬಿರಿ ; ಯಂಮ ಶಿರಮುರನ್ ಏರಿ ಮೇಲ್ ಉಣ ಪತ್ತಿದಡೆ, ಕೆಳಗಿರ್ದ ಮುಂಡಗಳ ಪೊಟ್ಟೆ ತೀವಿತ್ ಎಂದಡ್, ಯಾಕೆ ಪುಶಿಚೋದ್ಯಂ ಎಂಬಿರ್ ? ಎನೆ, ಯಾಮಾತಂ ಕೇಳ ವಿಪ್ರರೆಲ್ಲಂ ಬೆರಗಾಗಿ ಮರುಮಾತಂ ಕೊಡದಿದ್ದರು.

ಆಮೇಲೆ ಅವರು ಬ್ರಾಹ್ಮಣರಿಗೆ ತಮ್ಮ ನಿಜಸ್ಥಿತಿಯನ್ನು ತಿಳಿಸಿದರು.

---

## IV. NATIVE CHRISTIAN LITERATURE.

### ಪೀಠಿಕೆ.

ಕರ್ಣಾಟಕದೇಶದಲ್ಲಿ ಕ್ರೈಸ್ತ ಧರ್ಮಹಿಡಿದವರು ಸ್ವಲ್ಪ ಜನ. ಯಾಕಂದರೆ ಈ ಧರ್ಮ ಕರ್ಣಾಟಕ ಜನರೊಳಗೆ ಇನ್ನು ಬಹಳ ಪ್ರಕಟವಾಗಿರುವದಿಲ್ಲ ಆದರೂ ಈ ಧರ್ಮಕ್ಕೆ ಸಂಬಂಧವಾದ ಕೆಲವು ಕೃತಿಗಳು ಅವೆ. ಅವುಗಳಲ್ಲಿ ಪ್ರಸಿದ್ಧಿಯಾಗಿರುವ ಗೀತಪುಸ್ತಕ ಎಂಬ ಕೃತಿಯಿಂದ ಕೆಲವು ಗೀತಗಳನ್ನು ಆರಿಸಿಕೊಂಡಿದ್ದೇವೆ. ಅವು ಪೂರ್ವದಲ್ಲಿ ಇಂಗ್ಲಿಷ್ ಜರ್ಮನ್ ಭಾಷೆಗಳಲ್ಲಿ ರಚನೆಯಾಗಿದ್ದವು. ಇತ್ತಲಾಗಿ ಕೆಲವರು ಅವನ್ನ ಅದೇ ಛಂದಸ್ಸಿನಿಂದ ಕನ್ನಡಿಸಿದರು. ಆ ಭಾಷೆಗಳ ಛಂದಸ್ಸಿನಲ್ಲಿಯೂ ಇವೇ ಗಣಗಳೆಲ್ಲ ಅವೆ; ಅಂತ್ಯ ಪ್ರಾಸಮಾತ್ರ ವರ್ತಿಸುವದು. ಆದರೆ ಇದಾದರೂ ಕೆಲವು ಕಾವ್ಯಗಳಲ್ಲಿ ಇಲ್ಲ. ಎಲ್ಲಾ ಕಾವ್ಯಗಳು ವಿಶೇಷವಾಗಿ ಗಣನಿಬಂಧನೆಯಿಂದ ಆಗುವವು. ಗುರುಲಘು ಭೇದದ ವಿಷಯದಲ್ಲಿ ಮಾತ್ರ ಆ ಭಾಷೆಗಳ ಛಂದಸ್ಸಿಗೂ ಈ ಕನ್ನಡ ಛಂದಸ್ಸಿಗೂ ಒಂದು ದೊಡ್ಡ ಹೆಚ್ಚು ಕಡಿಮೆ ಅದೆ ಹ್ಯಾಗಂದರೆ ಸ್ವಾಭಾವಿಕವಾಗಿ ಒಂದು ಅಕ್ಷರ ಗುರುವಾದರೂ ಸ್ವರಿತ, ಉದಾತ್ತ, ಅನುದಾತ್ತ ಎಂಬೀ ಮೂರು ತರದ ಸ್ವರಭೇದಗಳಲ್ಲಿ ಒಂದನೇದು ಅಥವಾ ಎರಡನೇದು ಆ ಅಕ್ಷರಕ್ಕೆ ಬೀಳದ ಪಕ್ಷದಲ್ಲಿ ಅದು ಲಘುವೇ ಸರಿ. ಉದ: ಓ ಕರ್ತ: ಇಲ್ಲಿ ಓ ಎಂಬ ನಿಪಾತಕ್ಕೆ ಸ್ವಾಭಾವಿಕವಾಗಿ ಗುರುತ್ವ ಇದ್ದದರಿಂದ ಸ್ವರಿತ ಉದಾತ್ತಗಳು ಇಲ್ಲದರಿಂದ ಲಘುತ್ವ ಬರುವದು. ಹಾಗೂ ಸ್ವಾಭಾವಿಕವಾಗಿ ಒಂದು ಅಕ್ಷರ ಲಘುವಾದರೂ ಆ ಸ್ವರಭೇದಗಳಲ್ಲಿ ಸ್ವರಿತವಾಗಲಿ, ಉದಾತ್ತವಾಗಲಿ ಆ ಅಕ್ಷರಕ್ಕೆ ಬೀಳುವ ಪಕ್ಷದಲ್ಲಿ ಅದು ಗುರುವೇ ಸರಿ. ಉದ: ಕರೆ: ಇಲ್ಲಿ ಕ ಎಂಬ ಅಕ್ಷರ ಸ್ವಾಭಾವಿಕವಾಗಿ ಲಘುವಾದರೂ ಅದಕ್ಕೆ ಉದಾತ್ತ ಹತ್ತುವದರಿಂದ ಗುರುವಾಗುವದು.

### PRAISE OF GOD.

### ದೈವ ಸ್ತೋತ್ರವು.

1693. ಸ್ತೋತ್ರಮನತ್ತಮದೇವರಿಗರ್ಪಿಸ ಬರ್ರಿ!
ವೀಣೆಯು ಗಾಯನವೇ! ಸಮುದಾಯವ ಕರಿ!
ದೂತರೊಳೂ
ಕೀರ್ತನೆ ಏಳಲಿಯೂ!
ಸ್ತೋತ್ರಸುಗಂಧವ ತರ್ರಿ!

1694. ಭೂದಿವಲೋಕಗಳಾತನ ಸ್ವಾಶ್ರಿತರಾಜ್ಯ;
ಯಾವನು ಭೂದಿವರಾಜನ ಸಂಗಡ ವ್ಯಾಜ್ಯ

ಮಾಡುವನು ?

ಕೇಳಸೆ ನುಡಿ[1]ಯನು,

ಮರ್ತ್ಯರ ಗದ್ದಲ ತ್ಯಾಜ್ಯ.

1. ಆತನು ನುಡಿದರೆ.

1695. ಕ್ರಿಸ್ತನು ಕ್ರಯಕೆ ಕೊಂಡ ಜನಾಂಗವಿದ್ಧೇವೆ ;

ರಾಜನ ಚಿತ್ತಕೆ ಒಪ್ಪಲಿ ದಾಸರ ಸೇವೆ !

ಹೃದಯದೊಳೇ

ಕ್ರಿಸ್ತನು ವಾಸಿಸಲೇ,

ಹರ್ಷದಿ ಜೀವಿಸುತ್ತೇವೆ.

ಈ ಗೀತದ ಪದದ ಪ್ರಸ್ತಾರ:

1. —⏑⏑ | —⏑⏑ | —⏑⏑ | —⏑⏑ | —⏑
2. —⏑⏑ | —⏑⏑ | —⏑⏑ | —⏑⏑ | —⏑
3. —⏑⏑ | —
4. —⏑⏑ | —⏑⏑ | —
5. —⏑⏑ | —⏑⏑ | —⏑

1. 2. 5. ಚರಣಗಳ ಅಂತ್ಯದಲ್ಲಿ ಅದೇ ಪ್ರಾಸ ಬರುತ್ತಿರಬೇಕು.
3. 4. ಚರಣಗಳ ಅಂತ್ಯದಲ್ಲಿ ಒಂದೇ ಪ್ರಾಸ ಇರಬೇಕು.

DIFFERENCE BETWEEN THIS AND THE FUTURE WORLDS.

2. ಇಹಪರ ಭೇದ.

1696. ಉಂಟು ನಿಷ್ಕಳಂಕದೇಶ ;

ಅಲ್ಲಿ ನಮಗೇ ಪ್ರವೇಶ ;

ಅಲ್ಲಿ ನಾವು ಶೇರೋದು ;

ನಿತ್ಯಕ್ಷೇಮ ಸಿಕ್ಕೋದು.

1697. ಮೃತ್ಯು ಆಪಗಾಪ[1]ಘೋಷ
ನಮ್ಮ ಕಿವಿಗೇ ಸಂತೋಷ;
ನಂಬಿಗೆಂಬ ನಾವೆಯು
ದಾಟಿ ಪೋಪುದ್ ಕೀವಿಯು.

1. ನದಿಗಳ ಪತಿ=ಸಮುದ್ರ.

1698. ಇಲ್ಲಿ ನಮ್ಮ ಸುಖ ಕಷ್ಟ;
ಇಲ್ಲಿ ನಮ್ಮ ಲಾಭ ನಷ್ಟ;
ನಮ್ಮ ಕ್ಷೇಮ ತಾಪವು;
ನಮ್ಮ ನೀತಿ ಪಾಪವು.

1699. ಅಲ್ಲಿ ಪೀಡೆ, ಸಾವು, ಶಾಪ,
ಅಂಧಕಾರ ಸೂರ್ಯತಾಪ,
ಚಿಂತೆ, ದುಃಖ ಕಾಣವು;
ಅಲ್ಲಿ ಸಾಖ್ಯತಾಣವು.

ಈ ಗೀತದ ಪದದ ಪ್ರಸ್ತಾರ.

1. —⏑ | —⏑ | —⏑ | —⏑
2. —⏑ | —⏑ | —⏑ | —⏑
3. —⏑ | —⏑ | —⏑ | —
4. —⏑ | —⏑ | —⏑ | —

1. 2. ಚರಣಗಳ ಅಂತ್ಯದಲ್ಲಿ ಒಂದೇ ಪ್ರಾಸ, ಮತ್ತು, 3. 4. ಚರಣಗಳ ಅಂತ್ಯದಲ್ಲಿ ಒಂದೇ ಪ್ರಾಸ ಇರಬೇಕು. ಈಗೀತ ಎರಡು ಅಕ್ಷರವುಳ್ಳ ಗಣಗಳಿಂದ ರಚಿಸಿದ್ದು. ಆ ಛಂದಸ್ಸಿನಲ್ಲಿ ಎರಡು ಅಕ್ಷರವುಳ್ಳ ನಾಲ್ಕು ಗಣಗಳು, ಮೂರು ಅಕ್ಷರವುಳ್ಳ ಎಂಟುಗಣಗಳು, ನಾಲ್ಕು ಅಕ್ಷರವುಳ್ಳ ಹದಿನಾರು ಗಣಗಳು ಅವೆ.

## EVENING HYMN

ಸಾಯಂಕಾಲ ಗೀತ.

1700. ಈಹಗಲೀಗ ಸಂತು ;
ಅಗಾಧನಿದ್ದೆ ಬಂತು
ಸಮಸ್ತಲೋಕಕ್ಕೀ ;
ಓ ಮನವೇ ! ಬಿಸಾಡು
ಆಲಸ್ಯವನ್ನು ! ಹಾಡು !
ಸುಸಿದ್ಧವಾಗು ಸ್ತೋತ್ರಕ್ಕೀ !

1701. ಅಗೋ ನೀ ಗೋದಿ ಅರ್ಕ !
ಈ ರಾತ್ರಿ ಎಂಬ ಕರ್ಕ
ನಿನ್ ಜ್ಯೋತಿ ಅಟ್ಟಿದಂ ;
ನೀ ಹೋಗು ! ರವಿಯಾಗಿ
ನನ್ನೀಶ ಸವಿಯಾಗಿ
ನನ್ ಹೃದಯದಲ್ಲಿ ಮೂಡಿದಂ.

ಈ ಗೀತದ ಪದದ ವಿಸ್ತಾರ.

1. ᴗ— | ᴗ— | ᴗ— | ᴗ
2. ᴗ— | ᴗ— | ᴗ— | ᴗ
3. ᴗ— | ᴗ— | ᴗ— |
4. ᴗ— | ᴗ— | ᴗ— | ᴗ
5. ᴗ— | ᴗ— | ᴗ— | ᴗ
6. ᴗ— | ᴗ— | ᴗ— | ᴗ—

1\. 2. ಚರಣಗಳ ಅಂತ್ಯದಲ್ಲಿ ಒಂದೇ ಪ್ರಾಸ
4\. 5. ಚರಣಗಳ ಅಂತ್ಯದಲ್ಲಿ ಒಂದೇ ಪ್ರಾಸ.
3\. 6. ಚರಣಗಳ ಅಂತ್ಯದಲ್ಲಿ ಒಂದೇ ಪ್ರಾಸ ಬರುತ್ತಿರಬೇಕು.

# VOCABULARY.

## ಪುಷ್ಪಮಾಲಿಕಾ ಶಬ್ದಕೋಶ.

ಅಂದರೆ

ಈ ಪುಸ್ತಕದಲ್ಲಿರುವಂಥಾ ಈಗ ರೂಢಿಯಿಲ್ಲದಂಥಾ ಶಬ್ದಗಳ ವಿವರ.

### ಅ.

ಅ=ಇಲ್ಲ, ಅಯುಕ್ತ=ತಕ್ಕದಲ್ಲ. ಶಬ್ದದ ಆದಿಯಲ್ಲಿ, ಸ್ವರವಿದ್ದರೆ ನಕಾರಾಗವು ಬರುವದು: ಅನೇಕ=ಅನೇಕ=ಬಹಳ

ಅಂಕ=ಗುರ್ತು, ಯುದ್ಧ, sign, war.

ಅಂಕಿತ=ಗುರ್ತು, sign, name.

ಅಂಕುರ=ಮೊಳಕೆ, germ.

ಅಂಕುರಿತ=ಮೊಳಿತ, germinated.

ಅಂಗ=ಅವಯುವ, ಶರೀರ, ಮನ (ಅಂತರಂಗ) limb, body.

ಅಂಗಜ=ಶರೀರದಲ್ಲಿ ಹುಟ್ಟಿದವನು ಮನ್ಮಥ, cupid, mud.

ಅಂಗಣ=ಅಂಗಳ, court 396

ಅಂಗನೆ=ಸ್ತ್ರೀ, woman.

ಅಂಗುಲಿ=ಬೆರಳು, finger.

ಅಂಗವಣೆ=ಇಚ್ಛೆ, wish, 410.

ಅಂಘ್ರಿ=ಪಾದ, 429, leg.

ಅಂಚಿತ=ಪೂಜ್ಯ, ಸುಂದರ, beautiful.

ಅಂಚೆ=ಹಂಸಪಕ್ಷಿ, swan.

ಅಂಜನ=ಕಾಡಿಗೆ, collyrium, magic.

ಅಂಡ=ತತ್ತಿ, egg.

ಅಂಡಜ=ತತ್ತಿಯಿಂದ ಹುಟ್ಟಿದ್ದು, oviparous, bird.

ಅಂದಲೆ=ಉಪದ್ರಮಾಡು, to vex, 228.

ಅಂತ=ಕಡೆ, end.

ಅಂತಃಕಲಹ=ತಮ್ಮೊಳಗಿನ ಗುದ್ದ್ಯಾಟ (ಅಂತಃ=ಒಳಗೆ) intestine quarrel, 506.

ಅಂತಃಪುರ=ರಾಣಿವಾಸ, seraglio, Queen.

ಅಂತಕ=ಅಂತ ಮಾಡುವವನು, ಯಮ, Yama, death.

ಅಂತರ=ಎರಡರ ನಡುವಿನ ಸ್ಥಳ, interval, midst, 216.

ಅಂತರಿಸು=ಅಡ್ಡಿಮಾಡು, to hinder.

ಅಂತಸ್ತಾಪ=ಒಳಗಿನದುಃಖ, repentance.

ಅಂತಸ್ಥ=ಅಂತರಂಗ, secresy.

ಅಂತಿಕ=ಸಮೀಪ, vicinity, 513.

ಅಂದ=ರೀತಿ, ಚಂದ, made, elegance, 489, 343.

ಅಂದಣ, ಅಂದಳ=ಪಾಲಕಿ, palankeen, 430.

ಅಂಧ=ಕತ್ತಲೆ, ಕುರುಡು, darkness, blind,

ಅಂಧಕ=ಕುರುಡನು, blind man.

ಅಂಧಕಾರ=ಕತ್ತಲೆ, darkness

ಅಂಬಕ=ಕಣ್ಣು, eye.

ಅಂಬರ=ಆಕಾಶ, ವಸ್ತ್ರ, sky, clothes 755.

ಅಂಬಿಕೆ=ತಾಯಿ, mother, Parvati.

ಅಂಬು=ಬಾಣ, arrow.

ಅಂಬು=ನೀರು, water.

ಅಂಬುದ=ನೀರುಕೊಡುವಂಥಾದ್ದು, ಮೇಘ, cloud.

ಅಂಬುಜ=ನೀರಲ್ಲಿ ಹುಟ್ಟುವಂಥಾದ್ದು, ಕಮಲ, (ಅಂಬುರುಹ, ಅಂಬುರುಟ್) lotus.

ಅಂಬುನಿಧಿ=ನೀರಿನರಾಶಿ, ಸಮುದ್ರ, ocean.

ಅಂಭ, ಅಂಭಸ್ಸು=ನೀರು, water.

ಅಂಭೋಜ=ಕಮಲ, lotus. 755.

ಅಮ್ಮು=ಅಪೇಕ್ಷಿಸು, to wish.

ಅಂಶ=ಪಾಲು, share.

ಅಂಶು=ಕಿರಣ, ಅಮೃತಾಂಶು=ಚಂದ್ರ, ray.

ಅಂಶುಕ=ಬಟ್ಟೆ, cloth.

ಅಕ್ಕಜ=ಆಶ್ಚರ್ಯ, wonder. 561.

ಅಕ್ಕರ=ಸಂತೋಷ, attachment.

ಅಕ್ಕಳಿಸು=ಭಯದಿಂದ ಹಿಂಜರಿ, to flinch.

ಅಖಂಡ=ಎಲ್ಲಾ, ತುಂಡಿಲ್ಲದ್ದು, whole, indivisible.

ಅಖಿಲ=ಎಲ್ಲಾ, all.

ಅಗ=ಹೋಗದ್ದು=ಗುಡ್ಡ, mountain, 738.

ಅಗಡು=ಕಾತು, wild 352. fierce.

ಅಗಲ, ಅಗಳ=ಗಂಗಾಳ, plate of leaves.

ಅಗಳು=ಅಗಿ, to dig.

ಅಗಿ=1. ಅಂಜು, 2. ತಿನ್ನು, 3. ಸಂತೋಷ, to fear, to chew, to be glad. 750.

ಅಗ್ನಿ=ಬೆಂಕಿ, fire.

ಅಗ್ಗ (ಅಗ್ರ)=ಮುಖ್ಯ, principal.

ಅಗ್ಗಲ=ಹೆಚ್ಚಿಗೆ, (ಅಗ್ಗಳ, ಅರ್ಗಳ) superiority.

ಅಗ್ಗಳಿಕೆ=ಬಲ, strength.

ಅಗ್ನಿಹೋತ್ರ=ಹೋಮವಾಗ್ನಿ, sacrificial fire.

ಅಗ್ರ=ತುದಿ, ಮುಖ್ಯ, ಅಭ್ಯಗ್ರ=ಹೆಚ್ಚು chief, 196.

ಅಗ್ರಜ=ಮೊದಲು ಹುಟ್ಟಿದವನು, ಅಣ್ಣ, elder brother.

ಅಗ್ರಣಿ=ಹೆಚ್ಚಿನವನು, principal.

ಅಘ=ಪಾಪ, sin.

ಅಚಲ=ಅಲ್ಲಾಡದಂಥಾದ್ದು, ಗುಡ್ಡ, mountain, 417.

ಅಚೇತನ, ಅಚೇತನ್ಯ=ಜೀವವಿಲ್ಲದ್ದು, exhausted.

ಅಚ್ಚರಿ=ಆಶ್ಚರ್ಯ, wonder.

ಅಚ್ಛ, ತಿಳಿ, clear, crystal.

ಅಚ್ಛಿದ್ರ=ತೂತಿಲ್ಲದು=ಹೊಸತು, new fresh, 17.

ಅಜ=ಅ+ಜ=ಹುಟ್ಟಿದವನು=ಬ್ರಹ್ಮ. 2. ಹೋತು 3. ಕುರಿ, Brahma, he-goat, sheep.

ಅಜಸ್ರ=ಸರ್ವದಾ, eternally.

ಅಜಿನ=ತೊಗಲು, hide.

ಅಜೇಯ=ಅಪಜಯವಿಲ್ಲದ, invincible.

ಅಜ್ಞ=ಅರಿಯದ, ignorant.

ಅಟಮಟ=ಮೀರಿ ಹೋಗುವದು, escape, 438.

ಅಟ್ಟಹಾಸ=ಬಡಿವಾರ, laughter, pomp.

ಅಟ್ಟೆ=ಮುಂಡ, headless, trunk.

ಅಡಂಕು, ಅಡಕು=ಬಿಡುವಿಲ್ಲದೆ ಇಡು, to stuff.

ಅಡಗು=ಮಾಂಸ, meat.
ಅಡಸು=ಕವಿದುಬರು, to hold, 523.
ಅಡಿ=ಪಾದ, foot, bottom.
ಅಡಿಗಡಿಗೆ=ಮೇಲೆಮೇಲೆ, frequently.
ಅಣಕ=ಸುಮಾರು, close, mean,
ಅಣಿ=ಸಮಾನ, readiness, order, like.
ಅಣಿಯರ=ದೊಡ್ಡದು, great, high, 767.
ಅಣು=ತೀರಸಂಣದು, atom, 296.
ಅಣುಗ=ಹುಡುಗ, boy, 399.
ಅಣೆ=ಹೊಡೆ, to strike against.
ಅತಿ=ಮೇಲೆ, ಬಹಳ, over, much.
ಅತಿಗಳಿಯು=ಕಳೆ, to spend, to blot out.
ಅತಿರೇಕ=ಬಹಳ, excessive,
ಅತಿಶಯ=ಹೆಚ್ಚು, much, excellent.
ಅತುಲ=ತೂಕವಿಲ್ಲದು, ಅಸಮ (ಅತುಳಿತ) unequalled.
ಅದಿಮುರ್ತ್ತೆ=ಒಂದುಪುಷ್ಪ, trumpet-flower.
ಅದ್ಭುತ=ಆಶ್ಚರ್ಯ, (ಅದು ಭೂತ), miracle, 489.
ಅದ್ರಿ=ಗುಡ್ಡ, hill 950.
ಅಧಟು=ಗದರಿಸು, to rebuke.
ಅಧಟನು=ಗದರಿಸುವವನು, rebuker.
ಅಧಮ=ಕೆಳಗೆ, ಕಡಿಮೆ, inferior.
ಅಧರ=ಕೆಳಗೆ, ಕೆಳಗಣತುಟಿ lower lip, 380.
ಅಧಿಕ=ಹೆಚ್ಚು, exceeding, 1091.
ಅಧಿನೇತೃ, ಅಧಿಪ, ಅಧಿಪತಿ=ಒಡೆಯ, master.
ಅಧೀಶ್ವರ=ದೊಡ್ಡರಾಜನು, emperor.
ಅಧೋಗತಿ=ಕೆಳಗೆಹೋಗುವದು, ನಾಶ; ruin.
ಅಧ್ಯಾತ್ಮ=ಹೆಚ್ಚಿನವನು, superior.
ಅಧ್ಯಾಹಾರ=supplying an ellipsis.
ಅಧ್ವ=ಮಾರ್ಗ, road, march.
ಅಧ್ವರ=ಯಜ್ಞ, sacrifice.
ಅನರ್ಘ್ಯ=ತುಟ್ಟಿ, very costly, 1074.
ಅನಲ=ಬೆಂಕಿ, fire.
ಅನವರತ=ನಿತ್ಯ, eternal, eternally.
ಅನಶನ=ಉಪವಾಸ, fast, 295.
ಅನಾಥ=ದಿಕ್ಕಿಲ್ಲದ್ದು, destitute.
ಅನಾರತ=ನಿತ್ಯ, always.
ಅನಿಮಿಷ=ದೇವತೆ–ಮೀನ, gods, fish.
ಅನಿಲ=ಘಾಳಿ, wind, air.
ಅನಿಶ=ನಿತ್ಯ, eternally, 864.
ಅನಿಷ್ಟ=ಅಪೇಕ್ಷಿಸದ್ದು, ruin, 349.
ಅನೀಕ, ಅನೀಕಿನಿ=ದಂಡು, army, 424.
ಅನುಕರಿಸು=ಅನುಸರಿಸು, to imitate.
ಅನುಗುಣ=ತಕ್ಕಗುಣ, conformable, 596
ಅನುಜ್ಞೆ=ಆಜ್ಞೆ, order.
ಅನುಗ್ರಹ=ಕೃಪೆ, mercy.
ಅನುಚಿತ=ತಕ್ಕದ್ದಲ್ಲದು, unfit.
ಅನುಜ=ತಮ್ಮ, ಅನುಜೆ=ತಂಗಿ younger brother, sister.
ಅನುತಾಪ=ದುಃಖ, sorrow.
ಅನುನಯ=ಉಪಚಾರ, civility, 858.
ಅನುಪಮ=ಸಮವಿಲ್ಲ, peerless, 515
ಅನುಮತಿ=ಒಪ್ಪುವದು, ಆಜ್ಞೆ, consent, 219.
ಅನುರಕ್ತಿ, ಅನುರಾಗ=ಪ್ರೀತಿ, love, passion.
ಅನುರೂಪ=ಸಮ, resembling.

ಅನುಲೇಪನೆ, ಅನುಲೇಪಿಸು=ಹಚ್ಚುವದು, annointing.
ಅನುವರ=ಯುದ್ಧ, war.
ಅನುಷ್ಠಾನ=ಯಾವದೊಂದು ಆಚಾರ, performance.
ಅನ್ಯಥಾ=ಬೇರೆಯಾಗಿ, ಸುಮಾರು, otherwise, badly.
ಅನ್ಯೋನ್ಯ=ಪರಸ್ಪರ ಸ್ನೇಹ, reconciliation.
ಅನ್ವಯ=ವಂಶ, lineage.
ಅನ್ವಿತ=ಕೂಡಿದ, 860, united to.
ಅಪಗಮಿತ=ಹೋದಂಥಾ, gone, 508.
ಅಪರಾಣ್ಹ, ಅಪರಾನ್ಹ=ಮಧ್ಯಾನ್ಹ, afternoon, 214.
ಅಪವರ್ಗ=(ಅಪ × ವೃಜ್=ಬಿಡು) ಮೋಕ್ಷ, liberation.
ಅಪಾಂಗ=ಕಡೆಗಣ್ಣು, ಕರುಣ, mercy, 490.
ಅಪಾಯ=(ಅಪ+ಇ) ನಷ್ಟ, peril, mischief.
ಅಪೂರ್ವ=ಅಪರೂಪ, uncommon, 219.
ಅಪ್ಪು=ನೀರು, water, 577.
ಅಪ್ರತಿಮ=ಸಮಾನವಿಲ್ಲದವನು, incomparable, 592.
ಅಪ್ಸರಸೆ, ಅಪ್ಸರೆ=ದೇವತಾ ಸ್ತ್ರೀ, nymphs, 995.
ಅಬಲೆ, ಅಬಳೆ=ಬಲವಿಲದಾಕೆ=ಸ್ತ್ರೀ, woman.
ಅಬ್ಜ=ಕಮಲ (ನೀರಲ್ಲಿ ಹುಟ್ಟುವಂಥಾದ್ದು) ಅಬ್ಜಭವ=ಕಮಲದಿಂದಹುಟ್ಟಿದವನು =ಬ್ರಹ್ಮ, lotus.
ಅಬ್ದ=ಮೇಘ. (ನೀರುಕೊಡುವದು ವರುಷ), cloud, year.

ಅಭವ=ಜನನವಿಲ್ಲದವನು=ದೇವರು, god.
ಅಭಿಧೆ, ಅಭಿಧಾನ, ಅಭಿಧಾನಕ=ನಾಮ, name. 182.
ಅಭಿನವ=ಹೊಸತು, new, 421.
ಅಭಿಭೂತ= (ಅಭಿ × ಭೂತ=ಇದ್ದ) ಒಳಗಾದ, subdued, 806.
ಅಭಿಮತ=ಅಪೇಕ್ಷೆ, ಒಪ್ಪು, wish, consent. 1026.
ಅಭಿಮುಖ=ಇದಿರು, in front.
ಅಭಿಲಷಿತ=ಒಪ್ಪುವಂಥಾ, charming, 945.
ಅಭಿವಾದನೆ=ನಮಸ್ಕಾರ, obeisance, 459.
ಅಭಿಷೇಕ=ಸ್ನಾನ, bathing, initiation, 5.
ಅಭೀಕ್ಷಿಸು=ನೋಡು, to see, 936.
ಅಭೀಪ್ಸ್ಯ=ಆಶಿಸಿದ, desired, 922.
ಅಭ್ಯರ್ಚನೆ=ಪೂಜೆ, veneration, 629.
ಅಭ್ಯಾಗತ=ತಾವಾಗಿಬಂದಅತಿಥಿ (ಅಭಿ × ಆ+ಗಮ್) guest, 1236.
ಅಭ್ಯುದಯ=ಜನನ–ಹೆಚ್ಚಿಗೆ, birth, 1038.
ಅಭ್ರ=ಆಕಾಶ, ಮೇಘ, ಮಿಂಚಗಲ್ಲು. sky, cloud, talc, 753—482.
ಅಮರ=(ಮರಣವಿಲ್ಲದ) ದೇವತೆ, deity, 412.
ಅಮರ್ದು=ಅಮೃತ, nectar, 718.
ಅಯಸ್ಸು=ಉಕ್ಕು, iron, 795.
ಅಯುತ=ಹತ್ತುಸಾವಿರ, ten thousand.
ಅರಕೆ=ಅರ್ಧ, half.
ಅರಚು=ಕೂಗು, to roar, 480.
ಅರಮೆ= ಸಣ್ಣದು, very small.
ಅರರ, ಅರರಿ, ಅರರೆ=ನಿಪಾತ, interjection, 460.

ಅರವಿಂದ=ಕಮಲ, 939.

ಅರಸು=ಹುಡುಕು, to seek, 534.

ಅರಿ=ವೈರಿ, adversary, 730.

ಅರುಣ, ಅರುಣತೆ=ಕೆಂಪು, ಸೂರ್ಯ, ಸೂರ್ಯನಸಾರಥಿ, ಅರುಣಾಂಬು=ರಕ್ತ, red, sun, 804, blood, 482.

ಅರೋಚಕ=ಸಪ್ಪಗೆ, insipid, 534.

ಅರ್ಕ=ಸೂರ್ಯ, sun.

ಅರ್ಘ=ಅಗ್ಗ, cheap.

ಅರ್ಘ್ಯ=ಪೂಜ್ಯ, ಬಂದವರಿಗೆ ಮಾಡತಕ್ಕ ಉಪಚಾರ, venerable, respectful oblation.

ಅರ್ಚನೆ=ಪೂಜೆ, adoration, 1228.

ಅರ್ಥನೆ=ಪ್ರಾರ್ಥನೆ, asking, 508.

ಅರ್ಭಕ=ಹುಡುಗ, child, 565.

ಅಲಂಕೃತ=ಭೂಷಣ, ornament, 860.

ಅಲಗು=ಅಲ್ಲಾಡಿಸು, to shake. 786.

ಅಲರು=ಅರಳು, ಹೂವು, to blossom, a flower, 724.

ಅಲಸು=ಬೇಸಾಯು, to be tired.

ಅಲಿ, ಅಲೆ=ತಿರುಗು, to roam, to vex, 796.

ಅಲ್ಲರಿ=ಬಾಧೆಪಡಿಸು, to trouble, 822.

(ಅವಘಡಿಸು) ಅವಗಡಿಸು=ಅಡ್ಡಿಮಾಡು, to confuse, to hinder, 233.

ಅವಜ್ಞೆ=ಅಲಕ್ಷ್ಯ, disrespect, 939.

ಅವತಂಸ=ಜುಟ್ಟು, crest,

ಅವಧರಿಸು, ಅವಧರಿಪು=ಕೇಳು, to listen, 1111.

ಅವಧಿ=ಮೇರೆ, limit, 545.

ಅವಧೂತ=ಎಲ್ಲಾ ಬಿಟ್ಟವನು, a naked mendicant.

ಅವನಿ=ಭೂಮಿ, ಅವನಿ+ಪ=ಅರಸ earth, 449.

ಅವಲಂಬನೆ=ಆಶ್ರಯ, protection, 467.

ಅವಶ=ವಶಮೀರಿದ್ದು, unawares, 1045.

ಅವಿರಲ=ದಟ್ಟಗೆ, coarse.

ಅಶೋಕ=ಬಂದುಗಿಡ, Asoka-tree, 484.

ಅಶ್ಮ=ಕಲ್ಲು, rock.

ಅಶ್ರು=ಕಣ್ಣೀರು, tear, 449.

ಅಶ್ವತ್ಥ=ಅರಳೆಗಿಡ, the holy fig tree, 511.

ಅಷ್ಟಾಂಗಯೋಗ=ಎಂಟುತರದಯೋಗ, 563.

ಅಸವಸ=(ಅಸ್ವವಶ) ಅವಸರ, hurry, 791.

ಅಸಾಮ್ಯ=ಸಮವಲ್ಲ, 464, improper.

ಅಸಿತ=ಕಪ್ಪು(ಅ+ಸಿತ=ಬಿಳುಪು) black, 385.

ಅಸು=ಜೀವ, ಅಸವಳಿಯು=ಜೀವಕಳೆ, life.

ಅಸುರ=ರಾಕ್ಷಸರು=(ಅ+ಸುರ) giant.

ಅಸೂಯು=ಹೊಟ್ಟೆಕಿಚ್ಚು, envy.

ಅಸ್ತ, ಅಸ್ತಮಯು=ಸೂರ್ಯಮುಣಗು, sunset, 1166.

ಅಸ್ತ್ರ=ಆಯುಧ, ಬಾಣ weapon,

ಅಹರ್ನಿಶ=ಹಗಲುರಾತ್ರಿ, day and night, 822.

ಅಹಿ=ಸರ್ಪ, snake, 490.

ಅಹಿತ=ವೈರಿ,(ಅ+ಹಿತ enemy.

ಅಳರು=ಭಯಪಡು, (ಅಳುರು), to fear, 804.

ಅಳಲು=ದುಃಖಿಸು, to grieve. 358—450.

ಅಳವಡು=ಸಿದ್ಧವಾಗು, ಅಳವಡಿಸು=ಸಿದ್ಧಮಾಡು, to be placed, to garnish, 316.

ಅಳವಳು=ಚಿಂತೆಮಾಡು, to be sorrowful.

ಅಳವು=ಬಲ—ಅಳವಳಿ=ಬಲಗುಂದು, strength.

ಅಳಿ=ಭ್ರಮರ, ಸಂಣದು, black bee, small, 702—406.

ಅಳುವು=ನಾಶ, destruction, grief, 405.

ಅಳ್ಕಜ=ಹೊಟ್ಟೆಕಿಚ್ಚು, (ಅಳ್ಕಜಕಾರ), envy, 710.

ಅಳ್ತಿ=ಸಂತೋಷ, joy, 594.

ಅಕ್ಷಮಾಲೆ=ಜಪಮಾಲೆ, rosary, 461.

ಅಕ್ಷಯ=ನಾಶವಾಗದ್ದು, indelible.

ಅಕ್ಷಿ=ಕಣ್ಣು, eye. 460.

ಆ.

ಆಂದೋಳ=ಚಿಂತೆ,(ದುಲ್=ಬಗೆ, ಅಲ್ಲಾಡು 460, sorrow.

ಆಂದೋಳಿತ=ನಡಗುವ, 793, swinging.

ಆಕಾರ, ಆಕರಣೆ=ಅಧಿಕಾರ, authority 445.

ಆಕರಿಸು=ತಕ್ಕೊಳ್ಳು, 967, to take.

ಆಕರ್ಷ, ಆಕರ್ಷಣ=ಎಳಕೊಳ್ಳುವದು, 493, attraction.

ಆಕಸ್ಮಿಕ=ಭಗ್ಗನೆ, 347, sudden.

ಆಕರಣ=ಕರೆಯುವದು, calling.

ಆಕುಲ=ಗಲಿಬಿಲಿ, 650, ನಿರಾಕುಲ=ಗಲಿಬಿಲಿಲ್ಲದ್ದು 424, confounded.

ಆಕೃತಿ=ಆಕಾರ, 831, form.

ಆಕೆವಾಳತನ=ಶೂರತ್ವ, 355, valour.

ಆಕೆವಾಳರು=ಶೂರರು, valiant men.

ಆಕ್ರಮಿಸು=ವಶಮಾಡಿಕೊಳ್ಳು (ಅ+ಕ್ರಮ್) ಹೋಗು) 500, to grasp, seize.

ಆಕ್ರಾಂತ=ವಶಮಾಡಿಸಿಕೊಂಡ, 892, seized.

ಆಖು=ಇಲಿ, (ಆಕು) 879, a rat.

ಆಖ್ಯ, ಆಖ್ಯೆ=ಹೆಸರು (ಆಖ್ಯಾತ) 887, name.

ಆಗಮ=ಬರುವದು, 15, coming.

ಆಗಸ=ಆಕಾಶ, sky.

ಆಗಾರ=ಮನೆ, house.

ಆಗ್ರಹ=ಸಿಟ್ಟು, 812, rage, 416.

ಆಘ್ರಾಣಿಸು=ಮೂಸಿನೋಡು, 1163, (ಆಗ್ರಾಣಿಸು) to smell, 1163.

ಆಚರ=ಆಶ್ಚರ್ಯ, surprise.

ಆಜಿ=ಯುದ್ಧ, (ಆಜಿರಂಗ), 1069, war, battle.

ಆಡಂಬರ=ದಂಭ, ಸಮೂಹ, 792, ostentation.

ಆಣ್ಮ, ಆಣ್ಬ=ಒಡೆಯ, ruler.

ಆತಪ,=ಬಿಸಲು. ಆತಪವಾರಣ, ಆತಪಪತ್ರ=ಕೊಡೆ, sunshine, parasol.

ಆತಿಥೆಯ, ಆತಿಥ್ಯ=ಬಂದವರಿಗೆ ಉಪಚಾರಮಾಡುವದು, 344, hospitality.

ಆತ್ಮ, ಆತ್ಮೀಯ=ತನ್ನ, 220, self.

ಆದರ=ಪ್ರೀತಿ, ಆದರಿಸು, 285, kindness.

ಆದಿತ್ಯ=ಸೂರ್ಯ, Sun.

ಆನತ=ಅಡ್ಡಬಿದ್ದ, 899, bent.

ಆನನ=ಮುಖ, face, mouth.

ಆನೀತ=ತರಲ್ಪಟ್ಟ, 751, brought.

ಆಪಗೆ, ಆಪಗಾ=ಹೊಳೆ, 751 river.

ಆಪನ್ನ=ದುಃಖಿತ, 337, afflicted.

ಆಮಾತ್ಯ=ಪ್ರಧಾನಿ, minister.

ಆಮೋದ=ಸಂತೋಷ, ಸುಗಂಧ, 776, joy, perfume.

ಆಯತ=ಉದ್ದ, 434, long.
ಆರಡಿ,=ಆರುಕಾಲುಳ್ಳದು=ಭ್ರಮರ, ದುರಾಚಾರ, 705, black bee, enemy.
ಆರತ=ಸಂತೋಷಪಟ್ಟ, pleased.
ಆರಾಮ=ತೋಟ, garden.
ಆರೂಢ=ಹತ್ತಿದ, ರೂಢಿ, mounting, common.
ಆರೋಪಣ=ತಪ್ಪುಹೊರಿಸು, imputation.
ಆರ್ಜನೆ=ಘಳಿಸಿಕೊಳ್ಳುವದು. ಆರ್ಜಿಸು, 815
ಆರ್ಜಿತ=ಘಳಿಸಿಕೊಂಡ, acquirement.
ಆರ್ಣವ=ಸಮುದ್ರ, 220 ocean
ಆರ್ತಿ=ದುಃಖ, ಆರ್ತ=ದೈನ್ಯ, ದುಃಖಿತ, 347, sorrow
ಆರ್ದ್ರ=ತೊಯಿದ 907, wet.
ಆರ್ಯ,=ಪೂಜ್ಯ, 573, venerable.
ಆಲಂಬ, ಆಲಂಬನೆ=ಆಶ್ರಯ, ಆಲಂಬಿತ, dependence.
ಆಲವಟ್ಟ,=ಬೀಸಣಿಗೆ, parasol.
ಆಲವಾಲ=ಗಿಡಗಳಿಗೆ ಮಾಡುವಮಡಿ, 719, basin.
ಆಲಾಪ=ಮಾತು, conversation.
ಆಲಿ=ಕಣ್ಣು, 202, eye.
ಆಲಿಂಗನೆ=ಅಪ್ಪಿಕೊಳ್ಳುವದು, embracing.
ಆಲಿವರಲು=ಆಣೆಕಲ್ಲು, 764, hail.
ಆಲೋಕ, ಆಲೋಕನೆ=ನೋಡುವದು, 850, sight.
ಆವಗಂ=ಯಾವಾಗಲು, always.
ಆವರಣ=ಮುಚ್ಚೋಣ, (ಆವರಿಸು=ಮುಚ್ಚು,) 527, surrounding.
ಆವರ್ತ=ಸುಳಿ; ಆವರ್ತಿಸು=ತಿರುಗು, 808, taming.
ಆವಳಿ=ಪಂಕ್ತಿ ಸಾಲು (ಆಳಿ) 475, line, row.
ಆವಾಸ, ಆವಸ=ಮನೆ, 842, a house.
ಆವೇಶ=ದೆವ್ವಹಿಡಿಯುವದು, ಪ್ರವೇಶ, 418, possession.
ಆಶಾ=ದಿಕ್ಕು, 692, point of the compass.
ಆಶಯ=ಅರ್ಥ, ಅಪೇಕ್ಷೆ, meaning.
ಆಶಿ=ಸರ್ಪದಹಲ್ಲು, 813, serpent's fang.
ಆಶ್ವಾಸ=ಉಸರು ಬಿಡೋಣ, 743, breath.
ಆಸುರ=ರಾಕ್ಷಸ, giant.
ಆಸ್ಥಾನ=ಸಭೆ, an assembly.
ಆಸ್ಫೋಟನ=ಅರಳುವದು, ಒಡೆಯೋಣ, expanding.
ಆಸ್ಯ=ಮುಖ, 747, face, mouth.
ಆಸ್ವಾದ,ಆಸ್ವಾದಿಸು=ಸವಿನೋಡು, 515, to taste.
ಆಹವ=ಯುದ್ಧ, war, battle.
ಆಹಿಕ, ಆಹಜ್ವರ=ದಿನದಿನಕ್ಕೆ ಬರುವ ಜ್ವರ, 11. fever.
ಆಳಿ=ಗೆಳತಿ, 204, female friend.
ಆಳಿಗೊಳ್ಳು=ತಿರಸ್ಕಾರ ಮಾಡು, 664, to disregard.
ಆಳು=ಮುಣುಗು, to dive.

### ಇ.

ಇಂ=(ಸಮಾಸ) ಶಬ್ದಗಳಲ್ಲಿ ಸವಿ, sweet.
ಇಂಗಡ=ಬೇರೆಬೇರೆ, separate.
ಇಂಗಡಲು=(ಇಂ=ಸವಿ+ಕಡಲು=ಸಮುದ್ರ ಹಾಲಿನ ಸಮುದ್ರ, 1060, the sea of milk.
ಇಂಡೆಯುಂ=ಮುದ್ದೆ, 594, a lump.

ಇಂದಿರೆ=ಲಕ್ಷ್ಮಿ, 846, Lakshme.

ಇಂದು=ಚಂದ್ರ, 725. (ಐಂದವ=ಚಂದ್ರಗೆಸಂಬಂಧಪಟ್ಟ 802) moon.

ಇಂದ್ರಜಾಲ=ಮೋಸ, ಮಂತ್ರ, cheating, legerdemain.

ಇಂಧನ=ಕಟ್ಟಿಗೆ 787, fuel.

ಇಕ್ಕೆ=ಸ್ಥಳ, place.

ಇಟ್ಟಣಿಸು=ಗುಂಪಾಗು, to be crowded.

ಇಡಿ, ಇಡಿಯು=ಗುಂಪಾಗಿರು, ಬಡಿ, 787, to beat, to be filled.

ಇತರ=ಬೇರೆ (ಇತರೇತರ) ಅನ್ಯ, 670. different.

ಇತ್ತಂಡ=(ಇರ್+ತಂಡ=ಸಮೂಹ) ಎರಡುಸರ್ತಿ=ಎರಡುಪಕ್ಷ, twice, two parties.

ಇತ್ತಡ=(ಇರ್+ದಡ=ದಂಡೆ) ಎರಡು ಕಡೆ, either shore

ಇನ=ಸೂರ್ಯ, sun, master.

ಇನಿ=ಸವಿ, 718 (ಇನಿಯಂ, ಇನಿಯಳ್) 765, sweet.

ಇಭ=ಆನೆ, an elephant.

ಇಬ್ಭಗಿ=ಎರಡು ಭಾಗ, 813, two parts.

ಇರಳು=ರಾತ್ರಿ, 894, night.

ಇಲ, ಇಳಾ, ಇಳೆ=ಭೂಮಿ, 718, earth.

ಇಷು=ಬಾಣ, 513, arrow.

ಇಷ್ಟಕೆ=ಹೆಂಟೆ, ಇಟ್ಟಿಗೆ 947, brick.

ಇಳಿಕೆ=ಕುಂದು, ಇಳಿಕೆ ಕಾಣು, 435, defect.

ಇಳಿತರು=ಇಳಿದು ಬರು, to come down.

ಈ.

ಈ=ಕೊಡು, to give.

ಈಂಟು=ಕುಡಿ, to drink.

ಈಡಾಡು=ಕಳೆ, 379, to scatter.

ಈಡಿರಿ=ಹಾರ್ಯಾಡು, ಅಲ್ಲಾಡಿಸು, 840, toss.

ಈಷಣ=ಆಶೆ, love

ಈಕ್ಷಿಕೆ=ನೋಟ,ಈಕ್ಷಿಸು=ನೋಡು, 849, see.

ಉ.

ಉಂನಿಸು=ಒಪ್ಪಿಕೊಳ್ಳು, 99, consent.

ಉಂಮಳ, ಉಮ್ಮಳಿಕೆ=ಚಿಂತೆ, anguish.

ಉಕ್ತಿ=ಮಾತು; ಉಕ್ತ=ಮಾತಾಡಿದ್ದು, word.

ಉಗಿ, ಉಗಿಯು=ಹಿರಿ, ಸುಲಿ, ಅಂಜು, 248, 822, 338, pull, peel, fear.

ಉಗು=ಹರಿ, 961, flow.

ಉಗ್ಗಡ=ಹೆಚ್ಚಿಗೆ, 374, superior.

ಉಗ್ರ=ಸಿಟ್ಟು, 392 (ಉಗ್ರಾಕ್ಷ=ಶಿವ) anger.

ಉಘ್ಘಡಣೆ=ಹೆಚ್ಚಿಗೆ, excess.

ಉಚ್ಚ=ಎತ್ತರ, 731, tall, high.

ಉಚ್ಚಳಿಸು, ಉಚ್ಛಳಿಸು=ಹೊರಡು, ಅಲ್ಲಾಡು, 667, burst forth.

ಉಚ್ಛಿಷ್ಟ=ಎಂಜಲು, leavings.

ಉಜ್ವಲ=ಉಜ್ವಳ, ಪ್ರಕಾಶ, 746, shining.

ಉಜ್ಜುಗ=ಪ್ರಯತ್ನ,ಉಜ್ಜುಗಿಸು, effort.

ಉಡಿ=ಮುರಿ, 375, break.

ಉಡು=ನಕ್ಷತ್ರ, 725, star.

ಉಣ್ಮು=ಹೊರಡು, ಹುಟ್ಟು, 773, to come forth.

ಉತ್ಕಟ=ಉತ್ಕೃಷ್ಟ, excessive.

ಉತ್ಕರ=ಗುಂಪು, ಹೆಚ್ಚು, 357, heap, much.

ಉತ್ಕರ್ಷ=ವಿಶೇಷ, 347, excellence.

ಉತ್ತರೋತ್ತರ=ಉತ್ತಮ, long, excellent.

ಉತ್ತರಿಸು=ದಾಟು, to cross.
ಉತ್ತಾರಕ=ಪಾರಾಗುವದು,442, crossing.
ಉತ್ತುಂಗ=ಬಹಳ ದೊಡ್ಡದು, very large.
ಉತ್ಪಲ=ನೈದಿಲೆ, 385, water lily.
ಉತ್ಸುಕ=ಆಸಕ್ತ, zealous.
ಉದಗ್ರ=ಶ್ರೇಷ್ಠ, pre-eminent.
ಉದಿತ=ಹುಟ್ಟಿದ, 777, born
ಉದ್ಗಮ, ಉತ್ಪತ್ತಿ, ಮೇಲೆ ಹೋಗುವದು, 779 birth.
ಉದ್ಘ=ವಿಶೇಷ, 860, excellence.
ಉದ್ಘೋಷಿಸು=ಬಹಳ ಸಪ್ಪಳ ಮಾಡು, roar.
ಉದ್ದಂಡ=ದೊಡ್ಡದು, ಬಲತ್ಕಾರ, 476, violence.
ಉದ್ದಾಮ=ಉತ್ತಮ, chief.
ಉದ್ದೀಪಿತ=ಪ್ರಜ್ವಲ, 654, shining.
ಉದ್ಭವ=ಉತ್ಪತ್ತಿ, 446, birth
ಉದ್ಭಿನ್ನ=ಪ್ರತ್ಯೇಕ, different.
ಉದ್ಯಾನ, ಉದ್ಯಾನವನ=ಉಪವನ, 860, grove.
ಉದ್ರೇಕ=ಬಹಳ, ಮೀರಿದ್ದು, 632, excess.
ಉದ್ವಾಹ=ಮದಿವೆ, marriage.
ಉನ್ಮತ್ತ=ಹುಚ್ಚು, 418, mad.
ಉಪಕಂಠ=ಸಮೀಪ proximate.
ಉಪಕರಣ=ಸಮಾನ, ಉಪಕರಿಸು=ಮಾಡು, means.
ಉಪಟಳ=ಸಂಕಟ, 741, trouble.
ಉಪಮ, ಉಪಮಾನ, ಉಪಮೆ=ಸಮಾನ (ನಿರುಪಮ, ಅನುಪಮ) 1009, resemblance.
ಉಪರೋಧ=ವಿರೋಧ, 982, enmity.
ಉಪಲ=ಕಲ್ಲು, ಘನೋಪಲ=ಆನೆಕಲ್ಲು (ಮೇಘದಿಂದ ಬೀಳುವಂಥಾದ್ದು, 772, stone, hail.
ಉಪಹತಿ=ಉಪದ್ರ, 349, mischief.
ಉಪಹಾರ=ದಾನ, present.
ಉಪಾದಾನ=ಕಾರಣ, ಭಿಕ್ಷೆ, motive, begging.
ಉಪಾರ್ಜಿಸು=ಘಳಿಸು, 809, acquire.
ಉಪೇಕ್ಷೆ=ತಿರಸ್ಕಾರ, contempt.
ಉಪ್ಪವಡಿಸು=ಎಬ್ಬಿಸು, awake.
ಉಮೆ=ಪಾರ್ವತಿ, 637, Párvate.
ಉರ=ಎದೆ, ಉರಗ=ಎದೆಯ ಮೇಲೆ ನಡೆಯುವಂಥಾದ್ದು=ಸರ್ಪ, 743 breast, serpent.
ಉರವಣಿ=ಅವಸರ, haste.
ಉರು=ದೊಡ್ಡದು, 476, large.
ಉರೆ=ದೊಡ್ಡದು, great.
ಉರ್ಕು=ಸೊಕ್ಕು, 746, pride.
ಉಬ್ಬು=ಉಬ್ಬು, swell.
ಉರ್ವಿ=ಭೂಮಿ, (ಉರ್ವರೆ) earth.
ಉಲಿ, ಉಲಿಯು=ಹಾಡು=ಮಾತಾಡು, 617, to sing, to speak.
ಉಲುವು, ಉಲುಹು=ಶಬ್ದ, 269, sound.
ಉಲ್ಕ=ಕೊಳ್ಳಿ, ಸಿಡಿಲು, 658, meteor
ಉಲ್ಲಂಘನೆ=ತಿರಸ್ಕಾರ, (ಉಲ್ಲಂಘಿಸು,) despise.
ಉಲ್ಲಸನ=ರೋಮೋದ್ಗಮನ, horripilation.
ಉಷ, ಉಷಃಕಾಲ, ಉಷಸ್ಸು=ಮೂಡಲ ಹರೆಯುವ ಹೊತ್ತು, 803, dawn.
ಉಷ್ಟ್ರ=ಒಂಟೆ, a camel.
ಉಳು=ನೇಗಿಲುಹೊಡೆ, 829, to plough

ಉಳ್ಕು=ಪ್ರಕಾಸಿಸು, to shine, sparkle

ಊ.

ಊಡು=ತಿನ್ನು, ಕುಡಿ, ತಿನ್ನಿಸು, 827, eat, drink.
ಊರ್ಧ್ವ=ಎತ್ತರ, aloft.
ಊರ್ಬು=ನಡು, ಪುಬ್ಬು, pierce, swell.
ಊಳು, ಊಳಿಡು=ಬೊಗಳು, 658, bark.

ಋ.

ಋತ್ವಿಕ್ಕು, ಋತ್ವಿಜನು=ಪುರೋಹಿತನು, family priest.
ಋಕ್ಷ=ಕರಡಿ, 745, ನಕ್ಷತ್ರ, bear, star.

ಎ.

ಎಕ್ಕಡ, ಎಕ್ಕವಡ=ಕೆರವು, 430, shoe.
ಎಕ್ಕಸ, (ವೆಕ್ಕಸ)=ಬಹಳ, ostentatious.
ಎಡರು=ತೊಡಕು, ಎಡವು, 523, strait, stumble.
ಎಡೆ=ಸ್ಥಳ, ದಾರಿ, 367, place, road.
ಎಡ್ಡವಣೆ=ಮನೋಹರ, 749, pleasant.
ಎಣೆ=ಸರಿ, ಸಮಾನ, 843, likeness.
ಎರಕ=ಪ್ರೀತಿ, ದಯ, love, kindness.
ಎರಕಿ, (510) ಹುಲ್ಲುಕಡ್ಡಿ, grass.
ಎರಗು=ನಮಸ್ಕರಿಸು, 841, make obeisance.
ಎರವು=ಹೆಚ್ಚು ಕಡಿಮೆ, difference.
ಎರೆಯ=ಒಡೆಯ, 729, master.
ಎಲರು=ಗಾಳಿ, (733) ಪುಷ್ಪ, air, flower.
ಎಸಕ=ಚಂದ, 733, lustre.
ಎಸಗು ಮಾಡು attempt, make.
ಎಸಮು, ಎಸೆಯು=ಪ್ರಕಾಶಿಸು, 200, to shine.
ಎಸೆ=ಎಸೆದಂಥಾದ್ದು, 795, shot.
ಎಳತಟ=ದಣಿಯುವದು, fatigue.
ಎಳೆವಾಡಿವ=ಹುಡಗತನ, 844, young.
ಎಳ್ತರು=ಎಳೆಯು, ಬರು, 793 (ಏಳ್ತರು) come.

ಏ.

ಏಡಿಸು=ತಿನಿಸು, ಅಣಕಿಸು, 369, to feed, deride.
ಏಳ್ಗೆ=ಏಳಿಗೆ, increase.

ಐ.

ಐಕಿಲು=ಚಳಿ, cold, frost.
ಐತರು=ಬರು, come.
ಐದು=ಹೊಂದು, ಬರು, get, arrive.
ಐದೆ=ನೆಟ್ಟಗೆ, well.
ಐದುತನ=ಸ್ತ್ರೀಮುದಿವೆಯಾಗಿರುವದು, wedded state.
ಐಸತಿ=ಅಷ್ಟೆ, well done!
ಐಸು=ಎಲ್ಲ, ಅಷ್ಟು, all.

ಒ.

ಒಕ್ಕಣಿಸು, ಒಕ್ರಣಿಸು=ಹೇಳು, say.
ಒಕ್ಕಲಿಕ್ಕು=ಕೊಲ್ಲು, kill.
ಒಗಲು=ಒಕ್ಕೊಡು, to throw away.
ಒಗು=ತುಳುಕು, overflow.
ಒಗುಮಿಗೆ=ತುಳುಕುವದು, ಒತ್ತರ, 278 overflowing, vehement.
ಒಗೆ=ಹುಟ್ಟು, 964, to be born.
ಒಡರ್ಚು=ಕೂಡಿಸು, ಮಾಡು, 733, unite, make.
ಒಡ್ಡಣ=ಗುಂಪು, 749, cluster, heap.
ಒಡ್ಡವ=ಬೇರೊಬ್ಬರಂತೆ ಮಾಡಬೇಕೆಂಬುದು, 269, rivalry.
ಒದವು=ಒದಗು. 712, to be at hand.
ಒಪ್ಪರಂ=ಮನೋಹರ, agreeable.

ಉಯ್ಯನೆ=ಮೆಲ್ಲಗೆ, slowly, softly.
ಉರು, ಉರೆಯು=ಹೇಳು, 522, tell, say.
ಉಲವು= ಪ್ರೀತಿ, affection.
ಉಲಹು=ಅಲ್ಲಾಡುವದು, 401, vibrating
ಉಸಗೆ=ಸಂತೋಷ, 483, joy.
ಉಸೆ=ಮೆಚ್ಚು, be pleased.
ಉಳ್ಳು=ಒಳ್ಳೆದು, good.

ಓ.

ಓ=ಸಖತ್ವಮಾಡು, to form acquaintance.
ಓಗರ=ಅನ್ನ, 350, boiled rice.
ಓಘ=ಸಮೂಹ, flock, multitude.
ಓಜ=ಆಚಾರ್ಯ, ಬಡಗೆಯುವನು, teacher, carpenter.
ಓಜೆ=ನ್ಯಾಯ, 411, ಶೂರತ್ವ, 367, justice, valour.
ಓದನ=ಅನ್ನ, boiled rice.
ಓರಂತೆ=ನೆಟ್ಟಗೆ, alike, well.
ಓರಂಡಲೆ=ಮಿಕ್ಕದ್ದು 1021, surpassing.
ಓರಣಿಸು=ಸಾಲಾಗಿರು, 362, to be in a row.
ಓಲಾಡು=ನೀರಾಟ ಮಾಡು, to sport in the water.
ಓಲು=ಒಲಿ, 373, love.
ಓವು=ಸಾಕು, 742, to nourish.
ಓಸರಿಸು=ಬಲದಿಂದ ಮಾಡು, 205, ದಾರಿ ಬಿಡು 221, ಬಾಗು 246, to force, get out of the way, incline.

ಔ.

ಔಕು=ಹಿಚಕು, 395, to squeeze.
ಔಘ=ಸಮೂಹ, 713 multitude.

ಔರಸ, ಔರಸನು=ಹಡೆದಮಗ, legitimate child.
ಔರ್ವ, ಔರ್ವವು, ಔರ್ವಾನಲವು=ಸಮುದ್ರದೊಳಗಣ ಬೆಂಕಿ, ಬಡಬಾನಲ, 730, sub-marine fire.

ಕ.

ಕಂ=ನೀರು (ಕಂಜ=ಕಮಲ) water.
ಕಂಕಾಳ=ಎಲುವು, 615, skeleton.
ಕಂಗೊಳಿಸು=ಕಾಣು (ಕಣ್ಣಾಗೊಳ್ಳಿಸು) to appear.
ಕಂಚುಕ=ಅಂಗಿ 205, jacket, coat of mail.
ಕಂಠೀರವ=ಸಿಂಹ, 396, lion.
ಕಂತು=ಮನ್ಮಥ, 895, cupid.
ಕಂದ=ಬೇರು, ಗಡ್ಡೆ 751, bulbous. root.
ಕಂದ=ಮಗನು, 518.
ಕಂಧರ=ಕೊರಳು, 407, neck.
ಕಂಬನಿ=ಕಂಣಹನಿ=ಕಣ್ಣೀರು, tears.
ಕಜ್ಜ, ಕಜ್ಜಂ=ಕೆಲಸ, work.
ಕಟಕ=ಪಟ್ಟಣ, ದಂಡು, 642, 1181, city, army.
ಕಟಕಿ=ಹಾಸ್ಯಕ್ಕೆ ಸಂಮಂಧ, 692, ironical.
ಕಟು=ಕಠಿಣ, 756, hard, fierce.
ಕಣಂಗು, ಕಡಂಕು, ಕಡಕು,=ಬಹಳಪ್ರಯತ್ನ ಮಾಡು, 1254, to strive.
ಕಡಲು=ಸಮುದ್ರ, 545, ocean.
ಕಡವರಂ=ಭಂಗಾರ, gold.
ಕಡು=ಬಹಳ, much
ಕಣ=ಹನಿ, ಕಿಡಿ, 724, 736, drop, spark.
ಕಣಾ=ಕಂಡ್ಯಾ, well done.

ಕಣೆ=ಬಾಣ, an arrow.
ಕತಿಪಯ,=ಕೆಲವು, 344, a few.
ಕದಂಕು=ಅಲ್ಲಾಡು, to shake.
ಕದಂಬ=ಸಮುದಯ (ಕದಂಬಕ) 401, heap.
ಕದನ=ಯುದ್ಧ, 281, war.
ಕದಪು=ಗಲ್ಲ, (ಕದಂಪು) 380, cheek.
ಕದಳಿ=ಬಾಳೆಗಿಡ, (ಸಮುದಯ) plantain.
ಕದಿರು=ಕಿರಣ, 721 ray.
ಕನಕ=ಭಂಗಾರ, 5, gold.
ಕನಲು=ಸಿಟ್ಟು ಮಾಡು, to be angry, anger.
ಕಪೋತ=ಪಾರಿವಾಳ, pigeon.
ಕಬರಿ=ತುರುಬು, 479, top-knot of hair.
ಕಬ್ಬ=ಕಾವ್ಯ, poem.
ಕಮನೀಯ=ಮನೋಹರ, 428, pleasing.
ಕರ=ಕೈ, 219 ಕಿರಣ, 641, hand, a spark.
ಕರಂ=ಬಹಳ, great, much.
ಕರಂಡ=ಭರಣಿ, small box 439.
ಕರಪತ್ರ=ಗರಗಸ, 112, saw.
ಕರವಾಲ, ಕರವಾಳ,=ಬಂದು ಕತ್ತಿ,731, scymitar.
ಕರಾಳ=ಭಯಂಕರ, 1085, dreadful.
ಕರಿ=ಕರ=ಸೊಂಡಿಲವುಳ್ಳದ್ದು, ಆನೆ.
ಕರುಬು=ಹೊಟ್ಟೆಕಿಚ್ಚು, ಕರುಬರು,=ಹೊಟ್ಟೆಕಿಚ್ಚಿನವರು, 290, envy, envious persons.
ಕರ್ಕಟ=ಏಡಿ, crab, cancer.
ಕರ್ಚು=ಕಚ್ಚು, ತೊಳೆ, 771, bite, wash
ಕರ್ಣಿಕ=ಕಮಲದ ಒಳಗಿನ ಭಾಗ, (424) (ಕರ್ಣಿಕೆ,) pericarp of the lotus.
ಕರ್ಬುರ=ಭಂಗಾರ, 438, gold.
ಕರ್ಮಟ=ಕುಲಿಮೆ, 722, work shop,
ಕಲ=ಸವಿಸ್ವರ, (ಕಳ) 793, pleasing sound.
ಕಲಕಂಠ=ಕೋಗಿಲೆ, ಕಲಕಂಠಿ=ಕೋಗಿಲೆ ಹೆಣ್ಣು, 793 (ಕಳಕಂಠ) black cuckoo.
ಕಲಿ=ಶೂರ, 782, hero.
ಕಲಿತ=ಹೊಂದಿದ, 428, united.
ಕಲ್ಲೋಲ=ದೊಡ್ಡ ತೆರೆ, large wave.
ಕವರು=ಕಸಗೊಳ್ಳು, to seize.
ಕವಳಿಗೆ=ಪಾತ್ರೆ, 655, drinking vessel.
ಕವಾಟ=ಬಾಗಿಲು, 317, door.
ಕಳ= (ಖಳ) ಯುದ್ಧದ ಸ್ಥಳ, 497, battle-field.
ಕಳಚು=ತೆಗದುಹಾಕು,394, take away.
ಕಳತ್ರ=ಹೆಂಡತಿ, wife.
ಕಳಲು=ತೀರು, (772) ಕಳಲಿಸು= ತೀರಿಸು, 347, be spent, spend.
ಕಳೈವರಿ=ಹೆಚ್ಚಾಗು, 252, increase.
ಕಳೇವರ=ದೇಹ, body.
ಕಳ್ತು=ತೃಪ್ತಿ, 841, satisfaction.
ಕಳ್ತಳೆ, ಕಳ್ತಲೆ=ಕತ್ತಲೆ, 721, darkness.
ಕಾಂಚನ=ಭಂಗಾರ, 474, gold.
ಕಾಂತ=ಪ್ರಿಯ; ಕಾಂತೆ=ಹೆಂಡತಿ, husband, wife.
ಕಾಂತಾರ=ಅಡವಿ, forest 440
ಕಾಕು=ಕೆಟ್ಟದು, 544, bad.

